

# ಕರ್ನಾಟಕ ವಿಧಾನ ಸಭೆಯ ನಡವಳಿಕೆಗಳು

# KARNATAKA LEGISLATIVE ASSEMBLY DEBATES

## ಅಧಿಕೃತ ವರದಿ

## OFFICIAL REPORT

**PART — I**

ನಾಲ್ಕನೆ ಅಧಿವೇಶನ

**Fourth Session**

ಸಂಪುಟ — ೪ (ಕ್ರಮಾಂಕ ೧ ರಿಂದ ೫)

**VOLUME IV — (Nos. 1 to 5)**

(೭ನೇ ಏಪ್ರಿಲ್ ೧೯೯೫, ೮ನೇ ಏಪ್ರಿಲ್ ೧೯೯೫, ೧೦ನೇ ಏಪ್ರಿಲ್ ೧೯೯೫, ೧೭ನೇ ಏಪ್ರಿಲ್ ೧೯೯೫ ಮತ್ತು ೧೮ನೇ ಏಪ್ರಿಲ್ ೧೯೯೫)

*(7th April 1995, 8th April 1995, 10th April 1995, 17th April 1995 and 18th April 1995)*

ಕರ್ನಾಟಕ ವಿಧಾನ ಮಂಡಲದ ಕಾರ್ಯಾಲಯ ಬೆಂಗಳೂರು

**Karnataka Legislature Secretariat Bangalore**

ಕರ್ನಾಟಕ ವಿಧಾನಸಭೆಯ ನಡವಳಿಕೆಗಳು

# KARNATAKA LEGISLATIVE ASSEMBLY DEBATES

PART-I

# ಅಧಿಕೃತ ವರದಿ

# OFFICIAL REPORT

ನಾಲ್ಕನೆ ಅಧಿವೇಶನ

*Fourth Session*

ಸಂಪುಟ ೪ - (ಕ್ರಮಾಂಕ ೧ ರಿಂದ ೫)

**VOLUME IV - [Nos. 1 to 5]**

(೭ನೇ ಏಪ್ರಿಲ್ ೧೯೯೫ , ೮ನೇ ಏಪ್ರಿಲ್ ೧೯೯೫, ೧೦ನೇ ಏಪ್ರಿಲ್ ೧೯೯೫, ೧೭ನೇ ಏಪ್ರಿಲ್ ೧೯೯೫ ಮತ್ತು ೧೮ನೇ ಏಪ್ರಿಲ್ ೧೯೯೫)

**(7th April 1995, 8th April 1995, 10th April 1995, 17th April 1995 and 18th April 1995)**

ಕರ್ನಾಟಕ ವಿಧಾನಮಂಡಲದ ಕಾರ್ಯಾಲಯ, ಬೆಂಗಳೂರು

**Karnataka Legislature Secretariat, Bangalore**

# CONTENTS

( ೭,೮, ೧೦, ೧೭ ಮತ್ತು ೧೮ನೇ ಏಪ್ರಿಲ್ ೧೯೯೫ ದಿನಗಳೊಂದಿಗೆ )

## ವಿಷಯಾನುಕ್ರಮಣಿಕೆ

### ಶುಕ್ರವಾರ ೭ ನೇ ಏಪ್ರಿಲ್ ೧೯೯೫,
### ಚೈತ್ರ ೧೭, ಶಕ ೧೯೧೭

# ಕರ್ನಾಟಕ ವಿಧಾನಸಭೆ
# KARNATAKA LEGISLATIVE ASSEMBLY

ಶುಕ್ರವಾರ, ೭ನೇ ಏಪ್ರಿಲ್ ೧೯೯೫ ಸಾಯನ ಸೌರ ಚೈತ್ರ (ಶಕ)
**Friday, 7th April 1995 Sayana Sowra chithra (S.E.)**

**ಸದನವು ವಿಧಾನ ಸೌಧದಲ್ಲಿರುವ ವಿಧಾನ ಸಭೆಯ ಸಭಾಂಗಣದಲ್ಲಿ ಬೆಳಿಗ್ಗೆ 9.50 ಗಂಟೆಗೆ ಸಮಾವೇಶಗೊಂಡಿತು.**

**ಅಧ್ಯಕ್ಷರು : (ಶ್ರೀ ರಮೇಶ್ ಕುಮಾರ್) ಅವರು ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದರು.**

ಪ್ರಶ್ನೋತ್ತರಗಳು

ಚುಕ್ಕೆ ಗುರ್ತಿನ ಪ್ರಶ್ನೆಗಳಿಗೆ ಬಾಯಿ ಮಾತಿನ ಮೂಲಕ ನೀಡಲಾದ ಉತ್ತರಗಳು.

**ವಿಷಯ : ಬನ್ನೂರು ವಿಧಾನ ಸಭಾ ಕ್ಷೇತ್ರದಲ್ಲಿ ಹೆಚ್ಚುವರಿ ಬೆಳೆದ ಕಬ್ಬಿನ ಸಾಗಾಣಿಕೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 194(1109)

ಶ್ರೀ ಎಸ್. ಕೃಷ್ಣಪ್ಪ (ಬನ್ನೂರು) : ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ, ಪರಿಸರ ಮತ್ತು ಜೀವಶಾಸ್ತ್ರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಬನ್ನೂರು ವಿಧಾನ ಸಭಾ ಕ್ಷೇತ್ರದಲ್ಲಿ ಕಬ್ಬು ಹೇರಳವಾಗಿ ಬೆಳೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?

ಆ. ಈ ಕ್ಷೇತ್ರದ ಸುತ್ತಮುತ್ತ ಬೆಳೆದಿರುವ ಕಬ್ಬಿನ ಪ್ರಮಾಣವೆಷ್ಟು?

ಇ. ಈ ರೀತಿ ಬೆಳೆದಂತಹ ಕಬ್ಬನ್ನು ಪೂರ್ತಿಯಾಗಿ ಉಪಯೋಗಿಸಲು ರೈತರಿಗೆ ಸಾಧ್ಯವಾಗದೇ ಇರುವುದು ನಿಜವಲ್ಲವೇ?

ಈ. ಈ ರೀತಿ ಹೆಚ್ಚುವರಿ ಬೆಳೆದಂತಹ ಕಬ್ಬನ್ನು ಹೊರಗಡೆಗೆ ಸಾಗಿಸಲು ಸರ್ಕಾರ ಅನುಮತಿ ನೀಡುವುದೆ?

ಉ. ಸರ್ಕಾರವು ಇತರೇ ಸಕ್ಕರೆ ಕಂಪನಿಗಳೊಂದಿಗೆ ಮಾತುಕತೆ ನಡೆಸಿ ಹೆಚ್ಚುವರಿ ಕಬ್ಬನ್ನು ಹೊರಗಡೆ ಸಾಗಿಸಲು ಕ್ರಮ ಕೈಗೊಳ್ಳುವುದೆ?

ಶ್ರೀ ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು):

ಅ. ಬಂದಿರುವುದಿಲ್ಲ

ಆ. ಮೈಸೂರು ಜಿಲ್ಲಾಧಿಕಾರಿಯವರ ವರದಿಯ ಪ್ರಕಾರ ಟಿ. ನರಸೀಪುರ ತಾಲ್ಲೂಕಿನಲ್ಲಿ ಈ ಸಾಲಿನಲ್ಲಿ (1994-95) 1.69 ಲಕ್ಷ ಟನ್ ಕಬ್ಬು ಉತ್ಪಾದನೆ ಅಂದಾಜು ಮಾಡಲಾಗಿರುತ್ತದೆ.

ಇ. ನಿಜ. ಈ ವರ್ಷ ಬೆಲ್ಲದ ಬೆಲೆ ಕುಸಿದಿರುವ ಕಾರಣ ಬೆಲ್ಲ ತಯಾರಿಕೆಗೆ ಸ್ಥಾನಪಲ್ಲಟವಾಗುತ್ತಿದ್ದ ಕಬ್ಬಿನ ಪ್ರಮಾಣ ಬಹಳ ಕಡಿಮೆ ಆಗಿದೆ. ಹೀಗಾಗಿ ರೈತರು ಕಬ್ಬನ್ನು ಪೂರ್ತಿಯಾಗಿ ಉಪಯೋಗಿಸಲು ಆಗಿರುವುದಿಲ್ಲ.

ಈ. ಹೌದು.

ಉ. ಹೌದು.

ಶ್ರೀ ಎಸ್. ಕೃಷ್ಣಪ್ಪ : ಸನ್ಮಾನ್ಯ ಅಧ್ಯಕ್ಷರೇ, ಪ್ರಶ್ನೆಯಲ್ಲಿ ನನ್ನ ಕ್ಷೇತ್ರದಲ್ಲಿ ಈಗಾಗಲೇ ಕಬ್ಬು ಹೇರಳವಾಗಿದೆ. ಅದರ ಬಗ್ಗೆ ನಮಗೇನೂ ವರದಿ ಬಂದಿಲ್ಲ ಎಂದು ಮಾನ್ಯ ಮಂತ್ರಿಗಳು ಹೇಳುತ್ತಾರೆ. ಇದರ ಬಗ್ಗೆ ಬಹುಶಃ ಈಗಾಗಲೇ ತರಿಸಿಕೊಂಡಿದ್ದರೆ ಚೆನ್ನಾಗಿ ಇರುತ್ತಿತ್ತು ಎನ್ನತಕ್ಕಂತಹ ಮಾತನ್ನು ಹೇಳಲಿಕ್ಕೆ ಬಯಸುತ್ತೇನೆ. ಎರಡನೆಯದು ಈಗಾಗಲೇ ಸುಮಾರು 1ಲಕ್ಷದ 69 ಸಾವಿರ ಟನ್ ಹೆಚ್ಚಿಗೆ ಕಬ್ಬು ಅಲ್ಲಿ ದೊರೆಯುತ್ತದೆ ಎಂದು ಹೇಳಿದ್ದಾರೆ. ಮತ್ತೆ ಅವರ ಉತ್ತರದಲ್ಲಿ ಕಬ್ಬನ್ನು ಹೊರಗಡೆಗೆ ಸಾಗಿಸಲಿಕ್ಕೆ ನಾವು ಅವಕಾಶ ಕೊಡುತ್ತೇವೆ ಎಂದು ಹೇಳಿದ್ದಾರೆ. ಈಗಾಗಲೇ ತಾವು ಏನಾದರೂ ಇದರ ಬಗ್ಗೆ ಹೊರಗಡೆ ಗೇಟ್‌ನಲ್ಲಿ ಅಂದರೆ ಸುಮಾರು 4 ವರ್ಷಗಳ ಹಿಂದೆ ನಮ್ಮ ಪಕ್ಕದ ಕಬ್ಬನ್ನು ತಮಿಳುನಾಡಿನ ಬಣ್ಣಾರಿ ಪೊನಿಸ್ಸು ಸಕ್ಕರೆ ಕಾರ್ಖಾನೆಗಳಿಗೆ ಒದಗಿಸುವಂತಹ ಒಂದು ಅವಕಾಶವನ್ನು ಸರ್ಕಾರ ಮಾಡಿಕೊಟ್ಟಿತ್ತು. ಈಗಾಗಲೇ ಇದರ ಬಗ್ಗೆ ಯಾವುದಾದರೂ ಸಕ್ಕರೆ ಕಾರ್ಖಾನೆಗಳಿಗೆ ಈಗ್ಗಾಗಲೇ ಸರ್ಕಾರದವರು ಕಾಂಟ್ರ್ಯಾಕ್ಟ್ ಮಾಡಿದ್ದಾರೆಯೇ ಅದರ ಬಗ್ಗೆ ಏನಾದರೂ ಕ್ರಮ ತೆಗೆದುಕೊಂಡಿದ್ದರೆ ದಯವಿಟ್ಟು ಮಾನ್ಯ ಮಂತ್ರಿಗಳು ಅದನ್ನು ತಿಳಿಸುವುದು ಏಕೆಂದರೆ ನಮ್ಮಲ್ಲಿ ಈಗಾಗಲೇ ಕೇವಲ ಒಂದು ಒಂದೂವರೆ ತಿಂಗಳಿನಲ್ಲಿ ಕ್ರಷರ್ ಶುರು ಆಗುತ್ತದೆ. ಆದ್ದರಿಂದ ದಯವಿಟ್ಟು ಮಾನ್ಯ ಮಂತ್ರಿಗಳು ಇದರ ಬಗ್ಗೆ ಕೈಗೊಂಡಿರುವ ಕ್ರಮಗಳನ್ನು ತಿಳಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಪಿ.ಸಿ.ಸಿದ್ದನಗೌಡರ್ : ಸನ್ಮಾನ್ಯ ಸಭಾಧ್ಯಕ್ಷರೆ, ಮಾನ್ಯ ಸದಸ್ಯರು ಮೊದಲನೆ ಪ್ರಶ್ನೆಯಲ್ಲಿ ಅವರ ಕ್ಷೇತ್ರದ್ದು ಕೇಳಿದ್ದಾರೆ. ನಾವು ತಾಲ್ಲೂಕುವಾರು ಎಷ್ಟೆಷ್ಟು ಕಬ್ಬನ್ನು ಬೆಳೆಯುತ್ತಿದ್ದಾರೆ ಎನ್ನತಕ್ಕಂತಹ ಮಾಹಿತಿಯನ್ನು ಕೊಟ್ಟಿದ್ದೇನೆ. 2ನೇ ಪ್ರಶ್ನೆ ಅವರು ಏನು ಕೇಳಿದ್ದಾರೆ ಅಂದರೆ 1 ಲಕ್ಷದ 69 ಸಾವಿರ ಟನ್ನು ಕಬ್ಬು ಏನು ಬೆಳೆದಿದೆ ಅದು ಹೆಚ್ಚಿಗೆ ಆಗಿದೆ ಎನ್ನತಕ್ಕಂತಹ ವಿಚಾರಗಳನ್ನು ಹೇಳಿದ್ದಾರೆ.

ಮಾನ್ಯ ಜಿಲ್ಲಾಧಿಕಾರಿಗಳೂ ಕೂಡ ಈ ಪ್ರಸ್ತಾವನೆಯನ್ನು ಕಳುಹಿಸಿದ್ದಾರೆ. ಕಬ್ಬು ಎಲ್ಲೆಲ್ಲಿ ಹೆಚ್ಚು ಬೆಳೆದಿದ್ದಾರೋ ಅಂಥಹ ಕಡೆಗಳಲ್ಲಿ ಪಕ್ಕದ ಫ್ಯಾಕ್ಟರಿಯವರಿಗೆ ತೆಗೆದುಕೊಳ್ಳಲಿಕ್ಕೆ ಈಗಾಗಲೇ ಆದೇಶ ಮಾಡಿದ್ದೇನೆ. ಮಾನ್ಯ ಸದಸ್ಯರು ಹೇಳಿದ ಹಾಗೆ ಬನ್ನೂರು ಆ ಕ್ಷೇತ್ರದಲ್ಲಿರತಕ್ಕಂತಹ ಕಬ್ಬನ್ನು ಪಕ್ಕದ ಫ್ಯಾಕ್ಟರಿಗೆ ಅರೆಯಲಿಕ್ಕೆ ಕೊಟ್ಟಿದ್ದೇವೆ. ಈ ವರ್ಷದ ಬೆಲ್ಲದ ರೇಟು ಕಡಿಮೆ ಆಗಿರುವುದರಿಂದ ಸ್ವಲ್ಪ ತೊಂದರೆಯಾಗಿದೆ; ಅವರು ಹೇಳತಕ್ಕಂಥಹದ್ದು ನಿಜ ಇದೆ. ಸಾಧ್ಯವಾದಷ್ಟು ಕಬ್ಬನ್ನು ಅರೆಯುಲಿಕ್ಕೆ ನಾವು ಪ್ರಯತ್ನ ಮಾಡುತ್ತೇವೆ ಇದರ ಜೊತೆಗೆ ನಾವು ಬೇರೆ ರಾಜ್ಯಕ್ಕೆ ಕಳುಹಿಸಲಿಕ್ಕೆ ಈಗಾಗಲೇ ವ್ಯವಸ್ಥೆ ಮಾಡಿದ್ದೇವೆ ಎಂಬುದನ್ನು ತಮ್ಮ ಮುಖಾಂತರ ಮಾನ್ಯ ಸದಸ್ಯರಿಗೆ ಹೇಳುತ್ತೇನೆ.

ಶ್ರೀ ಎಸ್.ಕೃಷ್ಣಪ್ಪ : ಮಾನ್ಯ ಅಧ್ಯಕ್ಷರೇ, ಅಲ್ಲೇ ಇರತಕ್ಕ ಮಹದೇಶ್ವರ ಸಕ್ಕರೆ ಕಾರ್ಖಾನೆಗೆ ಒಟ್ಟು ಸುಮಾರು 2-3 ತಿಂಗಳಿನಿಂದ ಈ ಫ್ಯಾಕ್ಟರಿಯವರು ಹಣವನ್ನು ಕೊಡುತ್ತಿಲ್ಲ. ಆದ್ದರಿಂದ ದಯವಿಟ್ಟು ಇದಕ್ಕಿಂತ ನಮಗೆ ಇನ್ನೂ ಹೆಚ್ಚು ಕಬ್ಬನ್ನು ಹೊರಗಡೆ ಸ್ಟೇಟ್‌ಗೆ ಕಳುಹಿಸಲು ಅನುಮತಿ ಕೊಟ್ಟರೆ ಬಹುಶಃ ನಮ್ಮಲ್ಲಿರತಕ್ಕಂಥ ಕಬ್ಬು ಎಲ್ಲಾ ಹಾಳಾಗದಂತೆ ಎಲ್ಲವನ್ನೂ ಸಾಗಿಸಲಿಕ್ಕೆ ಅವಕಾಶವಾಗುತ್ತದೆ ಆದ್ದರಿಂದ ಆದಷ್ಟು ಜಾಗ್ರತೆ ಇದರ ಬಗ್ಗೆ ವ್ಯವಸ್ಥೆ ಮಾಡಬೇಕೆಂದು ನಾನು ಮಾನ್ಯ ಮಂತ್ರಿಗಳನ್ನು ಕೇಳಿಕೊಳ್ಳುತ್ತೇನೆ.

ಶ್ರೀ ಪಿ.ಸಿ. ಸಿದ್ದೇನಗೌಡರ್ : ಸನ್ಮಾನ್ಯ ಅಧ್ಯಕ್ಷರೇ ಅವರನ್ನು ಕರೆಸಿ ಈವತ್ತೇ ಅದನ್ನು ಕೊಡಲಿಕ್ಕೆ ಆದೇಶ ಮಾಡುತ್ತೇನೆ.

## Sub : Financial crisis in Town Municipalities.

Starred L.A. Question 196(1253)

Sri Vatal Nagaraj (Chamarajanagar) : Will the Minister for Urban Development CADA and Hyderbad-Karnataka Development Board be pleased to state

1. It is true that most of TMCS in Karnataka are facing financial crisis?

2. What action has been taken to improve the financial position of the TMCS.

Sri Vaijanath Patil (Minister for Urban Development, CADA and Hyderbad-Karnataka Devt. Board) :

1. Yes

1. 1. The Director of Municipal Administration, and the Deputy Commissioners have been instructed to periodically review the collection of taxes and other out-

standing dues and issue necessary instructions to the Chief Officers and Municipal Commissioners.

2. Development grants are also released to the Urban Local Bodies.

3. The Government has also setup a finance commission with the following terms of reference.

4. The Commission shall review the financial position of the Zilla Panchayats, Taluk Panchayats Grama Panchayats, Municipal corporations, City Municipal Councils, Town Municipal Council and Town Panchayats and make recommendations on :

a. determination of the principles which should govern.

i) the Distribution between the state Government and the Zilla Panchayats, Taluk Panchayats, Grama Panchayats, Municipal Corporations, City Municipal Councils Town Panchayats of the net proceeds of the taxes, duties, tolls and fees levied by the Government which will be divided between them and the allocation between the Zilla Panchayats, Taluk Panchayats, Grama Panchayats, Municipal Corporations, Town Municipals Councils and Town Panchayats of their respective shares of such proceeds;

ii) the determination of the taxes , duties tolls and fees which may be assigned to, or appropriated by the Zilla Panchayats, Taluk Panchayats, Grama Panchayats, Municipal Corporations, City Municipal Councils, Town Municipal councils and Town Panchyats;

iii) a. the grant-in-aid to the Zilla panchayats, Taluk Panchayats, Grama Panchayats, Municipal Corporations, City Municipal Councils, Town Municipal councils and Town Panchayats from the consolidated fund of the state;

b. The measures needed to improve the financial poistion of the Zilla Panchayats, Taluk Panchayats, Grama

Panchayats, Municipal Corporations, City Municipal councils, Town Municipal Councils and Town Panchayats.

c. i) Examine and make suggestion on the extent to which and the manner in which the resources available to the local bodies could best be utilised for meeting the expenditure of these bodies; and

ii) make a detailed analysis of the repayment of loans and advances extended by Government from time to time to the local bodies and make suitable recommendations for repayment of government dues and the possibility of adjusting these dues against future devolution of revenues from Government to these bodies.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೆ, ಕರ್ನಾಟಕ ರಾಜ್ಯದ ಅನೇಕ ಪುರಸಭೆಗಳು ಒಂದು ಕಾಲದಲ್ಲಿ ಅವರದೇ ಆದಂತಹ ಸಂಪನ್ಮೂಲಗಳನ್ನು ಕ್ರೋಢಿಕರಿಸಿಕೊಂಡು ಪುರಸಭೆಗಳನ್ನು ನಡೆಸತಕ್ಕಂಥದ್ದು ವ್ಯವಸ್ಥೆ ಇತ್ತು. ಆದರೆ ಈಗ ಸರ್ಕಾರದ ಅನುಧಾನವನ್ನು ನಂಬಿಕೊಂಡಿರುವ ಪರಿಸ್ಥಿತಿ ಬಂದಿದೆ. ಇವರು ಅನುದಾನವನ್ನು ಬಿಡುಗಡೆ ಮಾಡುವುದು ಅವರಿಗೆ ಇಚ್ಛೆ ಬಂದ ಹಾಗೆ. ಯಾವಾಗ ಬೇಕಾದರೆ ಆವಾಗ ಬಿಡುಗಡೆ ಮಾಡುತ್ತಾರೆ. ಕಾಲಕಾಲಕ್ಕೆ ಬಿಡುಗಡೆ ಮಾಡುವುದಕ್ಕೆ ಆಗುವುದಿಲ್ಲ. ಆದ್ದರಿಂದ ಅನೇಕ ಪುರಸಭೆಗಳಲ್ಲಿ ಪೊರಕೆಗಳನ್ನು ಕೊಂಡುಕೊಳ್ಳುವುದಕ್ಕೂ ಹಣ ಇಲ್ಲ. ಮತ್ತು ಸಾಮಾನ್ಯ ಒಬ್ಬ ಪೌರ ನೌಕರನಿಗೆ ಸಂಬಳ ಕೊಡುವುದಕ್ಕೂ ಹಣ ಇಲ್ಲ. ಈ ಪರಿಸ್ಥಿತಿ ಇದೆ. ಆದ್ದರಿಂದ ಏನಾದರೂ ಪರ್ಯಾಯವಾಗಿ ಒಂದು ಸಂಪೂರ್ಣವಾಗಿ ಅವರೇ ಒಂದು ಸಂಪನ್ಮೂಲಗಳನ್ನು ಕ್ರೋಢಿಕರಿಸತಕ್ಕಂತಹ ವ್ಯವಸ್ಥೆ ಮಾಡತಕ್ಕಂಥದ್ದು ಸರ್ಕಾರದ ಯೋಚನೆಯಲ್ಲಿ ಇದೆಯೆ? ಎರಡನೆಯದಾಗಿ ಈ ತಿಂಗಳು ಮತ್ತು ಮುಂದಿನ ತಿಂಗಳಲ್ಲಿ ಎಲ್ಲಾ ಪುರಸಭೆಗಳಿಗೆ ಅದರ ಅಧಿಕಾರ ಮುಗಿಯುತ್ತಾ ಇದೆ. ಈ ಅಧಿಕಾರಾವಧಿಯನ್ನು ಹೆಚ್ಚಿಸತಕ್ಕಂಥದ್ದು ಸರ್ಕಾರದ ನಿರ್ಧಾರ ಇದೆ ಎನ್ನತಕ್ಕಂಥ ಸೂಚನೆ ಕೆಲವು ಪತ್ರಿಕೆಗಳಲ್ಲಿ ಬಂದಿದೆ. ಆ ಸೂಚನೆ ಏನು? ಈಗ ಮುಂದೆ ಸ್ಥಳೀಯ ಸಂಸ್ಥೆಗಳ ವಿಧಾನ ಪರಿಷತ್ತಿನ ಚುನಾವಣೆ ಆಗಬೇಕಾದಂಥದ್ದು ಇದೆ. ಆ ದೃಷ್ಟಿಯಿಂದ ಸರ್ಕಾರ ಸ್ವಾರ್ಥ ಕ್ಕೋಸ್ಕರವಾಗಿ ಈಗಿರತಕ್ಕಂಥ ಪುರಸಭೆಗಳನ್ನು ಮುಂದೂಡತಕ್ಕಂಥ ಆಲೋಚನೆ ಇದೆಯೇ ಎಂಬುದನ್ನು ದಯವಿಟ್ಟು ತಿಳಿಸಿ.

ಶ್ರೀ ವೈಜನಾಥ ಪಾಟೀಲ್ : ಸನ್ಮಾನ್ಯ ಅಧ್ಯಕ್ಷರೇ, ಇಲ್ಲ ಸರ್ಕಾರದ ಹತ್ತಿರ ಅಂಥಹ ಯಾವುದೇ ಸೂಚನೆ ಇಲ್ಲ. ಅವಧಿ ಮುಗಿಯುವುದರೊಳಗಾಗಿ ಚುನಾವಣೆಗಳು ಆಗಬೇಕು. ಡೆಮೊಕ್ರಸಿಯಲ್ಲಿ ಮತ್ತೆ ಡೀ ಲಿಮಿಟೆಷನ್ ಹಾಗೂ ರಿಸರ್ವೇಷನ್ ಪಾಲಿಸಿ ಮಾಡುವುದಕ್ಕೋಸ್ಕರ ಸಮಯ ಬೇಕಾಗುತ್ತದೆ. ಆ ದೃಷ್ಟಿಯಿಂದ ಈ ತಿಂಗಳ ಕೊನೆವರೆಗೆ ಬಹಳಷ್ಟು ಪುರಸಭೆಗಳನ್ನು, ಮುನ್ಸಿಪಾಲಿಟಿಗಳಿಗೆ ಪಿರಿಯಡ್ ಮುಗಿಯುತ್ತವೆ.

ನಂತರ ಎಕ್ಸ್‌ಟೆನ್‌ಷನ್ ಕೊಡುವುದಕ್ಕೆ ಸರ್ಕಾರ ಯೋಚಿಸಿಲ್ಲ. ಈಗ ಫೈನಾನ್ಸಿಯಲ್ ಪೊಸಿಷನ್ ಬಗ್ಗೆ ಹೇಳಿದ್ದಾರೆ. ಒಂದು ಫೈನಾನ್ಸ್ ಕಮೀಷನ್ ಈಗಾಗಲೇ ರಚಿಸಲಾಗಿದೆ. ಅವರ ರೆಕಮಂಡೇಷನ್ ಬಂದ ನಂತರ ಪುರಸಭೆಗಳು ಮತ್ತು ಕಾರ್ಪೊರೇಷನ್‌ಗಳ ಫೈನಾನ್ಸಿಯಲ್ ಪೊಸಿಷನ್ ಯಾವ ಪ್ರಕಾರ ಶಿಫಾರಸ್ಸು ಮಾಡುತ್ತಾರೆ ಆ ಪ್ರಕಾರ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆ.

ಶ್ರೀ ವಾಟಾಳ್ ನಾಗರಾಜ್ : ನನಗೆ ಗೊತ್ತಿರುವ ಹಾಗೆ, ಮಾನ್ಯ ಮಂತ್ರಿಗಳು ಬಹಳ ಪ್ರಾಮಾಣಿಕರು. ನಿಮ್ಮ ಉತ್ತರದ ಬಗ್ಗೆ ಅಪನಂಬಿಕೆ ಎಂದು ಹೇಳುವುದಕ್ಕೆ ಹೋಗುವುದಿಲ. ಈಗ ನಾನು ತಿಳಿದಿದ್ದೇನೆ ಈ ಪುರಸಭೆಗಳು ಮತ್ತು ಮಹಾನಗರಪಾಲಿಕೆಯನ್ನು ಮುಂದೂಡತಕ್ಕಂಥ ನಿರ್ಧಾರವನ್ನು ಈಗಾಗಲೇ ಸರ್ಕಾರದವರು ತೆಗೆದುಕೊಂಡಿದ್ದಾರೆ. ಆದರೆ ಈ ಅಸೆಂಬ್ಲಿ ಮುಗಿದ ನಂತರ ಅದನ್ನು ಬಹಿರಂಗಪಡಿಸಬೇಕು ಎನ್ನತಕ್ಕಂತಹ ತೀರ್ಮಾನ ಇದೆ. ಉದ್ದೇಶವೇನು? ಸ್ಥಳೀಯ ಸಂಸ್ಥೆಗಳ ಚುನಾವಣೆಗೋಸ್ಕರವಾಗಿ ತಮ್ಮದೇ ತಾಲ್ಲೂಕು ಪಂಚಾಯತ್‌ಗಳು ಬಂದಿದೆ. ಆದ್ದರಿಂದ ಇದನ್ನು ಮುಂದುವರಿಸಿ ಬಿಟ್ಟರೆ ತಮ್ಮ ಕಡೆಯವರೇ ಗೆಲ್ಲಬಹುದು ಎನ್ನತಕ್ಕಂಥ ಉದ್ದೇಶವಿರಬಹುದು. ಇದುವರೆಗೂ ಚುನಾವಣೆ ಪ್ರಕ್ರಿಯೆಗಳೇ ನಡೆದಿಲ್ಲ. ಲೆಕ್ಕಾಚಾರವಾಗಿ ಚುನಾವಣೆ ಮುಗಿಯುವುದರೊಳಗಾಗಿ ಪ್ರಕ್ರಿಯೆ ಆಗಿ ಚುನಾವಣೆ ಇಷ್ಟೊತ್ತಿಗೆ ನಡೆಯಬೇಕಾಗಿತ್ತು. ಆದರೆ ಚುನಾವಣೆ ಮಾಡದೆ ಯಾವುದೋ ಒಂದು ಕುಂಟುನೆಪ ಹೇಳಿ ಡೀಲಿಮಿಟೇಷನ್ ಮಾಡುತ್ತೇವೆ ಅದು ಮಾಡುತ್ತೇವೆಂದು ಇದು ಮಾಡುತ್ತೇವೆಂದು ಹೇಳಿ ಮುಂದೆ ಹಾಕತಕ್ಕಂಥದ್ದು ಒಂದು. ಎರಡನೆಯದು ಯಾವ ಉದ್ದೇಶ ಇವರ ತಲೆಯಲ್ಲಿತ್ತು ನನಗೆ ತಿಳಿದ ಮಟ್ಟಿಗೆ ಮತ್ತು ಪತ್ರಿಕೆಗಳಿಂದ ಬಂದಿರುವ ಹಾಗೆ ಸರ್ಕಾರ ಗೌಪ್ಯವಾಗಿ ತೀರ್ಮಾನ ಮಾಡಿಕೊಂಡಿರುವ ಹಾಗೆ ಈ ಪುರಸಭೆಗಳು ಮತ್ತು ಮಹಾನಗರಪಾಲಿಕೆಗಳನ್ನು ಮುಂದುವರಿಸತಕ್ಕ ಯೋಜನೆ ಸರ್ಕಾರಕ್ಕೆ ಇದೆ. ದಯಮಾಡಿ ನಾನು ಖಂಡಿತವಾಗಿಯೂ ಯಾವುದೇ ಕಾರಣಕ್ಕೂ ಮುಂದುವರಿಸುವುದಿಲ್ಲ; ಎನ್ನತಕ್ಕಂಥದ್ದನ್ನು ಸ್ಪಷ್ಟವಾಗಿ ಹೇಳಿ;

ಅಧ್ಯಕ್ಷರು : ಸಧ್ಯಕ್ಕೆ ಇಲ್ಲವೆಂದು ಹೇಳಿದ್ದಾರೆ.

ಶ್ರೀ ವೈಜನಾಥ ಪಾಟೀಲ್ : ಈ ಸಧ್ಯಕ್ಕೆ ಇಲ್ಲವೆಂದು ಹೇಳಿದ್ದೇನೆ. ಈಗಾಗಲೇ ನಾನು ಹೇಳಿದ್ದೇನೆ, ಸರ್ಕಾರದ ಹತ್ತಿರ ಮುಂದುವರಿಸುವ ಯಾವುದೇ ಯೋಚನೆ ಇಲ್ಲ.

ಶ್ರೀ ವಾಟಾಳ್ ನಾಗರಾಜ್ : ಅಧ್ಯಕ್ಷರೇ, ಇದು ಗಾಳಿಯಲ್ಲಿ ಹೋಗುತ್ತಿದೆ ಉತ್ತರ . ನನಗೆ ಪಾಟೀಲರು ಸ್ಪಷ್ಟಪಡಿಸಬೇಕು ಸ್ವಾಮಿ, ಈಗ ಅವರ ಉದ್ದೇಶ ಏನು ಇದೆ, ಸ್ಥಳೀಯ ಸಂಸ್ಥೆಗಳ ಚುನಾವಣೆ ಬರುತ್ತಾ ಇದೆ. ಆದ್ದರಿಂದ ನಿಖರವಾಗಿ ಯಾವುದೇ ಕಾರಣಕ್ಕೂ ನಾವು ಮುಂದುವರೆಸುವುದಿಲ್ಲ ಎನ್ನುವುದನ್ನು ಸ್ಪಷ್ಟಪಡಿಸಿ.

ಶ್ರೀ ವೈಜನಾಥ ಪಾಟೀಲ್ : ಇದರ ಬಗ್ಗೆ ವಿಚಾರ ಇಲ್ಲ ಯೋಚನೆ ಇಲ್ಲ ಎಂದು ನಾನು ಹೇಳುತ್ತಾ ಇದ್ದೇನೆ.

ಶ್ರೀ ಬಿ.ಬಸವಯ್ಯ : ಸನ್ಮಾನ್ಯ ಅಧ್ಯಕ್ಷರೆ, ಮುಖ್ಯಮಂತ್ರಿಗಳು ಈ ಪುರಸಭೆಗಳ ಚುನಾವಣೆಯನ್ನು ಡಿಸೆಂಬರ್ ಅಂತ್ಯದೊಳಗೆ ನಡೆಸುತ್ತೇವೆಂದು ಹೇಳಿದ್ದಾರೆ. `ವಾರ್ಡ್

ವಿಂಗಡಣೆ ಆಗಬೇಕಾಗಿರುವುದರಿಂದ ಡಿಸೆಂಬರ್ ಅಂತ್ಯದೊಳಗೆ ನಡೆಸುತ್ತೇವೆಂದು ಹೇಳಿದ್ದಾರೆ. ಪತ್ರಿಕೆಗಳಲ್ಲಿ ಮೂರು ತಿಂಗಳು ಮುಂದುವರೆಸುತ್ತೇವೆ ಎನ್ನುವ ವಿಚಾರವೂ ಬಂದಿದೆ . ಈಗ ಮುಂದುವರಿಸುವುದಿಲ್ಲ ಎಂದು ಹೇಳಿದ್ದಾರೆ. ಆದ್ದರಿಂದ ಇದಕ್ಕೆ ಸ್ಪಷ್ಟವಾಗಿ ಉತ್ತರ ಬೇಕಾಗಿದೆ.

ಅಧ್ಯಕ್ಷರು : ಹೇಳಿದ್ದಾರಲ್ಲಾ ಮುಂದುವರಿಸುವುದಿಲ್ಲ ಎಂದು ಎಲ್ಲಾ ಅದೇ ತಾನೇ ಪ್ರಶ್ನೆ

ಶ್ರೀ ಕೆ.ಎಸ್. ಈಶ್ವರಪ್ಪ : ಸನ್ಮಾನ್ಯ ಅಧ್ಯಕ್ಷರೇ, ಸನ್ಮಾನ್ಯ ಮಂತ್ರಿಗಳು ಡೀಲಿಮಿಟೇಷನ್ ಬಗ್ಗೆ ಸ್ಪಷ್ಟವಾಗಿ ಹೇಳುತ್ತಿದ್ದಾರೆ. ಇಡೀ ರಾಜ್ಯದಲ್ಲಿ ಕೆಲವು ಡಿವಿಷನ್‌ನಲ್ಲಿ ತುಂಬಾ ಕಡಿಮೆ ಜನಸಂಖ್ಯೆ ಇದೆ, ಇನ್ನು ಕೆಲವು ಡಿವಿಷನ್‌ನಲ್ಲಿ ಸಿಕ್ಕಾಪಟ್ಟೆ ಜಾಸ್ತಿ ಇದೆ. ಶಿವಮೊಗ್ಗ ನಗರದಲ್ಲಿ 8ನೇ ಡಿವಿಷನ್‌ನಲ್ಲಿ ಬರೀ ಮೂರು ಸಾವಿರ ಇದ್ದರೆ 4ನೇ ಡಿವಿಷನ್‌ನಲ್ಲಿ 45 ಸಾವಿರ ಮತದಾರರು ಇದ್ದಾರೆ. ಮುಂಚೆಯಿಂದ ಕೂಡ ಮನಸ್ಸಿಗೆ ಬಂದ ಹಾಗೆ ಇದೆ. ಅದಕ್ಕೆ ಅವರು ತುರ್ತಾಗಿ ಏನಾದರೂ ಗಮನ ಕೊಟ್ಟಿದ್ದಾರೆಯೇ? ಈಗಾಗಲೇ ನಡೆದಿದೆಯೇ? . ಅದನ್ನು ಮಾಡಿಕೊಂಡೇ ಚುನಾವಣೆ ನಡೆಸುತ್ತಾರೆಯೇ?

ಶ್ರೀ ವೈಜನಾಥ ಪಾಟೀಲ್ : ಕಂಪ್ಲೇಂಟ್ ಎಲ್ಲಾ ಕಡೆಯಿದೆ. ಅಲ್ಲಿ ಏನಾದರೂ ತಪ್ಪು ಇದ್ದರೆ ಅದರ ಬಗ್ಗೆ ನಾಗರೀಕರು ಮತ್ತು ಮತದಾರರು ಅಬ್ಜಕ್ಷನ್ ಹಾಕಬೇಕು. ತಪ್ಪುಗಳು ಇದ್ದರೆ ಅದು ಸರಿಪಡಿಸಲಾಗುತ್ತದೆ ಎಂದು ಹೇಳುತ್ತೇನೆ.

ಶ್ರೀ ಸಿ. ಆರ್. ಸಗೀರ್ ಅಹಮದ್ : ಮಾನ್ಯ ಅಧ್ಯಕ್ಷರೆ, ನಗರಸಭೆಗಳು ಹಾಗೂ ಪುರಸಭೆಗಳು ಚುನಾವಣೆ ನಡೆಸುವ ಬಗ್ಗೆ ಅನೇಕ ಪತ್ರಿಕೆಗಳಲ್ಲಿ ಮತ್ತು ಸರ್ಕಾರದ ವತಿಯಿಂದ ಸಾಕಷ್ಟು ಪ್ರಮಾಣದಲ್ಲಿ ಹೇಳಿಕೆಗಳು ಬಂದಿವೆ. ಮೊನ್ನೆ ತಾನೇ ಒಂದು ಹೇಳಿಕೆ ಬಂದಿರುವಂತಹ ಸಂದರ್ಭದಲ್ಲಿ ಮೂರು ತಿಂಗಳ ಕಾಲ ನಗರಸಭೆ ಮತ್ತು ಪುರಸಭೆಗಳ ಅವಧಿಯನ್ನು ನಾವು ವಿಸ್ತರಿಸಿದ್ದೇವೆ ಎಂದು ಹೇಳಿ ಒಂದು ಪ್ರಕಟಣೆ ಬಂದಿದೆ. ಆದರೆ ಮಾನ್ಯ ಮಂತ್ರಿಗಳು ಉತ್ತರ ಹೇಳುವಂತಹ ಸಂದರ್ಭದಲ್ಲಿ ಸರ್ಕಾರದ ಆಲೋಚನೆಯಲ್ಲಿ ಇಲ್ಲ ಎಂದು ಹೇಳುವ ಬದಲಿಗೆ, ಅವರು ನಿರ್ದಿಷ್ಟವಾಗಿ ನಾವು ಈ ಅವಧಿಯನ್ನು ವಿಸ್ತರಿಸುವುದಿಲ್ಲ ಎನ್ನುವ ಅಭಿಪ್ರಾಯದಲ್ಲಿ ಮಾತನಾಡಬೇಕು. ಎರಡನೇಯದಾಗಿ ಕ್ಷೇತ್ರ ವಿಂಗಡಣೆ ಮಾಡುವಂತಹ ಸಂದರ್ಭದಲ್ಲಿ ಈ ನಗರಸಭೆ ಪುರಸಭೆ ವ್ಯಾಪ್ತಿಗಳಲ್ಲಿ ಆ ಜನಸಂಖ್ಯೆ ಆಧಾರದ ಮೇಲೆ ಕ್ಷೇತ್ರ ವಿಂಗಡಣೆ ಮಾಡುತ್ತಾರೆಯೇ ಎನ್ನುವುದರ ಬಗ್ಗೆ ಒಂದು ಮಾಹಿತಿಯನ್ನು ಕೊಡಬೇಕು.

ಶ್ರೀ ವೈಜನಾಥ ಪಾಟೀಲ್ : ವಿಸ್ತರಿಸುತ್ತೇವೆ ಎಂದು ಸರ್ಕಾರದ ವತಿಯಿಂದ ನಾವು ಯಾವುದೇ ಹೇಳಿಕೆಯನ್ನು ಕೊಟ್ಟಿಲ್ಲ.

ಅಧ್ಯಕ್ಷರು : ಅವರ ಅವಧಿಯೊಳಗೆ ಏನೇನು ಕೆಟ್ಟುಹೋಗಿದೆ ಅದನ್ನು ಸರಿಪಡಿಸಿ.

ಶ್ರೀ ವಾಟಾಳ್ ನಾಗರಾಜ್ : ಸ್ವಾಮಿ ಅಧ್ಯಕ್ಷರೇ, ನಮ್ಮ ವೈಜನಾಥ್ ಪಾಟೀಲರು ನಮಗೆ ಯೋಚನೆ ಇಲ್ಲ, ಯೋಚನೆ ಇಲ್ಲ, ಎಂದು ಹೇಳುತ್ತಾರೆ. ಇವತ್ತು ಯೋಚನೆ ಇಲ್ಲ ನಿಜ. ನಾಳೆ ಅಸೆಂಬ್ಲಿ ಮುಗಿದ ಮೇಲೆ ಯೋಚನೆ

ಬರುತ್ತದೆ. ಅದಕ್ಕೆ ಯಾವುದೇ ಸಂದರ್ಭದಲ್ಲಿ ಯಾರೇ ಬಂದರೂ ನಾವಂತೂ ಮುಂದುವರಿಸುವುದಿಲ್ಲ ಎನ್ನುವುದನ್ನು ಸ್ಪಷ್ಟಪಡಿಸಬೇಕು.

ಅಧ್ಯಕ್ಷರು : ನಿಮ್ಮದೇ ಭಾಷೆಯಲ್ಲಿ ಹೇಳುವುದಕ್ಕೆ ಹೈದಾರಾಬಾದ್ ಕರ್ನಾಟಕದಲ್ಲಿ ಅಲ್ಲಿ ಆ ರೀತಿ ಭಾಷೆ ಬಳಸುವುದಿಲ್ಲ ಅವರು. ನಿಮ್ಮ ಮಾತನ್ನೇ ಅವರು ಹೇಳಿದ್ದು. ನಿಮ್ಮ ಭಾಷೆ ವ್ಯತ್ಯಾಸ ಆಗಿದೆ ಅಷ್ಟೆ.

ಶ್ರೀ ವಾಟಾಳ್ ನಾಗರಾಜ್ : ನಾನು ಸ್ವಲ್ಪ ಹೆಚ್ಚು ಕಡಿಮೆ ಎಲ್ಲಾ ಭಾಷೆಗೂ ಹೊಂದಿಕೊಂಡಿದ್ದೇನೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ನಾನು ಅವರ ಭಾಷೆಯಲ್ಲಿ ಕೇಳುತ್ತೇನೆ ನನಗೆ ಅವಕಾಶ ಕೊಡಿ.

ಶ್ರೀ ವಾಟಾಳ್ ನಾಗರಾಜ್ : ಹೌದ್ರಾ ಸಾಹೇಬರೇ, ಹೇಳ್ರಲಾ, ಸ್ಪಷ್ಟವಾಗಿ ಉತ್ತರ ಕೊಡ್ರಲಾ.

ಶ್ರೀ ವೈಜನಾಥ ಪಾಟೀಲ್ : ಎಷ್ಟು ಸಲ ಹೇಳಬೇಕು.

ಅಧ್ಯಕ್ಷರು : ಈಗ ಮುಂದಕ್ಕೆ ಹೋಗೋಣ.

ಶ್ರೀ ವೈಜನಾಥ ಪಾಟೀಲ್ : ಅವಧಿಯನ್ನು ಮುಂದುವರಿಸುವ ಯೋಜನೆ ಸರ್ಕಾರಕ್ಕೆ ಇಲ್ಲ.

ಶ್ರೀ ವಾಟಾಳ್ ನಾಗರಾಜ್ : ಅಧ್ಯಕ್ಷರೇ, ನನಗೆ ತಮ್ಮ ತಾಳ್ಮೆಯನ್ನು ಪರೀಕ್ಷಿಸಬೇಕು ಎಂದೇನೂ ಇಲ್ಲ. ನನಗೆ ಸರ್ಕಾರದ ಮೇಲೆ ಬಹಳ ಅಪನಂಬಿಕೆ ಬಂದಿದೆ. ಸರ್ಕಾರದವರು ಒಂದು ತೀರ್ಮಾನ ತೆಗೆದುಕೊಂಡಿದ್ದಾರೆ. ಸ್ಥಳೀಯ ಸಂಸ್ಥೆಗಳಲ್ಲಿ ಹೇಗಾದರೂ ಇವರೇ ಗೆದ್ದು ಬಿಡುತ್ತಾರೆ ಎಂದು. ಕ್ಷೇತ್ರ ವಿಂಗಡಣೆ ಮಾಡಿ ಚುನಾವಣೆ ನಡೆಸುತ್ತೇವೆ ಎನ್ನುವುದು ಇವರ ಉದ್ದೇಶವಾಗಿತ್ತು ಮೊದಲು. ಲೆಕ್ಕಾಚಾರವಾಗಿ ನೋಡಿದರೆ ಪ್ರಾಮಾಣಿಕವಾಗಿ ಚುನಾವಣೆ ನಡೆಸಬೇಕಿತ್ತು. 3 ತಿಂಗಳ ಹಿಂದೆ ಇವರು ಅಧಿಕಾರಕ್ಕೆ ಬಂದ ನಂತರ ಕ್ಷೇತ್ರ ವಿಂಗಡಣೆ ಮಾಡಿ ಚುನಾವಣೆ ನಡೆಸಬೇಕಿತ್ತು. ಅದರೆ ಇನ್ನೂ ಚುನಾವಣೆ ನಡೆಸದೇ ನಾವು ಇನ್ನು ಮುಂದೆ ಕ್ಷೇತ್ರ ವಿಂಗಡಣೆ ಮಾಡುತ್ತೇವೆ ಎಂದು ಹೇಳುತ್ತಿದ್ದಾರೆ. ನನಗೆ ಗೊತ್ತಿರುವ ಹಾಗೆ, ಈ ಚುನಾವಣೆ ನಡೆಸದೇ ಈ ಅಧಿಕಾರವನ್ನೇ ಮುಂದುವರಿಸುತ್ತಾರೆ ಎನ್ನುವ ಗುಪ್ತವಾದ ತೀರ್ಮಾನ ತೆಗೆದು ಕೊಂಡಿದ್ದಾರೆ. ಆದ್ದರಿಂದ ಯಾವುದೇ ಕಾರಣಕ್ಕೂ ಇದನ್ನು ಮುಂದುವರಿಸುವುದಿಲ್ಲ ಎನ್ನುವ ಒಂದು ಸ್ಪಷ್ಟವಾದ ನಿಲುವನ್ನು ತಾಳುತ್ತೇವೆ ಎಂದು ಹೇಳಬೇಕು. ಅವರು ಹೇಳದಿದ್ದರೆ ನಾನು ಧರಣಿ ಮಾಡಬೇಕಾಗುತ್ತದೆ.

ಶ್ರೀ ವೈಜನಾಥ ಪಾಟೀಲ್ : ಈ ಅವಧಿಯನ್ನು ಮುಂದುವರಿಸುವುದರ ಬಗ್ಗೆ ಸರ್ಕಾರ ಯಾವುದೇ ತೀರ್ಮಾನ ತೆಗೆದುಕೊಂಡಿಲ್ಲ ಎಂದು ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ.

ಅಧ್ಯಕ್ಷರು : ಈಗ ಒಂದು ಕೆಲಸ ಮಾಡೋಣ. ವಾಟಾಳರೇ, ಆಮೇಲೆ ನಮ್ಮ ಕಛೇರಿಯಲ್ಲಿ ನಾನು, ತಾವು ಮತ್ತು ಮಂತ್ರಿಗಳು ಕುಳಿತುಕೊಂಡು, ಅವರು ಸ್ಪಷ್ಟವಾಗಿ ಏನು ಹೇಳುತ್ತಾರೆ ಎನ್ನುವುದನ್ನು ನಮಗೆ ಅರ್ಥವಾಗುವ ರೀತಿಯಲ್ಲಿ ತಿಳಿದುಕೊಳ್ಳೋಣ.

(ಗೊಂದಲ)

Sri. N. Rajanna : The 74th Amendment pending before the Government.

Mr. Speaker : Don't make things worse for it.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಇದನ್ನು ಯಾವುದೇ ರೀತಿಯಿಂದ ನಾವು ಮುಂದುವರಿಸುವುದಿಲ್ಲ ಎಂದು ಮಾನ್ಯ ಮಂತ್ರಿಗಳು ಹೇಳಿದ್ದಾರೆ. ಕನಿಷ್ಟಪಕ್ಷ ಅಲ್ಲಿಗೆ ಅಡ್ಮಿನಿಸ್ಟ್ರೇಟರ್‌ನ್ನಾದರೂ ಹಾಕುತ್ತೀರಾ ಎನ್ನುವಂಥ ಮಾತನ್ನು ಕೇಳುತ್ತಿದ್ದೇನೆ. ಎರಡನೆಯದಾಗಿ, ಕೃಷ್ಣಸ್ವಾಮಿ ಕಮಿಟಿಯು ವಿಶೇಷವಾಗಿ ಪಂಚಾಯತಿ ಮತ್ತು ಜಿಲ್ಲಾ ಪರಿಷತ್ತುಗಳ ಹಣಕಾಸಿನ ವಿಷಯದಲ್ಲಿ ವಿಚಾರ ವಿನಿಮಯ ಮಾಡತಕ್ಕಂಥಾದ್ದರ ಬಗ್ಗೆ ಇದೆ. ಮುನಿಸಿಪಾಲಿಟಿಯೂ ಸಹಾ ಅದರ ವ್ಯಾಪ್ತಿಯಲ್ಲಿ ಬರುತ್ತದೆಯೇ ಹೇಗೆ ? ಇಲ್ಲ, ಎಂದರೆ ಅದಕ್ಕೆ ಬೇರೊಂದು ಕಮಿಟಿ ಅಪಾಯಿಂಟ್ ಮಾಡಿದ್ದರೆ ಹೇಳಿ.

ಶ್ರೀ ವೈಜನಾಥ ಪಾಟೀಲ್ : ಅದೂ ಆ ಕಮಿಟಿಯ ವ್ಯಾಪ್ತಿಯಲ್ಲೇ ಬರುತ್ತದೆ. ಜಿಲ್ಲಾ ಪರಿಷತ್ತು ಮತ್ತು ಪಂಚಾಯಿತಿ ಸಲುವಾಗಿ ಫೈನಾನ್ಸ್ ಕಮಿಷನ್ ಇದೆ. ಅದೇ ವ್ಯಾಪ್ತಿಯಲ್ಲೇ ಪುರಸಭೆಗಳೂ ಕೂಡ ಬರುತ್ತವೆ. ಅವರ ಶಿಫಾರಸ್ಸಿನ ಪ್ರಕಾರ ಸ್ಥಳೀಯ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿ ಸುಧಾರಿಸಲಿಕ್ಕೆ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆ ಎಂದು ಹೇಳುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ನಮಗೆ ಬಹಳ ಭಯ ಇದೆ ಸ್ವಾಮಿ. ಏಕೆಂದರೆ .......

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಅಡ್ಮಿನಿಸ್ಟ್ರೇಟರ್ ಹಾಕುತ್ತೇವೆ ಎಂದು ಹೇಳಿದರಲ್ಲಾ.

ಅಧ್ಯಕ್ಷರು : ಸಮಯದ ಅಭಾವ ಇದೆ. ನಾವು ಕುಳಿತು ಮಾತನಾಡೋಣ. ನಿಮಗೆ ನಮ್ಮ ಮೇಲೆ ನಂಬಿಕೆ ಇಲ್ಲವೇ ?

ಶ್ರೀ ವಾಟಾಳ್ ನಾಗರಾಜ್ : ತಮ್ಮ ಮೇಲೆ ಸಂಪೂರ್ಣ ನಂಬಿಕೆ ಇದೆ.

ಅಧ್ಯಕ್ಷರು : ತಾವು ದಯಮಾಡಿ ಕುಳಿತುಕೊಳ್ಳಿ. ಅವರು ಹೇಗೆ ಮುಂದುವರಿಸುತ್ತಾರೋ ನೋಡೋಣ.

ಶ್ರೀ ವಾಟಾಳ್ ನಾಗರಾಜ್ : ಅದು ಇವತ್ತೇ ಆಗಬೇಕು. ಆರು ಅಥವಾ ಏಳು ಗಂಟೆಯಾದರೂ ಚಿಂತೆಯಿಲ್ಲ.

ಅಧ್ಯಕ್ಷರು : ಉಪ ಪ್ರಶ್ನೆಗಳು ಬಹಳ ಇವೆ. ದಯಮಾಡಿ ಕುಳಿತುಕೊಳ್ಳಿ.

ಡಾ. ಯು. ಚಿತ್ತರಂಜನ್ : ಗ್ರಾಮ ಪಂಚಾಯಿತಿ ಚುನಾವಣೆಗಳ ಸಮಯದಲ್ಲಿ ನೋಟಿಫೈಡ್ ಏರಿಯಾಗಳೆಂದು ಮಾಡಿದ್ದಾರೆ. ಆ ನೋಟಿಫೈಡ್ ಏರಿಯಾಗಳಲ್ಲೂ ತಕ್ಷಣ ಚುನಾವಣೆ ನಡೆಸುತ್ತಾರೆಯೇ ಎನ್ನುತ್ತಾರೆಯೇ ಎನ್ನುವುದಕ್ಕೆ ಸರ್ಕಾರ ಉತ್ತರ ಕೊಡಬೇಕಾಗುತ್ತದೆ.

ಅಧ್ಯಕ್ಷರು : ಅದು ಬೇರೆ ಪ್ರಶ್ನೆ ಆಗುತ್ತದೆ. ಅದಕ್ಕೆ ನೀವು ನೋಟೀಸ್ ಕೊಡಬೇಕು.

ಡಾ. ಯು. ಚಿತ್ತರಂಜನ್ : ಕಾರ್ಪೊರೇಷನ್ ಚುನಾವಣೆ ಆಗುವಾಗಲೇ ನೋಟಿಫೈಡ್ ಏರಿಯಾಗಳ ಚುನಾವಣೆಯನ್ನೂ ತೆಗೆದುಕೊಳ್ಳುತ್ತೀರೋ ?

ಅಧ್ಯಕ್ಷರು : ಕಾರ್ಪೊರೇಷನ್ ಚುನಾವಣೆ ಸಮಯದಲ್ಲಿ ನೋಟಿಫೈಡ್ ಏರಿಯಾಗಳ ಚುನಾವಣೆಯನ್ನೂ ತೆಗೆದುಕೊಳ್ಳುತ್ತೀರಾ ಎಂದು ಅವರು ಕೇಳುತ್ತಿದ್ದಾರೆ. ಉತ್ತರ ಕೊಡಿ.

ಶ್ರೀ ವೈಜನಾಥ ಪಾಟೀಲ್ : ನೋಟಿಫೈಡ್ ಏರಿಯಾ ಮತ್ತು ಎಲ್ಲಾ ಸ್ಥಳೀಯ ಸಂಸ್ಥೆಗಳಿಗೂ ಚುನಾವಣೆಯನ್ನು ನಡೆಸುತ್ತೇವೆ ಎಂದು ಹೇಳುತ್ತೇನೆ.

ಶ್ರೀ ಎಸ್. ಶಿವಶಂಕರಪ್ಪ : ಆರ್ಥಿಕ ಸಂಕಷ್ಟದಲ್ಲಿ ಸಿಕ್ಕಿರುವಂಥ ಪುರಸಭೆಗಳಿಗೆ ಸಂಪನ್ಮೂಲಗಳನ್ನು ಸಂಗ್ರಹಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ ಎನ್ನುವುದಕ್ಕೆ ಉತ್ತರ ಹೇಳಿಲ್ಲ.

ಅಧ್ಯಕ್ಷರು : ಉತ್ತರ ಹೇಳಿದ್ದಾರೆ.

**ವಿಷಯ : ಕರ್ನಾಟಕದಲ್ಲಿರುವ ಕೊಳಚೆ ಪ್ರದೇಶಗಳ ಸಂಖ್ಯೆ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 196 ( 1157 )

ಶ್ರೀ. ಬಿ. ಮುನಿಯಪ್ಪ (ಗಾಂಧಿನಗರ ಕ್ಷೇತ್ರ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೇ

ಅ. ಕರ್ನಾಟಕದಲ್ಲಿ ಎಷ್ಟು ಕೊಳಚೆ ಪ್ರದೇಶಗಳಿವೆ ? ( ಜಿಲ್ಲಾವಾರು ವಿವರಗಳನ್ನು ನೀಡುವುದು )

ಆ. ಇವುಗಳಲ್ಲಿ ಎಷ್ಟು ಕೊಳಚೆ ಪ್ರದೇಶಗಳನ್ನು ನಿರ್ಮೂಲನೆ ಮಾಡಲಾಗಿದೆ

ಇ. ಕಳೆದ ಐದು ವರ್ಷಗಳಲ್ಲಿ ಕೊಳಚೆ ಪ್ರದೇಶದ ಕುಟುಂಬಗಳಿಗೆ ಎಷ್ಟು ಮನೆಗಳನ್ನು ಕಟ್ಟಿಕೊಡಲಾಗಿದೆ ?

ಈ. ಕೊಳಚೆ ನಿರ್ಮೂಲನೆ ಬಗ್ಗೆ ಸರ್ಕಾರದ ಯೋಜನೆ ಏನು ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ. ಕರ್ನಾಟಕ ರಾಜ್ಯದಲ್ಲಿ 1532 ಕೊಳಚೆ ಪ್ರದೇಶಗಳು ಇರುತ್ತವೆ. ಜಿಲ್ಲಾವಾರು ವಿವರಗಳನ್ನು ಅನುಬಂಧ-ಅ ನಲ್ಲಿ ಒದಗಿಸಲಾಗಿದೆ.

ಆ. ಈವರೆಗೆ 25 ಕೊಳಚೆ ಪ್ರದೇಶಗಳನ್ನು ನಿರ್ಮೂಲನೆ ಮಾಡಲಾಗಿದೆ.

ಇ. ಕಳೆದ ಐದು ವರ್ಷಗಳಲ್ಲಿ ಮಂಡಳಿಯು 6059 ಮನೆಗಳನ್ನು ಕೊಳಚೆ ಪ್ರದೇಶದ ಕುಟುಂಬಗಳಿಗಾಗಿ ಕಟ್ಟಲಾಗಿದೆ.

ಈ. ಕೊಳಚೆ ನಿರ್ಮೂಲನ ಬಗ್ಗೆ ಸರ್ಕಾರದ 3 ಯೋಜನೆಗಳು ಕೆಳಗಿನಂತಿರುತ್ತವೆ.

1. ಕೊಳಚೆ ಪ್ರದೇಶವೆಂದು ಘೋಷಣೆಯಾದ ನಂತರ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು.

2. ಯಾವ ಕೊಳಚೆ ಪ್ರದೇಶದಲ್ಲಿ ಗುಡಿಸಲುಗಳನ್ನು ತೆರವು ಮಾಡಿ ಶಾಶ್ವತವಾದ ಮನೆಗಳನ್ನು ಕಟ್ಟಲು ಸಾಧ್ಯವಾಗುವುದೋ, ಅಂತಹ ಕೊಳಚೆ ಪ್ರದೇಶಗಳಲ್ಲಿ ವಸತಿ ಗೃಹ ನಿರ್ಮಾಣ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುವುದು.

3. ಎಲ್ಲಿ ಈ ಯೋಜನೆ ಸಾಧ್ಯವಾಗುವುದಿಲ್ಲವೋ ಅಂತಹ ಕೊಳಚೆ ಪ್ರದೇಶದ ನಿವಾಸಿಗಳನ್ನು ಸ್ಥಳಾಂತರಿಸಿ ಅವರಿಗಾಗಿ ನಿರ್ಮಿಸಲಾದ ಪುನರ್ವಸತಿ ಯೋಜನೆಯಡಿಯಲ್ಲಿ ವಸತಿ ಸೌಲಭ್ಯ ಒದಗಿಸುವುದು.

ಚುಕ್ಕೆ ಗುರುತಿನ ಪ್ರಶ್ನೆ ಸಂ. 1157ಕ್ಕೆ ಅನುಬಂಧ - 'ಅ'

| ಕ್ರ. ಸಂ. | ಜಿಲ್ಲೆ | ಗುರುತಿಸಿರುವ ಕೊಳಚೆ ಪ್ರದೇಶದ ಸಂಖ್ಯೆ |
|---|---|---|
| 1. | ಬೆಂಗಳೂರು ನಗರ | 338 |
| 2. | ಬೆಂಗಳೂರು ಗ್ರಾ. | 51 |
| 3. | ತುಮಕೂರು | 71 |
| 4. | ಕೋಲಾರ | 72 |
| 5. | ಶಿವಮೊಗ್ಗ | 90 |
| 6. | ಚಿತ್ರದುರ್ಗ | 68 |
| 7. | ಮೈಸೂರು | 77 |
| 8. | ಮಂಡ್ಯ | 38 |
| 9. | ಕೊಡಗು | 3 |
| 10. | ಹಾಸನ | 38 |
| 11. | ಚಿಕ್ಕಮಗಳೂರು | 38 |
| 12. | ದಕ್ಷಿಣ ಕನ್ನಡ | 19 |
| 13. | ಹುಬ್ಬಳ್ಳಿ - ಧಾರಾವಾಡ | 148 |
| 14. | ಉತ್ತರ ಕನ್ನಡ | 48 |
| 15. | ಬಳ್ಳಾರಿ | 98 |
| 16. | ರಾಯಚೂರು | 110 |
| 17. | ಗುಲ್ಬರ್ಗಾ | 61 |
| 18. | ಬೀದರ್ | 38 |
| 19. | ಬಿಜಾಪುರ | 70 |
| 20. | ಬೆಳಗಾಂ | 56 |
| | | 1532 |

ಶ್ರೀ ಬಿ. ಮುನಿಯಪ್ಪ : ಸನ್ಮಾನ್ಯ ಅಧ್ಯಕ್ಷರೇ, ಕರ್ನಾಟಕ ರಾಜ್ಯದಲ್ಲಿ ಎಷ್ಟು ಕೊಳಚೆ ಪ್ರದೇಶಗಳಿವೆ ಎಂದು ಜಿಲ್ಲಾವಾರು ಪಟ್ಟಿಯನ್ನು ಒದಗಿಸಿದ್ದಾರೆ. ಕರ್ನಾಟಕ ರಾಜ್ಯದಲ್ಲಿ 1532 ಕೊಳಚೆ ಪ್ರದೇಶಗಳಿವೆ. ಅದರಲ್ಲಿ ಬೆಂಗಳೂರು ಜಿಲ್ಲೆಯಲ್ಲಿ 338 ಕೊಳಚೆ ಪ್ರದೇಶಗಳಿವೆ. ಕಳೆದ 5 ವರ್ಷಗಳಲ್ಲಿ 25 ಕೊಳಚೆ ಪ್ರದೇಶಗಳನ್ನು ನಿರ್ಮೂಲನ ಮಾಡಲಾಗಿದೆ ಎಂದು ಉತ್ತರ ಕೊಟ್ಟಿದ್ದಾರೆ. ದಿವಂಗತ ಶ್ರೀ. ಡಿ. ದೇವರಾಜ ಅರಸರವರು ಈ ಕೊಳಚೆ ಪ್ರದೇಶಗಳಲ್ಲಿ ವಾಸ ಮಾಡುವಂಥ ಬಡವರು ಮತ್ತು ಕಡುಬಡವರ ಜೀವನ ಮಟ್ಟವನ್ನು ಸುಧಾರಿಸಬೇಕು, ಕೊಳಚೆ ಪ್ರದೇಶಗಳಲ್ಲಿ ಯಾರೂ ವಾಸ ಮಾಡಬಾರದು ಎಂದು ಸುಮಾರು 25-26 ವರ್ಷಗಳ ಹಿಂದೆಯೇ ಈ ಕೊಳಚೆ ನಿರ್ಮೂಲನ ಮಂಡಳಿಯನ್ನು ಪ್ರಾರಂಭ ಮಾಡಿದರು.

ಆವತ್ತಿನಿಂದ ಇವತ್ತಿನವರೆಗೂ ಅದರ ಪ್ರಗತಿಯ ಪಥದಲ್ಲಿದೆಯೇ ಎಂದು ಕೇಳಿದರೆ ಇಲ್ಲ, ಎಂದು ಯಾರು ಬೇಕಾದರೂ ಹೇಳಬಹುದು. ಇಂದು ಬೆಂಗಳೂರು ಮಹಾನಗರಪಾಲಿಕೆಯಲ್ಲಿ 338 ಕೊಳಚೆ ಪ್ರದೇಶಗಳಿವೆ. ಕೊಳಚೆ ನಿರ್ಮೂಲನ ಮಂಡಳಿಯು ಕೆಲಸ ಮಾಡುತ್ತಿರುವಂಥ ಪರಿಸ್ಥಿತಿಯಲ್ಲಿ ಅದು ಹೆಚ್ಚು ಕೊಳಚೆ ಪ್ರದೇಶಗಳನ್ನು ನಿರ್ಮೂಲನ ಮಾಡುವುದಕ್ಕೆ ಸಾಧ್ಯವಾಗುತ್ತಿಲ್ಲ. ಏಕೆಂದರೆ, ಕೊಳಚೆ ಪ್ರದೇಶದಲ್ಲಿರತಕ್ಕಂಥ ಕೆಲವು ಬಲಾಢ್ಯ ಕೈಗಳು ಈ ಕೊಳಚೆ ನಿರ್ಮೂಲನ ಮಾಡುವುದಕ್ಕೆ ಬಿಡುತ್ತಿಲ್ಲ. ಇಂಥ ಪರಿಸ್ಥಿತಿಯಲ್ಲಿ ಸರ್ಕಾರ ಯಾವುದಾದರೂ ಒಂದು ವಿಶೇಷ ಕಾನೂನು ತಂದು ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರತಕ್ಕಂಥ ಮತ್ತು ರಾಜ್ಯದಲ್ಲಿರತಕ್ಕಂಥ ಕೊಳಚೆ ಪ್ರದೇಶಗಳನ್ನು ನಿರ್ಮೂಲನ ಮಾಡುವುದಕ್ಕೆ ಮತ್ತು ಕೊಳಚೆ ಪ್ರದೇಶಗಳಲ್ಲಿರತಕ್ಕಂಥ ಬಲಾಢ್ಯ ಕೈಗಳನ್ನು ನಿರ್ನಾಮ ಮಾಡುವುದಕ್ಕೆ ಏನಾದರೂ ಯೋಜನೆ ತೆಗೆದುಕೊಂಡಿದೆಯೇ ? ಅಲ್ಲಿ ಬಡವರಿಗೆ ಮನೆ ಕಟ್ಟಬೇಕು ಎಂದರೆ ಅಲ್ಲಿರತಕ್ಕಂಥ ಜನ ಅವಕಾಶ ಮಾಡಿಕೊಡುತ್ತಿಲ್ಲ. ಇದಕ್ಕೆ ಸಚಿವರು ದಯವಿಟ್ಟು ಉತ್ತರ ಕೊಡಬೇಕು.

ಶ್ರೀ ವೈಜನಾಥ ಪಾಟೀಲ್ : ಕೊಳಚೆ ಪ್ರದೇಶಗಳನ್ನು ನಿರ್ಮೂಲನ ಮಾಡುವ ಸಲುವಾಗಿ, ಭೂಮಿಯನ್ನು ವಶಪಡಿಸಿಕೊಳ್ಳಲು ಬಹಳಷ್ಟು ಸಮಯ ಹೋಗುತ್ತಿದೆ. ಈಗ ಭೂಮಿಯನ್ನು ವಶಪಡಿಸಿಕೊಳ್ಳುವ ಸಲುವಾಗಿ ಒಂದು ಅಮೆಂಡ್‌ಮೆಂಟ್ ತರಬೇಕೆನ್ನುವ ಯೋಚನೆ ಸರ್ಕಾರಕ್ಕೆ ಇದೆ. ಬಹುಶ: ಈ ಅಮೆಂಡ್‌ಮೆಂಟ್ ಬಂದ ನಂತರ ಭೂಮಿಯನ್ನು ವಶಪಡಿಸಿಕೊಳ್ಳುವ ಕೆಲಸ ಕೈಗೊಂಡರೆ ಕೊಳಚೆ ನಿರ್ಮೂಲನಾ ಕೆಲಸ ಬೇಗ ಆಗಬಹುದು.

ಶ್ರೀ ಬಿ. ಮುನಿಯಪ್ಪ : ನಾನು ಮೇಲೆ ಹೇಳಿದ ರೀತಿಯಲ್ಲಿ ಯಾವುದೇ ವಿಧವಾದಂಥ ತಕರಾರು ಇಲ್ಲದೆ ಇರುವಂಥ ಕೊಳಚೆ ಪ್ರದೇಶಗಳಲ್ಲಿ ಇರತಕ್ಕ ಬಡ ಜನ, 100ಕ್ಕೆ 98 ಜನ ಅಲ್ಲೆ ಮನೆ ಕಟ್ಟಿಸಿ ಕೊಡುವುದನ್ನು ಅವರು ಬಯಸುತ್ತಾರೆ. ಆದರೆ ಅಲ್ಲಿ ಕೆಲವು ನಾಯಕರು ಎಂದು ಹೇಳಿಕೊಳ್ಳುವ ಜನ ಅದು ಕೊಳಚೆ ಪ್ರದೇಶವಾಗಿಯೇ ಇರಬೇಕು ಎಂದು ಬಯಸುತ್ತಾರೆ.

ಅಧ್ಯಕ್ಷರು : ನಾಯಕರಲ್ಲ, ಪುಢಾರಿಗಳು.

ಶ್ರೀ ಬಿ. ಮುನಿಯಪ್ಪ : ತಮ್ಮ ಭಾಷೆಯಲ್ಲಿ ಪುಢಾರಿಗಳು ನಾನು ನಾಯಕರು ಎಂದು ಹೇಳಿದೆ.

ಶ್ರೀ ವಾಟಾಳ್ ನಾಗರಾಜ್ : ಪುಢಾರಿಗಳು ಅಂದರೆ ಏನು ಸ್ವಾಮಿ ?

ಅಧ್ಯಕ್ಷರು : ಬೇರೆಯವರ ಶ್ರಮದಿಂದ ಜೀವನ ಮಾಡುವವರು.

ಶ್ರೀ ವಾಟಾಳ್ ನಾಗರಾಜ್ : ಪುಢಾರಿಗಳು ಅಂದರೆ ಯಾವ ಪಕ್ಷದವರು ?

ಅಧ್ಯಕ್ಷರು : ಅವರು ಎಲ್ಲಾ ಪಕ್ಷಗಳಲ್ಲೂ ಇರುತ್ತಾರೆ.

ಶ್ರೀ ವಾಟಾಳ್ ನಾಗರಾಜ್ : ಈ ಪುಢಾರಿ ಎನ್ನುವ ಪದದ ಬಗ್ಗೆ ಬಹಳ ವ್ಯಾಖ್ಯಾನ ಆಗಬೇಕಾಗಿದೆ. ಪುಢಾರಿ ಎಂದರೆ ಯಾವಯಾವ ಪಕ್ಷದವರು, ಯಾವಯಾವ ಪಕ್ಷದಲ್ಲಿರುತ್ತಾರೆ ಎನ್ನುವ ವಿಶ್ಲೇಷಣೆ ಆಗಬೇಕು ಮತ್ತು ಈ ಪುಢಾರಿಗಳ ಕಾರ್ಯಕ್ಷೇತ್ರ ಏನು ? ಮತ್ತು ಹೇಗೆ ?

ಅಧ್ಯಕ್ಷರು : ಬೇರೆಯವರ ಶ್ರಮದಲ್ಲಿ ಜೀವನ ಮಾಡುವವರು ಪುಢಾರಿಗಳು. ಅವರು ಎಲ್ಲಾ ಕಡೆಯೂ, ಎಲ್ಲಾ ಕ್ಷೇತ್ರದಲ್ಲೂ ಇದ್ದಾರೆ.

ಶ್ರೀ ವಾಟಾಳ್ ನಾಗರಾಜ್ : ಇದ್ದಾರೆ, ನಿಜ. ತಮ್ಮ ಬಾಯಿಂದಲೇ ಪುಢಾರಿ ಎನ್ನತಕ್ಕದ್ದು ಬಂದಾಗ ಆದರ ಬಗ್ಗೆ ವಿಶ್ಲೇಷಣೆ ಆಗಬೇಕು.

ಅಧ್ಯಕ್ಷರು : ಅದಕ್ಕೆ ಒಂದು ಉದ್ದವಾದ ಚರ್ಚೆಯನ್ನು ತೆದೆದುಕೊಳ್ಳಬೇಕಾಗುತ್ತದೆ. ಆದರೆ ಈಗ ಬೇಡ.

ಶ್ರೀ ಬಿ. ಮುನಿಯಪ್ಪ : ಯಾವುದೇ ತಂಟೆ ತಕಾರಾರು ಇಲ್ಲದಿರುವಂಥ, ಯಾವುದೇ ವ್ಯಾಜ್ಯ ಇಲ್ಲದಿರುವಂಥ ಜನ ಬಯಸುವಂಥ ಕೊಳಚೆ ಪ್ರದೇಶಗಳನ್ನು ಕೈಗೆ ತೆಗೆದುಕೊಂಡು ಅಲ್ಲಿ ಅವರಿಗೆ ಮನೆಗಳನ್ನು ಕಟ್ಟಿಸಿ ಕೊಡುವ ಮತ್ತು ನಾಗರೀಕ ಸೌಲಭ್ಯಗಳನ್ನು ಒದಗಿಸಿಕೊಡುವಂಥ ಕೆಲಸ ಸರ್ಕಾರ ಈ ವರ್ಷ ಮಾಡಬೇಕು ಎಂದು ಕೇಳಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಯಾವುದೇ ತಕರಾರು ಇಲ್ಲದಂಥ ಕಡೆ ಸರ್ಕಾರದವರು ಆದಷ್ಟು ಬೇಗ ಕೊಳಚೆ ನಿರ್ಮೂಲನೆ ಮಾಡುವಂಥ ಕ್ರಮ ತೆಗೆದುಕೊಳ್ಳುತ್ತೇವೆ ಎನ್ನುವ ಮಾತನ್ನು ಈ ಸಂದರ್ಭದಲ್ಲಿ ತಮ್ಮ ಮುಖಾಂತರ ನಾನು ಸದಸ್ಯರಿಗೆ ಹೇಳುತ್ತೇನೆ.

ಶ್ರೀ ಎಸ್. ಸುರೇಶ್ ಕುಮಾರ್ : ಮಾನ್ಯ ಸಭಾಧ್ಯಕ್ಷರೇ, ಕರ್ನಾಟಕದಲ್ಲಿ ನಿರ್ಮಲ ಕರ್ನಾಟಕ ಎನ್ನುವ ಒಂದು ಯೋಜನೆಯನ್ನು ನೈರ್ಮಲ್ಯವನ್ನು ಕಾಪಾಡುವುದಕ್ಕೋಸ್ಕರ ತೆಗೆದುಕೊಂಡಿದ್ದಾರೆ. ಕೊಳಚೆ ಪ್ರದೇಶಗಳಲ್ಲಿ ಪರಿಸರ ಹಾಳಾಗಿ ಹೋಗುತ್ತಿರುವ ಹಿನ್ನಲೆಯಲ್ಲಿ ಈ ನಿರ್ಮಲ ಕರ್ನಾಟಕ ಯೋಜನೆಯನ್ನು ಕೊಳಚೆ ಪ್ರದೇಶಗಳಲ್ಲಿ ತೆಗೆದುಕೊಳ್ಳುತ್ತೀರಾ ? ವಿಶೇಷವಾಗಿ ಮಹಿಳೆಯರು ಮರ್ಯಾದೆಯಾಗಿ ಶಾಚಾಲಯಕ್ಕೆ ಹೋಗಲಿಕ್ಕೆ ವ್ಯವಸ್ಥೆ ಮಾಡಿಕೊಡುತ್ತೀರಾ. ಜೊತೆಗೆ ಕೊಳಚೆ ಪ್ರದೇಶಗಳಲ್ಲಿ ಗುರುತಿನ ಚೀಟಿ ಕೊಡುವುದರಲ್ಲಿ ಭಾರಿ ಅವ್ಯವಹಾರ ಆಗುತ್ತಿರುವುದು ಎಲ್ಲರ ಗಮನಕ್ಕೂ ಬಂದಿದೆ. ಗುರುತಿನ ಚೀಟಿ ಕೊಡುವುದಕ್ಕೆ ಒಂದು ಯೋಜನೆ ಮಾಡಿ, ಒಂದು ನಿರ್ದಿಷ್ಟ ಕಾಲದಲ್ಲಿ ಮಾಡಿಕೊಡುವುದಕ್ಕೆ ಏನಾದರೂ ವ್ಯವಸ್ಥೆ ಮಾಡುತ್ತೀರಾ ?

ಶ್ರೀ ವೈಜನಾಥ ಪಾಟೀಲ್ : ಗುರುತಿನ ಚೀಟಿಯನ್ನು ಕೊಡುವುದರಲ್ಲಿ ಅವ್ಯವಹಾರ ಆಗಿದೆ ಎಂದು ನಮ್ಮ ಗಮನಕ್ಕೆ ತಂದಿದ್ದೀರಿ. ಇದರ ಬಗ್ಗೆ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆ.

ಶ್ರೀ ಬಿ.ಬಿ. ಚಿಮ್ಮನಕಟ್ಟಿ : ಬಾದಾಮಿ ಪಟ್ಟಣವನ್ನು ಕೊಳಚೆ ನಿರ್ಮೂಲನಾ ಯೋಜನೆಯ ಅಡಿಯಲ್ಲಿ ತಾವು ಈ ವರ್ಷ ಏನಾದರೂ ಸೇರಿಸಿಕೊಳುತ್ತೀರಾ ? ಏಕೆಂದರೆ, ನಮ್ಮ ಬಾದಾಮಿ ಬಹಳ ಐತಿಹಾಸಿಕವಾದ ಸ್ಥಳ. ಅಲ್ಲಿಗೆ ನಮ್ಮ ದೇಶದ ಯಾತ್ರಿಕರೇ ಅಲ್ಲದೆ ದೇಶಗಳಿಂದಲೂ ಕೂಡ ಬಹಳ ಪ್ರವಾಸಿಗರು ಬರುತ್ತಾರೆ. ಅವರು ಆ ಪ್ರವಾಸಿ ಕೇಂದ್ರಕ್ಕೆ ಹೋಗಬೇಕಾದರೆ ಅಲ್ಲಿರತಕ್ಕ ಕೊಳಚೆ ಪ್ರದೇಶದ ಮಾರ್ಗವಾಗಿಯೇ ಹೋಗಬೇಕಾಗುತ್ತದೆ. ಇದು ಬಹಳ ಗಂಭೀರವಾದ ವಿಚಾರವಾಗಿರುವುದರಿಂದ ತಾವು ದಯವಿಟ್ಟು ಈ ಕೊಳಚೆ ನಿರ್ಮೂಲನಾ ಕಾರ್ಯಕ್ರಮವನ್ನು ನಮ್ಮ ಬಾದಾಮಿ ಪಟ್ಟಣಕ್ಕೂ ಅಳವಡಿಸುತ್ತೀರಾ ಹೇಗೆ ?

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಅಧ್ಯಕ್ಷರೆ, ಇದರ ಬಗ್ಗೆ ನಾನು ವಿಚಾರ ಮಾಡಿ ಮಾನ್ಯ ಸದಸ್ಯರಿಗೆ ತಿಳಿಸುತ್ತೇನೆ.

ಶ್ರೀ. ವಿ. ಸೋಮಣ್ಣ : ಮಾನ್ಯ ಮಂತ್ರಿಗಳು ತಾವು 25 ಕೊಳಚೆ ಪ್ರದೇಶಗಳನ್ನು ನಿರ್ಮೂಲನೆ ಮಾಡಿದ್ದೇವೆಂದು ಹೇಳುತ್ತಿದ್ದಾರೆ. ಹೊಸೂರು ರಸ್ತೆಗೆ ಹೋಗತಕ್ಕ ದಕ್ಷಿಣ ಭಾಗದ ವಿಲ್ಸನ್ ಗಾರ್ಡನ್‌ನ 10ನೇ ಕ್ರಾಸ್‌ನಲ್ಲಿ ಕೊಳಚೆ ನಿರ್ಮೂಲನಾ ಮಂಡಲಿಯವರದ್ದೇ ಒಂದು ಜಾಗ ಇತ್ತು. ಬೇನಾಮಿಯವರು ರಾತ್ರೋರಾತ್ರಿ ಗುಡಿಸಲುಗಳನ್ನು ಎಬ್ಬಿಸಿ ಸರ್ಕಾರದ ಜಾಗವನ್ನು ಕಬಳಿಸುತ್ತಿದ್ದಾರೆ. ಆದೂ ಕೂಡ ಈ 25 ಕೊಳಚೆ ನಿರ್ಮೂಲನಾ ಯೋಜನೆಯ ಪಟ್ಟಿಯಲ್ಲಿ ಸೇರಿದೆಯೇ ಹೇಗೆ ಎಂಬುದನ್ನು ದಯವಿಟ್ಟು ತಿಳಿಸಬೇಕು. ವಿಲ್ಸನ್ ಗಾರ್ಡನ್ 10ನೇ ಕ್ರಾಸ್‌ನಲ್ಲಿ ಅಧಿಕೃತವಾಗಿದ್ದಂಥ ಕೊಳಚೆ ಪ್ರದೇಶವನ್ನು ರಾತ್ರೋರಾತ್ರಿ ಎಬ್ಬಿಸಿದ್ದಾರೆ. ಅದು ಸರ್ಕಾರದ ಜಾಗ. ಯಾರೋ ಒಬ್ಬ ಸುಬ್ರಮಣ್ಯ ಎನ್ನುವವರು ಒಂದು ಬೋರ್ಡ್‌ನ್ನು ಹಾಕಿಕೊಂಡು ಈ ಜಾಗ ನನ್ನದು ಎಂದು ಹೇಳಿಕೊಳ್ಳುತ್ತಿದ್ದಾರೆ. ಈ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ, ಇಲ್ಲವೇ ಎಂಬುವುದನ್ನು ತಿಳಿಸಬೇಕೆಂದು ಸರ್ಕಾರಕ್ಕೆ ವಿನಂತಿಮಾಡಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಆದರ ಬಗ್ಗೆ ನನ್ನ ಹತ್ತಿರ ಮಾಹಿತಿ ಇಲ್ಲ.

ಶ್ರೀ ವಿ. ಸೋಮಣ್ಣ : ನಾನು ಸುಮಾರು 10 ವರ್ಷಕಾಲ ಅಲ್ಲಿದ್ದವನು. ಇದ್ದಕ್ಕಿದ್ದಂತೆ ಅಧಿಕೃತವಾಗಿದ್ದ ಕೊಳಚೆ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಮಂಡಲಿಯ ಅಧಿಕಾರಿಗಳು ಮತ್ತು ಖಾಸಗಿಯವರು ಸೇರಿಕೊಂಡು ಆ ಜಾಗವನ್ನು ಅಲ್ಲಿಂದ ಶಿಫ್ಟ್ ಮಾಡಿದ್ದಾರೆ. ಈಗ ಆ ಜಾಗವನ್ನು ಬೇರೆಯುರು ಕಬಳಿಸುತ್ತಿದ್ದಾರೆ. ಆದ್ದರಿಂದ ಇದರ ಬಗ್ಗೆ ಕೂಡಲೇ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಮಾನ್ಯ ಅಧ್ಯಕ್ಷರ ಮೂಲಕ ಸರ್ಕಾರದ ಗಮನಕ್ಕೆ ತರುತ್ತಿದ್ದೇನೆ.

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಅಧ್ಯಕ್ಷರೆ, ನಾನು ಸ್ಥಳಕ್ಕೆ ಭೇಟಿ ಕೊಟ್ಟು, ಅದರ ಬಗ್ಗೆ ಒಂದು ವರದಿಯನ್ನು ತರಿಸಿಕೊಂಡು ನಂತರ ಸೂಕ್ತ ಕ್ರಮ ತೆಗೆದುಕೊಳ್ಳುತ್ತೇನೆ.

ಶ್ರೀ ಶಿವಾನಂದ ಎಸ್. ಪಾಟೀಲ್ : ಮಾನ್ಯ ಅಧ್ಯಕ್ಷರೆ, ತಮ್ಮ ಮೂಲಕ ಸರ್ಕಾರಕ್ಕೆ ನಾನು ಮನವಿ ಮಾಡಿಕೊಳ್ಳುವುದು ಇಷ್ಟೆ. ಅನೇಕ ಕಡೆ ಕೊಳಚೆ ನಿರ್ಮೂಲನವನ್ನು ಮಾಡತಕ್ಕ ಅಧಿಕಾರಿಗಳು ಅಲ್ಲಿರತಕ್ಕ ಲೋಕಲ್ ಸೆಲ್ಫ್ ಗೌರ್ನಮೆಂಟ್ ಅಂದರೆ ಅದು ಮುನಿಸಿಪಾಲಿಟಿ ಇರಬಹುದು, ಟಿ. ಎಂ.ಸಿ. ಇರಬಹುದು, ಅಥವಾ ಸಿ. ಎಂ. ಸಿ. ಇರಬಹುದು ಅವರನ್ನು ಕನ್ಸಲ್ಟೇಷನ್ ಮಾಡಿ ನಂತರ ತಾವು ಏನು ಮಾಡಬೇಕೋ ಅದನ್ನು ಮಾಡಿದರೆ ಸೂಕ್ತವಾಗುತ್ತದೆ. ಏಕೆಂದರೆ, ನಮ್ಮ ಬಿಜಾಪುರದಲ್ಲಿ ಆದಂಥ ಒಂದು ಉದಾಹರಣೆಯನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ...

ಅಧ್ಯಕ್ಷರು : ಭಾಷಣಕ್ಕೆ ಅವಕಾಶ ಇಲ್ಲ. ಅಲ್ಲಿನ ಸ್ಥಳೀಯ ಸಂಸ್ಥೆಗಳ ಸಲಹೆ ತೆಗೆದುಕೊಳ್ಳಬೇಕು ಅಲ್ಲವೇ ?

ಶ್ರೀ ಶಿವಾನಂದ ಎಸ್ ಪಾಟೀಲ್ : ಮಾನ್ಯ ಮಂತ್ರಿಗಳಲ್ಲಿ ಇಷ್ಟು ಮಾತ್ರ ಕೇಳಿಕೊಳ್ಳುತ್ತೇನೆ, ಇನ್ನು ಮುಂದೆ ಯಾವುದೇ ಕೊಳಚೆ ನಿರ್ಮೂಲನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳತಕ್ಕ ಸಂದರ್ಭದಲ್ಲಿ ಅಲ್ಲಿರತಕ್ಕ ಲೋಕಲ್ ಸೆಲ್ಫ್ ಗೌರ್ನಮೆಂಟ್ ಜೊತೆ ಅಥವಾ ಸ್ಥಳೀಯ ಶಾಸಕರ ಜೊತೆ ಸಮಾಲೋಚಿಸಿ ಯಾವ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆಂಬ ಒಂದು ಮಾಹಿತಿಯನ್ನು ಒದಗಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಸದಸ್ಯರು ಏನು ಸಲಹೆ ಕೊಟ್ಟಿದ್ದಾರೆ, ಅದನ್ನು ಗಮನದಲ್ಲಿಟ್ಟುಕೊಳ್ಳುತ್ತೇನೆ.

**ವಿಷಯ : ದಾವಣಗೆರೆ ನಗರಕ್ಕೆ ನೀರು ಸರಬರಾಜು**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 197(932)

ಶ್ರೀ ಶ್ಯಾಮನೂರು ಶಿವಶಂಕರಪ್ಪ (ದಾವಣಗೆರೆ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ದಾವಣಗೆರೆ ನಗರದ 2ನೇ ಹಂತದ ಕುಡಿಯುವ ನೀರಿನ ಯೋಜನೆಯು ಯಾವಾಗ ಮಂಜೂರಾತಿಯಾಯಿತು? ಮತ್ತು ಈ ಬಗ್ಗೆ ಪ್ರಗತಿ ಸಾಧನೆಯೇನು?

ಆ. ಎರಡನೆ ಹಂತದ ನೀರು ಸರಬರಾಜು ಯೋಜನೆಯನ್ನು ಪೂರ್ಣಗೊಳಿಸಲು ಸರ್ಕಾರವು ಕಾಲಮಿತಿ ಕಾರ್ಯಕ್ರಮವೇನಾದರೂ ಹಾಕಿಕೊಳ್ಳಲಾಗಿದೆಯೇ?

ಶ್ರೀ ವೈಜನಾಥ ಪಾಟಿಲ್ (ನಗರಾಭಿವೃದ್ಧಿ ಸಚಿವರು) :

ಅ. ದಾವಣಗೆರೆ ನಗರದ 2ನೇ ಹಂತದ ಕುಡಿಯುವ ನೀರು ಸರಬರಾಜು ಯೋಜನೆಗೆ ರೂ. 12.90 ಕೋಟಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ದಿನಾಂಕ : 16-6-92ರಂದು ನೀಡಿದೆ.

ಆ. ಯೋಜನೆಯಡಿಯಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ.

1. 2.00 ಲಕ್ಷ ಗ್ಯಾಲನ್ ಸಾಮರ್ಥ್ಯದ ಮೇಲ್ಮಟ್ಟದ ಜಲಸಂಗ್ರಹಾಗಾರ ಕಾಮಗಾರಿಯು ಪೂರ್ಣಗೊಂಡಿದೆ.

2. 2.00 ಲಕ್ಷ ಗ್ಯಾಲನ್ ಸಾಮರ್ಥ್ಯದ ಎರಡು ಮೇಲ್ಮಟ್ಟದ ಜಲಸಂಗ್ರಹಾಗಾರಗಳ ಕಾಮಗಾರಿಗಳು ಪ್ರಗತಿಯಲ್ಲಿದೆ. (ಭಾಷಾನಗರ ಮತ್ತು ಶೇಖರಪ್ಪ ನಗರಗಳಲ್ಲಿ ತಲಾ ಒಂದು)

3. ಒಂದು 2.00 ಲಕ್ಷ ಗ್ಯಾಲನ್ ಸಾಮರ್ಥ್ಯದ ಮೇಲ್ಮಟ್ಟದ ಜಲ ಸಂಗ್ರಹಾಗಾರಗಳ ಕಾಮಗಾರಿಗೆ ಗುತ್ತಿಗೆದಾರರನ್ನು ನೇಮಿಸಿದ್ದು ಸದ್ಯದಲ್ಲಿ ಪ್ರಾರಂಭಿಸಲಾಗುವುದು.

4. ನಾಲ್ಕು ಜಲಸಂಗ್ರಹಾಗಾರಗಳಿಗೆ ಟೆಂಡರ್‌ನ್ನು ಕರೆದು ಸಧ್ಯದಲ್ಲೇ ಗುತ್ತಿಗೆದಾರರನ್ನು ನೇಮಿಸಲಾಗುವುದು.

5. ರಾಜಹಳ್ಳಿ ಸಮೀಪ ನಿರ್ಮಿಸುತ್ತಿರುವ ಜಾಕವಲ್ ಕಂ ಪಂಪುಮನೆ ಕಾಮಗಾರಿಯು ಪ್ರಗತಿಯಲ್ಲಿದೆ.

6. ಜಲಶುದ್ಧಿಕರಣಾಗಾರಕ್ಕೆ ಮತ್ತು ಏರುಕೊಳವೆ ಮಾರ್ಗಕ್ಕೆ ಬೇಕಾದ ಭೂಸ್ವಾಧೀನ ಕೆಲಸವು ಪ್ರಗತಿಯಲ್ಲಿದೆ ಮತ್ತು ಮಂಜೂರಾತಿಯಾದ ಅಂದಾಜು ಪತ್ರಿಕೆಯಲ್ಲಿದೆ ಮತ್ತು ಮಂಜೂರಾತಿಯಾದ ಅಂದಾಜು ಪತ್ರಿಕೆಯಲ್ಲೇ ಉಳಿದ ಕೆಲಸಗಳನ್ನು ಕೈಗೆತ್ತಿಕೊಳ್ಳಲು ಶೀಘ್ರವಾಗಿ ಕ್ರಮ ಕೈಗೊಳ್ಳಲಾಗುವುದು.

ಆ. ಈ ಯೋಜನೆಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸಲು ಜೀವಾವಿಮಾ ನಿಗಮದಿಂದ ಸಾಲ ಪಡೆಯಬೇಕಾಗಿದ್ದು. ಈ ಬಗ್ಗೆ ಈಗಾಗಲೇ ಜೀವವಿಮಾ ನಿಗಮವನ್ನು ಕೋರಲಾಗಿದೆ. ಇಷ್ಟರಲ್ಲೇ ಈ ಸಾಲವು ಮಂಜೂರಾಗುವ ನಿರೀಕ್ಷೆ ಇದೆ. ಹಣಕಾಸಿನ ಆರ್ಥಿಕ ಮಾದರಿಯಲ್ಲಿ ನಗರಸಭೆ ದಾವಣಗೆರೆ ಇವರಿಂದ ಸದರಿ ಯೋಜನೆಗೆ ಒಟ್ಟು ರೂ.322.50 ಲಕ್ಷ ಬರಿಸಬೇಕಾಗಿದ್ದು ಇದರಲ್ಲಿ ಇಲ್ಲಿಯವರೆಗೆ ಕೇವಲ ರೂ. 15.50 ಲಕ್ಷಗಳು ಸಂದಾಯವಾಗಿರುತ್ತದೆ. ಭಾರತೀಯ ಜೀವ ವಿಮಾ ನಿಗಮದಿಂದ ಸಾಲವನ್ನು ಪಡೆಯಲು ಕ್ರಮ ತೆಗೆದುಕೊಳ್ಳಲಾಗಿದ್ದು ಸಕಾಲದಲ್ಲಿ ಅಗತ್ಯವಿರುವಷ್ಟು ಹಣ ಒದಗಿದಲ್ಲಿ ಯೋಜನೆಯನ್ನು ಕನಿಷ್ಟ 4 ವರ್ಷಗಳಲ್ಲಿ ಪೂರ್ಣಗೊಳಿಸಬಹುದಾಗಿರುತ್ತದೆ.

ಶ್ರೀ ಶಾಮನೂರು ಶಿವಶಂಕರಪ್ಪ : 16-6-92ರಲ್ಲಿ 12.90 ಕೋಟಿ ರೂ.ಗಳಿಗೆ ಮಂಜೂರಾತಿಯನ್ನು ಕೊಟ್ಟಿದ್ದೇವೆಂದು ಹೇಳಿದ್ದಾರೆ. ಇದಕ್ಕೆ 20 ಕೋಟಿ ರೂ. ಎಸ್ಟಿಮೇಟ್ ಆಗುತ್ತದೆಂದು ತಿಳಿದುಬಂದಿದೆ. ಉಳಿದ ಹಣವನ್ನು ಯಾವ ರೀತಿ ಮಂಜೂರು ಮಾಡುತ್ತಾರೆಂದು ಮಾನ್ಯ ಮಂತ್ರಿಗಳು ಹೇಳಬೇಕು. ಕೆಲವು ಕಾಮಗಾರಿಗಳು ಪ್ರಗತಿಯಲ್ಲಿವೆಂದು ಹೇಳಿದ್ದಾರೆ. ಆದರೆ ರಾಜನಹಳ್ಳಿ ಸಮೀಪ ನಿರ್ಮಿಸುತ್ತಿರುವ ಜಾಕ್‌ವೆಲ್ ಕಾಮಗಾರಿ ಪ್ರಗತಿಯಲ್ಲಿರುವುದಾಗಿ ಹೇಳಿದ್ದಾರೆ. ಈಗ ಮಳೆಗಾಲ ಪ್ರಾರಂಭವಾದರೆ ಈ ಜಾಕ್‌ವೆಲ್ ಅನ್ನು ಕಟ್ಟುವುದಕ್ಕೆ ಸಾಧ್ಯವಾಗುವುದಿಲ್ಲ. ಆಗ ಮತ್ತೆ ಒಂದು ವರ್ಷ ಮುಂದೆ ಹೋಗುತ್ತದೆ. ಇದರ ಬಗ್ಗೆ ಶೀಘ್ರವಾಗಿ ಕ್ರಮ ಕೈಗೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಜಲಶುದ್ಧೀಕರಣಕ್ಕಾಗಿ ನೀರು ಕೊಳವೆ ಮಾರ್ಗಕ್ಕೆ ಬೇಕಾದ ಭೂ ಸ್ವಾದೀನ ಕೆಲಸ ಪ್ರಗತಿಯಲ್ಲಿದೆ ಎಂದು ಹೇಳಿದ್ದಾರೆ. ಈ ಕೆಲಸ ಏನೇನೂ ಪ್ರಗತಿಯಲಿಲ್ಲ. ಏಕೆಂದರೆ, ಇವರು ಜ್ಯಾಕ್‌ವೆಲ್ ಕಟ್ಟಿ ಪೈಪ್‌ಲೈನ್ ಹಾಕಬೇಕಾದ ಜಮೀನನ್ನು ಸ್ವಾಧೀನಪಡಿಸಿಕೊಂಡಿಲ್ಲ. ಅದರ ಮಾಲೀಕರ ಜೊತೆ ಚರ್ಚೆಮಾಡಿ ಅದನ್ನು ಖರೀದಿ ಮಾಡಬೇಕೆಂಬುದರ ಬಗ್ಗೆ ಮಾತನಾಡಿಲ್ಲ. ಸರ್ಕಾರದಿಂದ 17 1/2 ಎಕರೆ ಜಮೀನನ್ನು ಸ್ವಾಧೀನ ಮಾಡಿಕೊಳ್ಳಬೇಕಾಗುತ್ತದೆ. ಅದಕ್ಕೂ ಕೂಡ ಇದುವರೆಗೂ ಸರ್ಕಾರ ಮಂಜೂರಾತಿ ಕೊಟ್ಟಿಲ್ಲ. ಈ ಪ್ರಶ್ನೆಗೆ ಮಾನ್ಯ ಮಂತ್ರಿಗಳು ಕೊಟ್ಟಿರತಕ್ಕ ಉತ್ತರ ಸತ್ಯಕ್ಕೆ ದೂರವಾದುದೆಂದು ನನ್ನ ಅಭಿಪ್ರಾಯ. ಆದ್ದರಿಂದ ಮಾನ್ಯ ಮಂತ್ರಿಗಳು ಇದನ್ನು ಕ್ಲಾರಿಫೈ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಕೆಲವು ಅಕ್ವಿಸಿಷನ್ ಪ್ರೊಸೀಡಿಂಗ್ಸ್ ಡಿಲೇ ಆಗಬಹುದು. ಆದರೆ ಅಕ್ವಿಸಿಷನ್ ಪ್ರೊಸೀಡಿಂಗ್ಸ್ ಪ್ರಾರಂಭವಾಗಿದೆ. ಎಷ್ಟೋಸಾರಿ ಸಂಬಂಧಪಟ್ಟವರು ಅಬ್ಜಕ್ಷನ್ ಹಾಕುತ್ತಾರೆ, ಇದರ ಜೊತೆಗೆ ಇನ್ನೂ ಬೇರೆ ಬೇರೆ ಕಾರಣಗಳಿಂದ ತಡ ಆಗಬಹುದು. ಒಟ್ಟಿನಲ್ಲಿ ಸರ್ಕಾರ ಅಕ್ವಿಸಿಷನ್ ಪ್ರೊಸೀಡಿಂಗ್ಸ್‌ನ್ನು ಪ್ರಾರಂಭ ಮಾಡಿದೆ. ಆ ಕೆಲಸವನ್ನು ಸ್ಪೀಡಪ್ ಮಾಡುವುದಕ್ಕೆ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆ.

ಶ್ರೀ ಶಾಮನೂರು ಶಿವಶಂಕರಪ್ಪ : 4(1) ನೋಟಿಫಿಕೇಷನ್, 6(1) ನೋಟಿಫಿಕೇಷನ್ ಮುಂತಾದ್ದು ಏನು ಆಗಬೇಕಾಗಿತ್ತು. ಅದು ಯಾವುದೂ ಕೂಡ ಆಗಿಲ್ಲವೆಂದು ನಮಗೆ ತಿಳಿದುಬಂದಿದೆ. ಆದ್ದರಿಂದ ಇನ್ನೊಂದು ಸಾರಿ ಇದರ ಬಗ್ಗೆ ಮಾಹಿತಿಯನ್ನು ತಿಳಿದು ನನಗೆ ಉತ್ತರ ಕೊಡಲಿ. ಮಾನ್ಯ ಮಂತ್ರಿಗಳು ತಮ್ಮ ಇಲಾಖೆಯ ಅಧಿಕಾರಿಗಳೊಡನೆ ಇದರ ಬಗ್ಗೆ ಚರ್ಚೆಮಾಡಿ ನನಗೆ ಪೂರ್ಣಮಾಹಿತಿ ಕೊಡಲೆಂದು ಕೇಳಿಕೊಳ್ಳುತ್ತೇನೆ.

ಅಧ್ಯಕ್ಷರು : ಮಾನ್ಯ ಮಂತ್ರಿಗಳು ಅಧಿಕಾರಿಗಳಿಂದ ಪೂರ್ಣ ವಿವರನ್ನು ತರಿಸಿಕೊಂಡು ಅನಂತರ ಮಾನ್ಯ ಸದಸ್ಯರಿಗೆ ಮಾಹಿತಿಯನ್ನು ಒದಗಿಸುತ್ತೇನೆಂದು ಹೇಳಿದ್ದಾರೆ.

ಶ್ರೀ ಶಾಮನೂರು ಶಿವಶಂಕರಪ್ಪ : ಈ ಹಂತದ ನೀರಿನ ಯೋಜನೆಯನ್ನು ಪೂರ್ಣಗೊಳಿಸಲು ಯಾವುದಾದರೂ ಕಾಲಬಗ್ಗೆ ಕಾರ್ಯಕ್ರಮವನ್ನು ನಿಗಧಿಗೊಳಿಸಲಾಗಿದೆಯೆ ಎಂದು ಕೇಳಿದ್ದಕ್ಕೆ. ಮಾನ್ಯ ಮಂತ್ರಿಗಳು ಏನನ್ನೂ ಖಚಿತವಾಗಿ ಹೇಳಿಲ್ಲ. ನಗರಸಭೆಗಳಿಂದ 15 ಲಕ್ಷ ಬಂದಿದೆ ಎಂದು ಹೇಳಿದ್ದಾರೆ. ಆದರೆ ನನಗೆ ತಿಳಿದ ಪ್ರಕಾರ 32.5 ಲಕ್ಷ ರೂ. ನಗರಸಭೆಗಳಿಂದ ಪಾವತಿಯಾಗಿದೆ. ಮತ್ತು ಸರ್ಕಾರದ ವತಿಯಿಂದಲೂ ಕೂಡ 50 ಲಕ್ಷ ರೂ. ಪಾವತಿಯಾಗಿದೆ. ಈ ಅಂಕಿಅಂಶಗಳನ್ನು ಮಾನ್ಯ ಮಂತ್ರಿಗಳು ಇನ್ನೊಂದು ಸಾರಿ ಪರಿಶೀಲಿಸಿ ನೋಡಬೇಕೆಂದು ಕೇಳಿಕೊಳ್ಳುವುದರ ಜೊತೆಗೆ ಇಂತಿಷ್ಟು ದಿನಗೊಳಗೆ ಕೆಲಸವನ್ನು....

ಅಧ್ಯಕ್ಷರು : 4 ವರ್ಷ ಎಂದು ಹೇಳಿದ್ದಾರೆ.

ಶ್ರೀ ಶಾಮನೂರು ಶಿವಶಂಕರಪ್ಪ : ಈ ಯೋಜನೆ 92ನೇ ಇಸವಿಯಿಂದ 95ನೇ ಇಸವಿ ಬರುವ ಹೊತ್ತಿಗೆ 20 ಕೋಟಿ ರೂ. ಆಗಿದೆ. ಇನ್ನು 4 ವರ್ಷ ತಡವಾದರೆ ಅದು 60 ಕೋಟಿ ರೂ. ಆಗುತ್ತದೆ. ಈ ಯೋಜನೆ ಬಹಳ ದೊಡ್ಡ ಯೋಜನೆ ಏನೂ ಅಲ್ಲ. ಬಹಳ ಪ್ರಯತ್ನವನ್ನೂ ಕೂಡ ಮಾಡಬೇಕಾಗಿಲ್ಲ. ಒಂದು ವರ್ಷದಲ್ಲಿ ಈ ಕೆಲಸವನ್ನು ಮುಗಿಸುವ ಯೋಜನೆಯನ್ನು ಸರ್ಕಾರ ಹಾಕಿಕೊಂಡು ಅದರಂತೆ ಪೂರ್ಣಗೊಳಿಸಿ ದಾವಣಗೆರೆ ನಗರದ ಜನರಿಗೆ ಕುಡಿಯುವ ಶುದ್ಧ ನೀರನ್ನು ಒದಗಿಸುವ ವ್ಯವಸ್ಥೆ ಮಾಡಬೇಕು. ಈ ರೀತಿಯಾದ ಒಂದು ವಾಗ್ದಾನವನ್ನು ಈ ಸಂದರ್ಭದಲ್ಲಿ ಮಾನ್ಯ ಮಂತ್ರಿಗಳು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಮುನಿಸಿಪಾಲಿಟಿ ವತಿಯಿಂದ ಎಷ್ಟು ವಂತಿಗೆಯನ್ನು ಕೊಡಬೇಕೋ ಅಷ್ಟನ್ನೂ ಕೊಟ್ಟಿಲ್ಲ. ಕೇವಲ 15 ಲಕ್ಷ ರೂ.ಗಳನ್ನು ಮಾತ್ರ ಕೊಟ್ಟಿದ್ದಾರೆ. ಯಾವುದೇ ಒಂದು ಯೋಜನೆ ಪ್ರಾರಂಭ ಮಾಡಬೇಕಾದರೂ ಸಂಬಂಧಪಟ್ಟ ಮುನಿಸಿಪಾಲಿಟಿಯವರು ಮೂರನೇ ಒಂದು ಭಾಗ ವಂತಿಗೆಯನ್ನು ಕಟ್ಟಬೇಕು. ಅದೇ ರೀತಿ ಸರ್ಕಾರದವರೂ ಕಟ್ಟಬೇಕು, ಜೊತೆಗೆ ಬೇರೆಕಡೆಯಿಂದ ಸಾಲವನ್ನೂ ತೆಗೆದುಕೊಳ್ಳಬೇಕಾಗುತ್ತದೆ. ಪ್ರತಿಯೊಂದಕ್ಕೂ ಸರ್ಕಾರವನ್ನೇ ಅವಲಂಬಿಸಿಕೊಂಡಿರಬಾರದು. ಆದರೂ ಕೂಡ ಸರ್ಕಾರ ತನ್ನ ಶಕ್ತಿಮೀರಿ ಈ ಕೆಲಸವನ್ನು ಕೈಗೆ ತೆಗೆದುಕೊಂಡು ಆದಷ್ಟು ಬೇಗ ಮುಗಿಸುವುದಕ್ಕೆ ಪ್ರಯತ್ನ ಮಾಡುತ್ತದೆಂದು ಹೇಳಬಯಸುತ್ತೇನೆ.

ಶ್ರೀ ಹೆಚ್.ಶಿವಪ್ಪ : ಈ ಯೋಜನೆಯನ್ನು ಪೂರ್ಣಗೊಳಿಸುವುದಕ್ಕೆ 4 ವರ್ಷಕಾಲಬೇಕೆಂದು ಮಾನ್ಯ ಮಂತ್ರಿಗಳು ಹೇಳಿದ್ದಾರೆ. ಯಾವ ಕಾರಣಕ್ಕಾಗಿ 4 ವರ್ಷಬೇಕಾಗುತ್ತದೆ. ಕುಡಿಯುವ ನೀರಿನ ಯೋಜನೆಯನ್ನು ಅಗತ್ಯ ಆಧಾರದ ಮೇಲೆ ಮಾಡಬೇಕೆಂದು ಸರ್ಕಾರದ ನಿಲುವು ಇದೆ. ಯಾವ ಕಾರಣಕ್ಕೋಸ್ಕರ ಈ ಯೋಜನೆಗೆ 4 ವರ್ಷ ಬೇಕಾಗುತ್ತದೆಂದು ಹೇಳಬೇಕು.

ಇನ್ನು ಎರಡನೆಯದಾಗಿ, ಭೂ ಸ್ವಾಧೀನ ಪ್ರಕರಣಗಳು ಪ್ರಗತಿಯಲ್ಲಿವೆ ಎಂದು ಹೇಳಿದ್ದಾರೆ. ಅದು ಯಾವ ಹಂತದಲ್ಲಿದೆ ಎಂಬುದನ್ನು ಮಾನ್ಯ ಮಂತ್ರಿಗಳು ತಿಳಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಅಧ್ಯಕ್ಷರು : ತಮ್ಮನ್ನು ಕರೆಸಿಕೊಂಡು, ತಮ್ಮನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸಚಿವರು ಕೇಳುತ್ತಾರೆ. ಆಗ ತಾವು ಎಲ್ಲಾ ವಿವರಗಳನ್ನೂ ಅವರಿಗೆ ಕೊಡಿ.

ಶ್ರೀ ಹೆಚ್. ಶಿವಪ್ಪ : 4 ವರ್ಷಕಾಲ ಏತಕ್ಕೆ ಬೇಕು?

ಅಧ್ಯಕ್ಷರು: ನಿಮ್ಮನ್ನೂ ಮತ್ತು ಶಿವಶಂಕರಪ್ಪನವರನ್ನೂ ಕರೆಯಿಸಿಕೊಂಡು ಪೂರ್ಣ ವಿವರವನ್ನು ಕೊಡುತ್ತೇವೆಂದು ಮಾನ್ಯ ಮಂತ್ರಿಗಳು ಹೇಳಿದ್ದಾರೆ.

ಅಧ್ಯಕ್ಷರು : ಮಾನ್ಯ ಸದಸ್ಯರಾದ ಉಗಾಸಿಯವರ ಚುಪ್ರ : 1131 ಅನ್ನು ಹಣಕಾಸಿನ ಇಲಾಖೆಗೆ ವರ್ಗಾವಣೆ ಆಗಿದೆ. ಆದ್ದರಿಂದ ಮಾನ್ಯ ಹಣಕಾಸಿನ ಮಂತ್ರಿಗಳ ಸರದಿ ಬಂದಾಗ ಅವರು ಉತ್ತರ ಕೊಡುತ್ತಾರೆ.

**ವಿಷಯ : ಚುರ್ಕಿನಾಳ ನೀರಾವರಿ ಯೋಜನೆಯಿಂದ ಬಸವ ಕಲ್ಯಾಣಕ್ಕೆ ಕುಡಿಯುವ ನೀರಿನ ಸರಬರಾಜು**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 199 (1000)

ಶ್ರೀ ಬಸವರಾಜ್ ಪಾಟೀಲ್ ಅಟ್ಟೂರ್ (ಬಸವಕಲ್ಯಾಣ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಬಸವಕಲ್ಯಾಣ ಪಟ್ಟಣಕ್ಕೆ ಚುರುಕಿ ನಾಲಾ ನೀರಾವರಿ ಯೋಜನೆಯಿಂದ ಕುಡಿಯುವ ನೀರಿನ ಯೋಜನೆಯನ್ನು ಸರ್ಕಾರವು ಮಂಜೂರಾತಿ ಕೊಟ್ಟಿರುವುದು ನಿಜವೆ.

ಆ. ಹಾಗಿದ್ದಲ್ಲಿ, ಈ ಯೋಜನೆಯ ಅಂದಾಜು ವೆಚ್ಚಎಷ್ಟು?

ಇ. ಇದುವರೆವಿಗೆ ಬಿಡುಗಡೆಯಾದ ಹಣವೆಷ್ಟು?

ಈ. ಕೆಲಸವು ಪ್ರಾರಂಭಿಸಲಾಗಿದೆಯೇ ?

ಉ. ಇಲ್ಲದ್ದಲ್ಲಿ ಯಾವಾಗ ಪ್ರಾರಂಭಿಸಲಾಗುವುದು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ) ಸರ್ಕಾರವು ಚುರುಕಿ ನಾಲ ಯೋಜನೆಗೆ ರೂ. 658.00 ಲಕ್ಷಗಳ ಅಂದಾಜಿಗೆ ಮಂಜೂರಾತಿ ನೀಡಿದೆ. ಆದರೆ ಪುರಸಭೆಯು ತನ್ನ ಭಾಗಾಂಶ ವಂತಿಕೆಯಾದ ರೂ 32.90 ಲಕ್ಷ ರೂಗಳನ್ನು ಠೇವಣಿ ಮಾಡಿದ ನಂತರ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗುವುದು.

ಆ) 658.00 ಲಕ್ಷ ರೂಗಳು

ಇ) ಬಿಡುಗಡೆ ಆಗಿಲ್ಲ.

ಈ) ಇಲ್ಲ.

ಉ) ಪುರಸಭೆಯು ತನ್ನ ಒಟ್ಟು ವಂತಿಕೆಯಾದ 98.70 ಲಕ್ಷ ರೂಗಳಲ್ಲಿ 1/3 ಭಾಗವಾದ 32.90 ಲಕ್ಷ ರೂ.ಗಳನ್ನು ಠೇವಣಿ ಮಾಡಿದ ನಂತರ ಈ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಹಣಕಾಸು ಸಂಸ್ಥೆಯಿಂದ ಹಣ ಪಡೆದ ನಂತರ ಕೆಲಸವನ್ನು ಪ್ರಾರಂಭಿಸಲಾಗುವುದು.

**10.20 ಎ.ಎಂ.**

ಶ್ರೀ ಬಸವರಾಜ ಪಾಟೀಲ್ ಅಟ್ಟೂರ್ : ಸನ್ಮಾನ್ಯ ಅಧಕ್ಷರೇ, ಬೀದರ್ ಜಿಲ್ಲೆಯಲ್ಲಿ ಬಸವಕಲ್ಯಾಣ ಎನ್ನುವ ತಾಲ್ಲೂಕು ಇದೆ. ಇದು ಐತಿಹಾಸಿಕವಾದಂಥ ಮತ್ತು ಗಡಿ ಪ್ರದೇಶದಲ್ಲಿರತಕ್ಕಂಥ ತಾಲ್ಲೂಕು. ಈ ತಾಲ್ಲೂಕಿನಲ್ಲಿ ನೀರಿಗೆ ಬಹಳ ತೊಂದರೆ ಇದೆ. ಇದರ ಬಗ್ಗೆ ನಾನು ಸುಮಾರು ಸಾರಿ ಪ್ರಶ್ನೆ ಕೇಳಿದ್ದೇನೆ. ಸರ್ಕಾರದಿಂದ ಮಂಜೂರಾತಿ ದೊರಕಿದೆ ಎನ್ನುವ ಒಂದು ಭಾವನೆ ಬಿಟ್ಟರೆ ಬೇರೆ ಯಾವುದೇ ಕೆಲಸ ಅಲ್ಲಿ ಆಗುತ್ತಿಲ್ಲ. ಈ ಯೋಜನೆಗೆ ಪುರಸಭೆ ವತಿಯಿಂದ 32 ಲಕ್ಷ ರೂಪಾಯಿಗಳನ್ನು ಕೊಡಬೇಕು ಎನ್ನುವಂಥ ಒಂದು ಸೂಚನೆಯನ್ನು ನಮ್ಮ ಮುಖ್ಯ ಮಂತ್ರಿಗಳು ಈಗಾಗಲೇ ಹೇಳಿದ್ದಾರೆ. ಈಗ ನಮ್ಮ ಪುರಸಭೆಯಲ್ಲಿ ದುಡ್ಡು ಕೊಡುವಂಥ ಪರಿಸ್ಥಿತಿ ಇಲ್ಲ. ಇದ್ದು ತಮಗೆಲ್ಲಾ ಗೊತ್ತಿದೆ. ಕರ್ನಾಟಕದಲ್ಲಿರುವ ಬಹುತೇಕ ಎಲ್ಲಾ ಪುರಸಭೆಗಳು ಬಹಳ ಅದೋಗತಿಯಲ್ಲಿವೆ. ಅವರು ಒಂದು ಲಕ್ಷ ರೂಪಾಯಿ ಕೊಡ ಕೊಡುವಂಥ ಪರಿಸ್ಥಿತಿಯಲ್ಲಿ ಇಲ್ಲ. ಅಲ್ಲಿಯ ಜನರು ತೊಂದರೆಯಲ್ಲಿದ್ದಾರೆ ನೀರಿನ ಸಮಸ್ಯೆ ಬಹಳಷ್ಟು ಗಂಭೀರವಾಗಿದೆ. ಸುಮಾರು 60 ಸಾವಿರ ಜನಸಂಖ್ಯೆ ಇರುವಂಥ ಈ ಒಂದು ಸ್ಥಳದಲ್ಲಿ, ನಿಜಾಮರ ಕಾಲದಲ್ಲಿ ಮಾತ್ರ ನೀರು ಸರಬರಾಜು ಯೋಜನೆ ಆಗಿವೆ. ಆದಾದಮೇಲೆ ನಮ್ಮ ಸರ್ಕಾರ ಬಂದ ನಂತರ ಯಾವುದೇ ಪ್ರಗತಿಪರವಾದಂಥ ನೀರಿನ ಕಾರ್ಯಕ್ರಮಗಳಾಗಿಲ್ಲ. ಇಲ್ಲಿ ಕುಡಿಯುವ ನೀರಿನ ಸಮಸ್ಯೆ ಬಹಳಷ್ಟು ದೊಡ್ಡ ಸಮಸ್ಯೆಯಾಗಿದೆ. ಐತಿಹಾಸಿಕ ಸ್ಥಳ ಮತ್ತು ಪ್ರವಾಸಿ ಕೇಂದ್ರವಾಗಿರತಕ್ಕ ಈ ಬಸವ ಕಲ್ಯಾಣ ಪಟ್ಟಣಕ್ಕೆ ತ್ವರಿತಗತಿಯಿಂದ ನೀರಿನ ಯೋಜನೆ ಮಾಡುವ ಸಲುವಾಗಿ ಚುರ್ಕಿನಾಳ ಯೋಜನೆಯನ್ನು ತರುತ್ತಿದ್ದೇವೆ. ಇದರ ಬಗ್ಗೆ ಸರ್ಕಾರ ಏನು ಕ್ರಮ ತೆಗೆದುಕೊಳ್ಳುತ್ತದೆ ಎನ್ನುವುದನ್ನು ಹೇಳಬೇಕು ಮತ್ತು ಪುರಸಭೆಯವರು ದುಡ್ಡುಕೊಡುವಂಥ ಪರಿಸ್ಥಿತಿಯಲ್ಲಿ ಇಲ್ಲ. ಆದ್ದರಿಂದ ಸರ್ಕಾರದವರೇ ದುಡ್ಡು ಕಟ್ಟಿ ತಕ್ಷಣವೇ ತ್ವರಿತಗತಿಯಿಂದ ಚುರ್ಕಿನಾಳಾ ನೀರಾವರಿ ಯೋಜನೆಯಿಂದ ಬಸವಕಲ್ಯಾಣ ಪಟ್ಟಣಕ್ಕೆ ನೀರು ಒದಗಿಸುವಂತ ಕಾರ್ಯವನ್ನು ಮಾಡಬೇಕು ಎಂದು ಹೇಳಿ ಮಾನ್ಯ ಮಂತ್ರಿಯವರಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಸಭಾಧ್ಯಕ್ಷರೇ, ನೀರಾವರಿ ಯೋಜನೆಗೆ ತಗಲುವಂಥ ವೆಚ್ಚದಲ್ಲಿ ಮೂರನೇ ಒಂದು ಭಾಗವನ್ನು ಪ್ರತಿ ಮುನಿಸಿಪಾಲಿಟಿಯವರೂ ಕೊಡಬೇಕು ಎಂದು ಈಗಾಗಲೇ ಸರ್ಕಾರದವರು ನಿರ್ಣಯ ತೆಗೆದುಕೊಂಡಿದ್ದಾರೆ. ಆ ಪ್ರಕಾರ ಈಗಾಗಲೇ ಅನೇಕ ಪುರಸಭೆಗಳು ಕಟ್ಟವೆ. ಅದರ ಪ್ರಕಾರ ಬಸವಕಲ್ಯಾಣದ

ಪುರಸಭೆಯವರು ಮೂರನೇ ಒಂದು ಭಾಗ ಅಂದರೆ 32 ಲಕ್ಷ 90 ಸಾವಿರ ರೂಪಾಯಿಗಳನ್ನು ಕೊಡಬೇಕಾಗುತ್ತದೆ. ಅದನ್ನು ಕಟ್ಟಿದ ನಂತರ ಸರ್ಕಾರ ತನ್ನ ಪಾಲಿನದನ್ನು ಹಾಕುತ್ತದೆ. ಬೇರೆ ಬೇರೆ ಕಡೆಗಳಿಂದ ಸಾಲ ತೆಗೆದುಕೊಂಡು ಈ ಯೋಜನೆ ತೆಗೆದುಕೊಳ್ಳುತ್ತೇವೆ. ಈಗ ಪುರಸಭೆಯವರ ಆರ್ಥಿಕ ಪರಿಸ್ಥಿತಿ ಸರಿಯಿಲ್ಲ ಎಂದು ಬಹಳಷ್ಟು ಎಲ್ಲಾ ಕಡೆ ಕೇಳಿದ್ದೇವೆ. ಅದರ ಸಲುವಾಗಿ ಸರ್ಕಾರ ಈಗ ಒಂದು ಹಣಕಾಸು ಆಯೋಗವನ್ನು ರಚಿಸಿದೆ. ಅದರ ಶಿಫಾರಸ್ಸಿನ ಪ್ರಕಾರ ಸರ್ಕಾರವೇ ಹಣ ತುಂಬುವ ಬಗ್ಗೆ ವಿಚಾರ ಮಾಡಿ ಕ್ರಮ ತೆಗೆದುಕೊಳ್ಳುತ್ತದೆ.

ಶ್ರೀ ಬಸವರಾಜ ಪಾಟೀಲ್ ಅಟ್ಟೂರ್ : ಈಗಾಗಲೇ ಕೆಲವೊಂದು ಕಡೆ ನೀರಾವರಿ ಯೋಜನೆಯನ್ನು ಪೂರ್ಣ ಮಾಡುವ ಸಲುವಾಗಿ ಪುರ,ಸಭೆಯವರು ಕಟ್ಟಲಾರದಂಥ ಹಣವನ್ನು ಸರ್ಕಾರದವರೇ ಕಟ್ಟಿ ಮಂಜೂರಾತಿ ನೀಡಿದ್ದಾರೆ ನಾನು ಮೂರು ನಾಲ್ಕು ಭಾರಿಯಿಂದ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಚುರ್ಕಿನಾಳ ನಾಲಾದಿಂದ ನೀರು ತರಬೇಕು ಎಂದರೆ ತೋಟದ ಪೈಪು ಹಾಕಿಕೊಂಡು ತರಬೇಕು. ಗಡಿ ಪ್ರದೇಶದಲ್ಲಿರತಕ್ಕಂಥ ಈ ಪ್ರದೇಶದಲ್ಲಿ ಹಂತಹಂತವಾಗಿ ದುಡ್ಡು ಕಟ್ಟುವಂಥ ವ್ಯವಸ್ಥೆ ಮಾಡಬೇಕು. ಆದ್ದರಿಂದ ದಯಮಾಡಿ ತಾವು ಇದರ ಬಗ್ಗೆ ಕ್ರಮ ತೆಗೆದುಕೊಳ್ಳಬೇಕು. ನಮ್ಮಲ್ಲಿ ಹಣಕಾಸಿನ ಪರಿಸ್ಥಿತಿ ಸರಿಯಿಲ್ಲ ಎಂದು ಹೇಳಿ ಅದಕ್ಕೆ ಸರ್ಕಾರದವರೇ ದುಡ್ಡು ಕಟ್ಟಿ ಈ ಯೋಜನೆಗೆ ಮಂಜೂರಾತಿಯನ್ನು ಕೊಡಬೇಕು ಎಂದು ಕೇಳಿಕೊಳ್ಳುತ್ತೇನೆ.

ಶ್ರೀ ಡಿ.ನಾರಾಯಣದಾಸ್ : ಕುಡಿಯುವ ನೀರಿನ ಯೋಜನೆಗೆ ಮೂರನೆಯ ಒಂದು ಭಾಗ ಹಣವನ್ನು ಮುನಿಸಿಪಾಲಿಟಿಯವರು ಕಟ್ಟಬೇಕು ಎಂದರೆ ಅದು ಸಾಧ್ಯವಿಲ್ಲ ಹರಪನ ಹಳ್ಳಿಯ ಕುಡಿಯುವ ನೀರಿನ ಯೋಜನೆ 5 ಕೋಟಿ ರೂಪಾಯಿಗಳದು. ಮೂರನೇ ಒಂದು ಭಾಗ ಅಂದರೆ ಸುಮಾರು ಒಂದು ಕೋಟಿ ಚಿಲ್ಲರೆ ಕಟ್ಟಬೇಕಾಗುತ್ತದೆ. ಈ ಮುನಿಸಿಪಾಲಿಟಿಯಲ್ಲಿ ಕಳೆದ ಆರೇಳು ತಿಂಗಳುಗಳಿಂದ ಸಂಬಳ ಕೊಡುವುದಕ್ಕೂ ದುಡ್ಡಿಲ್ಲ. ಅಂಥಾದ್ದರಲ್ಲಿ ಈಗ ಕುಡಿಯುವ ನೀರಿನ ಯೋಜನೆಗೆ 45 ಲಕ್ಷ ರೂಪಾಯಿ ಕಟ್ಟಬೇಕು ಅಂದರೆ ಆಗುವುದಿಲ್ಲ. ಆದ್ದರಿಂದ ಹೆಚ್.ಕೆ.ಡಿ.ಬಿ. ಯಿಂದಾದರೂ ನಮಗೆ ಸಾಲವನ್ನು ಕೊಡಿಸಿದರೆ ಕುಡಿಯುವ ನೀರಿನ ಯೋಜನೆ ಆಗುತ್ತದೆ. ಇಲ್ಲದಿದ್ದರೆ ನಮಗೆ ಕುಡಿಯುವ ನೀರು ಸಿಕ್ಕುವುದೇ ಇಲ್ಲ. ಹರಪನಹಳ್ಳಿಯಲ್ಲಿ ಕುಡಿಯುವ ನೀರಿನದು ಬಹಳ ದೊಡ್ಡ ಸಮಸ್ಯೆಯಾಗಿದೆ.

ಶ್ರೀ ವೈಜನಾಥ ಪಾಟೀಲ್ : ಈ ಹೆಚ್.ಕೆ.ಡಿ.ಬಿ. ಯೋಜನೆ ಮೂರು ನಾಲ್ಕು ಜಿಲ್ಲೆಗಳ ಸಲುವಾಗಷ್ಟೇ ಇದೆ. ರಾಜ್ಯದಲ್ಲಿ ಅನೇಕ ಪುರಸಭೆಗಳ ಆರ್ಥಿಕ ಪರಿಸ್ಥಿತಿ ಸರಿಯಿಲ್ಲ. ಆದ್ದರಿಂದ ಇಂಥ ಯೋಜನೆಗಳನ್ನು ಪೂರ್ಣ ಮಾಡಲಿಕ್ಕೆ ಏನು ಮಾಡಬೇಕು ಎನ್ನುವ ಬಗ್ಗೆ ಒಂದು ಸಾಮಾನ್ಯ ನೀತಿಯನ್ನು ಸರ್ಕಾರ ರೂಪಿಸಬೇಕಾಗುತ್ತದೆ. ಇದಕ್ಕೆ ಸೂಕ್ತ ಯೋಜನೆ ಹಾಕಿಕೊಂಡು ಅದರಡಿಯಲ್ಲಿ ಹರಪನಹಳ್ಳಿ, ಬಸವಕಲ್ಯಾಣ ಈ ಎಲ್ಲಾ ಯೋಜನೆಗಳನ್ನು ತೆಗೆದುಕೊಳ್ಳುತ್ತೇವೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ಸನ್ಮಾನ್ಯ ಅಧ್ಯಕ್ಷರೇ, ತಮಗೆ ಗೊತ್ತಿರಬಹುದು. ಹೋದವರ್ಷ ಯಾವ ಯಾವ ಕುಡಿಯುವ ನೀರಿನ ಯೋಜನೆಗೆ

ಮಂಜೂರಾತಿ ಕೊಟ್ಟಿದ್ದಾರೆ ಆ ಪುರಸಭೆಯವರು ಮೂರನೇ ಒಂದು ಭಾಗದ ಹಣವನ್ನು ಕಟ್ಟಬೇಕು ಎಂದು ಹೇಳಿದ್ದೀರಿ. ಇದುವರೆಗೆ ಬಹುತೇಕ ಪುರಸಭೆಗಳು ಕಟ್ಟಿಲ್ಲ. ಯಾವುದೇ ಯೋಜನೆಯನ್ನು ಕಾರ್ಯಗತ ಮಾಡಲಿಕ್ಕೆ ಆಗಿಲ್ಲ. ಅದಕ್ಕಾಗಿ ಸರ್ಕಾರದವರು ಒಂದು ಪಾಲಿಸಿ ಡಿಸಿಷನ್ ತೆಗೆದುಕೊಂಡು ಈ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸಬೇಕು. ಇದಕ್ಕೆ ಮಂತ್ರಿಗಳು ತಕ್ಷಣ ಉತ್ತರ ಕೊಡುವುದಕ್ಕೆ ಆಗದಿದ್ದರೂ ಸಹಾ ಸಚಿವ ಸಂಪುಟದಲ್ಲಿಯಾದರೂ ಇದನ್ನು ಚರ್ಚೆಗೆ ತಂದು ಹಣ ಕಟ್ಟಬೇಕು ಎನ್ನುವುದನ್ನು ಕುಡಿಯುವ ನೀರಿನ ಯೋಜನೆಗಾದರೂ ವಿನಾಯಿತಿ ಕೊಟ್ಟು ಪೂರ್ಣ ಹಣವನ್ನು ಸರ್ಕಾರ ಕಟ್ಟುವ ಹಾಗೆ ಮಾಡಬೇಕು. ಪುರಸಭೆಗಳ ಸಿಬ್ಬಂದಿಗೆ ಸಂಬಳ ಕೊಡುವುದಕ್ಕೂ ಶಕ್ತಿ ಇಲ್ಲದಂಥ ಕಾಲದಲ್ಲಿ ಇದು ಕಾರ್ಯರೂಪಕ್ಕೆ ಬರುವುದಿಲ್ಲ. ದಯಮಾಡಿ ಇದನ್ನು ಮರು ಪರಿಶೀಲನೆ ಮಾಡಿ ಯಾವುದೇ ಕಾರಣಕ್ಕೆ ಪುರಸಭೆಗಳು ಹಣ ಕಟ್ಟುವ ಬಾಬ್ತನ್ನು ತೆಗೆದು ಹಾಕಿ ಪೂರ್ಣ ಹಣವನ್ನು ಸರ್ಕಾರ ಕಟ್ಟುವುದರ ಬಗ್ಗೆ ಪರಿಶೀಲನೆ ಮಾಡಬೇಕಾಗಿ ಹೇಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಕೆಲವು ಪುರಸಭೆಗಳು ಅಂದರೆ ಎರಡೋ ಮೂರೋ ಪುರಸಭೆಗಳು ಹಣವನ್ನು ಕಟ್ಟಿವೆ. ಮಾನ್ಯ ವಿರೋಧ ಪಕ್ಷ ನಾಯಕರು ಸಲಹೆ ಕೊಟ್ಟಿರುವುದನ್ನು ನಾನೂ ಒಪ್ಪುತ್ತೇನೆ. ಬಹಳಷ್ಟು ಪುರಸಭೆಗಳಲ್ಲಿ ಆರ್ಥಿಕ ಪರಿಸ್ಥಿತಿ ಸರಿಯಿಲ್ಲ. ಅದರ ಸಲುವಾಗಿ ಒಂದು ಪಾಲಿಸಿ ಡಿಸಿಷನ್‌ನ್ನು ತೆಗೆದುಕೊಳ್ಳಬೇಕಾಗುತ್ತದೆ. ಸರ್ಕಾರ ಇದರ ಬಗ್ಗೆ ಪರಿಶೀಲಿಸುತ್ತದೆ ಎಂದು ಹೇಳುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಪರಿಶೀಲನೆ ಮಾಡುತ್ತೇವೆ ಎಂದು ಹೇಳಿದ್ದಾರೆ. ಅದರ ಬಗ್ಗೆ ನನ್ನದೇನೂ ತಕರಾರು ಇಲ್ಲ. ಆದರೆ ಇದರ ಬಗ್ಗೆ ನಮಗೊಂದು ಸ್ಪಷ್ಟ ಭರವಸೆ ಬೇಕು ಎಂದು ಹೇಳುತ್ತೇನೆ.

ಶ್ರೀ ಬಸವರಾಜ ಪಾಟೀಲ್ ಅಟ್ಟೂರ್ : ದೇವರಾಜ್ ಅರಸುರವರ ಕಾಲದಿಂದಲೂ ಕೂಡ ಮೂರನೇ ಒಂದು ಭಾಗದ ಹಣವನ್ನು ಕಟ್ಟಬೇಕು ಎನ್ನುವುದರ ಬಗ್ಗೆ ಬ್ಯಾನ್ ಇತ್ತು. ಕುಡಿಯುವ ನೀರಿನದು ಬಹಳ ದೊಡ್ಡ ಸಮಸ್ಯೆಯಾಗಿದೆ. ಇದರಿಂದ ಜನಗಳಿಗೆ ತುಂಬಾ ತೊಂದರೆಯಾಗಿದೆ. ನಾನು 3 ವರ್ಷಗಳಿಂದ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಹೆಚ್.ಕೆ.ಡಿ.ಯಲ್ಲಿ ಎಂ.ಎಲ್.ಎ ಫಂಡ್ ಎಂದು ಇದೆ. ಹೆಚ್.ಕೆ.ಡಿ.ಬಿ.ಯಿಂದ ಫಂಡ್‌ನ್ನು ತಂದು ಇದನ್ನು ಕಾರ್ಯಗತ ಮಾಡಬೇಕು ಪಾಲಿಸಿ ಮ್ಯಾಟರ್ ಮಾಡುವುದಕ್ಕಿಂತ ಪೂರ್ವದಲ್ಲಿ ಹೆಚ್.ಕೆ.ಡಿ.ಬಿ. ವತಿಯಿಂದಾದರೂ ಇದಕ್ಕೆ ದುಡ್ಡು ಕೊಟ್ಟು ಕೆಲಸ ಪ್ರಾರಂಭ ಮಾಡಲು ಮಾನ್ಯ ಮಂತ್ರಿಗಳು ಕ್ರಮ ತೆಗೆದುಕೊಳ್ಳಬೇಕು.

ಶ್ರೀ ವೈಜನಾಥ ಪಾಟೀಲ್ : ಹೆಚ್.ಕೆ.ಡಿ.ಬಿ.ಯಲ್ಲಿ ಆಕ್ಷನ್ ಪ್ಲಾನ್ ಆಗಿಲ್ಲ. ಆ ಪ್ಲಾನ್ ಮಾಡಿದರೆ ಮಾನ್ಯ ಸದಸ್ಯರು ಹೇಳಿದಂತೆ ಹಣವನ್ನು ಸರ್ಕಾರ ಕೊಡಲು ವಿಚಾರ ಮಾಡುತ್ತದೆ. ಅಲ್ಲದೆ. ಆರ್ಥಿಕ ಪರಿಸ್ಥಿತಿ ಹದಗೆಟ್ಟಿರುವ ಪುರಸಭೆಗಳ ಬಗ್ಗೆ ಒಂದು ಜನರಲ್ ಪಾಲಿಸಿ ಡಿಸಿಷನ್ ತೆಗೆದುಕೊಳ್ಳುತ್ತವೆ.

IV.F-3

ವಿಷಯ : ಬೆಳಗಾವಿ ವಿಭಾಗದಲ್ಲಿ ಸಕ್ಕರೆ ಕಾರ್ಖಾನೆಗಳ ಪ್ರಾರಂಭ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 200(1292)

ಶ್ರೀ ಚಂದ್ರಶೇಖರ ನಾಯಕ (ಗೋಕಾಕ್) : ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ, ತಂತ್ರಜ್ಞಾನ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಬೆಳಗಾವಿ ವಿಭಾಗದಲ್ಲಿ ಹಲವಾರು ಸಕ್ಕರೆ ಕಾರ್ಖಾನೆಗಳಿದ್ದರೂ ಕಬ್ಬನ್ನು ಮಹಾರಾಷ್ಟ್ರಕ್ಕೆ ಸಾಗಿಸುವ ಪ್ರಸಂಗ ಬಂದಿರುವುದರಿಂದ ಪರ್ಯಾಯ ವ್ಯವಸ್ಥೆಯ ಬಗ್ಗೆ ಸರ್ಕಾರ ಯೋಚಿಸುತ್ತಿದೆಯೆ?

ಆ. ಬೆಳಗಾವಿ ಜಿಲ್ಲೆಯಲ್ಲಿ ಎಷ್ಟು ಸಕ್ಕರೆ ಕಾರ್ಖಾನೆಗಳಿಗೆ ಕೇಂದ್ರ ಸರ್ಕಾರದ ಅನುಮತಿ ದೊರೆತಿದೆ?

ಇ. ಹಾಗಿದ್ದರೆ, 1995-96ನೇ ಸಾಲಿನಲ್ಲಿ ಪ್ರಾರಂಭವಾಗುವ ಕಾರ್ಖಾನೆಗಳೆಷ್ಟು?

ಈ. ಈಗಿದ್ದ ಕಾರ್ಖಾನೆಗಳ ಕಬ್ಬು ನುರಿಯುವ ಸಾಮರ್ಥ್ಯ ಹೆಚ್ಚಿಸುವ ಬಗ್ಗೆ ಬಂದ ಬೇಡಿಕೆಗಳು ಎಷ್ಟು?

ಶ್ರೀ ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ, ತಂತ್ರಜ್ಞಾನ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ರಾಜ್ಯ ಸಚಿವರು):

ಅ. ಹೌದು.

ಆ. ಮೂರು.

ಇ. ಒಂದು.

ಈ. ಆರು.

ಶ್ರೀ ಚಂದ್ರಶೇಖರ ನಾಯಕ : ಮಾನ್ಯ ಸಭಾಧ್ಯಕ್ಷರೇ, ಪರ್ಯಾಯ ವ್ಯವಸ್ಥೆ ಮಾಡಲಾಗಿದೆ ಎಂದು ಹೇಳಿದ್ದಾರೆ. ಆದರೆ ಅವ್ಯವಸ್ಥೆ ಯಾವ ರೀತಿ ಇದೆ ಎಂದರೆ ಈಗಾಗಲೇ ಮಹಾರಾಷ್ಟ್ರಕ್ಕೆ ಕಬ್ಬು ಸಾಗುತ್ತಾ ಇದೆ. ಕೆಲವು ಏಜೆಂಟರು ಟನ್ನಿಗೆ 550 ರೂಪಾಯಿಗಳಂತೆ ಖರೀದಿ ಮಾಡಿ ಅದನ್ನು ಲಾಭದಾಯಕವಾಗಿ ಮಹಾರಾಷ್ಟ್ರಕ್ಕೆ ಸಾಗಿಸುತ್ತಿದ್ದಾರೆ. ಅದರ ಬಗ್ಗೆ ಸರ್ಕಾರ ಏನು ಮಾಡಿದೆ ಎನ್ನುವುದನ್ನು ಹೇಳಬೇಕು.

ಶ್ರೀ ಪಿ. ಸಿ. ಸಿದ್ದನಗೌಡರ್ : ಸನ್ಮಾನ್ಯ ಸಭಾಧ್ಯಕ್ಷರೇ, ಮಾನ್ಯ ಸದಸ್ಯರು ಹೇಳಿದ ಹಾಗೆ ಬೆಳಗಾವಿ ಜಿಲ್ಲೆಯಲ್ಲಿ ಕಬ್ಬು ಹೆಚ್ಚಾಗಿ ಇರುವುದರಿಂದ ಅದನ್ನು ಮಹಾರಾಷ್ಟ್ರಕ್ಕೆ ಕಳುಹಿಸಲಿಕ್ಕೆ ಈಗಾಗಲೇ ನಾವು ಜಿಲ್ಲಾಧಿಕಾರಿಗಳಿಗೆ ಆದೇಶವನ್ನು ಕೊಟ್ಟಿದ್ದೇವೆ. ಆ ರೀತಿ ಕಬ್ಬು ಮಹಾರಾಷ್ಟ್ರಕ್ಕೆ ಹೋಗುತ್ತಿದೆ. ಮಧ್ಯದಲ್ಲಿ ಯಾರೋ ಏಜೆಂಟರು ಕಮೀಷನ್ ಹೊಡೆಯುತ್ತಿದ್ದಾರೆ ಎಂದು ಮಾನ್ಯ ಸದಸ್ಯರು ಹೇಳಿದರು. ಆ ರೀತಿ ಯಾರಾದರೂ ಇದ್ದರೆ ಅವರ ಮೇಲೆ ಕ್ರಮ ತೆಗೆದುಕೊಳ್ಳುತ್ತೇವೆ ಎಂದು ಹೇಳುತ್ತೇನೆ.

ಶ್ರೀ ಚಂದ್ರಶೇಖರ ನಾಯಕ : ಜಿಲ್ಲೆಯಲ್ಲಿ 3 ಸಕ್ಕರೆ ಕಾರ್ಖಾನೆಗಳಿಗೆ ಅನುಮತಿ ದೊರತಿವೆ. ಈಗಾಗಲೇ ಎಡದಂಡೆ ಕಾಲುವೆ ಪ್ರಾರಂಭವಾಗಿರುವುದರಿಂದ ಕಬ್ಬು ಹೆಚ್ಚಾಗಿ ಇರುವುದು ಗೊತ್ತಿದೆ ಬಲದಂಡೆ ಕಾಲುವೆ ಇನ್ನೂ ಪ್ರಾರಂಭ ಆಗಿಲ್ಲ. ಬಲದಂಡೆ ಕಾಲುವೆ ಪ್ರಾರಂಭವಾದರೆ ಇದರ ಎರಡು ಪಟ್ಟು ಕಬ್ಬು ಹೆಚ್ಚಾಗುತ್ತದೆ. ಅದರ ಮುಂದಿನ ಭವಿಷ್ಯದ ಸಲುವಾಗಿ ಸರ್ಕಾರ ಏನು ಮಾಡಿದೆ ಎಂದು ಕೇಳುತ್ತೇನೆ.

ಶ್ರೀ ಪಿ. ಸಿ. ಸಿದ್ದನಗೌಡರ್ : ಸನ್ಮಾನ್ಯ ಅಧ್ಯಕ್ಷರೇ, ಬೆಳಗಾವಿ ಜಿಲ್ಲೆಯಲ್ಲಿ 6 ಸಕ್ಕರೆ ಕಾರ್ಖಾನೆಗಳನ್ನು ವಿಸ್ತರಣೆ ಮಾಡುವ ಸಲುವಾಗಿ ಒಂದು ಪ್ರಸ್ತಾವನೆಯನ್ನು ಕೇಂದ್ರಕ್ಕೆ ಕಳುಹಿಸಲಾಗಿದೆ. ಅದರ ಜೊತೆಗೆ 3 ಸಕ್ಕರೆ ಕಾರ್ಖಾನೆಗಳಿಗೆ ಲೈಸೆನ್ಸ್ ಸಿಕ್ಕಿದೆ. ಒಂದು ಸಕ್ಕರೆ ಕಾರ್ಖಾನೆ ಈ ವರ್ಷ ಪ್ರಾರಂಭ ಆಗುತ್ತದೆ. ಕೇಂದ್ರ ಸರ್ಕಾರದಲ್ಲಿ ಇನ್ನೂ ಅನೇಕ ಪ್ರಸ್ತಾವನೆಗಳು ಪೆಂಡಿಂಗ್ ಇವೆ. ಈಗಾಗಲೇ ನಾನು ಕೇಂದ್ರ ಸರ್ಕಾರಕ್ಕೆ ಒತ್ತಾಯ ಮಾಡಿದ್ದೇನೆ, ಮತ್ತು ನಾನು ಇನ್ನೂ ಪ್ರಯತ್ನ ಮಾಡುತ್ತೇನೆ ಎನ್ನತಕ್ಕಂಥ ಮಾತನ್ನು ಹೇಳುತ್ತೇನೆ.

ಶ್ರೀ ಚಂದ್ರಶೇಖರ ನಾಯಕ : ಈಗಾಗಲೇ ಎಂ. ಕೆ. ಹುಬ್ಬಳ್ಳಿ ಕಾರ್ಖಾನೆಯಲ್ಲಿ 40 ಟನ್ ಮಾತ್ರ ತೆಗೆದುಕೊಳ್ಳುತ್ತೇವೆ ಎಂದು ಹೇಳಿದ್ದಾರೆ -- ಹೆಚ್ಚು ಕಬ್ಬನ್ನು ಮಾರಾಟ ಮಾಡಬೇಕು ಎಂದರೆ ಎರಡನೇ ಕಡೆ ಹೋಗಬೇಕು. ಅದರ ಸಲುವಾಗಿ ಹೆಚ್ಚಾದಂಥ ಕಬ್ಬನ್ನು ಯಾವ ರೀತಿ ಸಾಗಿಸಬೇಕು ಅಥವಾ ಅದರ ಉಪಯೋಗ ಯಾವ ರೀತಿ ತೆಗೆದುಕೊಳ್ಳಬೇಕು ಎನ್ನುವ ಯೋಚನೆಗೆ ಈಡಾಗಿದ್ದಾರೆ. ಆದ್ದರಿಂದ ಸರ್ಕಾರದವರು ಕಬ್ಬು ತೆಗೆದುಕೊಳ್ಳುವ ಕಡೆ ಹೆಚ್ಚು ಗಮನ ಕೊಡಬೇಕು ಮತ್ತು ಕಬ್ಬು ಅರೆಯುವ ಸಾಮರ್ಥ್ಯವನ್ನು ಎಂ.ಕೆ.ಹುಬ್ಬಳ್ಳಿ ಕಾರ್ಖಾನೆಯಲ್ಲಿ ಹೆಚ್ಚು ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಪಿ. ಸಿ. ಸಿದ್ದನಗೌಡರ್ : ಈಗಾಗಲೇ ನಾನು ಹೇಳಿದ ಹಾಗೆ ಮೂರು ಪ್ರಸ್ತಾವನೆಗಳನ್ನು ಕೇಂದ್ರಕ್ಕೆ ಕಳುಹಿಸಿದ್ದೇವೆ. ಎಂ. ಕೆ. ಹುಬ್ಬಳ್ಳಿ ಕಾರ್ಖಾನೆಯವರು ಬೇಕೆಂದರೆ ಅವರಿಗೂ ಕೂಡ ಕೊಡುತ್ತೇವೆ. ಈ ವರ್ಷ ಕಬ್ಬು ಹೆಚ್ಚು ಇದ್ದುದ್ದರಿಂದ ಮಹಾರಾಷ್ಟ್ರಕ್ಕೆ ಕಳುಹಿಸಿದ್ದೇವೆ.

ಶ್ರೀ ವಿ. ಎಸ್. ಕೌಜಲಗಿ : ಮಾನ್ಯ ಮಂತ್ರಿಗಳು ಹೇಳಿದರು, ಕಬ್ಬು ಬೆಳಗಾಂ ಜಿಲ್ಲೆಯಲ್ಲಿ ಹೆಚ್ಚು ಬೆಳೆಯುತ್ತಾರೆ ಮತ್ತು ಅದು ಮಹಾರಾಷ್ಟ್ರಕ್ಕೆ ಹೋಗುವುದಕ್ಕೆ ಜಿಲ್ಲಾಧಿಕಾರಿಗಳಿಗೆ ಪರವಾನಗಿಯನ್ನು ಕೊಟ್ಟಿದ್ದೇವೆಂದು. ತಾವು ಇದನ್ನು ವಿಚಾರ ಮಾಡಿ ಹೊಸ ಕಾರ್ಖಾನೆಗಳನ್ನು ಶುರು ಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಾ ?

ಎರಡನೆಯದಾಗಿ, ತಮ್ಮ ಗಮನಕ್ಕೆ ಬಂದಿದೆಯೋ ಇಲ್ಲವೋ ಗೊತ್ತಿಲ್ಲ, ಈ ಕಾರ್ಖಾನೆಯಲ್ಲಿ ಎಷ್ಟು ಮಂದಿ ಶೇರ್‌ಹೋಲ್ಡರ್ಸ್ ಇದ್ದಾರೆ, ಅವರು ಬೆಳೆದಂಥ ಕಬ್ಬನ್ನು ಕಡ್ಡಾಯವಾಗಿ ನಿಲ್ಲಿಸದಂತೆ ಆದೇಶವನ್ನು ತಾವು ಕೊಡುತ್ತೀರಾ ?

ಶ್ರೀ ಪಿ.ಸಿ. ಸಿದ್ದನಗೌಡರ್ : ಸನ್ಮಾನ್ಯ ಸಭಾಧ್ಯಕ್ಷರೆ, ಮಾನ್ಯ ಹಿರಿಯ ಸದಸ್ಯರು ಕೇಳಿದಂಥ ಪ್ರಶ್ನೆಗೆ ಈ ಒಂದು ಸಕ್ಕರೆ ಕಾರ್ಖಾನೆಯಲ್ಲಿ ಸದಸ್ಯರ ಒಂದು ಲೆಕ್ಕಾಚಾರ ಹಾಕಿ ಯಾವಯಾವ ಸದಸ್ಯರಿಗೆ ಎಷ್ಟೆಷ್ಟು ಕಬ್ಬು ತೆಗೆದುಕೊಳ್ಳಬೇಕು ಎನ್ನುವುದು ತಮಗೂ ಕೂಡ ಗೊತ್ತಿದೆ. ಅದರಲ್ಲಿ ನಾನು ಹೆಚ್ಚು ಒತ್ತಾಯ ಮಾಡುವುದಕ್ಕೆ ಬರುವುದಿಲ್ಲ. ಏಕೆಂದರೆ ರಿಸರ್ವ್ ಏರಿಯಾ ಎಂದು ಮಾಡಿರುತ್ತಾರೆ. ಆ ಪ್ರಕಾರ ಅವರು ಮಾಡುತ್ತಾರೆ. ಹೆಚ್ಚಿನ ಸಕ್ಕರೆ ಕಾರ್ಖಾನೆ ಬಗ್ಗೆ ತಾವು ಹೇಳಿದಿರಿ. ಕೇಂದ್ರಸರ್ಕಾರದಲ್ಲಿ ಕರ್ನಾಟಕದ ಬಗ್ಗೆ ಅಲಕ್ಷ್ಯ ಬಹಳ ಇದೆ. ನಮ್ಮ ಮುಖ್ಯಮಂತ್ರಿಗಳು ಕೂಡ ಈಗಾಗಲೇ ಹೇಳಿದ್ದಾರೆ. ಸರ್ಕಾರಕ್ಕೆ ಒತ್ತಾಯ ಮಾಡಿ ಇನ್ನೂ ಹೆಚ್ಚಿನ ರೀತಿಯಲ್ಲಿ ಸಕ್ಕರೆ ಕಾರ್ಖಾನೆಯನ್ನು ಪ್ರಾರಂಭ ಮಾಡಲಿಕ್ಕೆ ನಾನು ಪ್ರಯತ್ನ ಮಾಡುತ್ತೇನೆ.

ಶ್ರೀ ಕೆ. ಎನ್. ನಾಗೇಗೌಡ : ನಮ್ಮ ರಾಜ್ಯದಲ್ಲಿ 2 ಕೋಟಿ 15 ಲಕ್ಷ ಟನ್ ಕಬ್ಬನ್ನು ತಾವು ಬೆಳೆಯುತ್ತೇವೆ. ಕಾರ್ಖಾನೆಗಳಿಗೆ ಉಪಯೋಗಿಸುತ್ತಾ ಇರತಕ್ಕ ಕಬ್ಬು

ನಲವತ್ತೆಂಟೀ ಪರ್ಸೆಂಟು. ನಾವು ನಮ್ಮ ರಾಜ್ಯದಲ್ಲಿ ಬೆಳೆಯತಕ್ಕ ಕಬ್ಬನ್ನು 50 ಭಾಗವನ್ನೂ ಕೂಡ ನಾವು ಸಕ್ಕರೆ ಕಾರ್ಖಾನೆಯಲ್ಲಿ ಉಪಯೋಗಿಸಿಕೊಳ್ಳುತ್ತಿಲ್ಲ ಬಾಕಿಯದೆಲ್ಲಾ ಬೆಲ್ಲಕ್ಕೆ ಮತ್ತೊಂದಕ್ಕೆ ಹೋಗುತ್ತಿದೆ. ನಮ್ಮದೊಂದು ಸ್ಕ್ರೀನಿಂಗ್ ಕಮಿಟಿ ಇದೆ ರಾಜ್ಯ ಮಟ್ಟದಲ್ಲಿ. ಆ ಸ್ಕ್ರೀನಿಂಗ್ ಕಮಿಟಿ ಮುಂದೆ ಎಷ್ಟು ಅರ್ಜಿಗಳಿವೆ ? ಆ ಅರ್ಜಿಗಳನ್ನು ಎಷ್ಟು ಕೇಂದ್ರ ಸರ್ಕಾರಕ್ಕೆ ಕಳುಹಿಸಿದ್ದೀರಿ ? ಕೇಂದ್ರ ಸರ್ಕಾರದಲ್ಲಿ ಹೊಸ ಕಾರ್ಖಾನೆ ತರುವುದಕ್ಕೆ ಏನು ಪ್ರಯತ್ನ ನಡೆದಿದೆ ಎಂಬುದನ್ನು ದಯವಿಟ್ಟು . ತಾವು ತಿಳಿಸುತ್ತೀರಾ ?

ಶ್ರೀ ಪಿ. ಸಿ. ಸಿದ್ದನಗೌಡರ್ : ಹಿರಿಯ ಸದಸ್ಯರಾದ ನಾಗೇಗೌಡರು ಹೇಳಿದ್ದನ್ನು ನಾನು ಸ್ವಾಗತ ಮಾಡುತ್ತೇನೆ. ಸ್ಕ್ರೀನಿಂಗ್‌ಕಮಿಟಿಗೆ ಈಗಾಗಲೇ 15 ಅಪ್ಲಿಕೇಷನ್ ಬಂದಿವೆ. ಅವರು ಹೇಳಿದಹಾಗೆ 100ಕ್ಕೆ 30ರಷ್ಟು ಕಬ್ಬು ನಮಗೆ ಹೆಚ್ಚಾಗಿದೆ. ಅಂದರೆ ನಾವು ಬೆಳೆಯತಕ್ಕ ಕಬ್ಬು ಮತ್ತು ಅರೆಯತಕ್ಕ ಕಬ್ಬನ್ನು ಅಂಕಿಸಂಖ್ಯೆ ಪ್ರಕಾರ ನೋಡಿದರೆ 30 ಪರ್ಸೆಂಟ್ ಹೆಚ್ಚಾಗಿದೆ. ಇದು ಮಹಾರಾಷ್ಟ್ರಕ್ಕೆ ಹೋಗಿರಬಹುದು, ಗೋವಾಕ್ಕೆ ಹೋಗಿರಬಹುದು ಅಥವಾ ಬೇರೆ ರಾಜ್ಯಕ್ಕೆ ಹೋಗಿರಬಹುದು. ಕೇಂದ್ರ ಸರ್ಕಾರದಲ್ಲಿ ಈಗಾಗಲೇ ನಾನು ಹೇಳಿದಹಾಗೆ ಸದನದ ಎಲ್ಲಾ ಸದಸ್ಯರ ಸಹಕಾರವನ್ನು ತೆಗೆದುಕೊಂಡು, ಮಾನ್ಯ ಮುಖ್ಯಮಂತ್ರಿಗಳು ಕೂಡ ಈಗಾಗಲೇ ಹೇಳಿದ್ದಾರೆ.

ನಾನೂ ಕೂಡ ಕೇಂದ್ರ ಸರ್ಕಾರಕ್ಕೆ ಬರೆದಿದ್ದೇನೆ. ಮಾನ್ಯ ಅಧ್ಯಕ್ಷರೆ, ಕೇಂದ್ರ ಸರ್ಕಾರದಲ್ಲಿ ನಮಗೆ ಸ್ವಲ್ಪ ಅನ್ಯಾಯ ಆಗುತ್ತಿದೆ ಎನ್ನತಕ್ಕ ಮಾತನ್ನು ಸ್ಪಷ್ಟವಾಗಿ ಹೇಳಿದ್ದೇನೆ. ಮಹಾರಾಷ್ಟ್ರ ಮತ್ತು ಗುಜರಾತಿಗೆ ಕೊಟ್ಟಷ್ಟು ನಮಗೆ ಕೊಡುವುದಿಲ್ಲ. ಈಗಾಗಲೇ 6 ಅಪ್ಲಿಕೇಷನ್‌ಗಳು ಪೆಂಡಿಂಗ್ ಇವೆ. ನಮ್ಮ ಮುಂದೆ 15 ಇವೆ. ರಾಜ್ಯದ ಎಲ್ಲಾ ಕಾರ್ಖಾನೆಗಳ ಅಧ್ಯಕ್ಷರು ಮತ್ತು ಎಂ. ಡಿ. ಗಳನ್ನು ಕರೆದಿದ್ದೇನೆ. ಅಲ್ಲಿ ಅನೇಕ ವಿಚಾರಗಳ ಬಗ್ಗೆ ನಿರ್ಣಯ ಮಾಡಿ ತಮ್ಮ ಗಮನಕ್ಕೆ ನಾನು ತರುತ್ತೇನೆ ಎನ್ನುವ ಮಾತನ್ನು ಹೇಳುತ್ತೇನೆ.

**ವಿಷಯ : ದಕ್ಷಿಣ ಕನ್ನಡ ಜಿಲ್ಲೆಯ ಸಣ್ಣ ಪ್ರಮಾಣದ ಕೈಗಾರಿಕೆಗಳು.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 201 : (725)

ಶ್ರೀ ಕುಂಪ್ಳೆ ಸುಂದರ್‌ರಾವ್ (ಸುರತ್ಕಲ್): ಮಾನ್ಯ ಸಣ್ಣ ಪ್ರಮಾಣ ಕೈಗಾರಿಕಾ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ.

ಅ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಸಣ್ಣ ಕೈಗಾರಿಕೆಗಳ ಸಂಖ್ಯೆ ಎಷ್ಟು? ಅವುಗಳ ಹೆಸರುಗಳೇನು ? ( ವಿವರಗಳನ್ನು ಒದಗಿಸುವುದು )

ಆ. ಈ ಕೈಗಾರಿಕೆಗಳಿಗೆ ಸರ್ಕಾರದವರು ಸಾಲದ ರೂಪದಲ್ಲಿ ನೀಡಿರುವ ಹಣ ಎಷ್ಟು ? ಈ ಹಣದ ಮರುಪಾವತಿಯು ಸರಿಯಾಗಿ ಆಗಿದೆಯೇ ಇಲ್ಲವಾದಲ್ಲಿ ಬಾಕಿಯಿರುವ ಹಣದ ಮೊತ್ತವೆಷ್ಟು ?

ಇ. ಈ ಕೈಗಾರಿಕೆಗಳು ವ್ಯವಸ್ಥಿತವಾಗಿ ನಡೆಯುತ್ತಿವೆಯೇ, ಇದರಲ್ಲಿ ರೋಗಗ್ರಸ್ಥ ಕೈಗಾರಿಕೆಗಳು ಎಷ್ಟು ಮತ್ತು ಯಾವುವು ?

ಈ. ನಿಂತು ಹೋದ ಕೈಗಾರಿಕೆಗಳಿಂದ ಬರಬೇಕಾದ ಸಾಲದ ಮೊತ್ತ ಎಷ್ಟು? ಸಾಲ ಮರುಪಾವತಿಗೆ ಜರುಗಿಸಿದ ಕ್ರಮಗಳೇನು ?

ಶ್ರೀ ಎನ್. ಎಂ. ನಬಿ (ಸಣ್ಣ ಪ್ರಮಾಣ ಕೈಗಾರಿಕಾ ಸಚಿವರು) :

ಅ. 10,164 ಈ ಘಟಕಗಳ ಹೆಸರುಗಳು ಸಧ್ಯಕ್ಕೆ ಲಭ್ಯವಿರುವುದಿಲ್ಲ.

ಆ. ಒಟ್ಟು 472 ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ರೂ. 2.76 ಕೋಟಿಗಳನ್ನು ಅಭಿವೃದ್ಧಿ ಸಾಲ ಮತ್ತು ಬೀಜಧನ ಸಾಲದ ರೂಪದಲ್ಲಿ ಸರ್ಕಾರ ನೀಡಿದೆ. ಈ ಹಣದಲ್ಲಿ ಶೇಕಡ 50 ಭಾಗ ಮರುಪಾವತಿಯಾಗಿದೆ. ಬಾಕಿ ಹಣದ ಮರುಪಾವತಿಗೆ ಕ್ರಮ ಕೈಗೊಳ್ಳಲಾಗಿದೆ.

ಇ. ಮೇಲೆ ತಿಳಿಸಿರುವ ಘಟಕಗಳಲ್ಲಿ ಎಷ್ಟು ರೋಗಗ್ರಸ್ಥ ಘಟಕಗಳಿವೆ ಎಂಬ ಮಾಹಿತಿಯು ಲಭ್ಯವಿರುವುದಿಲ್ಲ. ಆದಾಗ್ಯೂ ಜಿಲ್ಲಾ ಮಟ್ಟದ ಪುನಃಶ್ಚೇತನ ಸಮಿತಿಯು 64 ರೋಗಗ್ರಸ್ಥ ಘಟಕಗಳಿವೆಯೆಂದು ಗುರುತಿಸಿದೆ. ಹಾಗೂ ಇತರೆ ರೋಗಗ್ರಸ್ಥ ಘಟಕಗಳ ಗುರುತಿಸುವಿಕೆ ಮುಂದುವರಿದಿದೆ.

ಈ. ಒಟ್ಟು 44 ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳು ನಿಂತು ಹೋಗಿದ್ದು, ಇವುಗಳಿಂದ ಸರ್ಕಾರಕ್ಕೆ ಒಟ್ಟು ರೂ. 40.18 ಲಕ್ಷಗಳ ಸಾಲದ ಮರುಪಾವತಿ ಬಾಕಿ ಇರುತ್ತದೆ. ಬಾಕಿ ಹಣದ ವಸೂಲಾತಿಗೆ ನಿಯಮದ ಪ್ರಕಾರ ಕ್ರಮ ಕೈಗೊಳ್ಳಲಾಗುತ್ತಿದೆ.

ಶ್ರೀ ಕುಂಬಳೆ ಸುಂದರರಾವ್ : ಸಭಾಧ್ಯಕ್ಷರೆ, ನಾನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಸಣ್ಣ ಕೈಗಾರಿಕೆಗಳ ಘಟಕಗಳ ಸಂಖ್ಯೆ ಎಷ್ಟು ಎಂದು ಕೇಳಿದ್ದೆ. ಘಟಕಗಳ ಸಂಖ್ಯೆ ಹೇಳಿದ್ದಾರೆ. ಹೆಸರುಗಳನ್ನೂ ಕೇಳಿದ್ದೆ. ಹೆಸರುಗಳು ಲಭ್ಯ ಇಲ್ಲ ಎಂದು ತಿಳಿಸಿದ್ದಾರೆ. ಹೆಸರುಗಳು ತಿಳಿದಿದ್ದರೆ ಆ ಜಿಲ್ಲೆಯವನಾದ ನಾನು ಆ ಘಟಕಗಳಿಗೆ ಸಂಬಂಧಪಟ್ಟಂಥ ದೋಷಗಳನ್ನು ವಿಮರ್ಶೆ ಮಾಡುವುದಕ್ಕೆ ಅಥವಾ ತಿಳಿದುಕೊಳ್ಳುವುದಕ್ಕೆ ಅವಕಾಶ ಆಗುತ್ತಿತ್ತು. ಆಮೇಲೆ ಮುಂದುವರೆದು ಒಟ್ಟು ಸಾಲದರೂಪದಲ್ಲಿ ಆ ಸಂಸ್ಥೆಗಳಿಗೆ ನೀಡಿರುವ ಹಣ ಎಷ್ಟು ಎಂದು ಕೇಳಿದ್ದೇನೆ. 2 ಕೋಟಿ 76 ಲಕ್ಷ ಅಭಿವೃದ್ಧಿ ಸಾಲ, ಬೀಜಧನ ಸಾಲ ಕೊಟ್ಟಿದೆ. ಆದರಲ್ಲಿ 50 ಪರ್ಸೆಂಟ್ ಮರುಪಾವತಿಯಾಗಿದೆ ಎಂದು ತಿಳಿಸಿದ್ದಾರೆ. ಸಂತೋಷ. ಆದರೆ ಮುಖ್ಯ ವಿಷಯ ಏನು ಎಂದರೆ ಈ ಕೈಗಾರಿಕೆಗಳು ವ್ಯವಸ್ಥಿತವಾಗಿ ನಡೆಯುತ್ತಿವೆಯೇ ? ಇದರಲ್ಲಿ ರೋಗಗ್ರಸ್ಥ ಕೈಗಾರಿಕೆಗಳು ಎಷ್ಟು ಎಂದು ಹೇಳಿದ್ದೇನೆ. ಅದಕ್ಕೆ ಬಂದ ಉತ್ತರದಿಂದ ನನಗೆ ಗಾಭರಿಯಾಗುತ್ತಿದೆ. 64 ರೋಗಗ್ರಸ್ಥ ಘಟಕಗಳನ್ನು ಸಮಿತಿಯ ಗುರುತಿಸಿದೆ ಎಂದು ಹೇಳಿದ್ದೀರಿ. ಇತರ ರೋಗಗ್ರಸ್ತ ಘಟಕಗಳನ್ನು ಗುರುತಿಸುವ ಕೆಲಸ ನಡೆದಿದೆ ಎಂದು ತಿಳಿಸಿದ್ದಾರೆ. ಈ ನಿಂತುಹೋದ ರೋಗಗ್ರಸ್ಥ ಕೈಗಾರಿಕೆಗಳಿಂದಾಗಿ ಕಾರ್ಮಿಕರಿಗೆ ಉದ್ಯೋಗದ ಭರವಸೆ ತಪ್ಪಿಹೋಗುತ್ತಿದೆ. ಅದಕ್ಕೆ ಕಾರಣ ಏನು ಎನ್ನುವ ಶೋಧನೆ ಏನಾದರೂ ನಡೆದಿದೆಯೆ ? ಈ ಕೈಗಾರಿಕೆಗಳಿಗೆ ಬೇಕಾದಂಥ ರಾ ಮೆಟೀರಿಯಲ್ ಮತ್ತು ವಿದ್ಯುತ್ ಸರಿಯಾಗಿ ಸಿಗದೇ ಇದ್ದ ಕಾರಣ ರಾ ಮೆಟೀರಿಯಲ್‌ಗೆ ಉಳಿದ ಪ್ರಾಂತ್ಯದಲ್ಲಿ ಇದ್ದುದಕ್ಕಿಂತ ನಮ್ಮಲ್ಲಿ ತೆರಿಗೆ ಹೆಚ್ಚಾಗಿರುವ ಕಾರಣ ಈ ಘಟಕಗಳು ನಿಂತುಹೋಗುತ್ತಿವೆ. ಎನ್ನುವ ಅಭಿಪ್ರಾಯ ಇದೆ. ಈ ದೃಷ್ಟಿಯಿಂದ ನಾನು ಕೇಳುತ್ತಿದ್ದೇನೆ. ಈ ಘಟಕಗಳು ಚೆನ್ನಾಗಿ ನಡೆಯಬೇಕಾಗಿದೆ. ಕಾರ್ಮಿಕರ ನಿರುದ್ಯೋಗ ಸಮಸ್ಯೆ ಏನಿದೆ, ಅದು ಬಗೆಹರಿಯುವುದಕ್ಕೆ

ಇದು ಮಾರ್ಗ. ನಮ್ಮ ಜಿಲ್ಲೆಯಲ್ಲಿರುವಂಥ ದೊಡ್ಡ ದೊಡ್ಡ ಕೈಗಾರಿಕೆಗಳೇನಿವೆ ಆ ಕೈಗಾರಿಕೆಗಳು ಕಾರ್ಮಿಕರನ್ನು ಸಾಕುವಂಥ ಕೈಗಾರಿಕೆಗಳಲ್ಲ. ಸಣ್ಣ ಕೈಗಾರಿಕೆಗಳೇ ನಮ್ಮಲ್ಲಿ ಜೀವನಾಧಾರ. ಈ ದೃಷ್ಟಿಯಲ್ಲಿ ಕಾರ್ಮಿಕರ ಭರವಸೆಗ ಇಂಥ ಘಟಕಗಳ ಸ್ಥಿರವಾದ ಉಳಿಯುವಿಕೆಗೆ ಸರ್ಕಾರದ ಬಳಿ ಏನಾದರೂ ಯೋಜನೆ ಇದೆಯೆ ? ಇದ್ದರೆ ವಿವರಿಸಿ.

ಶ್ರೀ ಎಸ್. ಎಂ. ನಬಿ : ಸನ್ಮಾನ್ಯ ಅಧ್ಯಕ್ಷರೆ, ಘಟಕಗಳ ಹೆಸರುಗಳು ಸದ್ಯಕ್ಕೆ ಲಭ್ಯವಿಲ್ಲ ಎಂದು ಹೇಳಿದ್ದೇವೆ, ಲಭ್ಯವಿಲ್ಲ ಎಂದು ಹೇಳಿಲ್ಲ. ಅವರಿಗೆ ಅದು ಬೇಕೇಬೇಕು ಎಂದು ಹೇಳಿದರೆ ಸಾಯಂಕಾಲದೊಳಗೆ ತರಿಸಿಕೊಡುವ ವ್ಯವಸ್ಥೆ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇನೆ. ಏಕೆಂದರೆ ಸುಮಾರು 10,164 ಘಟಕಗಳಿರುವುದರಿಂದ ಅವನ್ನು ತರಿಸುವುದಕ್ಕೆ ಸ್ವಲ್ಪ ವಿಳಂಬವಾಗಿದೆ. ಆದ್ದರಿಂದ ಸದ್ಯಕ್ಕೆ ಲಭ್ಯವಿಲ್ಲ ಎಂದು ಹೇಳಿದ್ದೇವೆ ಅಷ್ಟೆ. ಆಮೇಲೆ ಈ ರೋಗಗ್ರಸ್ತ ಕೈಗಾರಿಕೆಗಳಿಗೆ ತಾವು ಏನು ಮಾಡುತ್ತೀರಿ ಎನ್ನತಕ್ಕ ಮಾತನ್ನು ಅವರು ಹೇಳಿದ್ದಾರೆ. ಅದಕ್ಕಾಗಿ ಡೈರೆಕ್ಟರ್ ಲೆವೆಲ್‌ನಲ್ಲಿ ಒಂದು ಕಮಿಟಿಯನ್ನು ಮಾಡಿದ್ದೇವೆ. ಅವಕ್ಕೆ ಬ್ಯಾಂಕುಗಳ ಮೂಲಕ ಮತ್ತೆ ಪುನಃಚೇತನ ಮಾಡುವುದಕ್ಕೆ ಸಾಲದ ಸೌಲಭ್ಯವನ್ನು ಮತ್ತೆ ಒದಗಿಸಿ ನಾವು ಪ್ರಾಸ್ಸಾಹ ಕೊಟ್ಟು ಮತ್ತೆ ಚಾರಿಯಲ್ಲಿ ತರತಕ್ಕ ಕೆಲಸವನ್ನು ಮಾಡುತ್ತಾ ಇದ್ದೇವೆ. ಅವು ಪೂರಾ ಸಿಂತೇ ಹೋಗಿರತಕ್ಕ ರೋಗಗ್ರಸ್ತ ಕೈಗಾರಿಕೆಗಳನ್ನು ಹಾಗೂ ಬಹಳಷ್ಟು ಸಾಲ ಮರುಪಾವತಿ ಮಾಡದೇ ಇರತಕ್ಕ ಕಾರ್ಖಾನೆಗಳಿಗೆ ನಾವು ಏನೂ ಮಾಡುವುದಕ್ಕೆ ಸಾಧ್ಯ ಆಗುತ್ತಾ ಇಲ್ಲ ಎನ್ನತಕ್ಕ ಮಾತನ್ನು ಹೇಳುತ್ತಾ ಇದ್ದೇನೆ. ಇನ್ನು ಈ ಒಂದು ಘಟಕಗಳು ನಿಂತಿರುವುದಕ್ಕೆ ಸಣ್ಣ ಕೈಗಾರಿಕೆ ಉದ್ದಿಮೆಯ ಸಚಿವನಾದ ನನಗೂ ಕೂಡ ನೋವಿದೆ. ಆದರೂ ಅವಕ್ಕೆ ಎಷ್ಟರಮಟ್ಟಿಗೆ ನಾವು ಪ್ರೋತ್ಸಾಹ ಕೊಟ್ಟು ಚಾಲನೆ ಕೊಡುವುದಕ್ಕೆ ಸಾಧ್ಯವಾಗುತ್ತದೆಯೋ ಆ ಎಲ್ಲಾ ಪ್ರಯತ್ನ ನಾವು ಮಾಡುತ್ತಾ ಇದ್ದೇವೆ ಎನ್ನತಕ್ಕ ಮಾತನ್ನು ನಾನು ಮಾನ್ಯ ಸದಸ್ಯರಿಗೆ ಹೇಳುವುದಕ್ಕೆ ಬಯಸುತ್ತೇನೆ.

ಅಧ್ಯಕ್ಷರು : ನಬಿಯವರೇ ವಿವರಗಳು ಲಭ್ಯವಾಗದೇ ಇರುವುದಕ್ಕೂ ಸಾಲ ಮರುಪಾವತಿ ಆಗದೇ ಇರುವುದಕ್ಕೂ ಏನಾದರೂ ಸಂಬಂಧ ಇದೆಯೇ ಎಂದು ನೋಡಿ.

ಶ್ರೀ ಬಿ. ಎಸ್. ಯಡಿಯೂರಪ್ಪ : ಇಲ್ಲೇನಾಗಿದೆ, ಸಣ್ಣ ಕೈಗಾರಿಕೆಗಳಿಗೆ ಸಬ್ಸಿಡಿ ಏನು ಕೊಡಬೇಕಾಗಿದಿದೆ ಅದರ ಆಧಾರದ ಮೇಲೆ ಕೈಗಾರಿಕೆಗಳು ನಡೆಯುತ್ತಾ ಇವೆ. ಎರಡು ವರ್ಷವಾದರೂ ಸಬ್ಸಿಡಿ ಕೊಟ್ಟಿಲ್ಲ. ಇದು ದಕ್ಷಿಣ ಕನ್ನಡಕ್ಕೆ ಸೀಮಿತವಾದ ಸಮಸ್ಯೆಯಲ್ಲ. ಇಡೀ ರಾಜ್ಯಕ್ಕೆ ಇರುವ ಸಮಸ್ಯೆ. ಅದಕ್ಕೆ ದಯಮಾಡಿ ಆ ಸಬ್ಸಿಡಿಯನ್ನು ರಿಲೀಸ್ ಮಾಡಿ ಅವರಿಗೆ ಕೊಟ್ಟರೆ ರೋಗಗ್ರಸ್ತ ಕಾರ್ಖಾನೆಗಳನ್ನು ಕಡಿಮೆ ಮಾಡಬಹುದು. ಅವು ತನ್ನ ಕಾಲ ಮೇಲೆ ನಿಲ್ಲುವುದಕ್ಕೆ ಅನುಕೂಲವಾಗಬಹುದು ಇಲ್ಲದೇ ಇದ್ದರೆ ನಿರುದ್ಯೋಗಿ ಯುವಕರು ಸಾಮಾನ್ಯ ಜನ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ನಡೆಸುತ್ತಿದ್ದಾರೆ, ತುಂಬಾ ತೊಂದರೆಯಲ್ಲಿದ್ದಾರೆ. ಎಷ್ಟು ಹಣ ತಾವು ಬಿಡುಗಡೆ ಮಾಡಬೇಕಾಗಿದೆ, ಯಾವಾಗ ಮಾಡುತ್ತೀರಿ ಎಂಬುದನ್ನು ಹೇಳಬಹುದೇ ?

ಶ್ರೀ ಎಸ್. ಎಂ. ನಬಿ : ಮಾನ್ಯ ವಿರೋಧಪಕ್ಷದ ನಾಯಕರು ಹೇಳಿದಂಥ ಮಾತು ಸ್ವಾಗತ ಮಾಡತಕ್ಕದ್ದು. ನಾನೂ ಕೂಡ ನಮ್ಮ ಅಧಿಕಾರಿಗಳಿಗೆ ಆ ಒಂದು

ಸಬ್ಸಿಡಿ ಹಣವನ್ನು ಅವರಿಗೆ ಸಾಲ ಕೊಡತಕ್ಕ ಸಮಯದಲ್ಲೇ ಲಭ್ಯ ಮಾಡತಕ್ಕದ್ದು ಬಹಳ ಉತ್ತಮವಾದುದು. ಅದಕ್ಕೆ ನಾವು ಒಂದು ಕಾರ್ಯಕ್ರಮವನ್ನು ರೂಪಣೆ ಮಾಡೋಣ ಎನ್ನತಕ್ಕ ಮಾತನ್ನು ಹೇಳಿದ್ದೇನೆ. ಬ್ಯಾಕ್‌ಲಾಗ್ ಇರತಕ್ಕದ್ದು ಕೂಡ ಆದಷ್ಟು ಬೇಗ ಪೂರ್ಣ ಮಾಡಬೇಕು ಎನ್ನತಕ್ಕ ಪ್ರಯತ್ನ ನಡೆದಿದೆ.

ಶ್ರೀ ಕುಂಬಳೆ ಸುಂದರರಾವ್ : ಈ ರೋಗಗ್ರಸ್ತ ಘಟಕಗಳೇನಿದ್ದಾವೆ ಅವುಗಳು ನಿಂತುಹೋಗುವುದಕ್ಕೆ ಅಥವಾ ರೋಗಪೀಡಿತವಾಗುವುದಕ್ಕೆ ಮುಖ್ಯ ಕಾರಣವಿದ್ಯುತ್ತು ಎಂದು ತಮಗೂ ಗೊತ್ತಿದೆ. ಮಂಗಳೂರಿನಲ್ಲಿ ಒಂದು ಕಾರ್ಯಕ್ರಮ ನಡೆದಾಗ ನೀವು ನಾವು ಜೊತೆಯಲ್ಲಿ ಭಾಗವಹಿಸಿದ್ದೆವು. ಅವರಿಗೆ ಸರಿಯಾಗಿ ವಿದ್ಯುತ್ ಸರಬರಾಜಾಗಿ ಏನು ರೋಗ ಬಂದಿವೆ ಅವು ಆರೋಗ್ಯ ಹೊಂದುವುದಕ್ಕೆ ಒಂದು ವ್ಯವಸ್ಥೆ ಮಾಡುವ ಯೋಜನೆ ಏನಾದರೂ ಇದೆಯೇ ? ವಿದ್ಯುತ್ತಿನ ಬಗ್ಗೆ ಪ್ರತ್ಯೇಕವಾಗಿ ಕೇಳುತ್ತಿದ್ದೇನೆ.

ಅಧ್ಯಕ್ಷರು : ಪಟೇಲರ ಜೊತೆ ಮಾತನಾಡಿ ವ್ಯವಸ್ಥೆ ಮಾಡುತ್ತೇನೆ ಎಂದು ಹೇಳಿ.

ಶ್ರೀ ಎನ್. ಎಂ. ನಬಿ : ಮಾನ್ಯ ಸಭಾಧ್ಯಕ್ಷರೇ ನನ್ನ ಪರವಾಗಿ ಉತ್ತರ ಹೇಳಿದ್ದೀರಿ ತಾವು ಹೇಳಿದಹಾಗೆ ಅಲ್ಲಿ ಒಂದು ಸಭೆಯನ್ನು ಮಾಡಿದ್ದೇವೆ. ಅಲ್ಲಿರತಕ್ಕವರು ವಿದ್ಯುತ್ ಅಭಾವ ಇದೆ ಎನ್ನತಕ್ಕ ಮಾತನ್ನು ಹೇಳಿದ್ದಾರೆ. ನಾನು ಮಾನ್ಯ ವಿದ್ಯುತ್ ಸಚಿವರ ಹತ್ತಿರ ಆ ವಿಷಯವನ್ನು ಪ್ರಸ್ತಾಪ ಮಾಡಿದ್ದೇನೆ. ಆದಷ್ಟು ಬೇಗ ಅದಕ್ಕೆ ಏನಾದರೂ ಒಂದು ವ್ಯವಸ್ಥೆ ಮಾಡೋಣ ಎನ್ನತಕ್ಕ ಮಾತನ್ನು ಹೇಳಿದ್ದಾರೆ. ಅವರ ಜೊತೆಗೆ ಇನ್ನೊಂದು ಸಾರಿ ಪ್ರಸ್ತಾಪ ಮಾಡಿ ಅವರಿಗೆ ಅನುಕೂಲ ಮಾಡುತ್ತೇವೆ ಎನ್ನತಕ್ಕ ಮಾತನ್ನು ಹೇಳುತ್ತೇನೆ.

**ವಿಷಯ : ಹುಬ್ಬಳ್ಳಿ - ಧಾರವಾಡದಲ್ಲಿ ಕುಡಿಯುವ ನೀರಿನ ಸಮಸ್ಯೆ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 202 (376)

ಶ್ರೀ ಅಶೋಕ ಕಾಟ್ವೆ (ಹುಬ್ಬಳ್ಳಿ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ) ಹುಬ್ಬಳ್ಳಿ ಧಾರವಾಡ ಮಹಾನಗರಸಭೆ ಹಾಗೂ ಜಲಮಂಡಳಿಯ ಪರಸ್ಪರ ಅಸಹಕಾರ ಹಾಗೂ ಹೊಣೆಗೇಡಿತನದಿಂದಾಗಿ ನೀರಿನ ಪೂರೈಕೆಯಲ್ಲಿ ಭಾರೀ ಕೊರತೆಯುಂಟಾಗಿ ಜನರು ತೀವ್ರ ಕಷ್ಟಕ್ಕೊಳಗಾಗಿರುವುದು ಸರಕಾರದ ಗಮನಕ್ಕೆ ಬಂದಿದೆಯೇ ?

ಆ) ಹಾಗಿದ್ದಲ್ಲಿ ಈ ಸಮಸ್ಯೆ ನಿವಾರಿಸಲು ಸರ್ಕಾರ ಕೈಗೊಳ್ಳಲು ಉದ್ದೇಶಿಸಿರುವ ಕ್ರಮಗಳೇನು ?

ಶ್ರೀ ವೈಜಾನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು ):

ಅ) ಇಲ್ಲ.

ಆ) ಉದ್ಭವಿಸುವುದಿಲ್ಲ.

ಶ್ರೀ ಅಶೋಕ್ ಕಾಟ್ವೆ : ಸನ್ಮಾನ್ಯ ಅಧ್ಯಕ್ಷರೆ, ಹುಬ್ಬಳಿ - ಧಾರವಾಡ ಮಹಾನಗರದಲ್ಲಿ ಕಳೆದ ಹತ್ತು ವರ್ಷಗಳಿಂದ ನೀರಿನ ಬವಣೆ ಎಲ್ಲರಿಗೂ ಗೊತ್ತಿದ್ದ ಸಂಗತಿ. ಜಲಮಂಡಲಿ ಮತ್ತು ಕಾರ್ಪೊರೇಷನ್ನಿನ ಅಧಿಕಾರಿಗಳಲ್ಲಿ ಮೇಲಿಂದಮೇಲೆ ಅಸಹಕಾರ ತುಂಬಿಹೋಗಿದೆ. ಆದ್ದರಿಂದ ನಾನು ಕಾರ್ಪೊರೇಷನ್ನಿನ ಉಪ ಮಹಾಪೌರನಿದ್ದಾಗ ಕಾರ್ಪೊರೇಷನ್‌ನಲ್ಲಿ ಕಾರ್ಪೊರೇಟರ್ ಇದ್ದಾಗ ಕೆಲವೊಂದು ಸಲ ಮಂತ್ರಿಗಳಿಗೆ ಭೇಟಿಯಾಗಿ ಈ ರೀತಿ ಜಲಮಂಡಳಿ ಮತ್ತು ಕಾರ್ಪೊರೇಷನ್ನಿನ ಅಧಿಕಾರಿಗಳ ಬಗ್ಗೆ ಮೇಲಿಂದ ಮೇಲೆ ಅಸಹಕಾರ ಬರುತ್ತಿತ್ತು ಎನ್ನುವುದನ್ನು ತಿಳಿಸಿದ್ದೇನೆ. 271 ಕಡೆ ಜಲಮಂಡಳಿಯ ಪೈಪುಗಳು ಕೆಟ್ಟುಹೋಗಿವೆ. ಆದರೆ ಕಾರ್ಪೊರೇಷನ್ನಿನವರಿಗೆ ಜನ ನೀರು ಕೇಳುತ್ತಾರೆ. ನೀರು ಕೇಳಿದರೆ ಕಾರ್ಪೊರೇಷನ್ನಿನವರು ಜಲಮಂಡಳಿ ಮೇಲೆ ಹಾಕುತ್ತಾರೆ. ಜಲಮಂಡಳಿಯವರನ್ನು ಕೇಳಿದರೆ ಕಾರ್ಪೊರೇಷನ್ ಮೇಲೆ ಹಾಕುತ್ತಾರೆ. ಇದರ ಹಿಂದೆ ಮಾಜಿ ಮುಖ್ಯಮಂತ್ರಿಗಳಾದಂಥ ಬೊಮ್ಮಾಯಿಯವರ ಕಡೆ ಎಷ್ಟೋ ಸಲ ನಿಯೋಗ ತೆಗೆದುಕೊಂಡು ಹೋಗಿ ಅಸಹಕಾರ ಈ ರೀತಿ ಇದೆ ಎಂದು ಹೇಳಿ ಬಂದಿದ್ದೇವೆ. ಅದೇ ರೀತಿ ನಮ್ಮ ಪೌರಾಡಳಿತ ಮಂತ್ರಿಗಳಾಗಿದ್ದ ಚಂದ್ರಶೇಖರ್ ಅವರ ಹತ್ತಿರವೂ ಸಹ ತಿಳಿಸಲಾಗಿತ್ತು.

ಅಧ್ಯಕ್ಷರು : ಅಲ್ಲ, ನೀವು ಪ್ರಶ್ನೆ ಕೇಳಬೇಕು. ಭಾಷಣ ಮಾಡಿದರೆ ಹೇಗೆ ?

ಶ್ರೀ ಅಶೋಕ್ ಕಾಟ್ವೆ : ಇದು ಸರ್ಕಾರದ ಗಮನಕ್ಕೆ ಬಂದಿಲ್ಲ ಎಂದು ಹೇಳಿ ತಿಳಿಸಿದ್ದಾರೆ.

ಅಧ್ಯಕ್ಷರು : ಹೀಗಾದರೆ ನಾವು ಕ್ವೆಶ್ಚನ್ ಅವರ್ ಮೂರು ಮೂರು ಗಂಟೆ ಮಾಡಬೇಕಾಗುತ್ತದೆ.

ಶ್ರೀ ವೈಜನಾಥ ಪಾಟೀಲ್ : ಈ ಎರಡು ಕರ್ನಾಟಕ ನಗರ ನೀರು ಸರಬರಾಜು ಹಾಗೂ ಒಳಚರಂಡಿ ಮಂಡಲಿ ಹಾಗೂ ಕಾರ್ಪೊರೇಷನ್ ಮಧ್ಯ ಅಸಹಕಾರ ಇದೆ ಅದರ ಸಲುವಾಗಿ ಇದಾಗಿದೆ ಎಂಬುದು ನನ್ನ ಗಮನಕ್ಕೆ ಬಂದಿಲ್ಲ. ಕುಡಿಯುವ ನೀರಿನ ಸಮಸ್ಯೆ ಇದೆ. ಅವರಿಬ್ಬರ ಅಸಹಕಾರದಿಂದ ಈ ವ್ಯವಸ್ಥೆ ಕೆಡಕುತ್ತಾ ಇದೆ ಎಂಬುದು ಗೊತ್ತಿಲ್ಲ. ಅದರೂ ಕೂಡ ಕಾರ್ಪೊರೇಷನ್ ಮತ್ತು ಆ ಜಲ ಮಂಡಲಿಯ ಅಧಿಕಾರಿಗಳನ್ನು ಕರೆಯಿಸಿ ಅದರ ಬಗ್ಗೆ ಚರ್ಚಿಸಿ, ಅದು ಏನಾದರೂ ನಾನ್-ಕೋ-ಅಪರೇಷನ್ ಇದ್ದರೆ, ಅದನ್ನು ಸರಿಪಡಿಸುವುದಕ್ಕೆ ಪ್ರಯತ್ನ ಮಾಡುತ್ತೇನೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಶ್ರೀ ಬಿ. ಎಸ್. ಯಡಿಯೂರಪ್ಪ : ಅವರೇನೂ ಸುತ್ತಿ ಬಳಸಿ ಕೇಳಲಿಲ್ಲ. ಜಲ ಮಂಡಲಿಯಿಂದಲಾದರೂ ಮಾಡಿಸಿ. ಅಥವಾ ಕಾರ್ಪೊರೇಷನ್‌ನಿಂದಲಾದರೂ ಮಾಡಿಸಿ. ಹುಬ್ಬಳಿ ಮಹಾ ದೊಡ್ಡ ನಗರ. ದಯಮಾಡಿ ಒಂದು 15 ದಿವಸದಲ್ಲಿ, 20 ದಿವಸದಲ್ಲಿ ಅವರಿಗೆ ಜವಾಬ್ದಾರಿಯನ್ನು ನಿಗದಿ ಮಾಡಿ, ಕುಡಿಯುವ ನೀರಿನ ಸಮಸ್ಯೆ ಇಲ್ಲದ ಹಾಗೆ ಮಾಡುತ್ತೀರಾ ? ನೀರು ಇದೆ. ಪೈಪು ಸರಿ ಇಲ್ಲ. ಕೆಟ್ಟಿದೆ. ಅವರು ಯಾರಾದರೂ ಸರಿಪಡಿಸಲಿ. ಮಾಡಿಸುತ್ತೇವೆಂದು ಭರವಸೆ ಕೊಡುತ್ತೀರಾ ?

ಶ್ರೀ ವೈಜನಾಥ ಪಾಟೀಲ್ : ಮಾಡಿಸುತ್ತೇನೆ.

ಶ್ರೀ ಬಿ. ಎಸ್ ಯಡಿಯೂರಪ್ಪ : ಎಷ್ಟು ದಿವಸಗಳಲ್ಲಿ ?

ಶ್ರೀ ವೈಜನಾಥ ಪಾಟೀಲ್ : ಒಂದು ವಾರದಲ್ಲಿ ಕರೆಯಿಸಿ ಅದರ ಬಗ್ಗೆ ವ್ಯವಸ್ಥೆ ಮಾಡುತ್ತೇನೆ.

**ವಿಷಯ : ಮೂಡಲಗಿ ಪಟ್ಟಣಕ್ಕೆ ಕುಡಿಯುವ ನೀರಿನ ಯೋಜನೆ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 203 (801)

ಶ್ರೀ ವಿ. ಎಸ್. ಕೌಜಲಗಿ, ( ಅರಭಾವಿ): ಮಾನ್ಯ ನಗರಾಭಿವೃಧಿ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಗೋಕಾಕ್ ತಾಲ್ಲೂಕಿನ ಮೂಡಲಗಿ ಪಟ್ಟಣಕ್ಕೆ ಮೂರು ಕೋಟಿ ಒಂದು ಲಕ್ಷ ರೂ.ಗಳ ವೆಚ್ಚದಲ್ಲಿ ಕುಡಿಯುವ ನೀರಿನ ಯೋಜನೆ ಮಂಜೂರಾಗಿರುವುದು ನಿಜವಲ್ಲವೇ ? ಹಾಗಿದ್ದಲ್ಲಿ ಕಾಮಗಾರಿ ಯಾವ ಹಂತದಲ್ಲಿದೆ.

ಆ. ಹುಡ್ಕೋ ಸಂಸ್ಥೆಯಿಂದ ಈ ಯೋಜನೆಗೆ ಪಡೆಯಲು ಉದ್ದೇಶಿಸಿರುವ ಅಥವಾ ಪಡೆದುಕೊಂಡ ಸಾಲದ ಮೊತ್ತ ಎಷ್ಟು ?

ಇ. ಈ ಯೋಜನೆಯನ್ನು ಪೂರ್ಣಗೊಳಿಸಲು ಸರ್ಕಾರಕ್ಕೆ ಎಷ್ಟು ಕಾಲಾವಕಾಶ ಬೇಕಾಗುವುದು ?

ಶ್ರೀ ವೈಜನಾಥ ಪಾಟೀಲ್ ( ನಗರಾಭಿವೃದ್ಧಿ ಸಚಿವರು ) :

ಅ. ಹೌದು, ಈ ಯೋಜನೆಯ ವಿವರವಾದ ಅಂದಾಜನ್ನು ತಯಾರಿಸಿದ್ದು, ಪುರಸಭೆಯು ತನ್ನ ವಂತಿಕೆಯ 3ನೇ ಒಂದು ಭಾಗದ ಹಣವನ್ನು ಪಾವತಿ ಮಾಡಿದ ನಂತರ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗುವುದು.

ಆ. ಹುಡ್ಕೋ ನಿಗಮದಿಂದ ಈ ಯೋಜನೆಯ ಅಂದಾಜಿನ ಶೇಕಡ 70 ರಷ್ಟು ಹಣವನ್ನು ಸಾಲವಾಗಿ ಪಡೆಯಲು ಉದ್ದೇಶಿಸಲಾಗಿದೆ.

ಇ. ಈ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದ ನಂತರ ಮತ್ತು ಸಕಾಲಕ್ಕೆ ಸರಿಯಾಗಿ ಎಲ್ಲಾ ಮೂಲಗಳಿಂದ ಲಭ್ಯವಾಗುವ ಹಣಕಾಸಿನ ವ್ಯವಸ್ಥೆಯನ್ನು ಆಧರಿಸಿ 3 ವರ್ಷಗಳಿಲ್ಲಿ ಮುಗಿಸಬಹುದಾಗಿದೆ.

ಶ್ರೀ ವಿ. ಎಸ್. ಕೌಜಲಗಿ : ಉತ್ತರದಲ್ಲಿ ಮೂರನೇಯ ಒಂದು ಭಾಗದಷ್ಟು ಹಣವನ್ನು ಕಟ್ಟಬೇಕು. ಅಮೆಲೆ ಎಲ್ಲಾ ಮೂಲಗಳಿಂದ ಲಭ್ಯವಾಗುವ ಹಣಕಾಸಿನ ವ್ಯವಸ್ಥೆಯನ್ನು ಆಧರಿಸಿ 3 ವರ್ಷಗಳಲ್ಲಿ ಮುಗಿಸುತ್ತೇವೆ ಎಂದರೆ ಸಾಧಾರಣ ಇವರ ಅವಧಿ ಎಷ್ಟು ಇದೆ ಎಂಬುದು ನನಗೆ ಗೊತ್ತಾಗುತ್ತಿಲ್ಲ. ಮೂರನೇ ಒಂದು ಭಾಗದಷ್ಟು ಹಣ ಲಭ್ಯವಾಗಬೇಕಾದರೆ ಯಾವ ಪುರಸಭೆಗಳ ಹತ್ತಿರವೂ ಹಣ ಇಲ್ಲ ಎಂದು ಮಾನ್ಯ ವಿರೋಧ ಪಕ್ಷದ ನಾಯಕರು ಹೇಳಿದರು. ಮೂರು ವರ್ಷಗಳ ಅವಧಿಯಲ್ಲಿ ಎಷ್ಟು ಎಸ್ಕಲೇಷನ್ ಆಗುತ್ತದೆಂಬುದನ್ನು ವಿಚಾರ ಮಾಡಬೇಕು. ಅತೀ ಮಹತ್ವವಾದುದು ಕುಡಿಯುವ ನೀರಿನದ್ದು. ನಮ್ಮ ವಿರೋಧ ಪಕ್ಷದ ನಾಯಕರು ಹೇಳಿದರು. ಸರ್ಕಾರವೇ ದುಡ್ಡನ್ನು ಭರಿಸಿ ನೀವು ಎಸ್. ಐ. ಸಿ. ಯಿಂದ ದುಡ್ಡು

ತೆಗೆದುಕೊಳ್ಳಿ, ಅಥವಾ ಬೇರೆ ಸಂಸ್ಥೆಗಳಿಂದ ದುಡ್ಡು ತೆಗೆದುಕೊಂಡು ಆದ್ಯತೆ ಮೇರೆಗೆ ಒಂದು ಮಾನವೀಯತೆಯ ದೃಷ್ಟಿಯಿಂದ ತಾವು ಈ ಕಾರ್ಯಕ್ರಮವನ್ನು ತ್ವರಿತವಾಗಿ ಮಾಡುತ್ತೀರೋ ಅಥವಾ ಹೇಗೆ ?

ಶ್ರೀ ವೈಜನಾಥ ಪಾಟೀಲ್ : ಎಲ್ಲಾ ಪುರಸಭೆಗಳದ್ದೂ ಆರ್ಥಿಕ ಸಮಸ್ಯೆ ಇದೆ. ಆದರೆ ಎಲ್ಲಾ ಪುರಸಭೆಗಳವರು. ಮೂರನೇ ಒಂದು ಭಾಗದಷ್ಟು ಹಣವನ್ನು ಕಾಂಟ್ರಿಬ್ಯೂಷನ್ ಮಾಡಬೇಕು, ಅಥವಾ ಸ್ಥಳೀಯ ಸಂಸ್ಥೆಗಳವರು ಎಂಬುದಾಗಿ ಮೊದಲಿನ ಸರ್ಕಾರದವರು ಒಂದು ನಿರ್ಣಯವನ್ನು ತೆಗೆದುಕೊಂಡಿದ್ದಾರೆ. ಅದರ ಬಗ್ಗೆ ಪುನಃ ನಾವು ಪುನರ್ ಪರಿಶೀಲನೆ ಮಾಡಿ, ಒಂದು ಹೊಸ ಪಾಲಿಸಿ ತೀರ್ಮಾನವನ್ನು ತೆಗೆದುಕೊಳ್ಳಬೇಕಾಗಿದೆ. ಆ ರೀತಿಯ ಹೊಸ ಪಾಲಿಸಿ ಡಿಸಿಷ್‌ನ್‌ನ್ನು ತೆಗೆದುಕೊಂಡ ನಂತರ ನಾವು ಅವರುಗಳ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಸಲುವಾಗಿಯಾದರೂ ಆಗಬಹುದು, ಅಥವಾ ಅವರ ಕಾಂಟ್ರಿಬ್ಯೂಷನ್ ಮೂರನೇ ಒಂದು ಭಾಗದಷ್ಟು ತುಂಬ ಬೇಕಾಗಿರುವಂತಹದ್ದು, ಅದನ್ನು ಸರ್ಕಾರದವರೇ ತುಂಬಬೇಕೋ ಹೇಗೆ ಎಂಬುದನ್ನು ಪರಿಶೀಲಿಸಿ ಆದರ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ. ವಿ. ಎಸ್. ಕೌಜಲಗಿ : ಇವರು ಪ್ರತಿಯೊಂದು ಉತ್ತರಕ್ಕೂ ಪರಿಶೀಲಿಸುತ್ತೇವೆ, ಅಂದರೆ ಹೇಗೆ ?

ಶ್ರೀ. ವೈಜನಾಥ ಪಾಟೀಲ್ :. ಪಾಲಿಸಿ ಡಿಸಿಸನ್ ತೆಗೆದುಕೊಳ್ಳಬೇಕಾಗಿದೆ. ನಿಮ್ಮ ಪುರಸಭೆಗೆ ಒಂದು ತೀರ್ಮಾನ ಮತ್ತೊಂದು ಪುರಸಭೆಗೆ ಇನ್ನೊಂದು ತೀರ್ಮಾನವನ್ನು ತೆಗೆದುಕೊಳ್ಳುವುದಕ್ಕೆ ಬರುವುದಿಲ್ಲ. ಆ ಬಗ್ಗೆ ಒಂದು ಪಾಲಿಸಿ ತೆಗೆದುಕೊಳ್ಳಬೇಕಾಗಿದೆ. ಅದಕ್ಕಾಗಿ ಪರಿಶೀಲಿಸುತ್ತೇವೆಂದು ಹೇಳಿದ್ದೇನೆ.

ಶ್ರೀ ವಿ. ಎಸ್. ಕೌಜಲಗಿ : ಈಗ ಅಧಿವೇಶನ ನಡೆದು ಸುಮಾರು ದಿವಸಗಳಿಂದ ಈ ರೀತಿಯ ಪ್ರಶ್ನೆಗಳನ್ನು ಮಾನ್ಯ ಸದಸ್ಯರು ಕೇಳುತ್ತಿದ್ದಾರೆ. ಇದನ್ನು ನಾನು ಅಬ್ಸರ್ವ್ ಮಾಡುತ್ತಿದ್ದೇನೆ. ತಾವು ಇದನ್ನೇ ಹೇಳುತ್ತಿದ್ದೀರಿ. ತಮ್ಮ ಕ್ಯಾಬಿನೆಟ್‌ನಲ್ಲಿ ಈ ವಿಚಾರವನ್ನು ತಂದು ಹಣಕಾಸಿನ ವ್ಯವಸ್ಥೆಯನ್ನು ಮಾಡುವಂತಹ ಜವಾಬ್ದಾರಿ ಸರ್ಕಾರದ್ದು ಇದೆ. ಬರೀ ಪರಿಶೀಲನೆ ಮಾಡುತ್ತೇವೆಂದರೆ, ಇನ್ನು ಎಷ್ಟು ಪರಿಶೀಲನೆ ಮಾಡುತ್ತೀರಿ ?

ಶ್ರೀ ವೈಜನಾಥ ಪಾಟೀಲ್ : ಮೊದಲಿನ ಸರ್ಕಾರದವರು ಏಕೆ ಈ ರೀತಿಯ ತೀರ್ಮಾನವನ್ನು ತೆಗೆದುಕೊಂಡರೋ ಗೊತ್ತಿಲ್ಲ. ಪುರಸಭೆಯ ಹಣಕಾಸಿನ ಪರಿಸ್ಥಿತಿ ಇಷ್ಟು ಹದಗೆಟ್ಟಿದೆ ಎಂಬುದು ಗೊತ್ತಿದ್ದರೂ ಕೂಡ ಮೊದಲಿನ ಸರ್ಕಾರದವರು ಯಾವ ಪ್ರಕಾರ ಈ ನಿರ್ಣಯ ತೆಗೆದುಕೊಂಡಿದ್ದಾರೋ ಗೊತ್ತಿಲ್ಲ. ತಮಗೇನೂ ಗೊತ್ತಿರಬಹುದು. ಅದು ಮುಂದುವರಿಯುತ್ತಾ ಇದೆ. ಅದನ್ನು ಬದಲಾವಣೆ ಮಾಡುವ ಸಲುವಾಗಿ ನಾವು ಕ್ರಮವನ್ನು ತೆಗೆದು ಕೊಳ್ಳಬೇಕಾಗಿದೆ.

ಶ್ರೀ ಬಿ. ಆರ್. ಯಾವಗಲ್ : ಈ ನಗರದ ಕುಡಿಯುವ ನೀರಿನ ಯೋಜನೆಗೆ ಎಲ್.ಬಿ.ಸಿ.ಯಿಂದ ಸಾಲವನ್ನು ಪಡೆಯುವಾಗಲು ಸಹ ನಿಧಾನವಾಗಿತ್ತು. ಹುದ್ಕೋ ಯೋಜನೆಯಿಂದ ಏನು ಅವರು ಪಡೆಯಬೇಕು ಎಂದು ಹೇಳುತ್ತಿದ್ದಾರೆ, ಅದರಿಂದ ಕಾಸ್ಟ್ ಎಸ್ಕಲೇಷನ್ ಜಾಸ್ತಿಯಾಗಿ ಒಂದು ಕೋಟಿಯಲ್ಲಾಗುವ ಕೆಲಸ ಮೂರು -

ಮೂರು ಕೋಟಿ ಆಗುತ್ತಾ ಇದೆ. ಆದ್ದರಿಂದ ಅದಷ್ಟು ಬೇಗ ಹುಡ್ಕೋದಿಂದ ವ್ಯವಸ್ಥೆ ಮಾಡುತ್ತಿರಾ ? ಇದನ್ನು ಹೇಳುತ್ತಲೇ ಸುಮಾರು 6 ತಿಂಗಳು ಕಳೆದು ಹೋಯಿತು ಅದನ್ನೇನಾದರೂ ಮಾಡುತ್ತೀರೋ ?

ಶ್ರೀ ವೈಜನಾಥ ಪಾಟೀಲ್ : ಮೊದಲಿನ ಸರ್ಕಾರದವರು ಒಂದು ತೀರ್ಮಾನವನ್ನು ತೆಗೆದುಕೊಂಡಿದ್ದಾರೆ. ಮೂರನೇ ಒಂದು ಭಾಗದಷ್ಟು ಹಣವನ್ನು ಕಟ್ಟಬೇಕು ಎಂದು ಪುರಸಭೆಯ ಆರ್ಥಿಕ ಪರಿಸ್ಥಿತಿ ಎಲ್ಲಾ ಕಡೆ ಕೆಟ್ಟು ಹೋಗಿದೆ. ಆದರೂ ಕೂಡ ಮೊದಲಿನ ಸರ್ಕಾರಕ್ಕೆ ಅದರ ಬಗ್ಗೆ ಅರಿವು ಇತ್ತೋ ಅಥವಾ ಇಲ್ಲವೋ ಗೊತ್ತಿಲ್ಲ. ಅವರು ಆ ತೀರ್ಮಾನವನ್ನು ತೆಗೆದು ಕೊಂಡಿದ್ದಾರೆ. ಅದನ್ನು ಬದಲಾಯಿಸಬೇಕಾಗಿದೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಮೊದಲಿನ ಸರ್ಕಾರ ಎಂದು ಹೇಳುತ್ತಿದ್ದಾರೆ. ಅದರ ಹಿಂದಿನ ಸರ್ಕಾರ ಅವರದ್ದೇ ಇತ್ತು, ಅವರು ಏನು ಮಾಡಿದ್ದಾರೆ. ಮೂರನೇ ಒಂದು ಭಾಗದಷ್ಟು ಹಣವನ್ನು ಪುರಸಭೆಯವರು ಕಟ್ಟಬೇಕೆಂಬುದು ಕಳೆದ ಹತ್ತಾರು ವರ್ಷಗಳಿಂದ ನಡೆದುಕೊಂಡು ಬರುತ್ತಿದೆ. ಈ ಹಿಂದಿನ ಸರ್ಕಾರಕ್ಕೆ ಗೊತ್ತಿಲ್ಲ ಅಂದರೆ ಅದರ ಹಿಂದೆ 7 ವರ್ಷ ನಿಮ್ಮ ಸರ್ಕಾರ ಇತ್ತಲ್ಲಾ, ಆಗ ಏನು ಪ್ರಾವಿಷನ್ ಇತ್ತು ಹೇಳಿ ನೋಡೋಣ. ಸುಮ್ಮನೆ ಗೊತ್ತಿಲ್ಲದೆ ಏನನ್ನಾದರೂ ಹೇಳುವುದಕ್ಕೆ ಹೋಗಬೇಡಿ.

## Sub : Sick Industries in the state.

Starred D.A. Question No. 204 (408)

Shri T.B. Jayachandra ( Kallambell ): Will the Minister for small Scale Industries be pleased to state

a. How many small scale Industries are established in the State ? Of them how many are sick and how much investment are made in them ?

b. Whether there is any institute like BIFR for rehabilitation of sick industrial units ?

c. Whether there is need for such an institution ?

d. What action are being taken to rehabilitate sick Small Scale Industries ?

e. What is the action taken by the Govt. for the revival of mini Cement factories coming under the purview of Small Scale Industries ?

Sri. N.M. Nabi ( Minister for Small Scale Industries) :

a. As on 28.2.95, 1,61,774 SSI units are registered in the State. As per the report of RBI as on 31.3.94,

13,950 SSI units are sick, Information about the investment made in these units is not available. However, it is learnt that a sum of Rs. 141.15 crores is the outstanding advance to these units.

b. No

c. Yes

d. There is a state Level Rehabilitation Committee constituted under the Chairmanship of Commissioner for ID & Director of I&C to sanction Seed Margin Money loan not exceeding Rs. 50,000/- in each case for revival of sick units. There is a District Level Rehabilitation Committee constituted under the Charimenship of General Manager, District Industries centre to identify sick SSI units in consultation with the represent atives of Karnataka State Financial Corporation and commercial Banks to revive them.

e. The following are the reliefs extended by the Govt. in respect of Mini Cement Plants.

1. Sales Tax reduced from 14% to 10%.

2. Price preference is available for Stores Purchase Department registered units.

3. Revival proposals can be considered by Financial Institutions.

ಶ್ರೀ ಟಿ.ಬಿ. ಜಯಚಂದ್ರ : ಇದು ಬಹಳ ಪ್ರಾಮುಖ್ಯವಾದ ಪ್ರಶ್ನೆ. ರೋಗಗ್ರಸ್ಥ ಕೈಗಾರಿಕಾ ಘಟಕಗಳಿಗೆ ಪುನಶ್ಚೇತನಮಾಡುವುದಕ್ಕೋಸ್ಕರ ಬಿ.ಎಫ್.ಆರ್. ಮಾದರಿಯ ಸಂಸ್ಥೆಯ ವ್ಯವಸ್ಥೆ ಇದೆ. ಎನ್ನತಕ್ಕಂತಹ ಮಾತನ್ನು ತಾವು ಒಪ್ಪಿಕೊಳ್ಳುತ್ತೀರಿ ಮತ್ತು ಈಗಾಗಲೇ ಈ ವ್ಯವಸ್ಥೆಯಲ್ಲಿ ಏನೇನು ಸೌಲಭ್ಯಗಳನ್ನು ಕೊಡುವುದಕ್ಕೆ ಯಾವ ರೀತಿಯಾದ ಸಮಿತಿ ಇದೆ ಎನ್ನತಕ್ಕ ಮಾತನ್ನು ಹೇಳಿದ್ದೀರಿ. ಅದರಿಂದ ಯಾವುದೇ ಪ್ರಯೋಜನ ಇಲ್ಲ. ನಾನು ಈ ಸಂದರ್ಭದಲ್ಲಿ ಕೇಳತಕ್ಕಂಥದ್ದು ಏನೆಂದರೆ ಇದು ಎಸ್. ಎಸ್. ಐ. ಇಯರ್. ಸಣ್ಣಕೈಗಾರಿಕಾ ವರ್ಷ. ಆದ್ದರಿಂದ ಇಡಿ ರಾಜ್ಯದ ಜನರೆಲ್ಲರೂ ಏನನ್ನು ತಾವು ಘೋಷಣೆ ಮಾಡುತ್ತೀರಾ ಎಂಬುದನ್ನು ನಿರೀಕ್ಷಣೆ ಮಾಡುತ್ತಿದ್ದಾರೆಂದು, ಅದಕ್ಕೋಸ್ಕರ ಬಿ.ಎಫ್.ಆರ್. ಮಾದರಿಯಲ್ಲಿರತಕ್ಕ ಒಂದು ಕ್ವಾಸಿ ಜ್ಯುಡಿಷಿಯಲ್ ಅಥಾರಿಟಿಯನ್ನು ಕ್ರಿಯೇಟ್ ಮಾಡುತ್ತೀರೋ ಇದಕ್ಕೆ ತಾವು ಒಪ್ಪಿಕೊಂಡಿದ್ದೀರೋ ? ಇದನ್ನು ಯಾವಾಗ ಮಾಡುತ್ತೀರಿ ? ಅದರ ರೂಪ ರೇಷೆಗಳೇನು ಎಂಬುದನ್ನು ವಿವರಿಸಬೇಕು ಇನ್ನು ಸಣ್ಣ ಮಿನಿ ಸಿಮೆಂಟ್

ಕೈಗಾರಿಕೆಗಳು ಏನು ಇವೆ. ಅವುಗಳಿಗೆ ಸವಲತ್ತನ್ನು ರಿಯಾಯಿತಿಯನ್ನು ಕೊಟ್ಟಿದ್ದೀರಿ ಕೊಟ್ಟಿಲ್ಲ ಎಂದು ಹೇಳುತ್ತಿಲ್ಲ. ಅದರೆ ಎಲ್ಲಾ ರಾಜ್ಯದಲ್ಲೂ ಕೂಡ 5 ವರ್ಷಗಳ ಅವಧಿಯನ್ನು ನಿಗಧಿ ಮಾಡಿ, 50 ಪರ್ಸೆಂಟ್ ಸೇಲ್ಸ್ ಟ್ಯಾಕ್ಸ್ ಕೊಟ್ಟಿರಬೇಕಾದರೆ. ನೀವು ಮಾತ್ರ ಒಂದು ವರ್ಷಕ್ಕೆ 2.00ರೂ. ಇಳಿಸತಕ್ಕ ಒಂದು ಕೆಲಸವನ್ನು ಮಾಡಿದ್ದೀರಿ. ಇದು ಬಹಳ ಚೌಕಾಸಿಯಾದಂತಹ ವ್ಯವಹಾರವಾಗುತ್ತದೆ. ಸಣ್ಣ ಕೈಗಾರಿಕೆಗಳಲ್ಲಿ ಇಂತಹ ವ್ಯವಸ್ಥೆ ಬೇಡ. ದಯಮಾಡಿ ಬೇರೆ ರಾಜ್ಯದಲ್ಲಿ ಅಂದರೆ ಆಂಧ್ರ, ಕೇರಳ ಆ ರಾಜ್ಯದಲ್ಲಿರುವ ಕೊಟ್ಟಿರುವ ಮಾದರಿಯಲ್ಲಾದರೂ ಕೊಡುತ್ತೆವೆ ಎನ್ನತಕ್ಕಂತಹ ಮಾತನ್ನು ದಯವಿಟ್ಟು ಹೇಳಬೇಕು. ಇನ್ನು 6 ತಿಂಗಳು ಉಳಿದಿದೆ. 200.00 ರೂಗಳಾಗುತ್ತವೆ. ಸಿಮೆಂಟ್‌ನ ಬೆಲೆ. ಸಣ್ಣ ಕೈಗಾರಿಕೆಯಿಂದ ಬರತಕ್ಕ ಸಿಮೆಂಟನ್ನು ಯಾರೂ ಉಪಯೋಗಿಸುತ್ತಿಲ್ಲ. ಗ್ರಾಮಾಂತರ ಪ್ರದೇಶದಲ್ಲಿರತಕ್ಕ ಜನರ ಮಾತ್ರ ಇದನ್ನು ಉಪಯೋಗಿಸುತ್ತಾರೆ. ಗ್ರಾಮಗಳ ದೃಷ್ಟಿಯಿಂದಲಾದರೂ ಈ ತೀರ್ಮಾನವನ್ನು ತೆಗೆದು ಕೊಳ್ಳುತ್ತೀರಾ ?

ಶ್ರೀ ಎಸ್. ಎಂ. ನಬಿ : ಮಾನ್ಯ ಸದಸ್ಯರು ಹೇಳಿದ ಹಾಗೆ ಬಿ.ಐ.ಎಫ್.ಆರ್. ಹೇಗೆ ಇದೆ, ಅದೇ ರೀತಿ ಸಣ್ಣ ಕೈಗಾರಿಕೆಗಳಿಗೆ ಸಂಬಂಧಪಟ್ಟಂತೆಯೂ ಮಾಡಬೇಕು ಎನ್ನುವ ಪ್ರಯತ್ನ ಇದೆ ಎನ್ನತಕ್ಕ ಮಾತನ್ನು ಅವರಿಗೆ ಹೇಳಬಯಸುತ್ತೇನೆ. ನಮ್ಮ ಅಧಿಕಾರಿಗಳನ್ನು ಕರೆದು ಅದರ ಬಗ್ಗೆ ಚರ್ಚೆ ಮಾಡಿ ಒಂದು ತೀರ್ಮಾನವನ್ನು ತೆಗೆದುಕೊಳ್ಳಬೇಕು ಎಂದು ಹೇಳಿದ್ದೇನೆ. ಆದಷ್ಟು ಬೇಗ ಅದನ್ನು ಮಾಡುತ್ತೇವೆ. ಮಿನಿ ಸಿಮೆಂಟ್ ಕೈಗಾರಿಕೆಗಳ ಬಗ್ಗೆ ನೆರೆ ರಾಜ್ಯಗಳಲ್ಲಿ ಅದಕ್ಕೆ ಬಹಳಷ್ಟು ರಿಯಾಯಿತಿಯನ್ನು ಕೊಟ್ಟಿದ್ದಾರೆ ಎನ್ನುವ ಮಾತನ್ನು ತಿಳಿಸಿದ್ದಾರೆ. ನೆರೆರಾಜ್ಯಗಳಲ್ಲಿರುವ ವ್ಯವಸ್ಥೆ ಬಗ್ಗೆ ಮಾಹಿತಿಯನ್ನು ತರಿಸಿಕೊಂಡು ನಮ್ಮ ಘಟಕಗಳಿಗೂ ಕೂಡ ಎಷ್ಟು ಸವಲತ್ತುಗಳನ್ನು ಒದಗಿಸುವುದಕ್ಕೆ ಸಾಧ್ಯವಾಗುತ್ತದೆಯೋ ಅದನ್ನು ಅವರಿಗೆ ಒದಗಿಸುವುದಕ್ಕೆ ಪ್ರಯತ್ನ ಮಾಡುತ್ತೇವೆ ಎನ್ನತಕ್ಕಂತಹ ಮಾತನ್ನು ಹೇಳುತ್ತೇನೆ.

ಶ್ರೀ ಟಿ.ಬಿ. ಜಯಚಂದ್ರ : ತಾವು ಬೇರೆ ರಾಜ್ಯಕ್ಕೆ ಹೋಗುವುದು ಬೇಕಾಗಿಲ್ಲ. ನನ್ನ ಹತ್ತಿರವೇ ಇದೆಯಲ್ಲಾ ಬೇರೆ ರಾಜ್ಯಗಳಲ್ಲಿ ಏನೇನು ಸವಲತ್ತುಗಳನ್ನು ಕೊಟ್ಟಿದ್ದಾರೆಂಬುದನ್ನು ನಾನು ತಮಗೆ ಕಳುಹಿಸಿಕೊಡುತ್ತೇನೆ. ಅಲ್ಲಿಗೆ ಹೋಗುವುದು ಬೇಕಾಗಿಲ್ಲ. ಇವತ್ತು ಕೊಟ್ಟಿದ್ದಾರೆ. ಆದರ ಆಧಾರದ ಮೇಲೆಯೇ ನಾನು ಈ ಪ್ರಶ್ನೆಯನ್ನು ತಮಗೆ ಕೇಳಿರುವುದು. ದಯಮಾಡಿ ಇದನ್ನು ಒಪ್ಪಬೇಕೆಂಬುದು. ಇದು ಒಂದು ಬಹಳ ಮುಖ್ಯವಾಗಿ ಮಾನ್ಯ ಸಚಿವರಲ್ಲಿ ಕೇಳುವುದು. ಎಲೆಕ್ಟ್ರಿಸಿಟಿ ಒಂದನೇ ಮುಖ್ಯಕಾರಣ ಇವತ್ತು ಈ ಸಣ್ಣ ಕೈಗಾರಿಕೆಗಳು ಸಿಕ್ ಅಗುವುದಕ್ಕೆ ಅದಕ್ಕೋಸ್ಕರ ಸಪರೇಟಾಗಿ ಇಂಡಸ್ಟ್ರೀಸ್‌ಗೆ ಫೀಡರ್ ಕೊಡತಕ್ಕ ವ್ಯವಸ್ಥೆಯನ್ನು ಮಾಡುತ್ತೀರಾ ? ಪವರ್ ಮಿನಿಸ್ಟರ್ ಕೂಡ ಇಲ್ಲೇ ಇದ್ದಾರೆ. ಪ್ರತ್ಯೇಕವಾಗಿ ಇಂಡಸ್ಟ್ರೀಸ್‌ಗಳಿಗೆ ಫೀಡರ್ ಕೊಡುತ್ತೇವೆ ಎಂದು ಮಾನ್ಯಮಂತ್ರಿಗಳು ಉತ್ತರವನ್ನು ಹೇಳಬೇಕು.

ಶ್ರೀ ಎಸ್. ಎಂ. ನಬಿ : ಈಗ ಇರತಕ್ಕ ವ್ಯವಸ್ಥೆಯಲ್ಲಿ ವಿದ್ಯುಚ್ಛಕ್ತಿ ಅಡಚಣೆಗಳಿಂದ ಬಹಳಷ್ಟು ತೊಂದರೆಯಾಗಿರುವ ಬಗ್ಗೆ ಅನೇಕ ದೂರುಗಳು ಬಂದಿವೆ. ಅದನ್ನು ಮಾನ್ಯ ವಿದ್ಯುಚ್ಛಕ್ತಿ ಸಚಿವರ ಜೊತೆ ಪ್ರಸ್ತಾಪ ಮಾಡಿದ್ದೇವೆ. ಆದಷ್ಟು ಬೇಗ ಸರಿಪಡಿಸುತ್ತೇವೆ ಎನ್ನತಕ್ಕ ಮಾತನ್ನು ಈ ಹಿಂದೆ ಹೇಳಿದ್ದೇನೆ. ಮತ್ತೆ ಈಗ ಅದನ್ನೇ ಅವರಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ.

**ವಿಷಯ : ಧಾರವಾಡದಿಂದ ಇತರ ರಾಜ್ಯಗಳಿಗೆ ಕಬ್ಬು ಸಾಗಣೆಕೆಯ ವಿವರ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 205 (809)

ಶ್ರೀ ಶ್ರೀಕಾಂತ ಅಂಬದಗಟ್ಟಿ (ಧಾರವಾಡ ಗ್ರಾಮೀಣ): ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ.

ಅ. ಮಹಾರಾಷ್ಟ್ರ ಹಾಗೂ ಇತರ ರಾಜ್ಯಗಳಿಗೆ ಕಬ್ಬು ಕಳಿಸುವ ಸಮಯದಲ್ಲಿ ಜಿಲ್ಲಾಧಿಕಾರಿಗಳ ಪರಿವಾನಗಿ ಅವಶ್ಯವಿದೆಯ ?

ಆ. ಹಾಗಿದ್ದಲ್ಲಿ ಧಾರವಾಡ ಹಾಗೂ ಇತರ ಜಿಲ್ಲೆಗಳಿಂದ ಪರವಾನಗಿ ಸಹಿತವಾಗಿ ಬೇರೆ ರಾಜ್ಯಗಳಿಗೆ ರವಾನೆಯಾದ ಕಬ್ಬು ಎಷ್ಟು ?

ಇ. ಪರವಾನಗಿ ಪಡೆಯುವ ಪ್ರಕ್ರಿಯೆಯಿಂದ ರೈತರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದ್ದೆಯೆ ? ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರದ ಕ್ರಮಗಳೇನು?

ಶ್ರೀ ಪಿ.ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು):

ಅ. ಇದೆ

ಆ. 1994-95ರ ಸಾಲಿನಲ್ಲಿ ಧಾರವಾಡ ಹಾಗೂ ಇತರೆ ಜಿಲ್ಲೆಗಳಿಂದ ಪರವಾಸಿಗೆ ಸಹಿತವಾಗಿ ಬೇರೆ ರಾಜ್ಯಗಳಿಗೆ ರವಾನೆಯಾದ ಕಬ್ಬಿನ ಪ್ರಮಾಣ ಕೆಳಕಂಡಂತಿದೆ :

| ಜಿಲ್ಲೆ | ಕಬ್ಬು ಕಳುಹಿಸಲಾಗಿರುವ ರಾಜ್ಯದ ಹೆಸರು | ಕಬ್ಬಿನ ಪ್ರಮಾಣ (ಟನ್‌ಗಳಲ್ಲಿ) |
|---|---|---|
| ಧಾರವಾಡ | ಮಹಾರಾಷ್ಟ್ರ | 41920 |
| ಬೆಳಗಾವಿ | ಮಹಾರಾಷ್ಟ್ರ | 220000 |
| ಬಿಜಾಪುರ | - | - |
| ಉತ್ತರಕನ್ನಡ | ಮಹಾರಾಷ್ಟ್ರ | 31714 |
| ಮಂಡ್ಯ | ತಮಿಳುನಾಡು | 3200 |

ಇ) ಈ ಬಗ್ಗೆ ಸರ್ಕಾರಕ್ಕೆ ಯಾವುದೇ ದೂರುಗಳು ಬಂದಿರುವುದಿಲ್ಲ.

ಶ್ರೀ ಶ್ರೀಕಾಂತ ಅಂಬದಗಟ್ಟಿ :- ಮಹಾರಾಷ್ಟ್ರ ಮತ್ತು ಉತ್ತರ ರಾಜ್ಯಗಳಿಗೆ ಕಬ್ಬು ಕಳುಹಿಸುವುದಕ್ಕೆ ಜಿಲ್ಲಾಧಿಕಾರಿಗಳ ಪರವಾನಿಗೆ ಅವಶ್ಯಕ ಎಂಬುದಾಗಿ ಕೇಳಿದ್ದೇನೆ. ಇದು ನಿಜವೇ? ರೈತರ ಮೇಲೆ ಈ ನಿರ್ಬಂಧವನ್ನು ಏಕೆ ಹಾಕಿದ್ದಾರೆಂಬುದನ್ನು ಸನ್ಮಾನ್ಯ ಸಚಿವರು ತಿಳಿಸಬೇಕು.

ಶ್ರೀ ಪಿ. ಸಿ. ಸಿದ್ದನಗೌಡರ್ : ಮಾನ್ಯ ಸದಸ್ಯರು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳುತ್ತಿದ್ದೇನೆ. ಇದರ ಬಗ್ಗೆ ನಿರ್ಬಂಧ ಹಾಕಲೇಬೇಕಾಗುತ್ತದೆ. ಏಕೆಂದರೆ ಈ ಸಕ್ಕರೆ ಕಾರ್ಖಾನೆಯ ಏರಿಯಾದಲ್ಲಿ ಕೆಲವು ಲಿಮಿಟೆಡ್ ಏರಿಯಾ ಇರುತ್ತವೆ. ಅವುಗಳು ಬೇರೆ ರಾಜ್ಯಗಳಿಗೆ ಹೋಗುವಾಗ ಸಂಬಂಧಪಟ್ಟ ಸಕ್ಕರೆ ಕಾರ್ಖಾನೆಯವರ ಪರ್ಮಿಷನ್

ಇಲ್ಲದೆ ಕಳುಹಿಸಿದರೆ ನಾಳೆ ಆ ಕಾರ್ಖಾನೆ ಬಂದ್ ಆಗಬಹುದು. ಆದರ ಉದ್ದೇಶ ನಮ್ಮ ಸರ್ಕಾರ ಬಂದ ಮೇಲೆ ಜನವರಿ ತಿಂಗಳಲ್ಲಿ ಕಬ್ಬನ್ನು ಬೇರೆ ರಾಜ್ಯಗಳಿಗೆ ಕಳುಹಿಸಬಹುದು ಎನ್ನತಕ್ಕ ಆದೇಶವನ್ನು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಕಳುಹಿಸಿದೆ ಆದರೆ ನಾವು ನಿರ್ಭಂದ ಹಾಕಬೇಕು. ಮಹಾರಾಷ್ಟ್ರಕ್ಕೆ ಎಷ್ಟು ಹೋಗಿದೆ ಎಂದು ಕೇಳಿದ್ದೀರಿ. ಧಾರವಾಡದಿಂದ ಎಷ್ಟು ಹೋಗಿದೆ ಬೆಳಗಾಂದಿಂದ ಎಷ್ಟು ಹೋಗಿದೆ ಎನ್ನುವ ವಿವರವನ್ನು ಈಗಾಗಲೇ ನಿಮಗೆ ಕೊಟ್ಟಿದ್ದೇನೆ. ಅಂದರೆ ಲೆಕ್ಕಚಾರವಿಲ್ಲವೆಂದರೆ ನಮ್ಮ ಕಂಟ್ರೋಲ್ ಆಗುವುದಿಲ್ಲ. ಅದಕ್ಕೆ ತೊಂದರೆಯೇನೂ ಇಲ್ಲ. ಎಲ್ಲಾ ಜಿಲ್ಲೆಗಳಿಗೆ ಆದೇಶ ಕೊಟ್ಟಿದ್ದೇವೆ, ಆ ರೀತಿ ಮಾಡಿದ್ದೇವೆನ್ನುವ ಮಾತನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

## 10.50 ಪಿ.ಎಂ.

ಶ್ರೀ ಶ್ರೀಕಾಂತ ಅಂಬದಗಟ್ಟಿ : ಧಾರವಾಡ ಜಿಲ್ಲೆಯ ಕಲಘಟಗಿ ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕು, ಬೆಳಗಾಂ ಜಿಲ್ಲೆಯ ಖಾನಾಪುರ ಮತ್ತು ಬೈಲಹೊಂಗಲ ತಾಲ್ಲೂಕುಗಳಿಂದ ಸುಮಾರು 6ರಿಂದ7 ಲಕ್ಷ ಟನ್ ಕಬ್ಬು ಮಹಾರಾಷ್ಟ್ರಕ್ಕೆ ಈಗ ಹೋಗುತ್ತಿದೆ. ಪ್ರತಿಯೊಬ್ಬರು 10 ಟನ್ ಕಬ್ಬು ಕಳುಹಿಸಬೇಕಾದರೆ ಒಂದು ಪರ್ಮಿಟ್ ತೆಗೆದುಕೊಳ್ಳಲಿಕ್ಕೆ ಒಬ್ಬ ರೈತ 15-20 ದಿವಸ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಕಾಯಬೇಕಾಗುತ್ತದೆ. ಅವನಿಗೆ ಈಗಲೇ ಸಾವಿರಾರು ರೂಪಾಯಿ ಲುಕ್ಸಾನು ಆಗುತ್ತಿದೆ. ಆ ಕಾರಣಕ್ಕೆ ಬರೀ ಲೆಕ್ಕಾಚಾರ ಮಾಡುತ್ತಿದ್ದರೆ ಬಾರ್ಡರ್‌ನಲ್ಲಿರತಕ್ಕ ಚೆಕ್‌ಪೋಸ್ಟ್‌ನಲ್ಲಿ ಲೆಕ್ಕಾಚಾರವನ್ನು ಪಡೆಯಬಹುದು. ಆ ಕಾರಣಕ್ಕೆ ಪರ್ಮಿಷನ್ ತೆಗೆದುಕೊಳ್ಳುವ ಪದ್ಧತಿಯನ್ನು ತೆಗೆದುಹಾಕಬೇಕೆಂದು ನಾನು ಮಾನ್ಯ ಸಚಿವರಲ್ಲಿ ವಿನಂತಿ ಮಾಡುತ್ತಿದ್ದೇನೆ.

ಶ್ರೀ ಪಿ. ಸಿ. ಸಿದ್ಧನಗೌಡರ್ : ಮಾನ್ಯ ಅಧ್ಯಕ್ಷರೇ, ತೊಂದರೆ ಇದ್ದರೆ ನಿವಾರಣೆ ಮಾಡಬಹುದು. ಆದರೆ ರಿಸ್ಟ್ರಿಕ್ಷನ್ ತೆಗೆಯುವುದಕ್ಕೆ ಬರುವುದಿಲ್ಲ. ಇದು ಎಲ್ಲರಿಗೂ ಗೊತ್ತಿದೆ, ಆದರಲ್ಲೂ ಷುಗರ್ ಫ್ಯಾಕ್ಟರಿ ನಡೆಸುವವರಿಗೆ ಚೆನ್ನಾಗಿ ಗೊತ್ತಿದೆ. ಏಕೆಂದರೆ ಲಿಮಿಟೇಷನ್ ಇರಬೇಕು ಏರಿಯಾದ್ದು. ಅದಕ್ಕೆ ತೊಂದರೆಯಾಗದ ಹಾಗೆ ನೋಡತಕ್ಕದ್ದು ನಮ್ಮದು ಜವಾಬ್ದಾರಿಯಿದೆ. ಜಿಲ್ಲಾಧಿಕಾರಿಗಳಿಂದ ತಹಶೀಲ್ದಾರ್‌ರವರಿಗೆ ಬೇಕಾದರೆ ಅಧಿಕಾರವನ್ನು ಕೊಡೋಣ. ಆ ತಾಲ್ಲೂಕಿಗೆ ಹೋಗಿ ನೀವು ಪರ್ಮಿಟ್ ತೆಗೆದುಕೊಳ್ಳಿ ಎಲ್ಲಿಯಾದರು ತೊಂದರೆಯಿದ್ದರೆ ನನ್ನ ಗಮನಕ್ಕೆ ತನ್ನಿ ನಾನು ವ್ಯವಸ್ಥೆ ಮಾಡುತ್ತೇನೆ.

ಶ್ರೀ ಶ್ರೀಕಾಂತ ಅಂಬದಗಟ್ಟಿ : ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಪರ್ಮಿಟ್ ತೆಗೆದುಕೊಳ್ಳುವುದಕ್ಕೆ ಬಹಳ ತೊಂದರೆಯಾಗುತ್ತಿದೆ. ನಾನು ಕೇಳುವುದು ಹೋಬಳಿಮಟ್ಟದಲ್ಲಿ ಯಾವುದಾದರೂ ಒಬ್ಬ ಅಧಿಕಾರಿಯನ್ನು ನೇಮಿಸಿ ಹೋಬಳಿಮಟ್ಟದಲ್ಲಿಯೇ ಪರ್ಮಿಷನ್ ಕೊಡುವ ವ್ಯವಸ್ಥೆಯನ್ನು ಮಾಡಬೇಕು.

ಶ್ರೀ ಪಿ. ಸಿ. . ಸಿದ್ಧನಗೌಡರ್: ಹೋಬಳಿಮಟ್ಟದಲ್ಲಿ ಮಾಡುವುದಕ್ಕಾಗುವುದಿಲ್ಲ. ಆಮೇಲೆ ಗ್ರಾಮಮಟ್ಟದಲ್ಲಿ ಕೇಳುತ್ತೀರಿ. ತಾಲ್ಲೂಕುಮಟ್ಟದಲ್ಲಿ ಕೊಡುತ್ತೇವೆ. ತೆಗೆದುಕೊಂಡು ಹೋಗಿ ಅದರಲ್ಲಿ ಏನಿದೆ?

## Sub: Drying up of Bethamanagala Tank

Starred Question No. : 206(1284)

Sri S.Rajendran (K.G.F.) : Will the Minister for Urban Development be pleased to state

1. Wheather the government is aware of the fact that the Bethamangala Tank is the only water source to the K.G.F?

2. If, so whether it has come to the notice of the Govt., that the Bethamangala Tank has cried up for the first time since 14 years?

3. If so, the immediate steps prorosed to be taken by the Government to provide drinking water to K.G.F.?

Sri Vaijanath Patil (Minister for Urban Development) :

1. Besides Bethamangala Tank which is the main source, there are good number of Borewells also from which water is supplied.

2. No. There is possibility of tank drying up shortly

3. Action has already been taken to start the emergent water supply scheme to the town at a cost of Rs. 28.00 Lakhs. In order to draw and utilise the dead water storage in Bethamangala tank, a proposal has been prepared at an estimated cost of Rs. 4.55 lakhs, to be takenup under scarcity relief works.

Also, 45 borewells with power pumps and 115 borewells with hand pumps are functioning. In addition new borewells are drilled under 94-95 scarcity relife works and action has been taken to harness them with handpumps. Action will be taken to supply water through tankers in water scarcity areas if necessary.

Sri S.Rajendran : The answer given is not at all satisfactory. . I have clearly asked whether the Government is aware of the fact the tank has dried up for the first time since 14 years, the Hon'ble Minister said 'No'.

This fact I have brought to the notice of the Minister in-charge of Kolar three months back. It is essential that desilting should be done. If it is not done, the entire K.G.F. people will die without water. There is a possibility of getting diseasses, because surrounding KGF area, cynide is located. Due to that, the dust is floating in the water. The people are drinking this water and getting lung problems, kidney problems and heart problems and death rate is also increasing. I have clearly expalined this to the Hon' ble Minister in-charge of Kolar and to the Deputy Commissioner. The Hon'ble Minister is negligent and Casual.

Mr. Speaker : I understand your anxiety.

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಸಭಾಧ್ಯಕ್ಷರೇ, ಬೇತಮಂಗಲ ಟ್ಯಾಂಕ್‌ನಲ್ಲಿ ಈ ವರ್ಷ ಮಳೆಯ ಅಭಾವದಿಂದ ನೀರು ಕಡಿಮೆಯಾಗಿದೆ. ಈತನಕ ಡ್ರೈ ಅಫ್ ಆಗಿಲ್ಲ. ಆಗುವ ಚಾನ್ಸಸ್ ಇದೆ. ಸರ್ಕಾರದವರು ಹೆಚ್ಚು ಬೋರ್‌ವೆಲ್‌ಗಳನ್ನು ಮಾಡುವುದಕ್ಕೆ ಯೋಜನೆಗಳನ್ನು ಹಾಕಿಕೊಂಡಿದ್ದೇವೆ. ಈಗಾಗಲೇ ಹೊಸ ಬೋರ್‌ವೆಲ್‌ಗಳನ್ನು ತೆಗೆದುಕೊಳ್ಳುತ್ತಿದ್ದೇವೆ. ಈ ಎಲ್ಲದ್ದರಿಂದ ಆಗದಿದ್ದರೆ ಟ್ಯಾಂಕರ್‌ನಿಂದ ನೀರು ಸಪ್ಲೈ ಮಾಡತಕ್ಕ ಉದ್ದೇಶವಿದೆ.

Sri S. Rajendran : Sir, the special Component Plan amount has been sanctioned from the Central Government i.e, for Mining areas Rs. 63 lakhs and for non-mining areas Rs. 48 lakhs. But the Hon.Minister has mentioned that Rs. 28 lakhs has been sanctioned. Whether this amount has been released from the Government of Karnataka or whether the Central government has sanctioned this amonut. There is a special component plan fund from central government for those areas where Scheduled Caste, Scheduled Tribe and minority people are there. Last year Rs. 39 lakhs has been lapsed and the amount is sent back. That should not happen again. the Hon'ble Minister has not given satisfactory reply. I request the Hon'ble Minister to give satisfactory reply.

Sri Vaijanath Patil : I could not understand what he wanted to say.

Mr. Speaker : Mr.Rajendran, you and the Hon'ble Minister, can sit together and sort it out

ಶ್ರೀ ಎಸ್. ರಾಜೇಂದ್ರನ್ : ಕನ್ನಡದಲ್ಲಿ ಹೇಳುತ್ತೇನೆ. ಕನ್ನಡದಲ್ಲಿ ಮಾತನಾಡಬೇಕೆಂದು ಆಸೆಯಿದೆ. ಏನೆಂದರೆ 28 ಲಕ್ಷ ರೂಪಾಯಿಗಳನ್ನು ನೀವು ಏನು ಸ್ಯಾಂಕ್ಷನ್ ಮಾಡಿದ್ದೀರಿ. ಈ ಲಕ್ಷ ಸೆಂಟ್ರಲ್ ಗಾರ್ನಮೆಂಟ್ ಅಥವಾ ಸ್ಟೇಟ್ ಗಾರ್ನಮೆಂಟ್‌ನಿಂದ ಸ್ಯಾಂಕ್ಷನ್ ಆಗಿದೆಯೋ ಎಂಬುದನ್ನು ಹೇಳಬೇಕು. ಜೊತೆಗೆ ಸ್ಪೆಷಲ್ ಕಾಂಪೋನೆಂಟ್ ಫಂಡ್ ಇದೆ Government of India is sanctioning that fund for special areas, whereever SC/ST Minority people are located.

ಅದನ್ನು ಗೌರ್ನಮೆಂಟ್ ಆಫ್ ಇಂಡಿಯಾದವರು ಸ್ಯಾಂಕ್ಷನ್ ಮಾಡಿದ್ದಾರೆಯೇ? ಕರ್ನಾಟಕ ಗೌರ್ನಮೆಂಟ್‌ನವರು ಸ್ಯಾಂಕ್ಷನ್ ಮಾಡಿದ್ದಾರೆಯೇ? Why you have not sanctioned the total amount immediately for the essential purpose?

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಅಧ್ಯಕ್ಷರೇ, ಅದು ಸೆಂಟ್ರಲ್ ಗಾರ್ನಮೆಂಟ್ ಅಥವಾ ಸ್ಟೇಟ್‌ಗಾರ್ನಮೆಂಟ್‌ದು ಎಂದು ನಮ್ಮಲ್ಲಿ ಇನ್‌ಫರ್ಮೇಶನ್ ಇಲ್ಲ I will collect information and later I will submit to the Hon.Member

SRI.S. Rajendran : Hon. Minister has said that action will be taken to supply water through tankers in water scarcity areas. K.G.F is totally a water scarcity area. It is very difficult to get water. Ladies and children are wasting half-a -day to fetch a pot of water. Therefore, I request the Hon'ble Minister to provide immediately 5 or 10 tankers to ensure proper supply of drinking water

Mr. Speaker : Arrange for this. I will also come to K.G.F. we will provide water.

ಶ್ರೀ ವಾಟಾಳ್‌ನಾಗರಾಜ್ : ಇದು ಸರಿಯಿಲ್ಲ. ಕೋಲಾರ ಜಿಲ್ಲೆಯವರಾಗಿ ನಮ್ಮ ಕಡೆಗೂ ಬರುತ್ತೇವೆಂದು ಹೇಳಿದಿರಿ. ಸಂತೋಷ, ಬರೀ ಕೋಲಾರ ಜಿಲ್ಲೆಗೆ ಸಮಯ ಕೊಟ್ಟು ಒಳಗೊಳಗೆ ನಿಮ್ಮ ವ್ಯವಹಾರವೇನು? ಇದನ್ನು ನಾವು ಒಪ್ಪುವುದಿಲ್ಲ.

ಅಧ್ಯಕ್ಷರು : ಚಾಮರಾಜನಗರಕ್ಕೂ ಬರುತ್ತೇನೆ. ಆದರೆ ಏನೋ ಒಂದು ಪ್ರತೀತಿ ಇದೆ. ಅಲ್ಲಿಗೆ ಬಂದವರು ತಮ್ಮ ಜಾಗ ಕಳೆದುಕೊಳುತ್ತಾರೆಂದು.

ಶ್ರೀ ವಾಟಾಳ್‌ನಾಗರಾಜ್ : ಇಲ್ಲ ಇಲ್ಲ. ತಾವು ಖಂಡಿತಾ ಬರಬೇಕು. ನಿಮಗೆ ನಾನು ವೈಭವದ ಸ್ವಾಗತ ಕೊರುತ್ತೇನೆ. ಅದೆಲ್ಲಾ ಸುಳ್ಳು.

ಶ್ರೀ ಕೆ.ಎಸ್. ನಾಗೇಗೌಡ : ವಿರೇಂದ್ರಪಾಟೀಲರು ನಿಮ್ಮ ಊರಿಗೆ ಬಂದವರು, ಅಧಿಕಾರ ಕಳೆದುಕೊಂಡರು.

ಶ್ರೀ ವಾಟಾಳ್‌ನಾಗರಾಜ್ : ಇದು ತೀರಾ ಮೂಢನಂಬಿಕೆ. ಇದು ಹೋಗಬೇಕು.

ಅಧ್ಯಕ್ಷರು : ಅಧಿಕಾರ ಹೋದರೂ ಚಿಂತೆಯಿಲ್ಲ ನಾನು ಬರುತ್ತೇನೆ.

ಶ್ರೀ ವಾಟಾಳ್‌ನಾಗರಾಜ್ : ಚಾಮರಾಜನಗರದಿಂದ ಜನರು ಚುನಾವಣೆಯಲ್ಲಿ ನನ್ನನ್ನು ಎರಡನೆಯ ಸಾರಿ ಗೆಲ್ಲಿಸಿದ್ದಾರೆ. ಮೂರನೆಯ ಸಾರಿ ಗೆಲ್ಲಿಸುತ್ತಾರೆ. ಈ ರಾಜ್ಯದ ಮುಖ್ಯಮಂತ್ರಿಯಾದರೂ ಆಗಬಹುದು ಹೇಳುವುದಕ್ಕಾಗುವುದಿಲ್ಲ.

ಅಧ್ಯಕ್ಷರು : ವಿರೂಪಾಕ್ಷಪ್ಪನವರೇ, ತಮ್ಮ ಪ್ರಶ್ನೆ ಕೇಳಿ.

ಶ್ರೀ ಬಿ.ಎಸ್.ಯಡಿಯೂರಪ್ಪ : ಆ ಅಪಾಯ ಕೂಡ ಇದೆ.

ಅಧ್ಯಕ್ಷರು : ಮಾನ್ಯ ಯಡಿಯೂರಪ್ಪನವರು ಹೇಳುತ್ತಾರೆ, ಆ ಅಪಾಯ ವಿದೆಯೆಂದು.

ಶ್ರೀ ವಾಟಾಳ್‌ನಾಗರಾಜ್ : ಹೋದ ಚುನಾವಣೆಯಲ್ಲಿ ಆ ಪಕ್ಷದವರು ಇಬ್ಬರು ಗೆದ್ದಿದ್ದವರು ಈವತ್ತು ಮುಖ್ಯಮಂತ್ರಿಗಳಾಗಿದ್ದಾರೆ. ನಾನು ಏಕೆ ಆಗಬಾರದು?

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು) : ಹಾಗಾದರೆ ನಿಮ್ಮ ಗೌರ್ನಮೆಂಟ್ ಬರುವುದು ಯಾವಾಗ?

ಶ್ರೀ ವಾಟಾಳ್‌ನಾಗರಾಜ್ : ನಾನು ಮುಖ್ಯಮಂತ್ರಿಯಾದರೆ ಮಾನ್ಯ ನಾಣಯ್ಯನವರನ್ನು ಉಪಮುಂತ್ರಿ ಮಾಡಬೇಕೆಂದು ತೀರ್ಮಾನ ಮಾಡಿದ್ದೇನೆ.

ಅಧ್ಯಕ್ಷರು : ಅಂದರೆ ಪಟೇಲರಿಗೆ ಎಲ್ಲಿ ಜಾಗ?

ಶ್ರೀ ವಾಟಾಳ್‌ನಾಗರಾಜ್: ಅವರು ದೊಡ್ಡವರು, ಅವರು ನಮಗೆ ಆಶೀರ್ವಾದ ಮಾಡಿಕೊಂಡು ಇರಲಿ.

**ವಿಷಯ : ಸಿಂಧನೂರು ನಗರದಲ್ಲಿ ಕುಡಿಯುವ ನೀರಿನ ಸಮಸ್ಯೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 207(1094)

ಶ್ರೀ ಕೆ. ವಿರೂಪಾಕ್ಷಪ್ಪ (ಸಿಂಧನೂರು): ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಸಿಂಧನೂರು ನಗರದ ಕುಡಿಯುವ ನೀರನ ಪೂರೈಕೆ ಸರಿಯಾಗಿ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಈ ನಗರದ ನೀರು ಪೂರೈಕೆ ಯೋಜನೆ ಯಾವ ಹಂತದಲ್ಲಿದೆ, ಯಾವಾಗ ಪೂರ್ಣಗೊಳ್ಳುವುದು.

ಇ. ಈ ಮಧ್ಯೆ ಪ್ರಾರಂಭಿಸಿರುವ ಕೆಲಸ ಕಳಪೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಈ. ಬೇಸಿಗೆ ಪ್ರಾರಂಭಗೊಂಡಿರುವುದರಿಂದ ಜನೆವರಿಗೆ ನೀರಿನ ತೊಂದರೆ ನಿವಾರಣೆಗ ಸರ್ಕಾರ ಕೈಗೊಂಡಿರುವ ಕ್ರಮಗಳೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಹೌದು.

ಆ. ಈ ಯೋಜನೆಯು ಪ್ರಗತಿಯಲ್ಲಿದ್ದು ಮೇ 1996ರ ಕೊನೆಗೆ ಪೂರ್ತಿಗೊಳಿಸಲು ನಿಯೋಜಿಸಲಾಗಿದೆ.

ಇ. ಈಗಾಗಲೇ ಪ್ರಗತಿಯಲ್ಲಿರುವ ಕಾಮಗಾರಿಗಳಲ್ಲಿ ಕಳಪೆ ಕೆಲಸ ಮಾಡಿರುವುದು ಕಂಡು ಬಂದಿಲ್ಲ.

ಈ. ಒಂದು ಕಿರುಬಾವಿಯನ್ನು ಹಿರೆ ಹಳ್ಳದಲ್ಲಿ ಹಾಕಲಾಗಿದೆ. ಅದಕ್ಕೆ ಪಂಪು ಜೋಡಿಸಿ ಕೊಳವೆ ಮಾರ್ಗಗಳಿಂದ ಕುಡಿಯುವ ನೀರನ್ನು ಪೂರೈಸಲು ಕ್ರಮ ಕೈಗೊಂಡಿದೆ. ಪಟ್ಟಣದಲ್ಲಿ ಕೊಳವೆ ಬಾವಿಗಳನ್ನು ಕೊರೆದರೆ ನೀರಿನಲ್ಲಿ ಉಪ್ಪಿನಂಶ ಇರುವುದರಿಂದ ಕೊಳವೆ, ಬಾವಿಯನ್ನು ಕೊರೆಯಲು ಹೆಚ್ಚು ಸೂಕ್ತವಲ್ಲದ್ದರಿಂದ ತೊಂದರೆಯಾದ ಸ್ಥಳಗಳಿಗೆ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಲು ಪುರಸಭೆ ವತಿಯಿಂದ ಸೂಕ್ತ ಕ್ರಮ ಮಾಡಲು ಪುರಸಭೆ ವತಿಯಿಂದ ಸೂಕ್ತ ಕ್ರಮ ಕೈಗೊಳ್ಳಲಾಗಿದೆ.

ಶ್ರೀ ಕೆ. ವಿರೂಪಾಕ್ಷಪ್ಪ : ಮಾನ್ಯ ಅಧ್ಯಕ್ಷರೇ, ಸಿಂಧನೂರು ನಗರದ ಕುಡಿಯುವ ನೀರಿನ ತೊಂದರೆಯನ್ನು ಸರ್ಕಾರ ಒಪ್ಪಿಕೊಂಡಿದೆ. ಆದರೆ ಅಲ್ಲಿ ಪ್ರಾರಂಭಿಸಿರುವ ಯೋಜನೆ ಏನಿದೆ ಅದು 1996ರಲ್ಲಿ ನಾವು ಕೊನೆಗೊಳಿಸುತ್ತೇವೆಂದು ಹೇಳಿಕೆ ಕೊಟ್ಟಿದ್ದಾರೆ. ಈ ಯೋಜನೆ ಪ್ರಾರಂಭವಾಗಿ 5 ವರ್ಷ ಕಳೆಯುತ್ತಾ ಬಂತು. ಈ ಯೋಜನೆಗೆ ತುಂಗಭದ್ರ ಎಡದಂಡೆ ಕಾಲುವೆಯಿಂದ ನೀರನ್ನು ಪೈಪು ಮೂಲಕ ತರಬೇಕಾಗಿರುವುದರಿಂದ ಆ ಪೈಪುಲೈನ್ ಇನ್ನು 5 ಕಿಲೋಮೀಟರ್‌ವರೆಗೂ ಕೂಡ ಮಾಡಲಿಲ್ಲ. 15 ಕಿಲೋಮೀಟರ್ ಪೈಪ್‌ಲೈನ್ ಆಗ ಬೇಕಾಗಿದೆ. ಮುಖ್ಯವಾಗಿ ಪೈಪಿನ ಪೂರೈಕೆ ಇಲ್ಲ. ಏಕೆ ಪೂರೈಕೆಯಾಗುತ್ತಿಲ್ಲವೆಂದರೆ ಸರ್ಕಾರದಿಂದ ಬೇಕಾಗಿರತಕ್ಕ ಎಲ್‌ಓಸಿ ಸರಿಯಾಗಿ ಬಿಡುಗಡೆಯಾಗುತ್ತಿಲ್ಲವೆಂದು ನನ್ನ ಗಮನಕ್ಕೆ ಬಂದಿದೆ. ಈ ಬಗ್ಗೆ ಸರ್ಕಾರ ತೀವ್ರ ಗಮನಹರಿಸಿ ಕ್ರಮ ತೆಗೆದುಕೊಳ್ಳಬೇಕೆಂದು ತಮ್ಮ ಮೂಲಕ ಮಾನ್ಯಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತಿದ್ದೇನೆ. ಎರಡನೆಯದಾಗಿ ಈ ಯೋಜನೆಯಲ್ಲಿ ಕೆರೆ ನಿರ್ಮಿಸತಕ್ಕ ಕೆಲಸ ಬಹಳಷ್ಟು ಕಳಪೆಮಟ್ಟದ್ದು ಆಗಿದೆ ಎನ್ನತಕ್ಕ ವಿಚಾರ.

ಅದು ಸರ್ಕಾರದ ಗಮನಕ್ಕೆ ಬಂದಿಲ್ಲವೆಂದು ಹೇಳಿದ್ದಾರೆ. ಮಾನ್ಯ ಅಧ್ಯಕ್ಷರೇ, ಈ ಒಂದು ಕೆರೆ ಕೆಲಸ ಗುತ್ತಿಗೆ ಹಿಡಿಯತಕ್ಕಂಥ ಗುತ್ತಿಗೆದಾರರು ಒಬ್ಬ ಸಬ್ ಕಂಟ್ರಾಕ್ಟರ್ ಕೊಟ್ಟು ಬಹಳಷ್ಟು ಕಳಪೆ ಮಟ್ಟದ ಕೆಲಸ ಮಾಡಿದ್ದಾರೆ ಎಂಬುದು ನಮ್ಮ ಗಮನಕ್ಕೆ ಬಂದಿದೆ.

ಆದಕಾರಣ ಸರ್ಕಾರ ಇದರ ಬಗ್ಗೆ ತನಿಖೆ ಮಾಡಿ ಯೋಗ್ಯ ಕ್ರಮವನ್ನು ತೆಗೆದುಕೊಳ್ಳಬೇಕೆಂಬ ಮನವಿಯನ್ನು ತಮ್ಮ ಮೂಲಕ ಮಾನ್ಯ ಸಚಿವರಿಗೆ ಮಾಡುವುದಕ್ಕೆ ಇಚ್ಛೆಪಡುತ್ತೇನೆ.

ಅಧ್ಯಕ್ಷರು : ನೀವು ಭಾಷಣ ಮಾಡುವುದಕ್ಕೆ ಬರುವುದಿಲ್ಲ.

ಶ್ರೀ ಕೆ. ವಿರೂಪಾಕ್ಷಪ್ಪ : ಈಗ ಬೇಸಿಗೆ ಪ್ರಾರಂಭವಾಗಿರುವುದರಿಂದ ತುಂಬಾ ತೊಂದರೆಯಾಗುತ್ತಿದೆ. ಅದಕ್ಕೆ ಒಂದು ಕಿರಿಬಾವಿಯನ್ನು ತೆಗೆದು ನೀರನ್ನು ಹೊರತೆಗೆಯತಕ್ಕಂಥ ಕೆಲಸ ಮಾಡಿದ್ದೇವೆ ಎಂದು ಮಾನ್ಯ ಮುಂತ್ರಿಗಳು ಹೇಳಿದ್ದಾರೆ. ಒಂದು ಕಿರುಬಾವಿಯಿಂದ ಬೇಸಿಗೆಯಲ್ಲಿ ಕುಡಿಯುವ ನೀರಿನ ಸಮಸ್ಯೆನ್ನು ಬಗೆಹರಿಸುವುದಕ್ಕೆ ಆಗುವುದಿಲ್ಲ. ಆದಕಾರಣ ಇನ್ನೂ ಹೆಚ್ಚಿಗೆ ಹಣವನ್ನು ಬಿಡುಗಡೆ ಮಾಡಿ ಹೆಚ್ಚಿನ ಕಿರುಬಾವಿಗಳನ್ನು ತೆಗೆದು ಅನುಕೂಲವನ್ನು ಪೂರೈಸಬೇಕೆಂದು ನಾನು ತಮ್ಮ ಮೂಲಕ ವಿನಂತಿಮಾಡಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಅಧ್ಯಕ್ಷರೇ, ಈಗ ಪ್ರಗತಿಯಲ್ಲಿರುವ ಕಾಮಗಾರಿಗಳು ಕಳಪೆದರ್ಜೆಯವು ಎಂದು ಮಾನ್ಯ ಸದಸ್ಯರು ಸರ್ಕಾರದ ಗಮನಕ್ಕೆ ತಂದಿದ್ದಾರೆ. ಅವರು ಮಾಡುವ ಅಲಿಗೇಷನ್ ನಿರ್ಧಿಷ್ಟವಾಗಿದ್ದರೆ ಸರ್ಕಾರ ಯಾವ ರೀತಿ ಬೇಕಾದರೂ ಅದರ ಬಗ್ಗೆ ವಿಚಾರಣೆ ಮಾಡುವುದಕ್ಕೆ, ಎನ್‌ಕ್ವೈರಿ ಮಾಡುವುದಕ್ಕೆ ಸಿದ್ಧ ಇದ್ದೆ. ಅದು ಕಳಪೆ ಇದ್ದರೆ ಯಾರ್‍ಯಾರು ಸಂಬಂಧಪಟ್ಟವರು ಇದ್ದಾರೆ, ಅವರ ವಿರುದ್ಧ ಕ್ರಮ ತೆಗೆದುಕೊಳ್ಳುವುದಕ್ಕೆ ಸರ್ಕಾರ ಸಿದ್ಧವಿದೆಯೆಂದು ನಾನು ಈ ಸಂದರ್ಭದಲ್ಲಿ ಆಶ್ವಾಸನೆಯನ್ನು ಕೊಡುತ್ತಿದ್ದೇನೆ. ಬೇರೆ ತೂರೆಬಾವಿಗಳ ಅವಶ್ಯಕತೆ ಹೆಚ್ಚು ಇದ್ದರೆ ಅದರ ಬಗ್ಗೆ ವಿಚಾರ ಮಾಡುವುದಕ್ಕೆ ನಾವು ತಯಾರಿದ್ದೇವೆ. ಕುಡಿಯುವ ನೀರಿನ ಸಲುವಾಗಿ ಕೊಳವೆ ಕಿರುಬಾವಿ ಅಥವಾ ಟ್ಯಾಂಕರ್ ಮೂಲಕ ಯಾವುದೇ ರೀತಿಯಿಂದ ನೀರಿನ ಸರಬರಾಜು ಮಾಡುವುದಕ್ಕೆ ಸರ್ಕಾರ ಸಿದ್ದವಿದೆಯೆಂದು ಮಾನ್ಯ ಸದಸ್ಯರಿಗೆ ತಮ್ಮ ಮೂಲಕ ತಿಳಿಸುತ್ತೇನೆ.

ಶ್ರೀ ಕೆ. ವಿರೂಪಾಕ್ಷಪ್ಪ : ಮಾನ್ಯ ಅಧ್ಯಕ್ಷರೇ, ನಮ್ಮ ಸಿಂಧನೂರು ನಗರಕ್ಕೆ ಕುಡಿಯುವುದಕ್ಕೆ ನೀರು ತುಂಗಭದ್ರಾ ಎಡದಂಡೆ ಕಾಲುವೆಯನ್ನು ಅವಲಂಭಿಸಿರುವುದರಿಂದ ಇದೇ ಏಪ್ರಿಲ್ 8ಕ್ಕೆ ತುಂಗಭದ್ರಾ ಕಾಲುವೆಯನ್ನು ಮುಚ್ಚುವುದರಿಂದ ನಮಗೆ ಬಹಳಷ್ಟು ತೊಂದರೆಯಾಗುತ್ತದೆ. ಆದಕಾರಣ ಬೇಸಿಗೆಯಲ್ಲಿ ಬಹಳ ತೊಂದರೆಯನ್ನು ನಾವು ಸಿಂಧನೂರಿನ ಜನ ಅನುಭವಿಸಬೇಕಾಗುತ್ತದೆ. ಆದ್ದರಿಂದ ಹೆಚ್ಚು ಕಿರುಬಾವಿಗಳನ್ನು ಕೊರೆಯಬೇಕೆಂದು ಮತ್ತು ಹೆಚ್ಚು ನೀರನ್ನು ಒದಗಿಸಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಕೂಡಲೇ ಹೆಚ್ಚಿನ ಬಾವಿಗಳನ್ನು ಕೂಡ ತೊಡಲು ಸರ್ಕಾರ ಸಿದ್ಧವಿದೆಯೆಂದು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಚ್ಛಿಪಡುತ್ತೇನೆ.

**ವಿಷಯ : ಶಿರಾ ಪಟ್ಟಣಕ್ಕೆ ಕುಡಿಯುವ ನೀರಿನ ಕೊರತೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 208 (1286)

ಶ್ರೀ ಬಿ. ಸತ್ಯನಾರಾಯಣ (ಶಿರಾ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಶಿರಾ ಪಟ್ಟಣದಲ್ಲಿ ಕುಡಿಯುವ ನೀರಿನ ತೀವ್ರ ಅಭಾವವಿರುವುದರಿಂದ ಪಟ್ಟಣದ ಜನ ರಸ್ತೆತಡೆ ಮಾಡಿ ಬೀದಿಗೆ ಇಳಿದು ಪ್ರತಿಭಟನೆ ಮಾಡಿರುವ ವಿಚಾರ ಪತ್ರಿಕೆಗಳಲ್ಲಿ ಪ್ರಕಟವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಹಾಗಿದ್ದಲ್ಲಿ ಕುಡಿಯುವ ನೀರಿನ ತೊಂದರೆಯನ್ನು ನಿವಾರಿಸಲು ಸರ್ಕಾರದವರು ಕೈಗೊಂಡಿರುವ ಕ್ರಮವೇನು?

ಇ. ಶಿರಾ ಪಟ್ಟಣಕ್ಕೆ ಶಾಶ್ವತವಾಗಿ ಕುಡಿಯುವ ನೀರು ಒದಗಿಸಲು ಯಾವುದಾದರೂ ಯೋಜನೆ ಸರ್ಕಾರದವರ ಪರಿಶೀಲನೆಯಲ್ಲಿದೆಯೇ?

ಈ. ಹಾಗಿದ್ದಲ್ಲಿ ಅದರ ವಿವರ ನೀಡುವುದು.

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಹೌದು

ಆ. ಕುಡಿಯುವ ನೀರಿನ ತೊಂದರೆ ನಿವಾರಿಸಲು ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿದೆ.

1. ಬರ ಪರಿಹಾರ ಕಾಮಗಾರಿಯಡಿಯಲ್ಲಿ 8 ಕೊಳವೆ ಬಾವಿಗಳನ್ನು ಕೊರೆದು ಅದರಲ್ಲಿ 4 ಕೊಳವೆ ಬಾವಿಗಳಿಗೆ ವಿದ್ಯುತ್ ಪಂಪು ಅಳವಡಿಸಿ ಹೊಸದಾಗಿ ಕಟ್ಟಲಾದ 8 ಕಿರು ನೀರು ತೊಟ್ಟಿಗಳಿಗೆ ಸಂಪರ್ಕವನ್ನು ನೀಡಲಾಗಿದೆ ಇನ್ನುಳಿದ 4 ಕೊಳವೆ ಬಾವಿಗಳಿಗೆ ಕೈಪಂಪು ಅಳವಡಿಸಲಾಗಿದೆ.

2. ವಿಶೇಷ ಘಟಕ ಯೋಜನೆ (94-95ನೇ ಸಾಲಿನಲ್ಲಿ) ಅಡಿಯಲ್ಲಿ 6 ಕೊಳವೆ ಬಾವಿಗಳನ್ನು ಕೊರೆಯಲಾಗಿದ್ದು, ಅವುಗಳಲ್ಲಿ ಎರಡು ಕೊಳವೆ ಬಾವಿಗಳಿಗೆ ವಿದ್ಯುತ್ ಪಂಪನ್ನು ಅಳವಡಿಸಿ ಉಳಿದ 4 ಕೊಳವೆ ಬಾವಿಗಳಿಗೆ ಕೈ ಪಂಪು ಅಳವಡಿಸಲಾಗಿದೆ.

3. ಇತ್ತೀಚೆಗೆ 5 ಕೊಳವೆ ಬಾವಿಗಳನ್ನು ಕೊರೆದಿದ್ದು ಅದರಲ್ಲಿ ಕೊಳವೆ ಬಾವಿಗಳಿಗೆ ವಿದ್ಯುತ್ ಪಂಪನ್ನು ಅಳವಡಿಸಲಾಗಿದೆ.

ಇ. ಸದ್ಯಕ್ಕೆ ಇಲ್ಲ

ಈ. ಉದ್ಭವಿಸುವುದಿಲ್ಲ

ಶ್ರೀ ಬಿ. ಸತ್ಯನಾರಾಯಣ : ಮಾನ್ಯ ಸಭಾಧ್ಯಕ್ಷರೇ, ಮಾನ್ಯ ನಗರಾಭಿವೃದ್ಧಿ ಸಚಿವರು ಹಾಗೂ ಸರ್ಕಾರಕ್ಕೆ ಗೊತ್ತಿರುವ ಹಾಗೆ ಶಿರಾ ಪಟ್ಟಣದಲ್ಲಿ ಕುಡಿಯುವ ನೀರಿಗೋಸ್ಕರ ರಸ್ತೆ ತಡೆಮಾಡಿ ಗಲಾಟೆಯಾಗಿ ಟಿಯರ್ ಗ್ಯಾಸ್ ಸಿಡಿಸುವಂಥ ಪರಿಸ್ಥಿತಿ ಬಂದಾಗಲೂ ಕೂಡ ಇವರು ಕುಡಿಯುವ ನೀರಿನ ಬಗ್ಗೆ ತೆಗೆದುಕೊಂಡಿರತಕ್ಕಂಥ ಕಾರ್ಯಕ್ರಮ ಸಾಕಷ್ಟು ಆಗಿಲ್ಲ. ಅಲ್ಲಿ ಐದು ಕೊಳವೆ ಬಾವಿಗಳನ್ನು ತೋಡಿಸಿದ್ದೇವೆ ಎಂದು ಹೇಳಿದ್ದಾರೆ. ಐದರಲ್ಲಿ ಮೂರು ಕೆಟ್ಟುಹೋಗಿ ಕೇವಲ ಎರಡು ಬಾವಿಯಲ್ಲಿ ಒಂದು ಲಕ್ಷ ಜನಸಂಖ್ಯೆ ಇರತಕ್ಕಂಥ ಪಟ್ಟಣಕ್ಕೆ ನೀರು ಒದಗಿಸುವುದಕ್ಕೆ ಸಾಧ್ಯವಿಲ್ಲ. ಈ ಕಾರಣಕ್ಕೆ ಶೀಘ್ರವಾಗಿ ತಾತ್ಕಾಲಿಕವಾದಂಥ ಒಂದು ಪರಿಹಾರ ಕಾರ್ಯಕ್ರಮವನ್ನು ತೆಗೆದುಕೊಂಡು ಹೆಚ್ಚು ಕೊಳವೆಬಾವಿಗಳನ್ನು ತೆಗೆಸಿ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್: ಈಗ ಕೆಲವು ಕಡೆ ಕೊಳವೆಬಾವಿಗಳು ಫೇಲ್ ಆಗುತ್ತವೆ. ಅವು ಫೇಲ್ ಆಗದೆ ಮತ್ತು ಹೆಚ್ಚಿಗೆ ಕೊಳವೆಬಾವಿಗಳನ್ನು ಕೊರೆಯಲು ಅವಶ್ಯಕತೆ ಬಿದ್ದಲ್ಲಿ ನಮ್ಮ ಅಧಿಕಾರಿಗಳಿಗೆ ಸಲಹೆ ಕೊಡುತ್ತೇನೆ.

ಶ್ರೀ ಬಿ. ಸತ್ಯನಾರಾಯಣ: ಶಿರಾಪಟ್ಟಣಕ್ಕೆ ಶಾಶ್ವತವಾಗಿ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡುವ ಉದ್ದೇಶ ಸರ್ಕಾರಕ್ಕೆ ಇದೆಯೇ ಎಂದು ಕೇಳಿದ್ದಕ್ಕೆ ಇದು ಸಧ್ಯಕ್ಕೆ ಇಲ್ಲವೆಂದು ಹೇಳಿದ್ದಾರೆ. ನಮ್ಮ ಶಿರಾಪಟ್ಟಣ ಕುಡಿಯುವ ನೀರಿಗೆ ಕೇವಲ ಬೋರ್‌ವೆಲ್‌ಗಳ ಮೂಲಕ ಡಿಪೆಂಡ್ ಆಗಿರತಕ್ಕಂಥ ಪಟ್ಟಣ. ಇಷ್ಟೊಂದು ಜನಸಂಖ್ಯೆ ಇರತಕ್ಕಂಥ ಈ ಪಟ್ಟಣಕ್ಕೆ ಶಾಶ್ವತವಾಗಿ ಹಿರಿಯೂರು ಬಳಿ ಇರತಕ್ಕಂಥ ಮಾರಿಕಣಿವೆ ಅಥವಾ ಗಾಯಿತ್ರಿ ಜಲಾಶಯದಿಂದ ಕುಡಿಯುವ ನೀರಿನ ಶಾಶ್ವತ ವ್ಯವಸ್ಥೆ ಮಾಡುವುದಕ್ಕೆ ಸರ್ಕಾರ ಶೀಘ್ರವಾಗಿ ಕ್ರಮ ತೆಗೆದುಕೊಳ್ಳುವುದಕ್ಕೆ ತಮ್ಮ ಮೂಲಕ ಬೇಡಿಕೊಳ್ಳುತ್ತೇನೆ.

ಶ್ರೀ ವೈಜನಾಥ ಪಾಟೀಲ್ : ಮಾನ್ಯ ಅಧ್ಯಕ್ಷರೇ, ಶಾಶ್ವತವಾಗಿ ಕುಡಿಯುವ ನೀರಿನ ಬಗ್ಗೆ ಸಧ್ಯಕ್ಕೆ ಯಾವುದೇ ಯೋಜನೆ ಇಲ್ಲ.

ಅಧ್ಯಕ್ಷರು : ರಾಜಣ್ಣನವರೇ ನಿಮ್ಮ ತಡೆಹಿಡಿಯಲಾದ ಪ್ರಶ್ನೆ (120(205) ಗೆ ಸಚಿವರು ಸಮಯ ಕೇಳಿದ್ದಾರೆ. ಮುಂದೆ ತೆಗೆದುಕೊಳ್ಳೋಣ.

SRI. N. Rajanna : I want to know whether the concerned Departmental officers are not feeding the answer to my question.

Mr. Speaker : I will find it out from the Minister and get back.

**ವಿಷಯ : ವಿಶೇಷ ಘಟಕ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರದಿಂದ ಮಂಜೂರಾದ ಹಣದ ಬಗ್ಗೆ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 120 (205)

ಶ್ರೀ ಬಿ. ಎಸ್. ಯಡಿಯೂರಪ್ಪ (ಶಿಕಾರಿಪುರ): ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯಡಿ 1989 ರಿಂದ 1993ರ ವರೆಗೆ ರಾಜ್ಯ ಕೇಂದ್ರ ಸರ್ಕಾರದಿಂದ ಮುಂಜೂರಾದ ಹಣ, ಬಿಡಗಡಿಯಾದ ಹಣ ಖರ್ಚಾದ ಹಣ ಹಾಗೂ ಖರ್ಚಾಗದೇ ಉಳಿದಿರುವ ಹಣವೆಷ್ಟು;

ಆ. ರಾಜ್ಯ ಸರ್ಕಾರ ತನ್ನ ಪಾಲಿನ ಖರ್ಚು ಮಾಡಬೇಕಾದ ಹಣದ ಪೈಕಿ 1989 ರಿಂದ 1992-93ರವರೆಗೆ ರಾಜ್ಯದ ಪಾಲನ್ನು ಖರ್ಚು ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

ಇ. ಸದರಿ ಅವಧಿಗಳಲ್ಲಿ ಖರ್ಚು ಮಾಡಲು ವಿಫಲವಾಗಿರುವ ಸರ್ಕಾರಿ ಅಧಿಕಾರಿಗಳ ವಿರುದ್ದ ಸರ್ಕಾರದವರು ಕ್ರಮ ಕೈಗೊಳ್ಳುವರೇ ?

ಶ್ರೀ. ರಮೇಶ್ ಸಿ. ಜಿಗಜಿಣಗಿ :

ಶ್ರೀ. ಎಂ. ಸಿ. ನಾಣಯ್ಯ ಇವರ ಪರವಾಗಿ ( ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ):

ಅ. ರಾಜ್ಯ ಹಾಗೂ ಕೇಂದ್ರ ಸರ್ಕಾರದಿಂದ ಮಂಜೂರಾದ ಹಣ, ಖರ್ಚಾದ ಹಣ ಹಾಗೂ ಖರ್ಚಾಗದೇ ಉಳಿದಿರುವ ಮೊತ್ತದ ಬಗ್ಗೆ ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

ಆ. ಹೌದು,

ಕೆಲವು ಇಲಾಖೆಗಳು ಹಣವನ್ನು ಸಂಪೂರ್ಣವಾಗಿ ಖರ್ಚು ಮಾಡದೇ ಇದ್ದದ್ದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಇ. ಈ ಯೋಜನೆಗಳಿಗೆ ಒದಗಿಸಿರುವ ಹಣವನ್ನು ಹಲವು ಇಲಾಖೆಗಳು ಖರ್ಚು ಮಾಡದೇ ಇರುವ ವಿಷಯ. ಸರ್ಕಾರದ ಗಮನಕ್ಕೆ ಬಂದಿದೆ. ಅದಾಗ್ಯೂ ಹಲವು ಆಡಳಿತಾತ್ಮಕ ಕಾರಣಗಳಿಂದ ಬಿಡುಗಡೆಯಾದ ಹಣವನ್ನು ಖರ್ಚು ಮಾಡಲು ಸಾಧ್ಯವಾಗದಿರುವುದನ್ನು ಸರ್ಕಾರವು ಸಹ ಇನ್ನು ಮೂರು ತಿಂಗಳ ಕಾಲಾವಕಾಶವನ್ನು 1992-93ನೇ ಸಾಲಿನಿಂದ ನೀಡಲಾಗುತ್ತಿದೆ. ಆದರೂ ಸಹ ಖರ್ಚು ಮಾಡದೇ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.

## ಅನುಬಂಧ

ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯಡಿ 1989 ರಿಂದ 1993ರ ವರೆಗೆ ಕೇಂದ್ರ ಸರ್ಕಾರದಿಂದ ಮಂಜೂರಾದ ಹಣ ಬಿಡುಗಡೆಯಾದ ಹಣ, ಖರ್ಚಾದ ಹಣ ಹಾಗೂ ಖರ್ಚಾಗದೇ ಉಳಿದಿರುವ ಹಣದ ವಿವರ :

| ಕ್ರ. ಸಂ. | ವರ್ಷ | ಮಂಜೂರಾದ ಹಣ | ಬಿಡುಗಡೆಯಾದ ಹಣ | ಖರ್ಚಾದ ಹಣ | ಖರ್ಚಾಗದೇ ಉಳಿದಿರುವ ಹಣ |
|---|---|---|---|---|---|
| | | ವಿಶೇಷ ಘಟಕ ಯೋಜನೆ | | | |
| 1) | 1989-90 | 825.74 | 825.74 | 825.74 | - |
| 2) | 1990-91 | 953.94 | 953.94 | 953.94 | - |
| 3) | 1991-92 | 1485.71 | 1485.71 | 1485.71 | - |
| 4) | 1992-93 | 1310.00 | 1310.00 | 1310.00 | - |
| | | ಗಿರಿಜನ ಉಪಯೋಜನೆ | | | |
| 1) | 1989-90 | 153.90 | 153.90 | 153.90 | - |
| 2) | 1990-91 | 165.65 | 165.65 | 165.65 | - |
| 3) | 1991-92 | 253.24 | 253.24 | 253.24 | - |
| 4) | 1992-93 | 327.42 | 327.42 | 327.42 | - |

ರಾಜ್ಯ ವಲಯದಿಂದ ಆಯವ್ಯಯದಲ್ಲಿ ಮಂಜೂರಾದ ಹಣ, ಖರ್ಚಾದ ಹಣ ಹಾಗೂ ಖರ್ಚಾಗದೇ ಉಳಿದಿರುವ ಹಣದ ಬಗ್ಗೆ ವಿವರ :

| ಕ್ರ ಸಂ. | ವರ್ಷ | ಮಂಜೂರಾದ ಹಣ | ಖರ್ಚಾದ ಹಣ | ಖರ್ಚಾಗದೇ ಉಳಿದ ಹಣ |
|---|---|---|---|---|
| | | ವಿಶೇಷ ಘಟಕ ಯೋಜನೆ | | |
| 1) | 1989-90 | 10696.26 | 7986.06 | 2710.20 |
| 2) | 1990-91 | 8914.27 | 8752.17 | 162.10 |
| 3) | 1991-92 | 13851.14 | 11013.60 | 2837.54 |
| 4) | 1992-93 | 17602.07 | 16049.17 | 1552.90 |
| | | 51063.74 | 43801.00 | 7262.74 |
| | | ಗಿರಿಜನ ಉಪಯೋಜನೆ | | |
| 1) | 1989-90 | 1731.55 | 1046.75 | 684.80 |
| 2) | 1990-91 | 1095.56 | 1064.38 | 31.18 |
| 3) | 1991-92 | 1831.56 | 1618.44 | 213.12 |
| 4) | 1992-93 | 2046.85 | 1349.21 | 697.64 |
| | | 6705.52 | 5078.78 | 1626.74 |

ಅಧ್ಯಕ್ಷರು : ಮಾನ್ಯ ಯಡಿಯೂರಪ್ಪನವರೇ, ಅಖಿಲ ಭಾರತ ಸಮಾಜ ಕಲ್ಯಾಣ ಮಂತ್ರಿಗಳ ಸಮಾವೇಶ ಇರುವುದರಿಂದ ನಮ್ಮ ರಾಜ್ಯಸರ್ಕಾರದವರು ಅತಿಥ್ಯವನ್ನು ವಹಿಸಿಕೊಂಡಿದ್ದಾರೆ. ಸಮಾಜ ಕಲ್ಯಾಣ ಮಂತ್ರಿಗಳು ಅಲ್ಲಿಗೆ ಹೋಗಿದ್ದಾರೆ. ಅವರ ಪರವಾಗಿ ಕಾನೂನು ಮಂತ್ರಿಗಳು ನಿಮ್ಮ ಪ್ರಶ್ನೆಗೆ ಉತ್ತರ ಕೊಡುತ್ತಾರೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ಆಗಬಹುದು ಸನ್ಮಾನ್ಯ ಅಧ್ಯಕ್ಷರೇ, ತಾವು ಗಮನಿಸಬೇಕು. ಈ ವಿಶೇಷ ಘಟಕ ಯೋಜನೆಯಲ್ಲಿ ಗಿರಿಜನ ಯೋಜನೆಯಲ್ಲಿ 1989-90 ರಿಂದ 1992-93 ರವರೆಗೆ ವಿಶೇಷ ಘಟಕ ಯೋಜನೆಯಲ್ಲಿ ರಾಜ್ಯಸರ್ಕಾರ ಏನು ಖರ್ಚು ಮಾಡಬೇಕಾಗಿದೆ, ಕೇಂದ್ರ ಸರ್ಕಾರ ಕೊಡುವಂಥ ಮ್ಯಾಚಿಂಗ್ ಗ್ರಾಂಟ್ ಇದರಲ್ಲಿ 78 ಕೋಟಿ 62 ಲಕ್ಷ ರೂಪಾಯಿಗಳನ್ನು ನಾವು ಖರ್ಚು ಮಾಡಿಲ್ಲ. ಅದೇ ರೀತಿ ಗಿರಿಜನ ಯೋಜನೆಯಲ್ಲಿ ಖರ್ಚು ಮಾಡಬೇಕಾಗಿರುವುದು 1989-90 ರಿಂದ 1992-93ರವರೆಗೆ 16 ಕೋಟಿ 26 ಲಕ್ಷ. ಒಟ್ಟು 88 ಕೋಟಿ 88 ಲಕ್ಷ ರೂಪಾಯಿಗಳನ್ನು ತಾವು ಕಳೆದ ನಾಲ್ಕು ವರ್ಷಗಳಿಂದ ಖರ್ಚು ಮಾಡಿಲ್ಲ. ಇದಕ್ಕೆ ಕಾರಣ ಏನು ? ಇಲ್ಲಿ ನಾನು ಕೇಳಬಯಸುವುದೇನೆಂದರೆ ಕೇಂದ್ರ ಸರ್ಕಾರದಿಂದ ಬಂದ ಹಣವನ್ನು ಖರ್ಚುಮಾಡಿ ರಾಜ್ಯ ಸರ್ಕಾರದ ಹಣವನ್ನು ಖರ್ಚುಮಾಡದೇ ಇರುವುದು ಈ ಜನರಿಗೆ ಚೀಟ್ ಮಾಡಿದಂತಾಗುತ್ತದೆ. ಕೇಂದ್ರ ಸರ್ಕಾರದವರು ಕೊಟ್ಟ ಹಣವನ್ನು ಮಾತ್ರ ಖರ್ಚುಮಾಡಿ ರಾಜ್ಯಸರ್ಕಾರದ ಜಮ ಖರ್ಚುಮಾಡದೆ ಇರುವುದು ಈ ಜನರಿಗೆ ಒಂದು ತರಹ ದ್ರೋಹ ಮಾಡಿದಂತಾಗುತ್ತದೆ. ಇದಕ್ಕೆ ಕಾರಣ ಏನು? ಎರಡನೇಯದು, 1993-94 ಮತ್ತು 1994-95ನೇ ಸಾಲಿನಲ್ಲಿ ಈ ಒಂದು ವಿಶೇಷ ಘಟಕ ಯೋಜನೆಯಲ್ಲಿ ಮತ್ತು ಗಿರಿಜನ ಯೋಜನೆಯಲ್ಲಿ ಎಷ್ಟು ಹಣ ಬಿಡುಗಡೆಯಾಗಿದೆ, ಎಷ್ಟು ಹಣ ಖರ್ಚು ಆಗಿಲ್ಲ ?

ಶ್ರೀ ಎಂ.ಸಿ.ನಾಣಯ್ಯ : ಮಾನ್ಯ ಅಧ್ಯಕ್ಷರೇ, ಮಾನ್ಯ ಯಡಿಯೂರಪ್ಪನವರು ಹೇಳಿರತಕ್ಕಂಥ ವಿಚಾರವನ್ನು ಒಪ್ಪಿಕೊಳ್ಳುತ್ತೇನೆ. ಈಗ ಕಳೆದ ಮೂರು ವರ್ಷಗಳಿಗೆ ಖರ್ಚುಮಾಡಬೇಕಾಗಿರತಕ್ಕಂಥ ಒಟ್ಟು ಹಣ ಎಲ್ಲಸೇರಿ 88 ಕೋಟಿ ರೂಪಾಯಿಗಳು. 1989-90 ರಿಂದ 1992-93ರವರೆಗೆ ವಿಶೇಷ ಘಟಕ ಯೋಜನೆಯಲ್ಲಿ 72 ಕೋಟಿ ರೂಪಾಯಿಗಳು ಮತ್ತು ಹರಿಜನಗಿರಿಜನ ಉಪಯೋಜನೆಯಲ್ಲಿ 16 ಕೋಟಿ ರೂಪಾಯಿಗಳು, ಇದು ಖರ್ಚಾಗದೇ ಇರತಕ್ಕಂಥ ಕಾರಣವನ್ನು ಕೇಳಿದ್ದಾರೆ. ಇದರಲ್ಲಿ 33 ಇಲಾಖೆಗಳು ಈ ಒಂದು ಹರಿಜನ-ಗಿರಿಜನರ ಯೋಜನೆಯ ಅಡಿಯಲ್ಲಿ ಬರುತ್ತವೆ. ಸಮಯಕ್ಕೆ ಸರಿಯಾಗಿ ಕ್ರಿಯಾಯೋಜನೆಗಳನ್ನು ಸಂಬಂಧಪಟ್ಟ ಜಿಲ್ಲಾ ಪರಿಷತ್ತುಗಳು ಸರ್ಕಾರಕ್ಕೆ ಕಳುಹಿಸಿ ಹಣ ಬಿಡುಗಡೆ ಮಾಡುವುದರಲ್ಲಿ ವಿಳಂಬವಾಗಿದೆ. ಇನ್ನು ಕೆಲವು ಸಂದರ್ಭದಲ್ಲಿ ತಮಗೆ ಗೊತ್ತಿದೆ. ನಾವು ಹಣವನ್ನು ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ಬಿಡುಗಡೆ ಮಾಡಿ, ಹಣ ಬಿಡುಗಡೆ ಮಾಡಿದ ಎರಡು ತಿಂಗಳಲ್ಲಿ ಖರ್ಚು ಮಾಡುವುದಕ್ಕೆ ಆಗದೇ ಇರುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಈಗ ಮಾರ್ಚ್‌ನಿಂದ ಜೂನ್ ತಿಂಗಳವರೆಗೆ ಯಾವುದು ಹಣ ಇದೆ ಅದನ್ನು ಖರ್ಚು ಮಾಡುವುದಕ್ಕೆ ಕ್ರಮವನ್ನು ತೆಗೆದುಕೊಂಡಿದ್ದೇವೆ. 1992-93ರಿಂದ 1994-95ರವರೆಗೆ

ಇದೆಲ್ಲವನ್ನೂ ಸರ್ಕಾರದವರು ಪರಿಶೀಲನೆಗೆ ತೆಗೆದು ಕೊಂಡು, ಇವತ್ತು ರಾಷ್ಟ್ರಮಟ್ಟದಲ್ಲಿರುವಂಥ ಎಲ್ಲಾ ರಾಜ್ಯಗಳ ಸಮಾಜಕಲ್ಯಾಣ ಮಂತ್ರಿಗಳ ಸಮಾವೇಶ ನಡೆಯುತ್ತಿದೆ. ಕೇಂದ್ರ ಸರ್ಕಾರದ ಸಮಾಜ ಕಲ್ಯಾಣ ಮಂತ್ರಿಗಳು ಕೂಡ ಇವತ್ತು ಇಲ್ಲಿಗೆ ಬಂದಿದ್ದಾರೆ. ಈ ಒಂದು ಹಣ ಕೇಂದ್ರಸರ್ಕಾರದಿಂದ ಬರತಕ್ಕಂಥಾದ್ದು ಸಂಪೂರ್ಣವಾಗಿ ಖರ್ಚಾಗಿದೆ. ನಾವು ನೋಡಿದ್ದೇವೆ. ರಾಜ್ಯ ಸರ್ಕಾರದಿಂದ ಕೊಟ್ಟಿರತಕ್ಕಂಥ ಹಣ ಹಲವು ಸಂದರ್ಭಗಳಲ್ಲಿ ಉಳಿದುಕೊಂಡಿರುವುದನ್ನು ನೋಡಿದ್ದೇವೆ. ಅದಕ್ಕೋಸ್ಕರ ಇದಕ್ಕೆ ಸಿಂಗಲ್‌ವಿಂಡೋ ಏಜೆನ್ಸಿ ಮೂಲಕ ಈ ಹಣವನ್ನು ಸಂಪೂರ್ಣವಾಗಿ ವಿತರಣೆ ಮಾಡುವುದಕ್ಕೆ ಕಾರ್ಯವಿಧಾನಗಳನ್ನು ಇವತ್ತು ಮಾಡುತ್ತಿದ್ದೇವೆ. ಇದು ಕೂಡ ಸರ್ಕಾರದ ಗಮನದಲ್ಲಿದೆ. 33 ಇಲಾಖೆಗಳಿಗೆ ಸಂಬಂಧಪಟ್ಟಂಥ ಹಣವನ್ನು ಸಿಂಗಲ್ ವಿಂಡೋ ಏಜೆಸ್ಸಿ ಮುಖಾಂತರ ಖರ್ಚು ಮಾಡುವುದಕ್ಕೆ ಒಂದು ಕಾರ್ಯಕ್ರಮವನ್ನು ರೂಪಿಸಬೇಕೆಂದು ಈ ಗಾಗಲೇ ನಮ್ಮ ರಾಷ್ಟ್ರದಲ್ಲಿರತಕ್ಕಂಥ ರಾಜ್ಯಗಳ ಎಲ್ಲಾ ಸಮಾಜಕಲ್ಯಾಣ ಮಂತ್ರಿಗಳು ಸಭೆ ಸೇರುತ್ತಿದ್ದಾರೆ. ಬಹುಶ: ಅಲ್ಲಿ ರೂಪಿಸಿಕೊಂಡಿರುವ ರೀತಿಯಲ್ಲಿ ಈ ಕಾರ್ಯಕ್ರಮವನ್ನು ನಾವು ಅನುಸರಿಸಬೇಕಾಗುತ್ತದೆ. ಮಾನ್ಯ ವಿರೋಧ ಪಕ್ಷದ ನಾಯಕರು ಇನ್ನೊಂದು ಪ್ರಶ್ನೆಯನ್ನು ಕೇಳಿದ್ದಾರೆ 1993-94 ರಿಂದ 1994-95ರವರೆಗೆ ಎಷ್ಟು ಹಣ ಬಾಕಿ ಇದೆಯೆಂದು. ಇದರಲ್ಲಿ ಸ್ಟೇಟ್‌ಪ್ಲಾನ್‌ನಲ್ಲಿ ವಿಶೇಷ ಘಟಕ ಯೋಜನೆಯಲ್ಲಿ 1993-94 ಕ್ಕೆ 28 ಕೋಟಿ 69 ಲಕ್ಷ ರೂಪಾಯಿಗಳು. ಇದರಲ್ಲಿ ಖರ್ಚಾಗಿರತಕ್ಕಂಥಾದ್ದು 25 ಸಾವಿರದ 893. 4 ಕೋಟಿ ರೂಪಾಯಿ ಬಾಕಿ ಇದೆ. 1994-95ಕ್ಕೆ 30,352. ಇದರಲ್ಲಿ ಈ ಖರ್ಚಾಗಿರುವಂಥಾದ್ದು ಮಾರ್ಚ್ ಅಂತ್ಯದೊಳಗೆ ಸುಮಾರು ಶೇಕಡಾ 75ರಿಂದ 80ರಷ್ಟು. ಇನ್ನು ಮೂರು ತಿಂಗಳಲ್ಲಿ ಬಾಕಿ ಇರತಕ್ಕಂಥ ಹಣವನ್ನು ಸಂಪೂರ್ಣವಾಗಿ ಖರ್ಚುಮಾಡತಕ್ಕಂಥ ಕಾರ್ಯಕ್ರಮವನ್ನು ಇಲಾಖೆಯು ಹಾಕಿಕೊಂಡಿದೆ.

ಮತ್ತು ಸರ್ಕಾರದ ಪತಿಯಿಂದ ನೇರವಾಗಿ ಹೇಳುತ್ತಿದ್ದೇನೆ. ಈ ಹಿಂದೆ ನಡೆದಿರತಕ್ಕ ಈ ಕಾರ್ಯಕ್ರಮಗಳಲ್ಲಿ ಮತ್ತು ಆ ಘಟಕಗಳಿಗೆ ಹೋಗಬೇಕಾದ ಹಣವನ್ನು ಖರ್ಚುಮಾಡದೇ ಇರುವುದು ಈಗಾಗಲೇ ಸರ್ಕಾರದ ಗಮನಕ್ಕೆ ಬಂದಿದೆ. ಇನ್ನು ಮುಂದಕ್ಕೆ, ಈ ಹಣವನ್ನು ಸಂಪೂರ್ಣವಾಗಿ ಖರ್ಚು ಮಾಡುವುದಕ್ಕೆ ಸರ್ಕಾರ ಕಾರ್ಯಕ್ರಮ ಹಮ್ಮಿಕೊಂಡಿದೆ. ಸಿಂಗಲ್ ವಿಂಡೋ ಏಜೆನ್ಸಿ ಮುಖಾಂತರ ಈ ಕೆಲಸವನ್ನು ಮಾಡಬೇಕೆಂದು, ಮುಂದೆ ಕಾರ್ಯಕ್ರಮವನ್ನೂ ಕೂಡ ರೂಪಿಸಿಕೊಳ್ಳುತ್ತಿದ್ದೇವೆ.

ಶ್ರೀ ಬಿ. ಎಸ್. ಯಡಿಯೂರಪ್ಪ : ಇಲ್ಲಿ ಬಹಳ ಪ್ರಮುಖವಾಗಿರತಕ್ಕದ್ದು, ಅಧಿಕಾರಿಗಳಿಂದಲ್ಲ ಅಥವಾ ಎಸ್ಟಿಮೇಟ್ ಮಾಡಿ, ಬೇಕಾದಂಥ ಮುಂಜೂರಾತಿ ದೊರೆಯುಲಿಲ್ಲವೆಂದಲ್ಲ. ಅನೇಕ ಕಾರಣಕ್ಕೋಸ್ಕರ, ಎಸ್. ಸಿ. ಎಸ್. ಟಿ. ಜನಾಂಗಕ್ಕೆ ಬಿಡುಗಡೆ ಮಾಡಬೇಕಾದ ಹಣವನ್ನು ಸಕಾಲದಲ್ಲಿ ಬಿಡುಗಡೆ ಮಾಡುತ್ತಾ ಇಲ್ಲ. ತಾವೇ ಉತ್ತರದಲ್ಲಿ ಹೇಳಿದ್ದೀರಿ. 1992-93ನೇ ಸಾಲಿನಿಂದ, ಇದನ್ನು ಗಮನಿಸಿ, ಮೂರು ತಿಂಗಳು ವಿಸ್ತರಣೆ ಮಾಡಿ, ಇದನ್ನು ಖರ್ಚುಮಾಡಬೇಕೆಂದು ಹೇಳಿದ ಮೇಲೂ ಸಹ ಸುಮಾರು 88 ಕೋಟಿ ರೂಪಾಯಿಗಳನ್ನು ಎಸ್‌ಟಿ ಜನಾಂಗದ ಅಭಿವೃದ್ಧಿಗೋಸ್ಕರ

ಖರ್ಚುಮಾಡಲಿಲ್ಲವೆಂಬುದನ್ನು ತಾವೇ ಒಪ್ಪಿಕೊಳ್ಳುತ್ತೀರಿ. ಸನ್ಮಾನ್ಯ ಅಧ್ಯಕ್ಷರೇ, ತಮಗೆ ಆಶ್ಚರ್ಯವಾಗಬಹುದು. ಹರಿಜನ ಯೋಜನೆಯಲ್ಲಿ 1989-90, 1990-91, 1991-92 ಮತ್ತು 1992-93 ರಲ್ಲಿ ತಮ್ಮ ಹೇಳಿಕೆ ಪ್ರಕಾರ ಈ 4 ವರ್ಷಗಳಲ್ಲಿ ಸುಮಾರು 94 ಕೋಟಿ ರೂಪಾಯಿಗಳನ್ನು ಖರ್ಚುಮಾಡಲಿಲ್ಲ. ಎಸ್‌ಟಿ ಜನಾಂಗಕ್ಕೆ 88 ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಿಲ್ಲ, ಎಂದರೆ, ಸುಮಾರು ಇನ್ನೂರು ಕೋಟಿ ರೂಪಾಯಿಗಳನ್ನು ಕಳೆದ 4-5 ವರ್ಷಗಳಲ್ಲಿ ಈ ಎಸ್‌ಸಿ ಮತ್ತು ಎಸ್‌ಟಿ ಜನಾಂಗಕ್ಕೆ ಖರ್ಚುಮಾಡಿದ್ದರೆ, ಈ ಹರಿಜನ ಗಿರಿಜನ ಕಾಲೋನಿಯಲ್ಲಿ ಯಾವುದೇ ಸಮಸ್ಯೆ ಉಳಿಯುತ್ತಾ ಇರಲಿಲ್ಲ. ಟಾರ್ ರಸ್ತೆ ಮಾಡಿ, ನಲ್ಲಿ ನೀರು ಕೊಡಬಹುದಿತ್ತು ಮತ್ತು ಅವನಿಗೆ ಬೇಕಾದ ಎತ್ತುಗಾಡಿ ಸೌಲಭ್ಯಗಳನ್ನು ಒದಗಿಸಿಕೊಡಬಹುದಿತ್ತು. ಎಂದರೆ, ಉದ್ದೇಶ ಪೂರ್ವಕವಾಗಿ, ಸರ್ಕಾರ ಹರಿಜನ ಗಿರಿಜನರಿಗೆ ಕೊಡಬೇಕಾದ ಸೌಲಭ್ಯಗಳನ್ನು ಕೊಡುತ್ತಾ ಇಲ್ಲ. ಅದಕ್ಕಾಗಿ ನಾನು ವಿನಂತಿ ಮಾಡಿಕೊಳ್ಳುತ್ತೇನೆ. ನೀವು ಸಿಂಗಲ್ ವಿಂಡೋ ಅಥವಾ ಡಬಲ್ ವಿಂಡೋ ಏಜೆನ್ಸಿ ಮಾಡಿ, ಇವರ ಹಣವನ್ನು ಖರ್ಚು ಮಾಡಿ. ತಾವೇ ಹೇಳಿರುವಂತೆ, ಇದುವರೆಗೆ ಈ ಎಸ್‌ಟಿ ಜನಾಂಗದ 88 ಕೋಟಿ ರೂಪಾಯಿಗಳನ್ನು ಖರ್ಚುಮಾಡಲಿಲ್ಲ. ಮಾನ್ಯರಾಮಕೃಷ್ಣ ಅವರು ಮಾತನಾಡಬೇಕಾದರೆ, ನಾವು ಅನಿವಾರ್ಯವಾಗಿ ಹ್ಯೂಮನ್ ರೈಟ್ಸ್ ಕಮೀಷನ್‌ಗೆ ಹೋಗಬೇಕಾಗುತ್ತದೆ. ಎಂಬ ಮಾತನ್ನು ಹೇಳಿದರು. ಬಹುಶಃ ಕೇಂದ್ರ ಸರ್ಕಾರದ ಹಣವನ್ನು ಮಾತ್ರ ಖರ್ಚುಮಾಡಿ, ರಾಜ್ಯ ಸರ್ಕಾರದವರು, ತಮ್ಮ ಹಣವನ್ನು ಖರ್ಚುಮಾಡಲಿಲ್ಲವೆಂದು ಹೇಳುವುದಾದರೆ, ಇದಕ್ಕೆ ನೀವು ಹಣವನ್ನು ಬಿಡುಗಡೆ ಮಾಡದೇ ಇರುವುದೇ ಮೂಲ ಕಾರಣ. ಇವತ್ತಿನ ದಿವಸ ಎಸ್‌ಟಿ. ಜನಾಂಗದ ಬ್ಯಾಲೆನ್ಸ್ ಏನು ಉಳಿದುಕೊಂಡು ಬಂದಿದೆ, ಈ ಹಣವನ್ನು ಖರ್ಚುಮಾಡುವುದಕ್ಕೆ, ದಯಮಾಡಿ ಏನಾದರೂ ಯೋಜನೆಯನ್ನು ತರಬೇಕು. ಅಂದರೆ, ಇದಕ್ಕೆ ಏನಾದರೂ ವಿಶೇಷವಾದ ಕಾರ್ಯಕ್ರಮ ರೂಪಿಸುತ್ತೀರಾ ಎಂಬುದನ್ನು ದಯಮಾಡಿ ಹೇಳಬೇಕು.

ಶ್ರೀ ಎಂ.ಸಿ.ನಾಣಯ್ಯ : ಮಾನ್ಯಸಭ್ಯಾಧ್ಯಕ್ಷರೇ, ವಿರೋಧಪಕ್ಷದ ನಾಯಕರ ಕಳಕಳಿಯನ್ನು ನಾನೂ ಕೂಡ ಅರ್ಥಮಾಡಿಕೊಂಡಿದ್ದೇನೆ. ಸರ್ಕಾರ ಇದರ ಬಗ್ಗೆ ಈಗಾಗಲೇ ಗಮನಹರಿಸದೆ. ಈ ಹಿಂದೆ ಸ್ವಲ್ಪಮಟ್ಟಿಗೆ ಹಣ ಖರ್ಚಾಗಲಿಲ್ಲವೆನ್ನುವುದನ್ನು ನಾನು ಒಪ್ಪಿಕೊಂಡಿದ್ದೇವೆ. ಅದಕ್ಕೋಸ್ಕರವೇ ಪೂರ್ತಿಯಾದ ವಿವರಗಳನ್ನು ಕೊಟ್ಟಿದ್ದೇವೆ. ಮೂರು ವರ್ಷಗಳಿಂದ 88 ಕೋಟಿ ರೂಪಾಯಿಗಳನ್ನು ಖರ್ಚುಮಾಡಲಿಲ್ಲ, ಇದಕ್ಕೆ ಇರತಕ್ಕ ಕಾರಣಗಳನ್ನು ಕೂಡ ಹೇಳಿದ್ದೇವೆ. ಈ ಹಿಂದೆ ಆಗಿರತಕ್ಕಂಥ ಲೋಪ ಯಾವುದಿದೆ, ಅದು ಮುಂದೆ ನಡೆಯುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದೇನೆ. ಈಗ 88 ಇಲಾಖೆಗಳ ಮುಖಾಂತರ ಕಳುಹಿಸತಕ್ಕಂಥ ಹಣವನ್ನು ಸಿಂಗಲ್ ವಿಂಡೋ ಏಜೆನ್ಸಿ ಮೂಲಕ ಖರ್ಚುಮಾಡುವುದಕ್ಕೆ ಕಾರ್ಯಕ್ರಮ ಹಮ್ಮಿಕೊಳ್ಳುತ್ತೇವೆ. ಎರಡನೆಯದು, ಬಾಕಿ ಇರತಕ್ಕ ಹಣವನ್ನು ಅಂದರೆ, ಸುಮಾರು ವರ್ಷಗಳಿಂದ ಖರ್ಚಾಗದೇ ಇರತಕ್ಕ 88 ಕೋಟಿ ರೂಪಾಯಿಗಳನ್ನು ಮುಂದಿನ ವರ್ಷದಲ್ಲಿ ಖರ್ಚುಮಾಡಬೇಕೆನ್ನುವ ವಿಚಾರ ಹೇಳಿದ್ದೀರಿ. ಒಂದೇ ವರ್ಷದಲ್ಲಿ ಈ 88 ಕೋಟಿ ರೂಪಾಯಿಗಳನ್ನು ಖರ್ಚುಮಾಡಲು

ಕಷ್ಟವಾದರೂ, ಮುಂದೆ ಇರತಕ್ಕಂಥ ಮೂರು ವರ್ಷಗಳಲ್ಲಿ ಇದನ್ನು ಯಾವರೀತಿ ಖರ್ಚುಮಾಡಬೇಕೆಂಬ ಬಗ್ಗೆ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತಿದ್ದೇವೆ.

ಶ್ರೀ ಬಿ. ಎಸ್. ಯಡಿಯೂರಪ್ಪ : ತಾವು ಸಾಕಷ್ಟು ಅನುಭವಸ್ಥರು, ಬುದ್ಧಿವಂತರು, ಉತ್ತರ ಕೊಡುವುದರಲ್ಲಿ ನಿಪುಣರೂ ಇದ್ದೀರಿ, ಅದನ್ನು ಯಾರೂ ಪ್ರಶ್ನೆ ಮಾಡುವುದಿಲ್ಲ. ಆದರೆ, ಅಧಿಕಾರಿಗಳು ಸೆಂಟ್ರಲ್ ಗವರ್ನಮೆಂಟ್‌ನಿಂದ ಬಂದ ಹಣವನ್ನು ಪೂರ್ಣ ಖರ್ಚುಮಾಡುತ್ತಾರೆ. ಅದೇ ರಾಜ್ಯಸರ್ಕಾರದ ಹಣವನ್ನು ಖರ್ಚುಮಾಡಲಿಲ್ಲವೆಂದರೆ, ಇದು ಮೇಲ್ನೋಟಕ್ಕೆ ಕಾಣುವಂತಾದ್ದು, ಹಣಕಾಸಿನ ಕೊರತೆಯಿಂದ, ನಿಗದಿಯಾದ ಹಣವನ್ನು ತೆಗೆದಿಟ್ಟರೂ ಸಹ ಅದನ್ನು ಸಮಯಕ್ಕೆ ಸರಿಯಾಗಿ ಬಿಡುಗಡೆ ಮಾಡದಿರುವುದೇ ಮೂಲ ಕಾರಣ ಎಂಬುದನ್ನು ಸಚಿವರು ಒಪ್ಪಿಕೊಳ್ಳುತ್ತಾರೆ ಎಂದು ಅಂದುಕೊಂಡಿದ್ದೇನೆ. ದಯಮಾಡಿ, ಇದು ಮುಂದೆ ಆಗದಿರುವಂತೆ, ವಿಶೇಷವಾದ ಕಾರ್ಯಕ್ರಮ ಹಾಕಿಕೊಳ್ಳಬೇಕು. ಹರಿಜನ ಗಿರಿಜನರಿಗೆ ಹಾಸ್ಟಲುಗಳಿವೆ. ಕಟ್ಟಡ ಕಟ್ಟಬಹುದು, ಅನೇಕ ಕಾರ್ಯಕ್ರಮಗಳನ್ನು ಮಾಡಬಹುದು. ಈಗಲಾದರೂ ನೀವು, ಮುಂದೆ ಸದನ ಸೇರುವುದರೊಳಗಾಗಿ, ಈಗೇನು 1993-94, 1994-95ರಲ್ಲಿ ಹಣ ಉಳಿದಿದೆ, ಈ ಯೋಜನೆಗಳ ಹಣವನ್ನು ಪೂರ್ತಿ ಖರ್ಚುಮಾಡುತ್ತೀರಾ ? ಮುಂದಿನ ಅಧಿವೇಶನದಲ್ಲಿ ಉತ್ತರ ಕೊಡುವಂಥ ಕಾಲದಲ್ಲಿ ಇದನ್ನು ತಾವು ಹೇಳಬೇಕು. ಕಳೆದ ನಾಲ್ಕು ವರ್ಷಗಳಲ್ಲಿ ಈ ಎಸ್‌ಸಿ ಮತ್ತು ಎಸ್‌ಟಿ ಎರಡಕ್ಕೂ ಸೇರಿ ಇನ್ನೂರು ಕೋಟಿ ರೂಪಾಯಿಗಳು ಖರ್ಚಾಗಿಲ್ಲ. ದಯಮಾಡಿ, ಈ ದಿಕ್ಕಿನಲ್ಲಿ ವಿಶೇಷ ಪ್ರಯತ್ನ ಮಾಡಿ, ನಿಗದಿಯಾಗಿರತಕ್ಕ ಹಣವನ್ನು ಪೂರ್ಣವಾಗಿ ಖರ್ಚು ಮಾಡುತ್ತೇವೆಂದು ಹೇಳುತ್ತೀರಾ ? ಉಳಿದಿರತಕ್ಕಂಥ ಹಣವನ್ನು ಆಮೇಲೆ ಖರ್ಚುಮಾಡಲಿ. ಕೊನೆಯಪಕ್ಷ, ಅದನ್ನಾದರೂ ಮಾಡುತ್ತೇವೆ ಎನ್ನುವುದನ್ನು ಹೇಳಿ.

ಶ್ರೀ ಎಂ.ಸಿ.ನಾಣಯ್ಯ : 1994-95ನೇ ಸಾಲಿಗೆ ಖರ್ಚಾಗದೇ, 31-3-95ರೊಳಗೆ ಉಳಿದ ಹಣ ಯಾವುದೇ ಇದ್ದರೂ ಸಹ, ಮೂರು ತಿಂಗಳು ಸಮಯವನ್ನು ವಿಸ್ತರಿಸಿರುವುದರಿಂದ, - ಹಣವನ್ನು ಖರ್ಚುಮಾಡುತ್ತೇವೆ. ಇನ್ನು 1995-96ನೇ ಸಾಲಿಗೆ ನಮ್ಮ ಸರ್ಕಾರ ಅಧಿಕಾರಕ್ಕೆ ಬಂದಮೇಲೆ, ಬಜೆಟಿನಲ್ಲಿ ನಿಗದಿ ಮಾಡಿರತಕ್ಕ ಹಣ ಯಾವುದಿದೆ, ಅದನ್ನು ಖರ್ಚುಮಾಡುವುದಕ್ಕೆ ಕಾರ್ಯಕ್ರಮ ಮಾಡುತ್ತೇವೆ.

ಶ್ರೀ ವೈ. ರಾಮಕೃಷ್ಣ : ನಮ್ಮ ರಾಜ್ಯದಲ್ಲಿ ಅನೇಕ ಯೋಜನೆಗಳಿವೆ. ಅದರಲ್ಲಿ ಈ ಸ್ಪೆಷಲ್ ಕಾಂಪೋನೆಂಟ್ ಯೋಜನೆಯಲ್ಲಿ ಮಾತ್ರ ಇಷ್ಟು ಹಣ ಉಳಿಸಿದ್ದೀರಾ ಅಥವಾ ನಮ್ಮ ರಾಜ್ಯಕ್ಕೆ ಏನೇನು ಯೋಜನೆಗಳು ಬಂದಿವೆ, ಅವೆಲ್ಲವುಗಳಿಂದ ಈ ಹಣವನ್ನು ಉಳಿಸಿದ್ದೀರಾ ? ದಯಮಾಡಿ, ಸ್ಪೆಷಲ್ ಕಾಂಪೋನೆಂಟ್ ಯೋಜನೆಯಿಂದ ಮಾತ್ರ ಉಳಿಸಿದ್ದೀರಾ ಎಂಬುದನ್ನು ಹೇಳಬೇಕು.

ಶ್ರೀ ಎಂ.ಸಿ.ನಾಣಯ್ಯ : ಮಾನ್ಯ ಅಧ್ಯಕ್ಷರೇ, ಅದಕ್ಕೆ ನನ್ನ ಹತ್ತಿರ ಉತ್ತರವಿಲ್ಲ, ಅವರು ಬೇರೊಂದು ಪ್ರಶ್ನೆ ಹಾಕಿದರೆ, ಉತ್ತರವನ್ನು ತರಿಸಿಕೊಡುತ್ತೇನೆ.

ಶ್ರೀ ವೈ. ರಾಮಕೃಷ್ಣ : ನಿಮ್ಮ ಜಿಲ್ಲೆಯೊಳಗೆ ಮತ್ತು ಪಕ್ಕದ ಜಿಲ್ಲೆಯೊಳಗೆ. ಅಲ್ಲಿರತಕ್ಕ ಸೋಲಿಗರು ಮತ್ತು ಈಡಿಗರು, ಅವರಿಗೆ ಯಾವ ವಿಧವಾದ

ಹಣವನ್ನೂ ಕೊಡದಿರುವುದಕ್ಕೆ ಮಕ್ಕಳನ್ನು ಬೆಂಗಳೂರು, ಮಂಗಳೂರು, ಬಾಂಬೆಗಳಿಗೆ ಮಾರಿಕೊಂಡರು ಎಂಬುದು ಪೇಪರಿನಲ್ಲಿ ಬಂದಿದೆ. ಮತ್ತು ಇದರ ಬಗ್ಗೆ ಚರ್ಚೆಯೂ ಕೂಡ ಆಗಿದೆ. ಆದ್ದರಿಂದ, ಅವರಿಗೆ ಇಟ್ಟಿರತಕ್ಕ ಹಣವನ್ನು ಏತಕ್ಕೆ ಖರ್ಚುಮಾಡಲಿಲ್ಲವೆಂಬ ಅರಿವು ತಮಗೆ ಬರಲಿಲ್ಲವೇ ?

ಅಧ್ಯಕ್ಷರು : ಅವರ ಪ್ರಕಾರ, ಕೊಡಗಿನಲ್ಲಿ ಇರುವವರೆಲ್ಲಾ ಕೊಡವರು.

ಶ್ರೀ ಎಂ.ಸಿ.ನಾಣಯ್ಯ : ನನ್ನ ಜಿಲ್ಲೆಯೊಳಗೆ ಅದು ಯಾರನ್ನೋ ಮಾರಾಟ ಮಾಡಿದರು ಎಂದು ಹೇಳಿದರು. ನನ್ನ ಜಿಲ್ಲೆಯಲ್ಲಿ ಈ ರೀತಿಯ ಕಾರ್ಯಕ್ರಮ ಆಗಿಲ್ಲ. ಬೇರೆ ಜಾಗದಲ್ಲಿ ಆಗಿದೆ ಎನ್ನತಕ್ಕಂಥದ್ದು ಪತ್ರಿಕೆಯಲ್ಲಿ ಬಂದಿದೆ. ಆದಕ್ಕೆ ಸರ್ಕಾರದ ವತಿಯಿಂದ ಹೇಳುತ್ತಿದ್ದೇನೆ. ಇದು ಸರಿಯಲ್ಲ. ಈ ತರಹ ಕಾರ್ಯಕ್ರಮ ನಮ್ಮ ಜಿಲ್ಲೆಯಲ್ಲಿ ಆಗಿಲ್ಲ. ಇನ್ನು ಮುಂದೆ ಈ ಕಾರ್ಯಕ್ರಮಗಳ ಬಗ್ಗೆ ನಿಗದಿ ಮಾಡಿರತಕ್ಕ ಹಣವನ್ನು ಸರಿಯಾಗಿ ಖರ್ಚುಮಾಡುತ್ತೇವೆ. ನಾವು ಬಂದು ಕೇವಲ 1 10 ದಿವಸಗಳಾಗಿದೆ, ಹಿಂದೆ ಏಕೆ ನಡೆಯಿತು, ಯಾವ ಕಾರಣಕ್ಕೋಸ್ಕರ ಎಂದು ಕೇಳಿದ್ದಕ್ಕೆ, ಸರ್ಕಾರದಿಂದ ಸ್ವಲ್ಪಮಟ್ಟಿಗೆ ಕೊಡತಕ್ಕ ಉತ್ತರವನ್ನೂ ಕೊಟ್ಟಿದ್ದೇನೆ. ಅವರು ಹೇಳಿರತಕ್ಕ ವಿಚಾರ ಯಾವುದಿದೆ, ಅದರ ಬಗ್ಗೆ ಹೇಳಬೇಕಾದರೆ, ಇನ್ನೂ ಹೆಚ್ಚು ಮಾಹಿತಿ ಬೇಕಾಗುತ್ತದೆ. ಆದರೆ, ಮುಂದೆ ಮಾತ್ರ ಈ ಹಣವನ್ನು ಸಂಪೂರ್ಣವಾಗಿ ಖರ್ಚುಮಾಡುವುದಕ್ಕೆ ಕಾರ್ಯಕ್ರಮ ಹಮ್ಮಿಕೊಳ್ಳುತ್ತೇವೆ.

Sri Ramakrishna : However, Government observed that some of the departments could not spend the amount released due to various administrative reasons ಎಂದು ಹೇಳಿದ್ದೀರಿ. ಈ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳುತ್ತೀರಾ ?

ಶ್ರೀ ಎಂ.ಸಿ.ನಾಣಯ್ಯ : ಎಲ್ಲಾದರೂ ಉದ್ದೇಶಪೂರ್ವಕವಾಗಿ, ದುರುದ್ದೇಶಪೂರ್ವಕವಾಗಿ ಹಣವನ್ನು ಖರ್ಚುಮಾಡದೇ, ಅವರಿಗೆ ತೊಂದರೆಯನ್ನು ಕೊಡತಕ್ಕ ರೀತಿಯಾಗಿದ್ದರೆ ಅಥವಾ ಹಣವನ್ನು ಲಪಟಾಯಿಸತಕ್ಕ ರೀತಿಯಲ್ಲಿ ಮಾಡಿದ್ದರೆ, ಖಂಡಿತವಾಗಿಯೂ ಕಾರ್ಯಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ಡಿ. ನಾರಾಯಣದಾಸ್ : ಮಾನ್ಯ ಅಧ್ಯಕ್ಷರೇ, ಮೂರು ವರ್ಷಗಳಿಂದ ಈ ಹಣವನ್ನು ಖರ್ಚು ಮಾಡಲಿಲ್ಲವೆಂದು ಗೊತ್ತಾಗಿದೆ. ಅದಕ್ಕಾಗಿ, ಅಂತಹ ಅಧಿಕಾರಿಗಳ ಮೇಲೆ ಉಗ್ರ ಕ್ರಮ ತೆಗೆದುಕೊಳ್ಳುವುದಕ್ಕಾಗುತ್ತದೆಯೇ?

ಶ್ರೀ ಎಂ.ಸಿ.ನಾಣಯ್ಯ : ಕಾನೂನುಬಾಹಿರವಾಗಿ ನಡೆದಿದ್ದರೆ, ಉಗ್ರ ಕ್ರಮ ಕೈಗೊಳ್ಳುತ್ತೇವೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ರಾಮಕೃಷ್ಣರವರು ಹೇಳುತ್ತಾರೆ, ಬಾಯಿ ದೊಡ್ಡದಿದೆ, ಹೃದಯವನ್ನು ಸ್ವಲ್ಪ ವಿಶಾಲ ಮಾಡಿಕೊಳ್ಳಿ ಎಂದು ಹರಿಜನ ಪ್ರಶ್ನೆ ಬಂದಾಗ ಹೃದಯವನ್ನೂ ಸ್ವಲ್ಪ ವಿಶಾಲ ಮಾಡಿಕೊಳ್ಳಿ.

ಶ್ರೀ ಎಂ.ಸಿ.ನಾಣಯ್ಯ : ನಮ್ಮ ಹೃದಯ ಬಹಳಷ್ಟು ವಿಶಾಲವಾಗಿಯೇ ಇದೆ.

ಚುಕ್ಕೆ ಗುರುತಿಲ್ಲದ ಪ್ರಶ್ನೆಗಳಿಗೆ ಲಿಖಿತ ಮೂಲಕ ನೀಡಲಾದ ಉತ್ತರಗಳು

ಅಧ್ಯಕ್ಷರು ದಿನಾಂಕ 6ನೇ ಏಪ್ರಿಲ್ 1995ರಂದು ಪ್ರಶ್ನೋತ್ತರ ನಡೆಯದ ಕಾರಣ, 13ನೇ ಪಟ್ಟಿಯಲ್ಲಿರುವ ಚುಕ್ಕೆಗುರುತಿನ 15 ಪ್ರಶ್ನೆಗಳಿ ಹಾಗೂ ಪೈಕಿ ಲಿಖಿತ ಮೂಲಕ ಉತ್ತರಿಸುವ 95 ಪ್ರಶ್ನೆಗಳ ಪೈಕಿ 80 ಪ್ರಶ್ನೆಗಳಿಗೆ ಬಂದಿರುವ ಉತ್ತರಗಳನ್ನು ಸಭೆಯ ಮುಂದೆ ಮಂಡಿಸುತ್ತಿದ್ದೇವೆ. ಹಾಗೂ ಈ ದಿನದ ಲಿಖಿತ ಮೂಲಕ ಉತ್ತರಿಸುವ ಪ್ರಶ್ನೋತ್ತೋರಗಳ ಪಟ್ಟಿಯನ್ನು ಸಹ ಸಭೆಯ ಮುಂದೆ ಮಂಡಿಸುತ್ತಿದ್ದೇನೆ.

**ವಿಷಯ : ರಾಜ್ಯದಲ್ಲಿನ ಅಲಂಕಾರಿಕ ಶಿಲೆಗಳು ಮತ್ತು ಇತರ ಖನಿಜಗಳ ಗುತ್ತಿಗೆ ನೀಡುವುದರ ಬಗ್ಗೆ ಕುರಿತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 716(1159)

ಶ್ರೀ ಟಿ.ಬಿ.ಜಯಚಂದ್ರ (ಕಳ್ಳಂಬೆಳ್ಳ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ರಾಜ್ಯದಲ್ಲಿ ಅಲಂಕಾರಿಕ ಶಿಲೆಗಳನ್ನು ಮತ್ತು ಇತರ ಖನಿಜಗಳನ್ನು ಗುತ್ತಿಗೆ ನೀಡುವ ಬಗ್ಗೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಎರಡೂ ಸದನದ-ಸದಸ್ಯರ ಜಂಟಿ ಸಮಿತಿಯೊಂದನ್ನು ರಚಿಸಿರುವುದು ನಿಜವೆ?

ಆ. ಜಂಟಿ ಸದನದ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಸರ್ಕಾರ ಒಪ್ಪಿಕೊಂಡು ಅನುಷ್ಠಾನಗೊಳಿಸಿದೆಯೆ?

ಇ. ಇಲ್ಲದಿದ್ದಲ್ಲಿ ಕಾರಣಗಳೇನು?

ಈ. ಕ್ವಾರಿಗಳನ್ನು ಗುತ್ತಿಗೆ ನೀಡುವ ವಿಚಾರವಾಗಿ ಸರಿಯಾದ ನೀತಿ ಇಲ್ಲದಿರುವುದರಿಂದ ಆದಾಯದ ನಷ್ಟವಾಗುತ್ತಿರುವುದು ಸರ್ಕಾರಕ್ಕೆ ಗೊತ್ತಿದೆಯೇ?

ಶ್ರೀ ಎಸ್.ಡಿ.ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು):

ಅ. ಹೌದು

ಆ. ಹೌದು

ಇ. ಉದ್ಭವಿಸುವುದಿಲ್ಲ

ಉ. ಉದ್ಭವಿಸುವುದಿಲ್ಲ

**ವಿಷಯ : ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆಗಳ ಸ್ಥಾಪನೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 718(632)

ಶ್ರೀ ಕೆ.ಎಸ್.ನಾಗೇಗೌಡ (ಕಿರುಗಾವಲ್) : ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ, ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಕೇಂದ್ರ ಸರ್ಕಾರಕ್ಕೆ ಅನುಮತಿಯನ್ನು (ಲೆಟರ್ ಆಫ್ ಇಂಟೆಂಟ್) ಕೇಳಲಾಗಿದೆಯ)

ಆ. ಹಾಗಿದ್ದರೆ ಎಷ್ಟು ಕಾರ್ಖಾನೆಗಳನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ? ವಿವರ ನೀಡುವುದು.

ಶ್ರೀ ಪಿ.ಸಿ. ಸಿದ್ಧನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು) :

ಅ. ಹೌದು

ಆ. ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ರಾಜ್ಯ ಸರ್ಕಾರವು 15 ಪ್ರಸ್ತಾವನೆಗಳನ್ನು ಭಾರತ ಸರ್ಕಾರಕ್ಕೆ ಅನುಮತಿ ಪತ್ರ ಕೋರಿ ಶಿಫಾರಸ್ಸು ಮಾಡಿದೆ. ಇವುಗಳ ಪೈಕಿ 5ಕ್ಕೆ ಅನುಮತಿ ಪತ್ರ ದೊರೆತಿದ್ದು, 4 ತಿರಸ್ಕೃತಗೊಂಡು ಇನ್ನುಳಿದ 6 ಪ್ರಸ್ತಾವನೆಗಳು ಭಾರತ ಸರ್ಕಾರದ ಮುಂದೆ ಪರಿಶೀಲನೆಯಲ್ಲಿರುತ್ತವೆ. (ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ).

## ಅನುಬಂಧ-1

ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗಾಗಿ ಕೇಂದ್ರ ಸರ್ಕಾರಕ್ಕೆ ಅನುಮತಿ ಪತ್ರ ನೀಡುವಿಕೆಗಾಗಿ ಶಿಫಾರಸ್ಸು ಮಾಡಲಾದ ಪ್ರಸ್ತಾವನೆಗಳ ವಿವರ :

ಅ. ಅನುಮತಿ ಪತ್ರಗಳನ್ನು ಪಡೆಯಲಾಗಿರುವ ಕಾರ್ಖಾನೆಗಳು

**1. ಸಹಕಾರ ಕ್ಷೇತ್ರ**

1. ಶ್ರೀ ಭೀಮಾಶಂಕರ್ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಇಂಡಿ, ಬಿಜಾಪುರ ಜಿಲ್ಲೆ.
2. ಶ್ರೀ ಮಹಾತ್ಮಗಾಂಧಿ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಹಚಿಕ್‌ಮತ್, ಬೀದರ್ ಜಿಲ್ಲೆ
3. ರೈತರ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಮುಧೋಳ್ ಬಿಜಾಪುರ ಜಿಲ್ಲೆ
4. ಮಾರ್ಕಂಡೇಯ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಕಾಕರೆ ಬೆಳಗಾಂ ಜಿಲ್ಲೆ

**2. ಖಾಸಗಿ ಕ್ಷೇತ್ರ**

5. ಮೇ ಜಮಖಂಡಿ ಶುಗರ್ಸ್ (ಲಿ) ಹಿರೇಪಡಿಸಲಗಿ, ಜಮಖಂಡಿ ತಾ: ಬಿಜಾಪುರ ಜಿಲ್ಲೆ

**ಆ. ತಿರಸ್ಕರಿಸಲಾಗಿರುವ ಪ್ರಸ್ತಾವನೆಗಳು :**

1. ಅನುಭವ ಮಂಟಪ ಶುಗರ್ಸ್ (ಲಿ), ಬಸವಕಲ್ಯಾಣ, ಬೀದರ್ ಜಿಲ್ಲೆ
2. ಕೆ.ಎಸ್,. ಗುರುಸ್ವಾಮಿ ಅಂಡ್ ಕಂ. ಮೆರಕವಾಡ, ಹಳಿಯಾಳ ತಾ: ಉತ್ತರಕನ್ನಡ ಜಿಲ್ಲೆ



3. ರಾಮ್ ಕೋ - ಇಂಡಸ್ಟ್ರೀಸ್ ಬನ್ನೂರು, ಟಿ.ನರಸೀಪುರ ತಾ: ಮೈಸೂರು ಜಿಲ್ಲೆ
4. ದಾಲ್ಮಿಯಾ ಸಿಮೆಂಟ್ಸ್ (ಭಾರತ್) ಲಿಮಿಟೆಡ್, ಮತ್ತಂಗಿ ಹುಮ್ನಾಬಾದ್ ತಾ:, ಬೀದರ್ ಜಿಲ್ಲೆ

ಇ. ಕೇಂದ್ರ ಸರ್ಕಾರದ ಪರಿಶೀಲನೆಯಲ್ಲಿರುವ ಪ್ರಸ್ತಾವನೆಗಳು :

1. ಕೃಷ್ಣ ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ತೆರದಾಳ್, ಜಖಮಂಡಿ ತಾ: ಬಿಜಾಪುರ ಜಿಲ್ಲೆ

ಖಾಸಗಿ ಕ್ಷೇತ್ರ :

2. ಮೈಸೂರು ಫ್ರೂಟ್ ಪ್ರಾಡಕ್ಟ್ಸ್ ಲಿಮಿಟೆಡ್, ಬನ್ನೂರು ಟಿ. ನರಸೀಪುರ ತಾ : ಮೈಸೂರು ಜಿಲ್ಲೆ
3. ಕರ್ನಾಟಕ ಬ್ರೀವರೀಸ್ ಅಂಡ್ ಡಿಸ್ಟಲರೀಸ್, ಚೆನ್ನಗಿರಿ, ಶಿವಮೊಗ್ಗ ಜಿಲ್ಲೆ
4. ಮುಧೋಳ್ ಶುಗರ್ಸ್ (ಲಿ) ಮುಧೋಳ್, ಬಿಜಾಪುರ ಜಿಲ್ಲೆ
5. ಜುವಾರಿ ಆಗ್ರೋ ಕೆಮಿಕಲ್ಸ್ (ಲಿ) ಹಳ್ಳಿಖೇಡ್ ಹುಮ್ನಾಬಾದ್ ತಾ: ಬೀದರ್ ಜಿಲ್ಲೆ
6. ಕೊಪ್ಪ ಶುಗರ್ಸ್ (ಲಿ) ಮದ್ದೂರು ತಾ: ಮಂಡ್ಯ ಜಿಲ್ಲೆ

**ವಿಷಯ : ಚಿಕ್ಕಮಗಳೂರು ಜಿಲ್ಲೆಯಲ್ಲಿನ ಕೊಳಚೆ ಪ್ರದೇಶಗಳು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 719(860)

ಶ್ರೀ.ಸಿ.ಆರ್. ಸಗೀರ್ ಅಹಮದ್(ಚಿಕ್ಕಮಗಳೂರು) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಸರ್ಕಾರ ಎಷ್ಟು ಕೊಳಚೆ ಪ್ರದೇಶಗಳನ್ನು ಗುರುತಿಸಿದೆ?

ಆ. ಇಲ್ಲಿಯವರೆಗೆ ಈ ಕೊಳಚೆ ಪ್ರದೇಶಗಳಿಗೆ ವೆಚ್ಚವಾಗಿದ್ದ ಹಣವೆಷ್ಟು?

ಇ. ಈ ವರ್ಷದಲ್ಲಿ ಯಾವುದಾದರೂ ಹೊಸ ಕೊಳಚೆ ಪ್ರದೇಶಗಳನ್ನು ಗುರುತಿಸಲಾಗಿದೆಯೇ?

ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. 47 ಕೊಳಚೆ ಪ್ರದೇಶಗಳನ್ನು ಮಂಡಳಿಯು ಗುರುತಿಸಿದೆ.

ಆ. 1994 ಅಂತ್ಯದವರೆಗೆ ಒಟ್ಟು 67.57 ಲಕ್ಷ ರೂ.ಗಳನ್ನು ಮೂಲಭೂತ ಸೌಲಭ್ಯ ಒದಗಿಸಲು ಖರ್ಚು ಮಾಡಲಾಗಿದೆ

ಇ. 1994-95ರಸಾಲಿನಲ್ಲಿ 5 ಕೊಳಚೆ ಪ್ರದೇಶಗಳನ್ನು ಗುರುತಿಸಲಾಗಿದೆ.

**ವಿಷಯ : ಅರ್ಡಿಯಲ್ಲಿ ಹಿಂದುಳಿದ ವರ್ಗದ ವಿದ್ಯಾರ್ಥಿನಿಲಯ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 721 (1227)

ಶ್ರೀ ಕೆ. ಪ್ರತಾಪಚಂದ್ರಶೆಟ್ಟಿ (ಕುಂದಾಪುರ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಕುಂದಾಪುರ ತಾಲ್ಲೂಕು ಅರ್ಡಿಯಲ್ಲಿ ಹಿಂದುಳಿದ ವರ್ಗಗಳ ಹಾಗೂ ಅಲ್ಪ ಸಂಖ್ಯಾತರ ವಿದ್ಯಾರ್ಥಿ ನಿಲಯವನ್ನು ತೆರೆಯಲು ಸರ್ಕಾರಕ್ಕೆ ಮನವಿ ಏನಾದರೂ ಬಂದಿದೆಯೇ?

ಆ. ಹಾಗಿದ್ದಲ್ಲಿ ಎಂದು ಪ್ರಾರಂಭಿಸಲಾಗುವುದು?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು) :

ಅ. ಹೌದು

ಆ. ಹಣಾವಕಾಶ ಮಾಡಿಕೊಂಡ ನಂತರ ವಿದ್ಯಾರ್ಥಿನಿಲಯ ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ವಿಷಯ : ಅವರ್ಸೆಯಲ್ಲಿ ಹಿಂದುಳಿದ ವರ್ಗದ ವಿದ್ಯಾರ್ಥಿ ನಿಲಯ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 722(1228)

ಶ್ರೀ ಕೆ. ಪ್ರತಾಪಚಂದ್ರಶೆಟ್ಟಿ (ಕುಂದಾಪುರ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

1. ಉಡುಪಿ ತಾಲ್ಲೂಕು ಅವರ್ಸೆಯಲ್ಲಿ ಹಿಂದುಳಿದ ವರ್ಗಗಳ ಹಾಗೂ ಅಲ್ಪ ಸಂಖ್ಯಾತರ ವಿದ್ಯಾರ್ಥಿ ನಿಲಯವನ್ನು ತೆರೆಯುವ ಬಗ್ಗೆ ಮನವಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

2. ಹಾಗಿದ್ದಲ್ಲಿ ಎಂದು ಪ್ರಾರಂಭಿಸಲಾಗುವುದು?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು) :

ಅ. ಹೌದು

ಆ. ಹಣಾವಕಾಶ ಮಾಡಿಕೊಂಡ ನಂತರ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ವಿಷಯ : ಮೈಸೂರು ನಗರದ ನೀರಿನ ಸಮಸ್ಯೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 723 (845)

ಶ್ರೀ ಹೆಚ್. ಶಂಕರಲಿಂಗೇಗೌಡ (ಚಾಮರಾಜನಗರ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಕಾವೇರಿ, ಕಬಿನ ಮೈದಾನದಲ್ಲಿ ಹರಿಯುತ್ತಿದ್ದರೂ, ಮೈಸೂರಿನ ಎಲ್ಲಾ ನಾಗರಿಕರಿಗೆ ಕುಡಿಯುವ ನೀರು ಲಭ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರದ ಕ್ರಮಗಳೇನು?

ಆ. ಈ ಬಗ್ಗೆ ಪೂರ್ವಭಾವಿ ಯೋಜನೆಗಳೇನಾದರೂ ಇದೆಯೇ? ಇದ್ದಲ್ಲಿ ಅವು ಯಾವುವು.

ಇ. ಮೇಳಪುರ ಕುಡಿಯುವ ನೀರಿನ ಯೋಜನೆಯನ್ನು ಯಾವಾಗ ಪೂರೈಸಲಾಗುವುದು.

ಈ. ಅನೇಕ ಬಡಾವಣೆಗಳಲ್ಲಿ ಪೂರ್ಣವಾಗದ ಜಲಸಂಗ್ರಾಹಣ ಕಾರ್ಯಗಾರ ಕಾಮಗಾರಿಯು ಅರ್ಧ ಮಟ್ಟದಲ್ಲಿ ನಿಂತಿರುವ ಕೆಲಸಗಳನ್ನು ಯಾವಾಗ ಪೂರ್ಣಗೊಳಿಸಲಾಗುವುದು.

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ. ಹೌದು, ಮೈಸೂರು ನಗರದ ಎಲ್ಲಾ ನಾಗರೀಕರಿಗೆ ಕುಡಿಯುವ ನೀರು ಒದಗಿಸಲು ಕಾವೇರಿ ಮೂಲದಿಂದ ಹಲವಾರು ನೀರು ಸರಬರಾಜು ಅಭಿವೃದ್ಧಿ ಯೋಜನೆಗಳು ಪ್ರಗತಿಯಲ್ಲಿವೆ. ಹಾಗೂ ಸಾಧ್ಯವಿಲ್ಲದಿರುವ ಕಡೆಗಳಲ್ಲಿ, ಮುಖ್ಯವಾಗಿ ಪ್ರಾಧಿಕಾರದ ಬಡಾವಣೆಗಳಲ್ಲಿ ಕೊಳವೆ ಬಾವಿಗಳನ್ನು ಕೊರೆಸಿ ನೀರು ಸರಬರಾಜು ಮಾಡಲಾಗುತ್ತಿದೆ.

ಆ. ಹೌದು, ಈ ಕೆಳಕಂಡ ಯೋಜನೆಗಳು ಪ್ರಗತಿಯಲ್ಲಿವೆ .

ಅ. ಮೈಸೂರು ನಗರಕ್ಕೆ ನೀರು ಸರಬರಾಜು ಅಭಿವೃದ್ಧಿ ಯೋಜನೆ- ವಿಕ್ರಾಂತ್ ಬಳಿ ಬೂಸ್ಟರ್ ಪಂಪ್ ಅಳವಡಿಕೆ - ರೂ. 93-00 ಲಕ್ಷಗಳು

ಆ. ಬೆಳಗೊಳದಿಂದ ನೀರು ಅಭಿವೃದ್ಧಿ ಯೋಜನೆ ರೂ. 170-00 ಲಕ್ಷಗಳು

ಇ. ಮೈಸೂರು ನಗರದ ವಿಸ್ತರಣಾ ಕೊಳವೆಗಳ ನವೀಕರಣ ಯೋಜನೆ - ರೂ.650-00 ಲಕ್ಷಗಳು

ಈ. ಮೈಸೂರು ನಗರಕ್ಕೆ 4 ನೇ ಹಂತದ ನೀರು ಸರಬರಾಜು ಯೋಜನೆ ರೂ. 1981-00 ಲಕ್ಷಗಳು.

ಇ. ಈ ಯೋಜನೆಗೆ 19.81 ಕೋಟಿ ರೂಗಳಿಗೆ ಆಡಳಿತಾತ್ಮಿಕ ಅನುಮೋದನೆ ನೀಡಿದೆ. ಆದರೆ ಈ ಯೋಜನೆಯ ಅಂದಾಜನ್ನು 28.00 ಕೋಟಿಗಳಿಗೆ ಪರಿಷ್ಕರಿಸಲಾಗಿದೆ. ಈ ಯೋಜನೆಯನ್ನು ಏಷ್ಯನ್ ಅಭಿವೃದ್ಧಿ ಬ್ಯಾಂಕ್‌ರವರ ಆರ್ಥಿಕ ಸಹಾಯದಿಂದ ಕೈಗೊಳ್ಳಲು ಉದ್ದೇಶಿಸಲಾಗಿದೆ. ಸಾಲವು ಸಕಾಲಕ್ಕೆ ದೊರೆತರೆ ಯೋಜನೆಯನ್ನು 5 ವರ್ಷಗಳಲ್ಲಿ ಮುಗಿಸಬಹುದಾಗಿದೆ.

ಈ. ಅ. 2.5 ಮಿ. ಗ್ಯಾಲನ್ ಸಾಮರ್ಥ್ಯದ ಕುವೆಂಪು ನಗರ ವಿಭಾಗೀಯ ಜಲಸಂಗ್ರಹಣ

ಈ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ವಹಿಸಲಾಗಿದ್ದು ಅರ್ಧದಲ್ಲೇ ಕೆಲಸವನ್ನು ಸ್ಥಗಿತಗೊಳಿಸಲಾಗಿದೆ. ಇದು ಸಿ.ಎಸ್.ಸಿ. ಜಲಸಂಗ್ರಹ ಕಾರ್ಯಗಾರವಾಗಿದ್ದು, ಬೇರೆಯವರಿಂದ ಕೆಲಸವನ್ನು ಮುಂದುವರಿಸುವುದು ಕಷ್ಟ ಸಾಧ್ಯವಾದದ್ದು. ಆದ್ದರಿಂದ ಅವರಿಂದಲೇ ಈ ಕೆಲಸವನ್ನು ಮುಗಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

ಆ. 2.5 ಮಿ. ಗ್ಯಾಲನ್ ಯಾದನಗಿರಿ ವಿಭಾಗೀಯ ಜಲಸಂಗ್ರಹಾಗಾರ

ಈ ಕಾಮಗಾರಿಯ ಮುಲ ಗುತ್ತಿಗೆದಾರರು ಅರ್ಧದಲ್ಲೇ ಬಿಟ್ಟು ಹೋಗಿದ್ದರಿಂದ ಉಳಿಕೆ ಕೆಲಸವನ್ನು ಬೇರೆ ಗುತ್ತಿಗೆದಾರರಿಂದ ಮಾಡಿಸಲಾಗುತ್ತಿದ್ದು, ಜುಲೈ ತಿಂಗಳಲ್ಲಿ ಪೂರ್ಣಗೊಳಿಸಲಾಗುವುದು.

ಇ. 2.5 ಮಿ ಗ್ಯಾಲನ್ ಜರ್ಮನ್ ಪ್ರೆಸ್ ವಿಭಾಗೀಯ ಜಲಸಂಗ್ರಾಹಣಾಗಾರ :

ಈ ಕಾಮಗಾರಿಯನ್ನು ಸಹಮೂಲ ಗುತ್ತಿಗೆದಾರರು ಅರ್ಧದಲ್ಲೇ ಬಿಟ್ಟಿ ಹೋಗಿದ್ದರಿಂದ ಉಳಿಕೆ ಕೆಲಸಕ್ಕಾಗಿ ಟೆಂಡರನ್ನು ಕರೆಯಲಾಗಿ ಅಧನ್ನು ಪರಿಶೀಲಿಸಲಾಗುತ್ತಿದೆ.

ಈ. 2.5 ಲಕ್ಷ ಗ್ಯಾಲನ್ ರಾಜೇಂದ್ರನಗರ ಮೇಲ್ಮನವಮಟ್ಟದ ಜಲಸಂಗ್ರಹಣಾಗಾರ

ಈ ಕಾಮಗಾರಿಯ ಕೆಲಸ ಅರ್ಧಕ್ಕೆ ನಿಂತಿದ್ದು ಗುತ್ತಿದಾರರನ್ನು ರದ್ದುಪಡಿಸಿ ಮತ್ತು ಉಳಿದ ಕೆಲಸಕ್ಕೆ ಟೆಂಡರನ್ನು ಕರೆಯಲಾಗುತ್ತಿದೆ.

**ವಿಷಯ : ಮೈಸೂರು ಮಹಾನಗರ ಪಾಲಿಕೆಯಲ್ಲಿ ಪೌರ ಕಾರ್ಮಿಕರ ಕೊರತೆ**

ಚುಕ್ಕೆಗುರುತಿಲ್ಲದೆ ಪ್ರಶ್ನೆ ಸಂಖ್ಯೆ : 724 (846)

ಶ್ರೀ ಹೆಚ್.ಎಸ್. ಶಂಕರಲಿಂಗೇಗೌಡ (ಚಾಮರಾಜನಗರ) : ಮಾನ್ಯ ನಗರಾಭಿವೃದ್ಧಿ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಮೈಸೂರು ನಗರ ಪಾಲಿಕೆಯಲ್ಲಿ ಈಗ್ಗೆ ಐದು ವರ್ಷಗಳ ಹಿಂದೆ ಇದ್ದ ಪೌರ ಕಾರ್ಮಿಕರ ಸಂಖ್ಯೆ ಎಷ್ಟು

ಆ. ಹಾಲಿ ಈಗ ಇರುವ ಪೌರ ಕಾರ್ಮಿಕರ ಸಂಖ್ಯೆ ಎಷ್ಟು?

ಇ. ಮೈಸೂರು ನಗರವು ದಿನೇ ದಿನೇ ಬೆಳೆಯುತ್ತಿದ್ದ ಸ್ವಚ್ಛತೆ ದೃಷ್ಟಿಯಿಂದ ಮೈಸೂರು ನಗರ ಪಾಲಿಕೆಯಲ್ಲಿ ಪೌರ ಕಾರ್ಮಿಕರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ

ಈ. ಈ ಕೊರತೆಯನ್ನು ನೀಡುವ ಬಗ್ಗೆ ಸರ್ಕಾರದ ಕ್ರಮಗಳೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು):

ಅ. 998

ಆ. 970

ಇ. ಸ್ವಚ್ಛತಾ ಕಾರ್ಯವನ್ನು ಖಾಸಗಿ ಗುತ್ತಿಗೆದಾರರಿಗೆ ವಹಿಸುವುದು ಸರ್ಕಾರದ ನೀತಿಯಾಗಿರುವುದರಿಂದ ಪೌರ ಕಾರ್ಮಿಕರ ಕೊರತೆ ಕಂಡು ಬಂದಿಲ್ಲ.

ಈ. (ಇ)ಗೆಕೊಟ್ಟಿರುವ ಉತ್ತರದಿಂದ ಇದು ಉದ್ಭವಿಸುವುದಿಲ್ಲ.

**ವಿಷಯ : ಶಿಗ್ಗಾಂವ್, ಸವಣೂರ, ಬಂಕಾಪುರಗಳಿಗೆ ವರದಾನ ನದಿಯಿಂದ ಸಂಯುಕ್ತ ಕುಡಿಯುವ ನೀರಿನ ಯೋಜನೆ**

ಚುಕ್ಕೆ ಗುರುತಿಲ್ಲದ ಸಂಖ್ಯೆ : 725 (1195)

ಶ್ರೀ ಮಂಜುನಾಥ ಸಿ. ಕುನ್ನೂರ (ಶಿಗ್ಗಾಂವ್) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಶಿಗ್ಗಾಂವ್, ಸವಣೂರ್, ಬಂಕಾಪುರ ಸಂಯುಕ್ತ ಕುಡಿಯುವ ನೀರಿನ ಯೋಜನೆ ವರದಾ ನದಿಯಿಂದ ಎಂದು ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾಗಿದೆ?

ಆ. ಸದರಿ ಯೋಜನೆಗೆ ಈಗ ಎಷ್ಟು ಹಣ ಖರ್ಚು ಮಾಡಲಾಗಿದೆ ಅದು ಈಗ ಯಾವ ಹಂತದಲ್ಲಿದೆ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ದಿನಾಂಕ 9-10-91 ರಂದು

ಆ. ಫೆಬ್ರವರಿ 95ರ ಕೊನೆಗೆ 594.25 ಲಕ್ಷ ರೂ.ಗಳನ್ನು ಖರ್ಚು ಮಾಡಲಾಗಿದೆ. ನಾಗನೂರು ಕೆರೆ ಸಾಮರ್ಥ್ಯವನ್ನು ಹೆಚ್ಚಿಸುವ, ಒಡ್ಡನ್ನು ಬಲಪಡಿಸುವ ಕೆಲಸ ಪೂರ್ಣವಾಗುವ ಹಂತದಲ್ಲಿದೆ. ಉಳಿದ ಕೆಲಸಗಳಲ್ಲಿ ಜಲಶುದ್ಧೀಕರಣಾಗಾರಕ್ಕೆ ಟೆಂಡರನ್ನು ಎರಡನೇ ಬಾರಿ ಕರೆಯಲು ಕ್ರಮ ತೆಗೆದುಕೊಳ್ಳಲಾಗಿದೆ. ಉಳಿದ ಕಾಮಗಾರಿಗಳಿಗೆ ಪರಿಷ್ಕೃತ ಅಂದಾಜಿಗೆ ಅನುಮೋದನೆ ನೀಡಿದ ನಂತರ ತೆಗೆದುಕೊಳ್ಳಲಾಗುವುದು.

**ವಿಷಯ : ಶಿಗ್ಗಾಂವ್‌ದಲ್ಲಿ ಕೆ.ಹೆಚ್.ಬಿ. ವತಿಯಿಂದ ಮನೆಗಳ ನಿರ್ಮಾಣ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 726(1198)

ಶ್ರೀ ಮಂಜುನಾಥ ಸಿ. ಕುನ್ನೂರ (ಶಿಗ್ಗಾಂವ್) : ಮಾನ್ಯ ವಸತಿ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಧಾರವಾಡ ಜಿಲ್ಲೆಯಲ್ಲಿ ಕರ್ನಾಟಕ ಗೃಹಮಂಡಲಿ ವತಿಯಿಂದ ಎಷ್ಟು ಮನೆಗಳನ್ನು ಯಾವ ಯಾವ ಊರುಗಳಲ್ಲಿ ಕಟ್ಟಲಾಗಿದೆ.

ಆ. ಶಿಗ್ಗಾಂವ್ ಪಟ್ಟಣದಲ್ಲಿ ಮನೆಗಳ ನಿರ್ಮಾಣ ಮಾಡಲು ಗೃಹ ನಿರ್ಮಾಣ ಮಂಡಲಿಯಿಂದ ಯೋಜನೆ ತಯಾರು ಮಾಡಲಾಗಿದೆಯೇ?

ಇ. ಹಾಗಿದ್ದಲ್ಲಿ ಈ ವಿಷಯದಲ್ಲಿ ಸರ್ಕಾರದವರು ಕೈಗೊಂಡ ಕ್ರಮಗಳೇನು?

ಶ್ರೀ ಬಸವರಾಜ್‌ರಾಯರೆಡ್ಡಿ (ವಸತಿ ರಾಜ್ಯ ಸಚಿವರು) :

ಧಾರವಾಡ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಗೃಹ ಮಂಡಲಿಯಿಂದ 4324 ಮನೆಗಳನ್ನು ನಿರ್ಮಿಸಲಾಗಿದೆ.

| | | | |
|---|---|---|---|
| ಕೃಷ್ಣಾಪುರ ಹುಬ್ಬಳಿ | 133 | ಕೇಶವಾಪುರ | 165 |
| ಗೋಪನ ಕೊಪ್ಪ | 290 | ಉಣಕೆರೆ | 667 |

| | | | |
|---|---|---|---|
| ಗದಗ | 1010 | ಡಿ.ಎಸ್.ಕೊಪ್ಪ | 237 |
| ಹಿರೇಕೆರೂರು (ಪ್ರಗತಿಯಲ್ಲಿವೆ) | 148 | ಮುಂಡರಗಿ (ಪ್ರಗತಿಯಲ್ಲಿವೆ) | 203 |
| ನವನಗರ | 218 | ನಾಗಶೆಟ್ಟಿಕೊಪ್ಪ | 164 |
| ಎಂ.ಟಿ.ಎಸ್.ಕಾಲೋನಿ ಹುಬ್ಬಳ್ಳಿ | 124 | ಕೆಂಪಗಿರಿ ಧಾರವಾಡ | 8 |
| ಕೊಪ್ಪ ಟ್ಯಾಂಕ್ ಧಾರವಾಡ | 39 | ಚನ್ನಪೇಟೆ ಹುಬ್ಬಳ್ಳಿ | 4 |
| ತೋಪಲಗಟ್ಟಿ | 150 | ಗೊಪನಕೊಪ್ಪ | 49 |
| ಡಿ.ಡಿ.ಪಿ.ಐ. ಕಾಂಪೌಂಡ್ ಧಾರವಾಡ | 56 | ಚಾಣುಕ್ಯಪುರಿ | 16 |
| ಹೆಗ್ಗೇರಿ ಹುಬ್ಬಳ್ಳಿ | 138 | | |

ಆ. -ಇಲ್ಲ-

ಇ. ಉದ್ಭವಿಸುವುದಿಲ್ಲ

**ವಿಷಯ : ಮಹಿಳಾ ಮಂಡಲಿ ಕಾರ್ಯದ ಬಗ್ಗೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 727(531)

ಶ್ರೀ ಕೆ.ಎಸ್. ಪುಟ್ಟಣ್ಣಯ್ಯ (ಪಾಂಡವಪುರ) : ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಮಹಿಳಾ ಮಂಡಲಿಗಳು ಮಹಿಳೆಯರ ಬದುಕಿಗೆ ಮಾರ್ಗದರ್ಶನ ನೀಡಲು ಯಾವ ರೀತಿಯ ಸಹಕಾರ ಮಾಡುತ್ತಿವೆ. ವಿವರಗಳನ್ನು ಒದಗಿಸುವುದು.

ಶ್ರೀಮತಿ ಬಿ.ಟಿ. ಲಲಿತಾ ನಾಯಕ್ (ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರು)

ಅ. ಮಹಿಳಾ ಮಂಡಲಿಗಳು ಮಹಿಳೆಯರನ್ನು ಸಂಘಟಿಸಿ ಸಾಮಾಜಿಕ ಮತ್ತು ಆರ್ಥಿಕ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡು ಕಾರ್ಯಪ್ರವೃತ್ತರಾಗುವಂತೆ ಪ್ರೋತ್ಸಾಹಿಸಿ ಮಾರ್ಗದರ್ಶನ ನೀಡುತ್ತಿದೆ.

**ವಿಷಯ : ಕನ್ನಡ ಬಾಷೆಯನ್ನು ಕಡ್ಡಾಯ ಮಾಡುವುದರ ಬಗ್ಗೆ**

ಚುಕ್ಕೆ •ಗುರುತಿಲ್ಲದ ಪ್ರಶ್ನೆ ಸಂಖ್ಯೆ : 728(530)

ಶ್ರೀ ಕೆ.ಎಸ್. ಪುಟ್ಟಣ್ಣಯ್ಯ (ಪಾಂಡವಪುರ) : ಮಾನ್ಯ ಕನ್ನಡ ಮತ್ತು ಸಂಸ್ಕೃತ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಕನ್ನಡ ಬಾಷೆಯನ್ನು ಎಲ್ಲಾ ಹಂತದಲ್ಲೂ ಕಡ್ಡಾಯ ಮಾಡುವುದರ ಬಗ್ಗೆ ಸರ್ಕಾರದ ನಿಲುವೇನು?

ಆ. ಸರೋಜಿನಿ ಮಹಿಷಿ ವರದಿಯನ್ನು ಜಾರಿಗೆ ತರಲು ಸರ್ಕಾರದ ನಿಲುವೇನು?

ಶ್ರೀಮತಿ ಬಿ.ಟಿ. ಲಲಿತಾನಾಯಕ್ (ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಮಂತ್ರಿಗಳು) :

ಅ. ಕನ್ನಡ ಭಾಷೆಯನ್ನು ಆಡಳಿತದ ಎಲ್ಲಾ ಹಂತದಲ್ಲೂ ಕಡ್ಡಾಯವಾಗಿ ಜಾರಿ ಮಾಡಬೇಕೆಂಬುದು ಸರ್ಕಾರದ ದೃಢ ನಿಲುವಾಗಿದೆ.

ಆ. ಸರೋಜಿನಿ ಮಹಿಷಿ ವರದಿಯನ್ನು ಸರ್ಕಾರವು ಒಪ್ಪಿ ಅಂಗೀಕರಿಸಿದೆ ಮತ್ತು ಸಮಿತಿಯು ಶಿಫಾರಸುಗಳನ್ನು ಪರಿಣಾಮಕಾರಿಯಾಗಿ ಜಾರಿ ಮಾಡಲಾಗುತ್ತಿದೆ.

**ವಿಷಯ ರಾಜ್ಯದಲ್ಲಿನ ಸಕ್ಕರೆ ಕಾರ್ಖಾನೆಗಳ ವಿವರ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 729(533)

ಶ್ರೀ ಕೆ.ಎಸ್. ಪುಟ್ಟಣಯ್ಯ (ಪಾಂಡವಪುರ) : ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಪರಿಸರ ಮಾಲಿನ್ಯ ರಾಜ್ಯ ಸಚಿವರು ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಸಕ್ಕರೆ ಕಾರ್ಖಾನೆಗಳು ಎಷ್ಟಿವೆ ಅವುಗಳಲ್ಲಿ ಸಹಕಾರಿ ಕ್ಷೇತ್ರ, ಜಂಟಿ ಕ್ಷೇತ್ರ ಖಾಸಗಿ ಕ್ಷೇತ್ರ ಇವುಗಳ ಪ್ರತಿಯೊಂದರ ಸಂಖ್ಯೆ ಎಷ್ಟು

ಆ. ಸಹಕಾರಿ ಕ್ಷೇತ್ರದಲ್ಲಿ ಸರ್ಕಾರಿ ಹಸ್ತಕ್ಷೇಪ ಇಲ್ಲದೆ ಮಹಾರಾಷ್ಟ್ರದ ಮಾದರಿ ಸಹಕಾರಿ ಕಾನೂನನ್ನು ತಿದ್ದುಪಡಿ ಮಾಡುವ ಬಗ್ಗೆ ಸರ್ಕಾರದವರು ಆಲೋಚಿಸಿರುವರೆ

ಶ್ರೀ ಪಿ.ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ, ಯಂತ್ರಕರೆ, ಪರಿಸರ ಹಾಗೂ ಜೀವಪರಿಸ್ಥಿತಿ ಶಾಸ್ತ್ರ ರಾಜ್ಯ ಸಚಿವರು):

ಅ. ರಾಜ್ಯದಲ್ಲಿ 30 ಸಕ್ಕರೆ ಕಾರ್ಖಾನೆಗಳಿವೆ. ಅವುಗಳ ಕ್ಷೇತ್ರವಾರು ವಿವರ ಈ ಕೆಳಕಂಡಂತೆ ಇದೆ.

| | | |
|---|---|---|
| ಸಹಕಾರಿ ಕ್ಷೇತ್ರ | - | 17 |
| ಸಾರ್ವಜನಿಕ ಕ್ಷೇತ್ರ | - | 2 |
| ಜಂಟಿ ಕ್ಷೇತ್ರ | - | 2 |
| ಖಾಸಗಿ ಕ್ಷೇತ್ರ | - | 9 |
| ಒಟ್ಟು | | 30 |

ಆ. ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆಗೆ ಮಹರಾಷ್ಟ್ರ ಸಹಕಾರಿ ಸಂಘಗಳ ಕಾಯ್ದೆಯ ಮಾದರಿಯ ತಿದ್ದುಪಡಿ ಮಾಡುವ ಬಗ್ಗೆ ಯಾವುದೇ ಪ್ರಸ್ತಾವ ಸರ್ಕಾರದ ಮುಂದಿರುವುದಿಲ್ಲ.

**ವಿಷಯ : ಬಾದಾಮಿ ಹಾಗೂ ಕೆರೂರು ಪಟ್ಟಣಗಳಿಗೆ ಕುಡಿಯುವ ನೀರಿನ ಯೋಜನೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 730 (355)

ಶ್ರೀ ಬಿ.ಬಿ. ಚಿಮ್ಮನಕಟ್ಟಿ (ಬಾದಾಮಿ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಕುಡಿಯುವ ನೀರಿನ ತೀವ್ರ ಭವಣೆಯನ್ನು ಎದುರಿಸುತ್ತಿರುವ ಬಾದಾಮಿ ಪಟ್ಟಣದ ಕುಡಿಯುವ ನೀರಿನ ಯೋಜನೆಯ ಅಂದಾಜು ವೆಚ್ಚ ರೂ. 30.00 ಲಕ್ಷ ಮತ್ತು ಕೆರೂರು ಪಟ್ಟಣದ ಕುಡಿಯುವ ನೀರಿನ ಯೋಜನೆಯ ಅಂದಾಜು ವೆಚ್ಚ 52.00 ಲಕ್ಷ ಸರ್ಕಾರದ ಮಂಜೂರಾತಿಗಾಗಿ ಬಂದಿದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ

ಆ. ಹಾಗಿದ್ದಲ್ಲಿ ಈ ವರ್ಷದ ಆಯವ್ಯಯದಲ್ಲಿ ಈ ಯೋಜನೆಗಳಿಗೆ ನಿಗದಿಪಡಿಸಿದ ಹಣವೆಷ್ಟು?

ಇ. ಈ ಯೋಜನೆಗಳನ್ನು ಪ್ರಾಶಸ್ತ್ಯದ ಮೂಲಕ ಎಂದು ಪೂರ್ಣಗೊಳಿಸಲಾಗುವುದು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಹೌದು

ಆ. ಮಂಡಳಿಯ 1995-96 ನೇ ಸಾಲಿನ ಆಯವಯ್ಯವನ್ನು ಗಮನದಲ್ಲಿಟ್ಟು ಈ ಯೋಜನೆಗಳಿಗೆ ಹಣವನ್ನು ನಿಗದಿಪಡಿಸಲಾಗುವುದು.

ಇ. ಈ ಯೋಜನೆಗಳನ್ನು ಹಣಕಾಸಿನ ಪರಿಸ್ಥಿತಿಯನ್ನು ಗಮನಿಸಿ ಮೂರು ವರ್ಷಗಳ ಅವಧಿಯಲ್ಲಿ ಮುಗಿಸಲು ಉದ್ದೇಶಿಸಲಾಗಿದೆ.

**ವಿಷಯ : ಶಿವಮೊಗ್ಗ ನಗರ ಪಾಲಿಕೆ ಕುರಿತು**

Shimoga Town Council

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 731(831)

ಶ್ರೀ ಅಯಸೂರು ಮಂಜುನಾಥ (ಹೊಸನಗರ) : ಮಾನ್ಯ ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಶಿವಮೊಗ್ಗ ನಗರಪಾಲಿಕೆ ಅಸ್ತಿತ್ವದಲ್ಲಿದೆಯೇ?

ಆ. ಇಲ್ಲವೆಂದಲ್ಲಿ ಯಾವ ಪರ್ಯಾಯ ವ್ಯವಸ್ಥೆ ಜಾರಿಯಲ್ಲಿದೆ?

ಇ. ಹೊಸನಗರ ವಿಧಾನಸಭಾ ಕ್ಷೇತ್ರಕ್ಕೆ ಸೇರಿದ ಯಾವ ಯಾವ ಗ್ರಾಮಗಳು ಈ ನಗರ ಪಾಲಿಕೆಯ ವ್ಯಾಪ್ತಿಗೆ ಸೇರಲಿವೆ?

ಈ. ಈ ಗ್ರಾಮಗಳಿಗೆ ನೀರು, ರಸ್ತೆ, ಸಾರಿಗೆ ಮುಂತಾದ ಕನಿಷ್ಟ ಸೌಲಭ್ಯ ನೀಡಬೇಕಾದ ಹೊಣೆಗಾರಿಕೆ ಯಾರಿಗೆ ಸೇರಿದೆ?

ಉ. ಸದರಿ ಗ್ರಾಮಗಳಿಗೆ ನೀರಿನ ಅತೀವ ಬರ (ತೊಂದರೆ) ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ

ಊ. ಹಾಗಿದ್ದಲ್ಲಿ ಸಮಸ್ಯೆ ಬಗೆಹರಿಸಲು ಸರ್ಕಾರ ಕೈಗೊಂಡ ನಿರ್ದಿಷ್ಟ ಕ್ರಮಗಳಾವುವು?

ಶ್ರೀ ವೈಜನಾಥ ಪಾಟೀಲ್(ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು) :

ಅ. ಹೌದು.

ಆ. ಮೇಲಿನ 'ಅ'ಗೆ ನೀಡಲಾದ ಉತ್ತರದಿಂದ ಇದು ಉದ್ಭವಿಸುವುದಿಲ್ಲ.

ಇ. ಸಂವಿಧಾನದ 74ನೇ ತಿದ್ದುಪಡಿಯನ್ವಯ ರಾಜ್ಯದ ಎಲ್ಲಾ ನಗರಪಾಲಿಕೆ, ನಗರಸಭೆ ಪುರಸಭೆಗಳ ಎಲ್ಲೆಯನ್ನು ಪರಿಷ್ಕರಿಸಲಾಗುತ್ತಿದ್ದು, ಇದು ಅಂತಿಮಗೊಂಡ ನಂತರ, ಈ ಬಗ್ಗೆ ಸ್ಪಷ್ಟ ಸ್ವರೂಪ ಸಿಗಲಿದೆ.

ಈ,ಉ,ಊ. ಹಾಲಿ ನಗರ ಗ್ರಾಮೀಣ ಪ್ರದೇಶಗಳಿಗೆ ಸಾಕಷ್ಟು ನೀರು ಸರಬರಾಜು ಮಾಡುವ ಸಲುವಾಗಿ ಅಗತ್ಯವಿರುವಷ್ಟು ಹಣವನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹಾಗೂ ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಗಳು ಶಿವಮೊಗ್ಗ ಜಿಲ್ಲಾದಿಕಾರಿಗಳಿಗೆ ನೀಡಿವೆ.

**ವಿಷಯ : ಬಾಗೇಪಲ್ಲಿ ತಾಲ್ಲೂಕಿನಲ್ಲಿ ನೀರಿನಲ್ಲಿರುವ ಫ್ಲೋರಾಯಿಡ್ ಮತ್ತು ನೈಟೇಟ್ ಅಂಶ ನಿವಾರಣೆ ಕ್ರಮ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 732(1128)

ಶ್ರೀ ಜಿ.ವಿ.ಶ್ರೀರಾಮರೆಡ್ಡಿ (ಬಾಗೇಪಲ್ಲಿ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಕೋಲಾರ ಜಿಲ್ಲೆಯಲ್ಲಿ ಅದರಲ್ಲೂ ಬಾಗೇಪಲ್ಲಿ ತಾಲ್ಲೂಕಿನ ಕುಡಿಯುವ ನೀರಿನಲ್ಲಿ 'ಲವಣ' ಅಂಶಗಳು ಹೆಚ್ಚಾಗಿದ್ದು ಅದರಲ್ಲಿ ಮುಖ್ಯವಾಗಿ ಫ್ಲೋರೈಡ್ ಮತ್ತು ನೈಟ್ರೇಟ್‌ನ ಅಂಶಗಳು ಹೆಚ್ಚಾಗಿದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಹಾಗಿದ್ದಲ್ಲಿ ಇದರ ನಿವಾರಣೆಗೆ ಕ್ರಮ ಕೈಗೊಳ್ಳಲಾಗಿದೆಯೇ?

ಇ. ಭೂ ವಿಜ್ಞಾನ ಇಲಾಖೆಯು ಈ ಬಗ್ಗೆ ಪರಿವೀಕ್ಷಣೆ ನಡೆಸಿದೆಯೇ? ಹಾಗಿದ್ದಲ್ಲಿ ಆ ವರದಿಯ ವಿವರಗಳನ್ನು ನೀಡುವುದು.

ಶ್ರೀ ಎಸ್.ಡಿ.ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು):

ಅ. ಹೌದು.

ಆ. ಇದರ ಬಗ್ಗೆ ಸಾರ್ವಜನಿಕ ಆರೋಗ್ಯ ಇಲಾಖೆಯಿಂದ ಕ್ರಮ ಕೈಗೊಳ್ಳ ಬೇಕಾಗಿದೆ.

ಇ. ಗಣಿ ಮತ್ತು ಭೂ ವಿಜ್ಞಾನ ಇಲಾಖೆಯು 1984 ರಿಂದ 1994ರ ವರೆವಿಗೆ ಕೋಲಾರ ಜಿಲ್ಲೆಯಲ್ಲಿನ ವಿವಿಧ ಸ್ಥಳಗಳಲ್ಲಿನ ಸುಮಾರು 825 ನೀರಿನ ಮಾದರಿಗಳ ರಸಾಯನಿಕ ವಿಶ್ಲೇಷಣೆ ಮಾಡಲಾಗಿದ್ದು, ಅದರನ್ವಯ ಫ್ಲೋರೈಡ್, ನೈಟ್ರೇಟ್ ಮತ್ತು ನೀರಿನ ಗಡಸುತನದ ಬಗ್ಗೆ ವಿವರಗಳನ್ನು ಇದರೊಡನೆ ಲಗತ್ತಿಸಿರುವ ಅನುಬಂಧ-1 ರಲ್ಲಿ ನೀಡಲಾಗಿದೆ. ಇದಲ್ಲದೆ 1993-94 ಮತ್ತು 1994-95ನೇ ಸಾಲಿನಲ್ಲಿ ಕೋಲಾರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಬಾವಿಗಳಿಂದ ಹಾಗೂ ಇಲಾಖಾವತಿಯಿಂದ ಕೊರೆಯಲಾದ ನಿರೀಕ್ಷಣಾ ಬಾವಿಗಳಿಗಂದ ಒಟ್ಟು 106 ನೀರಿನ ಮಾದರಿಗಳನ್ನು ಸಂಗ್ರಹಿಸಿ ಫ್ಲೋರೈಡ್ ಅಂಶಕ್ಕೆ ವಿಶ್ಲೇಷಿಸಲಾಗಿ 42 ನೀರಿನ ಮಾದರಿಗಳಲ್ಲಿ 1.50 ರಿಂದ 6 ಪಿಪಿಎಂ (ಪಾರ್ಟ್ಸ್ ಪರ್ ಮಿಲಿಯನ್ ) ವರೆವಿಗೆ ಫ್ಲೋರೈಡ್ ಅಂಶ ಇರುವುದು ಕಂಡು ಬಂದಿದೆ. ಮಿಕ್ಕ 64 ಮಾದರಿಗಳಲ್ಲಿ 1ರಿಂದ 1.5 ಪಿಪಿಎಂ ವರೆವಿಗೆ ಫ್ಲೋರೈಡ್ ಅಂಶ ಇರುವುದು ಕಂಡು ಬಂದಿದೆ. ವಿವರಗಳನ್ನು ಅನುಬಂಧ 2 ರಲ್ಲಿ ನೀಡಲಾಗಿದೆ.

**ತಖ್ತೆ: -1**

Kolar Dist water Nitrate Fluoride

ಕೋಲಾರ ಜಿಲ್ಲೆಯಲ್ಲಿ ನೀರಿನ ಮಾದರಿಗಳ ನೈಟ್ರೇಟ್, ಫ್ಲೋರೈಡ್ ಅಂಶಗಳ ಹಾಗೂ ನೀರಿನ ಗಡಸುತನದ ಬಗ್ಗೆ ಸಂಕ್ಷಿಪ್ತ ವಿಶ್ಲೇಷಣಾ ಫಲಿತಾಂಶಗಳು (ಭಾರತೀಯ ಮೌಲ್ಯ ಮಾನ ನಿಗದಿ ಮೀರಿರುವ)

| ತಾಲ್ಲೂಕು | ಫ್ಲೋರೈಡ್ 1.5 ಪಿಪಿಎಂ ಗಿಂತ ಅಧಿಕವಾಗಿರುವ ಮಾದರಿಗಳ ಸಂಖ್ಯೆ | ನೈಟ್ರೇಟ್ 100 ಪಿಪಿಎಂ ಗಿಂತ ಅಧಿಕವಾಗಿರುವ ಮಾದರಿಗಳ ಸಂಖ್ಯೆ | ಒಟ್ಟು ಗಡಸುತನ 600 ಪಿಪಿಎಂ ಗಿಂತ ಅಧಿಕವಾಗಿರುವ ಮಾದರಿಗಳ ಸಂಖ್ಯೆ |
|---|---|---|---|
| 1. ಕೋಲಾರ | 62 | 73 | 81 |
| 2. ಮುಳುಬಾಗಿಲು | 02 | 07 | 12 |
| 3. ಚಿಕ್ಕಬಳ್ಳಾಪುರ | 02 | 02 | - |
| 4. ಶ್ರೀನಿವಾಸಪುರ | 04 | 01 | 10 |
| 5. ಚಿಂತಾಮಣಿ | 08 | 03 | - |
| 6. ಬಂಗಾರಪೇಟೆ | 02 | 08 | 27 |
| 7. ಶಿಡ್ಲಘಟ್ಟ | - | 02 | 04 |
| 8. ಬಾಗೇಪಲ್ಲಿ | 10 | 05 | 03 |
| 9. ಮಾಲೂರು | - | 03 | 03 |
| 10. ಗೌರಿಬಿದನೂರು | 06 | 03 | 04 |
| | 96 | 107 | 144 |

ತಖ್ತೆ : - 2

ಕೋಲಾರ ಜಿಲ್ಲೆಯಲ್ಲಿ ಸಂಗ್ರಹಿಸಲಾದ 106 ನೀರಿನಮಾದರಿಗಳ ಪೈಕಿ ಫ್ಲೋರೈಡ್ ಅಂಶದ ಬಗ್ಗೆ ತಾಲ್ಲೂಕುವಾರು ವಿವರಗಳು

| ತಾಲ್ಲೂಕು | ನೀರಿನ ಮಾದರಿ | ಫ್ಲೋರೈಡ್ ಅಂಶ (ಪಿಪಿಎಂ) (ಸಂಖ್ಯೆ 1 ರಿಂದ 1.5 (ಸಂಖ್ಯೆ) | 1.5 ರಿಂದ 6) (ಸಂಖ್ಯೆ) |
|---|---|---|---|
| 1. ಕೋಲಾರ | 24 | 17 | 7 |
| 2. ಮುಳುಬಾಗಿಲು | 7 | 5 | 2 |
| 3. ಚಿಕ್ಕಬಳ್ಳಾಪುರ | 9 | 9 | - |
| 4. ಶ್ರೀನಿವಾಸಪುರ | 15 | 12 | 3 |
| 5. ಚಿಂತಾಮಣಿ | 8 | 5 | 3 |
| 6. ಬಂಗಾರಪೇಟೆ | 5 | 2 | 3 |
| 7. ಶಿಡ್ಲಘಟ್ಟ | 4 | 3 | 1 |
| 8. ಬಾಗೇಪಲ್ಲಿ | 21 | 6 | 15 |
| 9. ಮಾಲೂರು | - | - | - |
| 10. ಗೌರಿಬಿದನೂರು | 10 | 4 | 6 |
| 11. ಗುಡಿಬಂಡೆ | 3 | 1 | 2 |
| ಒಟ್ಟು | 106 | 64 | 42 |

ವಿಷಯ : ಹಳ್ಳಿಗಾಡಿನ ಪ್ರದೇಶಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವ ಬಗ್ಗೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 733(695)

ಶ್ರೀ ಜಿ.ವಿ ಶ್ರೀರಾಮರೆಡ್ಡಿ (ಬಾಗೇಪಲ್ಲಿ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಹಳ್ಳಿಗಾಡಿನ ಪ್ರದೇಶಗಳಲ್ಲಿನ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗಾಗಿ ಹೊಸ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲು ಸರ್ಕಾರದವರು ಉದ್ದೇಶಿಸಿದ್ದಾರೆಯೇ?

ಆ. ಹಾಗಿದ್ದರೆ ಈ ವರ್ಷ ಎಷ್ಟು ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲಾಗುವುದು?

ಇ. ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳು ಕೊಡುತ್ತಿರುವ ಹಣದ ಮೊತ್ತವನ್ನು ಹೆಚ್ಚಿಸುವ ಬಗ್ಗೆ ಸರ್ಕಾರದವರು ಪರಿಶೀಲಿಸುವರೇ?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಅ. ಹಳ್ಳಿಗಾಡಿನ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಹಾಗೂ ಹಿಂದುಳಿದ ವರ್ಗಗಳ ಮತ್ತು. ಅಲ್ಪಸಂಖ್ಯಾತರ ಇಲಾಖೆಗಳಲ್ಲಿ ನಿಲಯದ ಅವಶ್ಯಕತೆ ಆಧಾರದ ಮೇಲೆ ಹೊಸ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಹೊಸ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲಾಗುವುದು.

ಆ. ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗಳ ವತಿಯಿಂದ 1994-95ನೇ ಸಾಲಿನಲ್ಲಿ ಯಾವುದೇ ಹೊಸ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿರುವುದಿಲ್ಲ.

ಇ. ಇಲ್ಲ.

**ವಿಷಯ: ಕೋಲಾರ ಜಿಲ್ಲೆಯಲ್ಲಿನ ಕುಡಿಯುವ ನೀರಿನಲ್ಲಿರುವ ಲವಣದ ಅಂಶಗಳ ಬಗ್ಗೆ ಇಲಾಖೆಯ ವರದಿ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 734(697)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ (ಬಾಗೇಪಲ್ಲಿ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು

ಅ. ಕೋಲಾರ ಜಿಲ್ಲೆಯಲ್ಲಿನ ಕುಡಿಯುವ ನೀರಿನಲ್ಲಿ ಮುಖ್ಯ ಫ್ಲೋರೈಡ್ ಲವಣಗಳು ಹೆಚ್ಚಿರುವುದರ ಬಗ್ಗೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯು ಪರಿಶೀಲಿಸಿ ಸರ್ಕಾರಕ್ಕೆ ವರದಿ ಮಾಡಿದೆಯೇ?

ಆ. ಹಾಗಿದ್ದಲ್ಲಿ ವರದಿಯ ವಿವರಗಳನ್ನು ತಿಳಿಸುವುದು.

ಶ್ರೀ ಎಸ್.ಡಿ. ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು) :

ಅ. ಗಣಿ ಮತ್ತು ಭೂ ವಿಜ್ಞಾನ ಇಲಾಖೆಯು ಕೋಲಾರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಬಾವಿಗಳಿಂದ ಹಾಗೂ ಇಲಾಖಾ ವತಿಯಿಂದ ಕೊರೆಯಲಾದ ನಿರೀಕ್ಷಣಾ ಬಾವಿಗಳಿಂದ ಒಟ್ಟು 106 ನೀರಿನ ಮಾದರಿಗಳನ್ನು ಫ್ಲೋರೈಡ್ ಅಂಶಕ್ಕಾಗಿ ವಿಶ್ಲೇಷಿಸಿ, ಜಿಲ್ಲಾ ಪಂಚಾಯತ್ ಅಂತರ್ಜಲ ಘಟಕದ ಕಛೇರಿಗೆ ವಿವರಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ಆ. 1993-94 ಮತ್ತು 1994-95ರ ಸಾಲಿನಲ್ಲಿ ಕೋಲಾರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಬಾವಿಗಳಿಂದ ಹಾಗೂ ಇಲಾಖಾ ವತಿಯಿಂದ ಕೊರೆಯಲಾದ ನಿರೀಕ್ಷಣಾ ಬಾವಿಗಳಿಂದ ಒಟ್ಟು 106 ನೀರಿನ ಮಾದರಿಗಳನ್ನು ಸಂಗ್ರಹಿಸಿ, ಫ್ಲೋರೈಡ್ ಅಂಶಕ್ಕೆ ವಿಶ್ಲೇಷಿಸಲಾಗಿ, 42 ನೀರಿನ ಮಾದರಿಗಳಲ್ಲಿ 1.50 ರಿಂದ 6 ಪಿಪಿಎಂ (ಪಾರ್ಟ್ಸ್‌ಪರ್ ಮಿಲಿಯನ್) ವರೆವಿಗೆ ಫ್ಲೋರೈಡ್ ಅಂಶ ಇರುವುದು ಕಂಡು ಬಂದಿದೆ. ಮತ್ತು ಮಿಕ್ಕ 64 ಮಾದರಿಗಳಲ್ಲಿ 1 ರಿಂದ 1.5 ಪಿಪಿಎಂ ವರೆವಿಗೆ ಫ್ಲೋರೈಡ್ ಅಂಶ ಇರುವುದು ಕಂಡು ಬಂದಿದೆ. ಭಾರತೀಯ ಮೌಲ್ಯ ಮಾಪನ ಸಂಸ್ಥೆಯ ನಿಗದಿಯ ಪ್ರಕಾರ 1.5ಕ್ಕೂ ಹೆಚ್ಚು ಪಿಪಿಎಂ ಫ್ಲೋರೈಡ್ ಅಂಶ ಇದ್ದಲ್ಲಿ ಅದು

ದೀರ್ಘಾವಧಿಯಲ್ಲಿ ಕುಡಿಯಲು ಯೋಗ್ಯವಲ್ಲ ಎಂದು ತಿಳಿದು ಬಂದಿದೆ. ವಿವರಗಳನ್ನು ಇದರೊಡನೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ.

## ಅನುಬಂಧ

ಕೋಲಾರ ಜಿಲ್ಲೆಯಲ್ಲಿ ಸಂಗ್ರಹಿಸಲಾದ 106 ನೀರಿನ ಮಾದರಿಗಳ ಪೈಕಿ ಫ್ಲೋರೈಡ್ ಅಂಶದ ಬಗ್ಗೆ ತಾಲ್ಲೂಕುವಾರು ವಿವರಗಳು

| ತಾಲ್ಲೂಕು | ನೀರಿನ ಮಾದರಿ ಸಂಖ್ಯೆ | ಫ್ಲೋರೈಡ್ ಅಂಶ (ಪಿಪಿಎಂ) 1 ರಿಂದ 15 (ಸಂಖ್ಯೆ) | 1.5 ರಿಂದ 6 (ಸಂಖ್ಯೆ) |
|---|---|---|---|
| 1. ಕೋಲಾರ | 24 | 17 | 7 |
| 2. ಮುಳುಬಾಗಿಲು | 7 | 5 | 2 |
| 3. ಚಿಕ್ಕಬಳ್ಳಾಪುರ | 9 | 9 | - |
| 4. ಶ್ರೀನಿವಾಸಪುರ | 15 | 12 | 3 |
| 5. ಚಿಂತಾಮಣಿ | 8 | 5 | 3 |
| 6. ಬಂಗಾರಪೇಟೆ | 5 | 2 | 3 |
| 7. ಶಿಡ್ಲಘಟ್ಟ | 4 | 3 | 1 |
| 8. ಬಾಗೇಪಲ್ಲಿ | 21 | 6 | 15 |
| 9. ಮಾಲೂರು | - | - | - |
| 10. ಗೌರಿಬಿದನೂರು | 10 | 4 | 6 |
| 11. ಗುಡಿಬಂಡೆ | 3 | 1 | 2 |
| ಒಟ್ಟು | 106 | 64 | 42 |

### ವಿಷಯ : ವಿಜಾಪುರ ನಗರದ ಒಳಚರಂಡಿ ಮತ್ತು ನೀರು ಒದಗಿಸುವ ವ್ಯವಸ್ಥೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 735 (765)

ಶ್ರೀ ಬಸನಗೌಡ ಪಾಟೀಲ್ (ವಿಜಾಪುರ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ವಿಜಾಪುರ ನಗರದ ಒಳಚರಂಡಿ ಮತ್ತು ಕುಡಿಯುವ ನೀರಿನ ಅವ್ಯವಸ್ಥೆ ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ. ಬೆಳೆಯುತ್ತಿರುವ ನಗರದ ಪೂರ್ಣವಲಯದ ಒಳಚರಂಡಿ ಯೋಜನೆಗೆ ವಿಶೇಷ ಹಣ ಒದಗಿಸಿದೆಯೇ? ಹಾಗಿದ್ದಲ್ಲಿ ಎಷ್ಟು?

ಇ. ನಗರದ ಎರಡನೇ ಹಂತದ ಕುಡಿಯುವ ನೀರಿನ ಯೋಜನೆ ಮುಗಿದಾಗ ಒಳಪೈಪ್ ಲೈನ್ ವ್ಯವಸ್ಥೆ ದುರ್ಬಲವಾಗಿದ್ದು ಅದನ್ನು ಸರಿಪಡಿಸಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ. ವಿಜಾಪುರ ನಗರದ ಒಳಚರಂಡಿ ವ್ಯವಸ್ಥೆಯ ಉಸ್ತುವಾರಿಯನ್ನು ನಗರಸಭೆ ನಿರ್ವಹಿಸುತ್ತಿದೆ. ಈ ಒಳಚರಂಡಿ ವ್ಯವಸ್ಥೆಯನ್ನು ಉತ್ತಮಗೊಳಿಸಲು ಯಾವ ಪ್ರಸ್ತಾವನೆಯು ಇರುವುದಿಲ್ಲ.

ನೀರು ಸರಬರಾಜಿನ ಉಸ್ತುವಾರಿಯನ್ನು ಜಲಮಂಡಲಿ 2-10-93ರಿಂದ ನಿರ್ವಹಿಸುತ್ತಿದೆ. ಸಧ್ಯದಲ್ಲಿ ಎರಡು ದಿನಗಳಿಗೊಮ್ಮೆ ನೀರನ್ನು ಸರಬರಾಜು ಮಾಡಲಾಗುತ್ತಿದೆ.

ಆ. ಒದಗಿಸಿಲ್ಲ.

ಇ. ಈ ಬಗ್ಗೆ ವಿವರವಾದ ಸಮೀಕ್ಷೆ ನಡೆಸಿದ ನಂತರ ಪ್ರತ್ಯೇಕ ಯೋಜನೆಯನ್ನು ತಯಾರಿಸಲಾಗುವುದು.

**ವಿಷಯ : ರಾಜ್ಯದಲ್ಲಿ ಕೈಗಾರಿಕಾ ಹಿಂದುಳಿದ ಪ್ರದೇಶಗಳು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 736 (849)

ಶ್ರೀ ಬಸನಗೌಡ ಪಾಟೀಲ್ (ವಿಜಾಪುರ) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ರಾಜ್ಯದಲ್ಲಿ ಕೈಗಾರಿಕೆಗಳ ಹಿಂದುಳಿದ ಪ್ರದೇಶಗಳೆಂದು ಜಿಲ್ಲೆಗಳನ್ನು ಸಾರಲಾಗಿದೆಯೆ ?

ಆ. ಹಾಗಿದ್ದಲ್ಲಿ ಆ ಜಿಲ್ಲೆಗಳು ಯಾವುವು ?

ಇ. ಕೈಗಾರಿಕಾ ಹಿಂದುಳಿದ ಪ್ರದೇಶಗಳ ಉತ್ತೇಜನಕ್ಕಾಗಿ ಸರ್ಕಾರದ ನೀತಿಯೇನು?

ಶ್ರೀ ಆರ್. ವಿ. ದೇಶಪಾಂಡೆ (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು) :

ಅ. 1993ರ ಕೈಗಾರಿಕಾ ನೀತಿಯಂತೆ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ದಕ್ಷಿಣ ತಾಲ್ಲೂಕು ಹಾಗೂ 1990ರ ಜನಗಣತಿಯಂತೆ ಬೆಂಗಳೂರು ಅರ್ಬನ್ ಅಗ್ಲಾಮರೇಷನ್ ಪ್ರದೇಶವನ್ನು ಹೊರತುಪಡಿಸಿ ರಾಜ್ಯದ ಉಳಿದ 173 ತಾಲ್ಲೂಕುಗಳನ್ನು ಅಭಿವೃದ್ಧಿ ಹೊಂದುತ್ತಿರುವ ಪ್ರದೇಶವೆಂದು ಸಾರಲಾಗಿದೆ.

ಆ. ಕೈಗಾರಿಕಾ ಹಿಂದುಳಿದ ಪ್ರದೇಶಗಳ ಉತ್ತೇಜನಕ್ಕಾಗಿ ಸರ್ಕಾರದವರು ಈ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗಾಗಿ ಬೇಕಾದ ಅಭಿವೃದ್ಧಿಪಡಿಸಿದ ಭೂಮಿ ವಿದ್ಯುಚ್ಛಕ್ತಿ ನೀರು ಮುಂತಾದ ಮೂಲಭೂತ ಸೌಲಭ್ಯಗಳ ಜೊತೆಗೆ 1993ರ ಪ್ರೋತ್ಸಾಹ ಕ್ರಮಗಳು ಹಾಗೂ ರಿಯಾಯಿತಿಗಳನ್ವಯ ಸಹಾಯ ಧನ ವಾಣಿಜ್ಯ ತೆರಿಗೆ ವಿನಾಯಿತಿ ಮುಂತಾದ ಸಹಾಯ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಇದಲ್ಲದೆ ಈ ಪ್ರದೇಶಗಳಲ್ಲಿ ಕೈಗಾರಿಕಾ ಸ್ಥಾಪನೆಗಾಗಿ ಮುಂದೆ ಬರುವಂತೆ ಮಾಡಲು ಕೈಗಾರಿಕಾ ವಿಚಾರ ಸಂಕೀರ್ಣ ಹಾಗೂ ವಸ್ತು ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿದೆ ಮತ್ತು ಸ್ಥಳೀಯ ವಿದ್ಯಾವಂತ ನಿರುದ್ಯೋಗಿಗಳಿಗೆ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂಬರುವಂತೆ ಮಾಡಲು ಉದ್ಯಮಶೀಲ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ದೀರ್ಘಾವಧಿಯಲ್ಲಿ ಕುಡಿಯಲು ಯೋಗ್ಯವಲ್ಲ ಎಂದು ತಿಳಿದು ಬಂದಿದೆ. ವಿವರಗಳನ್ನು ಇದರೊಡನೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ.

**ಅನುಬಂಧ**

ಕೋಲಾರ ಜಿಲ್ಲೆಯಲ್ಲಿ ಸಂಗ್ರಹಿಸಲಾದ 106 ನೀರಿನ ಮಾದರಿಗಳ ಪೈಕಿ ಫ್ಲೋರೈಡ್ ಅಂಶದ ಬಗ್ಗೆ ತಾಲ್ಲೂಕುವಾರು ವಿವರಗಳು

| ತಾಲ್ಲೂಕು | ನೀರಿನ ಮಾದರಿ ಸಂಖ್ಯೆ | ಫ್ಲೋರೈಡ್ ಅಂಶ (ಪಿಪಿಎಂ) 1 ರಿಂದ 15 (ಸಂಖ್ಯೆ) | 1.5 ರಿಂದ 6 (ಸಂಖ್ಯೆ) |
|---|---|---|---|
| 1. ಕೋಲಾರ | 24 | 17 | 7 |
| 2. ಮುಳುಬಾಗಿಲು | 7 | 5 | 2 |
| 3. ಚಿಕ್ಕಬಳ್ಳಾಪುರ | 9 | 9 | – |
| 4. ಶ್ರೀನಿವಾಸಪುರ | 15 | 12 | 3 |
| 5. ಚಿಂತಾಮಣಿ | 8 | 5 | 3 |
| 6. ಬಂಗಾರಪೇಟೆ | 5 | 2 | 3 |
| 7. ಶಿಡ್ಲಘಟ್ಟ | 4 | 3 | 1 |
| 8. ಬಾಗೇಪಲ್ಲಿ | 21 | 6 | 15 |
| 9. ಮಾಲೂರು | – | – | – |
| 10. ಗೌರಿಬಿದನೂರು | 10 | 4 | 6 |
| 11. ಗುಡಿಬಂಡೆ | 3 | 1 | 2 |
| ಒಟ್ಟು | 106 | 64 | 42 |

**ವಿಷಯ : ವಿಜಾಪುರ ನಗರದ ಒಳಚರಂಡಿ ಮತ್ತು ನೀರು ಒದಗಿಸುವ ವ್ಯವಸ್ಥೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 735 (765)

ಶ್ರೀ ಬಸನಗೌಡ ಪಾಟೀಲ್ (ವಿಜಾಪುರ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ವಿಜಾಪುರ ನಗರದ ಒಳಚರಂಡಿ ಮತ್ತು ಕುಡಿಯುವ ನೀರಿನ ಅವ್ಯವಸ್ಥೆ ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ. ಬೆಳೆಯುತ್ತಿರುವ ನಗರದ ಹೊರವಲಯದ ಒಳಚರಂಡಿ ಯೋಜನೆಗೆ ವಿಶೇಷ ಹಣ ಒದಗಿಸಿದೆಯೇ? ಹಾಗಿದ್ದಲ್ಲಿ ಎಷ್ಟು?

ಇ. ನಗರದ ಎರಡನೇ ಹಂತದ ಕುಡಿಯುವ ನೀರಿನ ಯೋಜನೆ ಮುಗಿದಾಗ ಒಳಪೈಪ್ ಲೈನ್ ವ್ಯವಸ್ಥೆ ದುರ್ಬಲವಾಗಿದ್ದು ಅದನ್ನು ಸರಿಪಡಿಸಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ. ವಿಜಾಪುರ ನಗರದ ಒಳಚರಂಡಿ ವ್ಯವಸ್ಥೆಯ ಉಸ್ತುವಾರಿಯನ್ನು ನಗರಸಭೆ ನಿರ್ವಹಿಸುತ್ತಿದೆ. ಈ ಒಳಚರಂಡಿ ವ್ಯವಸ್ಥೆಯನ್ನು ಉತ್ತಮಗೊಳಿಸಲು ಯಾವ ಪ್ರಸ್ತಾವನೆಯು ಇರುವುದಿಲ್ಲ.

ನೀರು ಸರಬರಾಜಿನ ಉಸ್ತುವಾರಿಯನ್ನು ಜಲಮಂಡಲಿ 2-10-93ರಿಂದ ನಿರ್ವಹಿಸುತ್ತಿದೆ. ಸಧ್ಯದಲ್ಲಿ ಎರಡು ದಿನಗಳಿಗೊಮ್ಮೆ ನೀರನ್ನು ಸರಬರಾಜು ಮಾಡಲಾಗುತ್ತಿದೆ.

ಆ. ಒದಗಿಸಿಲ್ಲ.

ಇ. ಈ ಬಗ್ಗೆ ವಿವರವಾದ ಸಮೀಕ್ಷೆ ನಡೆಸಿದ ನಂತರ ಪ್ರತ್ಯೇಕ ಯೋಜನೆಯನ್ನು ತಯಾರಿಸಲಾಗುವುದು.

**ವಿಷಯ : ರಾಜ್ಯದಲ್ಲಿ ಕೈಗಾರಿಕಾ ಹಿಂದುಳಿದ ಪ್ರದೇಶಗಳು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 736 (849)

ಶ್ರೀ ಬಸನಗೌಡ ಪಾಟೀಲ್ (ವಿಜಾಪುರ) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ರಾಜ್ಯದಲ್ಲಿ ಕೈಗಾರಿಕೆಗಳ ಹಿಂದುಳಿದ ಪ್ರದೇಶಗಳೆಂದು ಜಿಲ್ಲೆಗಳನ್ನು ಸಾರಲಾಗಿದೆಯೆ ?

ಆ. ಹಾಗಿದ್ದಲ್ಲಿ ಆ ಜಿಲ್ಲೆಗಳು ಯಾವುವು ?

ಇ. ಕೈಗಾರಿಕಾ ಹಿಂದುಳಿದ ಪ್ರದೇಶಗಳ ಉತ್ತೇಜನಕ್ಕಾಗಿ ಸರ್ಕಾರದ ನೀತಿಯೇನು?

ಶ್ರೀ ಆರ್. ವಿ. ದೇಶಪಾಂಡೆ (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು) :

ಅ. 1993ರ ಕೈಗಾರಿಕಾ ನೀತಿಯಂತೆ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ದಕ್ಷಿಣ ತಾಲ್ಲೂಕು ಹಾಗೂ 1990ರ ಜನಗಣತಿಯಂತೆ ಬೆಂಗಳೂರು ಅರ್ಬನ್ ಅಗ್ಲಾಮರೇಷನ್ ಪ್ರದೇಶವನ್ನು ಹೊರತುಪಡಿಸಿ ರಾಜ್ಯದ ಉಳಿದ 173 ತಾಲ್ಲೂಕುಗಳನ್ನು ಅಭಿವೃದ್ಧಿ ಹೊಂದುತ್ತಿರುವ ಪ್ರದೇಶವೆಂದು ಸಾರಲಾಗಿದೆ.

ಆ. ಕೈಗಾರಿಕಾ ಹಿಂದುಳಿದ ಪ್ರದೇಶಗಳ ಉತ್ತೇಜನಕ್ಕಾಗಿ ಸರ್ಕಾರದವರು ಈ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗಾಗಿ ಬೇಕಾದ ಅಭಿವೃದ್ಧಿಪಡಿಸಿದ ಭೂಮಿ ವಿದ್ಯುಚ್ಛಕ್ತಿ ನೀರು ಮುಂತಾದ ಮೂಲಭೂತ ಸೌಲಭ್ಯಗಳ ಜೊತೆಗೆ 1993ರ ಪ್ರೋತ್ಸಾಹ ಕ್ರಮಗಳು ಹಾಗೂ ರಿಯಾಯಿತಿಗಳನ್ವಯ ಸಹಾಯ ಧನ ವಾಣಿಜ್ಯ ತೆರಿಗೆ ವಿನಾಯಿತಿ ಮುಂತಾದ ಸಹಾಯ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಇದಲ್ಲದೆ ಈ ಪ್ರದೇಶಗಳಲ್ಲಿ ಕೈಗಾರಿಕಾ ಸ್ಥಾಪನೆಗಾಗಿ ಮುಂದೆ ಬರುವಂತೆ ಮಾಡಲು ಕೈಗಾರಿಕಾ ವಿಚಾರ ಸಂಕೀರ್ಣ ಹಾಗೂ ವಸ್ತು ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿದೆ ಮತ್ತು ಸ್ಥಳೀಯ ವಿದ್ಯಾವಂತ ನಿರುದ್ಯೋಗಿಗಳಿಗೆ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂಬರುವಂತೆ ಮಾಡಲು ಉದ್ಯಮಶೀಲ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

**ವಿಷಯ : ವಿಜಾಪುರ ಜಿಲ್ಲೆಯಲ್ಲಿ ಕೈಗಾರಿಕೆಗೆ ಪ್ರೋತ್ಸಾಹ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 737 (1237)

ಶ್ರೀ ಬಸವನಗೌಡ ಪಾಟೀಲ್ (ವಿಜಾಪುರ) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ವಿಜಾಪುರ ಜಿಲ್ಲೆಯ ಕೈಗಾರಿಕೆಯಲ್ಲಿ ಅತಿ ಹಿಂದುಳಿದ ಪ್ರದೇಶವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೆ ?

ಆ. ಗಮನಕ್ಕೆ ಬಂದಿದ್ದಲ್ಲಿ ಸರ್ಕಾರ ಈ ಪ್ರದೇಶದ ಬಗ್ಗೆ ಕೈಗೊಂಡ ಪರಿಹಾರಗಳೇನು ?

ಇ. ಈ ಪ್ರದೇಶದಲ್ಲಿ ಕೈಗಾರಿಕೆಯನ್ನು ಪ್ರೋತ್ಸಾಹಿಸುವುದಕ್ಕೆ ಕೈಗೊಂಡ ಕ್ರಮಗಳೇನು ?

ಶ್ರೀ ಆರ್. ವಿ. ದೇಶಪಾಂಡೆ : (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು):

ಅ. ಹೌದು

1. ಕೆಐಎಡಿಬಿ, ಬೆಂಗಳೂರು ಇವರು ಮಹಾಲಬಗಾಯತ್ ವಿಜಾಪುರದಲ್ಲಿ 150 ಎಕರೆ ಮತ್ತು ಜಮಖಂಡಿ ತಾಲ್ಲೂಕಿನ ಅಸಂಗಿ ಗ್ರಾಮದಲ್ಲಿ 90 ಎಕರೆ ಭೂಮಿಯನ್ನು ಅಭಿವೃದ್ಧಿ ಪಡೆದಿದ್ದು ಕೈಗಾರಿಕೆ ಘಟಕಗಳನ್ನು ಪ್ರಾರಂಭಿಸಲಿಚ್ಛಿಸುವವರಿಗೆ ಭೂಮಿಯನ್ನು ಹಂಚಿಕೆ ಮಾಡಲಾಗುತ್ತದೆ.

2. ಕೆಎಸ್ಎಸ್ಐಡಿಸಿ ಲಿಮಿಟ್‌ಡ್ ಬೆಂಗಳೂರು ಇವರು ವಿಜಾಪುರ, ಬಾಗಲಕೋಟೆ ಮತ್ತು ಜಮಖಂಡಿಗಳಲ್ಲಿ ಕೈಗಾರಿಕಾ ವಸಾಹತುಗಳನ್ನು ನಿರ್ಮಿಸಿದ್ದು, ಕ್ರಮವಾಗಿ 46, 36 ಮತ್ತು 16 ಘೆಡ್‌ಗಳನ್ನು ನಿರ್ಮಿಸಿದ್ದು, ಎಲ್ಲಾ ಷೆಡ್‌ಗಳನ್ನು ಕೈಗಾರಿಕೋದ್ಯಮಿಗಳಿಗೆ ಹಂಚಲಾಗಿದೆ. ಮಹಾಲಬಾಗಾಯತ್ ವಿಜಾಪುರದಲ್ಲಿ 8 ಮುಧೋಳ - 4 ಮುದ್ದೆಬಿಹಾಳ -4 ಮತ್ತು ಬನಹಟ್ಟಿಗಳಲ್ಲಿ -4 ಕೈಗಾರಿಕಾ ಷೆಡ್‌ಗಳನ್ನು ನಿರ್ಮಿಸಲಾಗುತ್ತಿದೆ.

3. ಕೆಐಎಡಿಬಿ ಹಾಗೂ ಕೆಇಬಿ - ಯ ವತಿಯಿಂದ ಮಹಾಲಬಾಗಾಯತ್ ವಿಜಾಪುರದಲ್ಲಿ 110 ಕೆವಿಎ ಪವರ್ ಸ್ಟೇಷನ್ ಸ್ಥಾಪಿಸಲಾಗುತ್ತದೆ.

4. ಕೈಗಾರಿಕೆಗಳನ್ನು ಸ್ಥಾಪಿಸಲು ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಏಕಗವಾಕ್ಷಿ ಏಜೆನ್ಸಿಗಳು ಕಾರ್ಯ ನಿರ್ವಹಿಸುತ್ತಿದ್ದು, ಸಣ್ಣ ಕೈಗಾರಿಕೆಗಳಿಗೆ 2 ಎಕರೆಗಳವರೆಗೆ ಜಮೀನು 250 ಕೆವಿಎ ವರೆಗೆ ವಿದ್ಯುತ್ ನೀಡುವ ಮತ್ತು ಸಣ್ಣ ಪ್ರಮಾಣದ ಕೈಗಾರಿಕಾ ಘಟಕದವರಿಗೆ ರಿಯಾಯಿತಿ ಮತ್ತು ಪ್ರೋತ್ಸಾಹಗಳನ್ನು ಮಂಜೂರು ಮಾಡುವ ಅಧಿಕಾರವನ್ನು ಸಹ ಹೊಂದಿದೆ.

5. 1994-95ನೇ ಸಾಲಿನಲ್ಲಿ ಒಟ್ಟು 8 ಸಭೆಗಳನ್ನು ಜರುಗಿಸಿ 17 ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ರು 69.14 ಲಕ್ಷ ಸಹಾಯ ಧನ ಮಂಜೂರು ಮಾಡಲಾಗಿದೆ. 16 ಘಟಕಗಳಿಗೆ. 14.20 ಎಕರೆ ಜಮೀನು ಹಂಚಿಕೆ ಮಾಡಲಾಗಿದೆ. 14 ಘಟಕಗಳಿಗೆ 448 ಹೆಚ್.ಪಿ. ವಿದ್ಯುತ್ ಮುಂಜೂರು ಮಾಡಲಾಗಿದೆ. 6 ಘಟಕಗಳಿಗೆ ಕೈಗಾರಿಕಾ ವಸಾಹತುಗಳಲ್ಲಿ ಮಳಿಗೆ ಹಂಚಿಕೆ ಮಾಡಲಾಗಿದೆ.

ಮಾಡಲಾಗಿದೆ. ಜಿಲ್ಲೆಯಲ್ಲಿ ಒಟ್ಟು 5448 ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳನ್ನು ನೋಂದಾಯಿಸಲಾಗಿದ್ದು, ರೂ. 3277.44 ಲಕ್ಷ ಬಂಡವಾಳ ಹೂಡಲಾಗಿದೆ. ಜಿಲ್ಲೆಯಲ್ಲಿ ಒಟ್ಟು 14 ಮಧ್ಯಮ ಮತ್ತು ಬಾರಿ ಪ್ರಮಾಣದ ಕೈಗಾರಿಕೆಗಳು ಕಾರ್ಯ ನಿರ್ವಹಿಸುತ್ತಿವೆ. ಇದು ಹಿಂದುಳಿದ ಜಿಲ್ಲೆಯಾದುದರಿಂದ ವಲಯ-11ಕ್ಕೆ ಲಭ್ಯವಿರುವ ಎಲ್ಲಾ ಸೌಲತ್ತುಗಳು ಲಭ್ಯವಿದೆ. ಉದ್ದಿಮೆದಾರರನ್ನು ಪ್ರೋತ್ಸಾಹಿಸುವ ಸಲುವಾಗಿ ಉದ್ಯಮಶೀಲತಾ ಅಭಿವೃದ್ಧಿ ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳಲಾಗಿದೆ.

6. ಉನ್ನತ ಮಟ್ಟದ ಸಮಿತಿ ಹಾಗೂ ರಾಜ್ಯ ಮಟ್ಟದ ಏಕಗವಾ ಸಮಿತಿ ಸಭೆಗಳಿಂದ 7 ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ. ಈ 7 ಘಟಕಗಳಲ್ಲಿ 20833.75 ಲಕ್ಷ ರೂಪಾಯಿಗಳ ಬಂಡವಾಳ ಹೂಡುವ ಉದ್ದೇಶವಿದ್ದು, 1977 ಮಂದಿಗೆ ಉದ್ಯೋಗವಕಾಶ ಕಲ್ಪಿಸುವ ಯೋಜನೆಯಿದೆ.

**ವಿಷಯ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಉತ್ತರ ಕರ್ನಾಟಕ ಭಾಗಕ್ಕೆ ಖರ್ಚು ಮಾಡಿದ ಹಣ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 738 (882)

ಶ್ರೀ ಬಸವನಗೌಡ ಪಾಟೀಲ್ (ವಿಜಾಪುರ) : ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ರಾಜ್ಯದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಾಡಿದ ವಾರ್ಷಿಕ ವೆಚ್ಚವೆಷ್ಟು

ಆ. ಅದರಲ್ಲಿ ಉತ್ತರ ಕರ್ನಾಟಕ ಭಾಗಕ್ಕೆ ಮಾಡಿದ ಖರ್ಚು ಎಷ್ಟು

ಶ್ರೀಮತಿ ಬಿ.ಟಿ. ಲಲಿತಾ ನಾಯಕ್ (ಕನ್ನಡ ಮತ್ತು ಸಂಸ್ಕೃತಿ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು):

ಅ. ಅನುಬಂಧ 1ರಲ್ಲಿ ನೀಡಲಾಗಿದೆ.

ಆ. ಅನುಬಂಧ 2ರಲ್ಲಿ ನೀಡಲಾಗಿದೆ.

**ಅ ನು ಬಂ ಧ - 1**

1994-95ನೇ ಸಾಲಿನಲ್ಲಿ ರಾಜ್ಯದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಾಡಿದ ವಾರ್ಷಿಕ ವೆಚ್ಚದ ವಿವರಗಳು

(ರೂ .ಗಳಲ್ಲಿ)

| | ಯೋಜನೆ | ಯೋಜನೇತರ | ಒಟ್ಟು |
|---|---|---|---|
| ಕನ್ನಡ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ | 4,01,64,000-00 | 4,25.94,000-00 | 8,27,58,000-00 |

ಅನು

1994-95ನೇ ಸಾಲಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ

| ಕ್ರಮ ಸಂಖ್ಯೆ | ಜಿಲ್ಲೆ | ಕನ್ನಡ ಅಭಿವೃದ್ಧಿ ಕಾರ್ಯಕ್ರಮಗಳಿಗೆ | ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ | ಪ.ಜಾತಿ.ಪ.ವರ್ಗಗಳ ಕಲಾಮೇಳಕ್ಕಾಗಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ |
|---|---|---|---|---|
| 1 | ಬೆಳಗಾಂ | 1.03 | 0.76 | 1.50 |
| 2. | ಬಿಜಾಪುರ | 0.99 | 0.76 | 2.45 |
| 3. | ಧಾರವಾಡ | 1.21 | 0.76 | 2.14 |
| 4. | ಕಾರವಾರ | 1.05 | 0.76 | 1.15 |
| 5. | ಗುಲ್ಬರ್ಗಾ | 1.03 | 0.76 | 1.50 |
| 6. | ಬೀದರ್ | 1.00 | 0.76 | 1.15 |
| 7. | ರಾಯಚೂರು | 1.00 | 0.76 | 1.58 |
| 8. | ಬಳ್ಳಾರಿ | 0.99 | 0.76 | 1.50 |
| 8 | | | | |

ಸೂಚನೆ : ಸಿಬ್ಬಂದಿ ವೆಚ್ಚವು ಸೇರ್ಪಡೆಯಾಗಿರುವುದಿಲ್ಲ

ಬಂಧ -2

ಉತ್ತರ ಕರ್ನಾಟಕ ಭಾಗಕ್ಕೆ ಮಾಡಿದ ಖರ್ಚು ವಿವರಗಳು ( ಲಕ್ಷಗಳಲ್ಲಿ)

| ಪ.ಜಾತಿ.ಪ. ಪಂಗಡಗಳ ವಿದ್ಯಾರ್ಥಿಗಳಿಗೆ ಸಂಗೀತ ಮತ್ತು ನೃತ್ಯ ತರಬೇತಿಗೆ | ಬಯಲು ರಂಗಮಂದಿರ ನಿರ್ಮಿಸಲು ಧನಸಹಾಯ | ಕನ್ನಡ:ಸಂಸ್ಕೃತಿ ಚಟುವಟಿಕೆಗಳನ್ನು ನಡೆಸಲು ಸಂಘ ಸಂಸ್ಥೆಗಳಿಗೆ ಧನ ಸಹಾಯ | ಒಟ್ಟು |
|---|---|---|---|
| 0.10 | 1.00 | 0.28 | 4.67 |
| 0.10 | - | 17.21 | 6.01 |
| 0.10 | - | 16.64 | 5.85 |
| 0.10 | - | 1.45 | 4.51 |
| 0.10 | - | 2.70 | 6.09 |
| 0.10 | - | 4.10 | 7.11 |
| 0.10 | 1.50 | 0.75 | 65.69 |
| 0.10 | 0.50 | - | 3.85 |

ಒಟ್ಟು ರೂ. 43.78 ಲಕ್ಷ

**ವಿಷಯ : ರಾಜ್ಯದ ವಸತಿ ಹೀನ ಜನರ ಸಮಸ್ಯೆ ಕುರಿತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 739 (734)

ಶ್ರೀ ಎನ್. ಯೋಗೀಶ್ ಭಟ್ (ಮಂಗಳೂರು) : ಮಾನ್ಯ ವಸತಿ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ

ಅ. ಕರ್ನಾಟಕ ರಾಜ್ಯದಲ್ಲಿ ಎಷ್ಟು ಜನ ವಸತಿಹೀನ ಪ್ರಜೆಗಳು ಇದ್ದಾರೆ. (ಗ್ರಾಮ ಹಾಗೂ ನಗರ ಪ್ರದೇಶಗಳ ಪ್ರತ್ಯೇಕ ವಿವರ ನೀಡುವುದು)

ಆ. 1995-96ರಲ್ಲಿ ಎಷ್ಟು ಮನೆಗಳನ್ನು ಕಟ್ಟುವ ಯೋಜನೆ ಸರ್ಕಾರ ಹಾಕಿಕೊಂಡಿದೆ.

ಇ. ಖಾಸಗಿ ಬಂಡವಾಳ ಹೂಡಿಕೆಗೆ ಹಾಗೂ ಖಾಸಗಿ ವಲಯಗಳಿಂದ ಎಷ್ಟು ಮನೆಗಳನ್ನು ಕಟ್ಟಿಸಿಕೊಡಲು ಸರ್ಕಾರ ಯೋಚಿಸಿದೆ

ಈ. ಇದಕ್ಕಾಗಿ ಖಾಸಗಿ ವ್ಯಕ್ತಿಗಳಿಗೆ ಸರ್ಕಾರ ಕೊಡುವ ಪ್ರೋತ್ಸಾಹಗಳೇನು?

ಶ್ರೀ ಬಸವರಾಜ ರಾಯರೆಡ್ಡಿ (ವಸತಿ ರಾಜ್ಯ ಸಚಿವರು):

ಅ. ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು : ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ರಾಜ್ಯದಲ್ಲಿ ಸರ್ವೆ ನಡೆಸಿ ನಿವೇಶನ ಮತ್ತು ವಸತಿರಹಿತ ಕುಟುಂಬ ಗುರುತಿಸಲು ಮಾರ್ಗಸೂಚಿಯನ್ನು ಹೊರಡಿಸಿದೆ. ಸರ್ವೆ ಕಾರ್ಯ ಮುಗಿದ ನಂತರ ವಿವರ ದೊರೆಯುತ್ತದೆ.

ಆ. 1995-96ನೇ ಸಾಲಿನಲ್ಲಿ ಒಂದು ಲಕ್ಷ ಮನೆಗಳನ್ನು ನಿರ್ಮಿಸಲು ಉದ್ದೇಶಿಸಿದೆ. ಆಶ್ರಯ ಯೋಜನೆ 60,000 ಡಾ: ಅಂಬೇಡ್ಕರ್ ಯೋಜನೆ 25,000 ಇಂದಿರಾ ಅವಾಸ್ಥಿ - 15,000

ಇ. ಸದ್ಯದ ಪರಿಸ್ಥಿತಿಯಲ್ಲಿ ಈ ಬಗ್ಗೆ ಯಾವ ಆಲೋಚನೆ ಇಲ್ಲ.

**ವಿಷಯ : ಗಡಿನಾಡು ಕನ್ನಡಿಗರ ಅಕಾಡಮಿ ಸ್ಥಾಪನೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 740 (1166)

ಶ್ರೀ ಎನ್. ಯೋಗೀಶ್ ಭಟ್ (ಮಂಗಳೂರು)

ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೇ

ಅ. ಗಡಿನಾಡ ಕನ್ನಡಿಗರ ಅಕಾಡೆಮಿಯನ್ನು ಸ್ಥಾಪಿಸಿ ಕಾಸರಗೋಡು ಜಿಲ್ಲೆಯ ಕನ್ನಡ ಬಾಂಧವರ ಸಾಮಾಜಿಕ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಿತಾಸಕ್ತಿಯನ್ನು ಕಾಪಾಡಲು ರಾಜ್ಯ ಸರ್ಕಾರ ಬಯಸುತ್ತದೆಯೆ ?

ಆ. ಹಾಗಿಲ್ಲದಿದ್ದಲ್ಲಿ, ಯಾವ ಕಾರ್ಯಕ್ರಮಗಳಿಂದ ಗಡಿನಾಡ ಕನ್ನಡಿಗರ ವಿಶೇಷವಾಗಿ ಕಾಸರಗೋಡು ಜಿಲ್ಲೆಯ ಕನ್ನಡಿಗರ ಹಿತಾಸಕ್ತಿಯನ್ನೆ ಕಾಪಾಡಲು ಸರ್ಕಾರ ಬಯಸುತ್ತದೆ ?

ಶ್ರೀಮತಿ ಬಿ.ಟಿ. ಲಲಿತಾನಾಯಕ್(ಕನ್ನಡ ಮತ್ತು ಸಂಸ್ಕೃತಿ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು) :

ಅ. ಇಲ್ಲ

ಆ. ಗಡಿನಾಡ ಕನ್ನಡ ಸಂಘ ಸಂಸ್ಥೆಗಳಿಗೆ ಶಾಲೆ ಕಲಾಮಂದಿರ, ವಾಚನಾಲಯಗಳ ನಿರ್ಮಾಣ ನಿರ್ವಹಣೆ ಮುಂತಾದ ಕಾರ್ಯಗಳಿಗೆ ಧನಸಹಾಯ ನೀಡಲಾಗುತ್ತಿದೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗೂ ಆರ್ಥಿಕ ನೆರವು ನೀಡಲಾಗುತ್ತಿದೆ.

**ವಿಷಯ : ರಾಜ್ಯದಲ್ಲಿರುವ ಅನಾಥಾಶ್ರಮಗಳಿಗೆ ಅನುದಾನ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 741 (576)

ಶ್ರೀ ಎನ್ ಯೋಗೀಶ್ ಭಟ್ ( ಮಂಗಳೂರು ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಕರ್ನಾಟಕ ರಾಜ್ಯದಲ್ಲಿ ಒಟ್ಟು ಎಷ್ಟು ಅನಾಥ ಆಶ್ರಮಗಳಿವೆ ? ಸರಕಾರದಿಂದ ಎಷ್ಟು ನಡೆಯುತ್ತವೆ, ಖಾಸಗಿ, ಸೇವಾ ಸಂಸ್ಥೆಗಳಿಂದ ಎಷ್ಟು ನಡೆಯುತ್ತವೆ? ಅವುಗಳಲ್ಲಿ ಇರುವ ಮಕ್ಕಳು ಎಷ್ಟು ಗಂಡಸರು ಎಷ್ಟು ? ಹೆಂಗಸರು ಎಷ್ಟು ?

ಆ. ಅನಾಥ ಅಶ್ರಮಗಳಿಗೆ ಸರಕಾರ ಕೊಡುವ ಅನುದಾನ ಕ್ಲುಪ್ತ ಸಮಯದಲ್ಲಿ ಪಾವತಿ ಆಗುತ್ತಿದೆಯೇ ? ಅನುದಾನ ಕೊಡಲು ಆಗುವ ವಿಳಂಬದಿಂದ ನತದೃಷ್ಟ ಬಡ ಬಂಧುಗಳು ಉಪವಾಸ ಬೀಳುತ್ತಿರುವುದು ಸರಕಾರದ ಗಮನಕ್ಕೆ ಬಂದಿದೆಯೆ.

ಇ. ಪಾವತಿಗೆ ಬಾಕಿ ಉಳಿದ ಹಣ ಎಷ್ಟು ಸಮಯದೊಳಗೆ ಬಿಡುಗಡೆ ಮಾಡಲು ಸರಕಾರ ಇಚ್ಛಿಸುತ್ತಿದೆ ?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಅ. ಓಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗೆ ಸಂಬಂಧಿಸಿದಂತೆ 115 ಅನಾಥಲಯಗಳನ್ನು ನಡೆಸಲಾಗುತ್ತಿದೆ.

ಅವುಗಳಲ್ಲಿ ಸರ್ಕಾರ 2

ಖಾಸಗಿ ಸಂಸ್ಥೆಗಳು 113

ಈ ಅನಾಥಲಯಗಳಲ್ಲಿ 12244 ಮಕ್ಕಳಿದ್ವಾರ

ಗಂಡು ಮಕ್ಕಳು 11409

ಹೆಣ್ಣು ಮಕ್ಕಳು 835

ಆ. ಅನುಧಾನವನ್ನು ಸೂಕ್ತ ಸಮಯದಲ್ಲಿ ಪಾವತಿ ಮಾಡಲಾಗುತ್ತಿದೆ. ವಿಳಂಬ ಪ್ರಕರಣಗಳು ಯಾವುದೂ ಇರುವುದಿಲ್ಲ.

ಇ. ಉದ್ಭವಿಸುವುದಿಲ್ಲ.

**ವಿಷಯ : ಸರಬರಾಜು ಮಾಡಿದ ನೂಲಿನ ಪ್ರಮಾಣ ಗುರುಮಿಟ್ಕಲ್ ಕೈಮಗ್ಗ ಘಟಕಕ್ಕೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 742 (1038)

ಶ್ರೀ ಮಲ್ಲಿಕಾರ್ಜುನ ಖರ್ಗೆ (ಗುರುವಿಠಕಲ್) : ಮಾನ್ಯ ಸಕ್ಕರೆ, ಜವಳಿ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಜೀವಶಾಸ್ತ್ರ, ಪರಿಸರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಕೈಮಗ್ಗ ಅಭಿವೃದ್ಧಿ ನಿಗಮದ ನೇಕಾರರು ಸಮರ್ಪಕವಾಗಿ ನೂಲು ಪೂರೈಕೆಯಾಗದೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಗುಲ್ಬರ್ಗ ಜಿಲ್ಲೆಗೆ ಮುಖ್ಯವಾಗಿ ಗುರುಮಿಟ್ಕಲ್ ನಗರದ ಕೈಮಗ್ಗ ನಿಗಮದ ಘಟಕಕ್ಕೆ ಪ್ರತಿ ತಿಂಗಳು ಸರಬರಾಜು ಮಾಡಿದ ನೂಲಿನ ಪ್ರಮಾಣ ಎಷ್ಟು?

ಶ್ರೀ ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಜೀವಿಶಾಸ್ತ್ರ ಮತ್ತು ಪರಿಸರ ರಾಜ್ಯ ಸಚಿವರು) :

ಅ. ಹೌದು.

ಆ. 1994-95ನೇ ಸಾಲಿನಲ್ಲಿ ನಿಗಮವು ಗುಲ್ಬರ್ಗ ಜಿಲ್ಲೆಗೆ ಪ್ರತಿ ತಿಂಗಳು ಸರಾಸರಿ 13, 227 ಕೆ.ಜಿ.ಯಷ್ಟು ನೂಲನ್ನು ಸರಬರಾಜು ಮಾಡಿದೆ ಹಾಗೂ ಗುರುಮಿಟಕಲ್ ಕೇಂದ್ರಕ್ಕೆ ಪ್ರತಿ ತಿಂಗಳು ಸರಾಸರಿ 6,685 ಕೆ.ಜಿ.ಯಷ್ಟು ನೂಲನ್ನು ಒದಗಿಸಲಾಗಿದೆ.

**ವಿಷಯ : ರಾಜ್ಯದಲ್ಲಿರುವ ಪರಿಶಿಷ್ಟಜಾತಿ ವಿದ್ಯಾರ್ಥಿನಿಲಯಗಳ ಸಂಖ್ಯೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖೆಯ 744 (1057)

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ (ಗುರುವಿಠಕಲ್) : ಮಾನ್ಯ ಸಮಾಜ ಕಲ್ಯಾಣ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ.

ಅ. ರಾಜ್ಯದಲ್ಲಿರುವ ಪರಿಶಿಷ್ಟ ಜಾತಿಯ. ವಿದ್ಯಾರ್ಥಿ ನಿಲಯಗಳ ಸಂಖ್ಯೆ ಎಷ್ಟು ?

ಆ. ಅವುಗಳಲ್ಲಿ ಎಷ್ಟು ವಿದ್ಯಾರ್ಥಿನಿಲಯಗಳಿಗೆ ಸ್ವಂತ-ಕಟ್ಟಡಗಳಿವೆ ?

ಇ. ರಾಜ್ಯದಲ್ಲಿ ಸ್ವಂತ ಕಟ್ಟಡಗಳಿಲ್ಲದ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಲಯಗಳಿಗೆ ಕಟ್ಟಡಗಳನ್ನು ಕಟ್ಟಲು ಸರ್ಕಾರದ ಉದ್ದೇಶಿತ ಕ್ರಮವೇನು ?

ಶ್ರೀ. ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಅ. ಸಮಾಜ ಕಲ್ಯಾಣ ಇಲಾಖೆಯು ಈ ಕೆಳಕಂಡ ವಿದ್ಯಾರ್ಥಿನಿಲಯಗಳನ್ನು ಪರಿಶಿಷ್ಟ ಜಾತಿಯವರಿಗಾಗಿ ನಡೆಸಲಾಗುತ್ತಿದೆ.

1) ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯಗಳು. - 805
2) ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು - 106
ಒಟ್ಟು - 911

ಆ. 480 ವಿದ್ಯಾರ್ಥಿನಿಲಯಗಳು ಮಾತ್ರ ಸ್ವಂತ ಕಟ್ಟಡಗಳನ್ನು ಹೊಂದಿರುತ್ತದೆ.

ಇ. ಸ್ವಂತ ಕಟ್ಟಡ ಇಲ್ಲದೇ ಇರುವ ವಿದ್ಯಾರ್ಥಿನಿಲಯಗಳಿಗೆ ಕಟ್ಟಡಗಳನ್ನು ಹಂತಹಂತವಾಗಿ ಕಟ್ಟಲು ಕ್ರಮ ಕೈಗೊಳ್ಳಲಾಗುತ್ತಿದೆ. 110 ಕಟ್ಟಡಗಳು ನಿರ್ಮಾಣವಾಗುತ್ತಿವೆ. 1994-95ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿ ಈ ಬಾಬ್ತಿಗಾಗಿ 440 ಲಕ್ಷ ರೂ.ಗಳನ್ನು ಒದಗಿಸಲಾಗಿತ್ತು. ಇದಲ್ಲದೆ, ವಿಶೇಷ ಘಟಕ ಯೋಜನೆಯಡಿಯಲ್ಲಿ ಕ್ರೂಢೀಕರಿಸಿದ ಹಣದಿಂದ 522 ಲಕ್ಷ ರೂ. ಗಳನ್ನು ಈ ಬಾಬ್ತಿಗಾಗಿ ಒದಗಿಸಲಾಗಿದೆ. ಕೇಂದ್ರ ಸರ್ಕಾರದಿಂದ ಒಟ್ಟು 720 ಲಕ್ಷ ರೂ.ಗಳ ನೆರವನ್ನು ಕೋರಿದ್ದು, ಅವರಿಂದ 238.64 ಲಕ್ಷ ರೂ.ಗಳು ಬಂದಿರುತ್ತದೆ. ಇದರಲ್ಲಿ 48 ಕಟ್ಟಡಗಳ ಕಾಮಗಾರಿ ಕೈಗೆತ್ತಿ ಕೊಳ್ಳಲು ಮೊದಲನೆಯ ಕಂತಾಗಿ 220 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾ ಪಂಚಾಯತ್ ವತಿಯಿಂದಲೂ ಕಟ್ಟಡಗಳನ್ನು ನಿರ್ಮಿಸಲು 1994-95ನೇ ಸಾಲಿನಲ್ಲಿ ಒಟ್ಟು 132.23 ಲಕ್ಷ ರೂ. ಗಳನ್ನು ಒದಗಿಸಿಕೊಂಡಿದ್ದು, ಕ್ರಮ ಕೈಗೊಳ್ಳಲಾಗಿದೆ. ಇದಲ್ಲದೆ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ವತಿಯಿಂದಲೂ ವಿದ್ಯಾರ್ಥಿನಿಲಯದ ಕಟ್ಟಡಗಳನ್ನು ಕಟ್ಟಲು ಕ್ರಮ ತೆಗೆದುಕೊಳ್ಳಲಾಗುತ್ತಿದೆ.

**ವಿಷಯ : ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಕೈಮಗ್ಗ ಅಭಿವೃದ್ಧಿ ಕೇಂದ್ರಗಳ ಸಂಖ್ಯೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 745 (1054)

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ (ಗುರುಮಿಠಕಲ್) : ಮಾನ್ಯ ಸಕ್ಕರೆ ಜವಳಿ ವಿಜ್ಞಾನ ಮತ್ತು ತಂತ್ರಜ್ಞಾನ ಜೀವಿಶಾಸ್ತ್ರ ಮತ್ತು ಪರಿಸರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೇ ?

ಅ. ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಒಟ್ಟು ತೀವ್ರ ಕೈಮಗ್ಗ ಅಭಿವೃದ್ಧಿ ಕೇಂದ್ರಗಳ ಸಂಖ್ಯೆ ಎಷ್ಟು ? ಹಾಗೂ ಈ ಕೇಂದ್ರಗಳಲ್ಲಿ ಎಷ್ಟು ಮಂದಿ ಕೆಲಸ ನಿರ್ವಹಿಸುತ್ತಿದ್ದಾರೆ. (ಜಿಲ್ಲಾವಾರು ಸಂಖ್ಯೆಯನ್ನು ನೀಡುವುದು)

ಆ. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಈ ಕೇಂದ್ರಗಳಿಗೆ ನಿರಂತರವಾಗಿ ನೂಲನ್ನು ಸರಬರಾಜು ಮಾಡುತ್ತಿದೆಯೆ.

ಇ. ಇಲ್ಲದಿದ್ದಲ್ಲಿ, ಇದಕ್ಕೆ ಕಾರಣಗಳೇನು ಹಾಗೂ ಇದನ್ನು ಸರಿಪಡಿಸಲು ಸರ್ಕಾರವು ಉದ್ದೇಶಿಸಿರುವ ಕ್ರಮಗಳೇನು ?

ಶ್ರೀ ಪಿ.ಸಿ. ಸಿದ್ದನಗೌಡರ್ : (ಸಕ್ಕರೆ, ಜವಳಿ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು )

ಅ. ರಾಜ್ಯದಲ್ಲಿರುವ ತೀವ್ರ ಕೈಮಗ್ಗ ಅಭಿವೃದ್ಧಿ ಕೇಂದ್ರಗಳ ಸಂಖ್ಯೆ ಹಾಗೂ ಈ ಕೇಂದ್ರಗಳಲ್ಲಿ ಕಾರ್ಯ ಮಾಡುತ್ತಿರುವ ನೇಕಾರರ ಸಂಖ್ಯೆಯ ವಿವರಗಳು ಈ ಕೆಳಕಂಡಂತಿವೆ :

| ಜಿಲ್ಲೆ | ತೀವ್ರ ಕೈಮಗ್ಗ ಅಭಿವೃದ್ಧಿ ಕೇಂದ್ರಗಳ ಸಂಖ್ಯೆ | ತೀವ್ರ ಕೈಮಗ್ಗ ಕೇಂದ್ರಗಳಲ್ಲಿ ಕೆಲಸ ಮಾಡುತ್ತಿರುವ ನೇಕಾರರ ಸಂಖ್ಯೆ |
|---|---|---|
| ಬಿಜಾಪುರ | 43 | 8797 |
| ಬೆಳಗಾಂ | 14 | 2073 |
| ಧಾರವಾಢ | 12 | 4348 |
| ಗುಲ್ಬರ್ಗಾ | 21 | 2740 |
| ಬೀದರ್ | 05 | 871 |
| ರಾಯಚೂರು | 08 | 1527 |
| ಚಿತ್ರದುರ್ಗ | 05 | 364 |
| ಶಿವಮೊಗ್ಗ | 05 | 496 |
| ಬಳ್ಳಾರಿ | 05 | 563 |
| ಹಾಸನ | 01 | 100 |
| ಮಂಡ್ಯ | 02 | 76 |
| ಮೈಸೂರು | 01 | 10 |
| ಚಿಕ್ಕಮಗಳೂರು | 01 | 24 |
| ಬೆಂಗಳೂರು (ಗ್ರಾ) | 01 | 09 |
| ಉತ್ತರ ಕನ್ನಡ | 01 | 77 |
| ದಕ್ಷಿಣ ಕನ್ನಡ | 03 | 173 |
| ಕೋಲಾರ | 03 | 71 |
| ಒಟ್ಟು : | 131 | 22,319 |

ಆ. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಈ ಕೇಂದ್ರಗಳಿಗೆ ನಿರಂತರವಾಗಿ ನೂಲನ್ನು ಸರಬರಾಜು ಮಾಡುತ್ತಿದೆ. ಆದರೆ ಕೆಲವೊಂದು ಸಂದರ್ಭಗಳಲ್ಲಿ ನೂಲಿನ ಅಭ್ಯಾಸದಿಂದ ಹಾಗೂ ಆರ್ಥಿಕ ಬಿಕ್ಕಟ್ಟಿನಿಂದಾಗಿ, ನೇಕಾರರಿಗೆ ನಿರಂತರವಾಗಿ, ನೂಲು ಸರಬರಾಜು ಮಾಡಲು ತೊಂದರೆಯಾಯಿತು.

ಇ. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ರಾಜ್ಯದಲ್ಲಿರುವ ಹಾಗೂ ಹೊರ ರಾಜ್ಯಗಳಲ್ಲಿರುವ ಸರ್ಕಾರಿ ನೂಲಿನ ಗಿರಣಿಗಳಿಂದ, ಇತರೆ ರಾಜ್ಯ ಸರ್ಕಾರಗಳ ಮತ್ತು

ಕೇಂದ್ರ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿರುವ ನೂಲಿನ ಗಿರಣಿಗಳಿಂದ ನೂಲನ್ನು ಖರೀದಿಸುತ್ತಿದೆ. ಪ್ರಸಕ್ತ ದಿನಗಳಲ್ಲಿ ಹತ್ತಿಯ ಬೆಲೆಗಳು ಏರಿರುವುದರಿಂದ ಮುಖ್ಯವಾಗಿ 20ನೇ ನಂಬರಿನ ನೂಲು ಹಾಗೂ ಇತರೆ ನಮೂನೆಯ ನೂಲಿನ ಬೆಲೆಗಳು ಗಣನೀಯವಾಗಿ ಏರಿವೆ. ಈ ಕಾರಣದಿಂದ, ಸಹಕಾರಿ ನೂಲಿನ ಗಿರಣಿಗಳು, 20ನೇ ನಂಬರಿನ ನೂಲಿನ ಉತ್ಪಾದನೆಯನ್ನು ಸಲ್ಲಿಸಿದೆ ಆದ್ದರಿಂದ ನಿಗಮವು ಸಹ ತನ್ನ. ಉತ್ಪಾದನಾ ಯೋಜನೆಯನ್ನು 20ನೇ ನಂಬರಿನ ನೂಲಿನಿಂದ 10ನೇ ನಂಬರಿನ ನೂಲಿಗೆ ಬದಲಾಯಿಸಬೇಕಾಯಿತು.

ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು 40ನೇ ನಂಬರಿನ ನೂಲಿನ್ನು ರಾಜ್ಯದ ಹಾಗೂ ಹೊರ ರಾಜ್ಯಗಳ ವಿವಿಧ ಗಿರಣಿಗಳಿಂದ ಖರೀದಿಸಿ ನೇಕಾರರಿಗೆ ಸರಬರಾಜು ಮಾಡಲು ಕ್ರಮ ತೆಗೆದುಕೊಂಡಿದೆ.

**ವಿಷಯ : ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಲಿ ಯೋಜನೆ.**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 746 (1046)

ಶ್ರೀ ಮಲ್ಲಿಕಾರ್ಜುನ ಖರ್ಗೆ ಎಂ. (ಗುರುವಿಠಕಲ್) : ಜಿಲ್ಲೆ ಮಾನ್ಯ ನಗರಾಭಿವೃದ್ಧಿ ಕಾಡಾ ಮತ್ತು ಹೇದರಾಬಾದ್ ಕರ್ನಾಟಕ ಪ್ರದೇಶಭಿವೃದ್ಧಿ ಮಂಡಳಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. 1995-96ನೇ ಸಾಲಿನ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಕ್ರಿಯಾ ಯೋಜನೆಯನ್ನು ಸರ್ಕಾರವು ಒಪ್ಪಿದೆಯೇ ? ಮತ್ತು 1995-96ರಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಕಾಮಗಾರಿಗಳಿಗೆ ಸೂಚಿಸಿದ ಮೊತ್ತವೆಷ್ಟು ?

ಆ. ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯು 1994-95ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಕ್ಕೆ ಖರ್ಚು ಮಾಡಿದ ಹಣವೆಷ್ಟು ?

ಇ. 1995-96ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಮೀಸಲಾದ ಹಣವನ್ನು ಬಿಟ್ಟು ಬೇರೆ ಹಣವನ್ನು ಪುನರ್ ಹಂಚಿಕೆ ಮಾಡುವ ಪ್ರಸ್ತಾವನೆಯು ಸರ್ಕಾರದಲ್ಲಿದೆಯೇ ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಸಚಿವರು):

ಅ. 1995-96 ರ ಕ್ರಿಯಾ ಯೋಜನೆಗೆ ಇನ್ನೂ ಸರ್ಕಾರವು ಅನುಮೋದನೆ ನೀಡಿಲ್ಲ. 1995-96ನೇ ಸಾಲಿಗೆ ಮಂಡಳಿಗೆ 60 ಕೋಟಿ ರೂ.ಗಳನ್ನು ಅಯವ್ಯಯದಲ್ಲಿ ಸೂಚಿಸಿದೆ.

ಆ. 38 ಕೋಟಿ ರೂ.ಗಳು (1995ರ ಫೆಬ್ರವರಿ ಅಂತ್ಯದವರೆಗೆ)

ಇ. ಇಲ್ಲ.

**ವಿಷಯ: ಕೊಪ್ಪಳ ಪಟ್ಟಣಕ್ಕೆ ಕುಡಿಯುವ ನೀರಿನ ಸರಬರಾಜು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 748(719)

ಶ್ರೀ ಕರಡಿ ಸಂಗಣ್ಣಅಮರಪ್ಪ (ಕೊಪ್ಪಳ): ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಕೊಪ್ಪಳನಗರದಲ್ಲಿ ಕುಡಿಯುವ ನೀರಿನ ಅಭಾವವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ತುಂಗಾಭದ್ರಾ ಜಲಾಶಯದಿಂದ ಕೊಪ್ಪಳ ನಗರಕ್ಕೆ ಕುಡಿಯುವ ನೀರು ಪೂರೈಸುವ ಯೋಜನೆಯ ಮಂಜೂರಾತಿ ಹಿಂದಿನ ಸರ್ಕಾರ ನೀಡಿದ್ದು ಜಾಕ್‌ವೆಲ್, ನೀರು ಶುದ್ಧೀಕರಣ ಘಟಕ ಹಾಗೂ ಪೈಪ್‌ಲೈನ್ ಕೆಲಸದ ಪ್ರಗತಿ ಕಂಡು ಬಂದಿಲ್ಲದಿರುವುದಕ್ಕೆ ಕಾರಣವೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಹೌದು.

ಆ. ಕೊಪ್ಪಳ ಪಟ್ಟಣದ ನೀರು ಸರಬರಾಜು ಯೋಜನೆಯನ್ನು ತುಂಗಭದ್ರಾ ನದೀ ಮೂಲದಿಂದ ಕೂಡಿದ್ದು ಇದಕ್ಕೆ ಆದೇಶ ಸಂಖ್ಯೆ ಹೆಚ್‌ಯುಡಿ :214 ಯುಡಬ್ಲ್ಯು ಎಸ್:89. ದಿನಾಂಕ : 30-3-90ರಲ್ಲಿ ಮಂಜೂರಾತಿ ನೀಡಿದೆ.

ಈ ಯೋಜನೆಯ ಕೆಲಭಾಗಗಳ ಪ್ರಗತಿಯಲ್ಲಿನ ನ್ಯೂನತೆಯ ಕಾರಣಗಳು ಕೆಳಕಂಡಂತಿದೆ.

**1. ಜಾಕ್‌ವೆಲ್ :**

ಕಾಮಗಾರಿಯು ಸಂಪರ್ಕ ರಸ್ತೆ ಇಲ್ಲದ್ದರಿಂದ ನಿಧಾನವಾಗಿತ್ತು. ಈಗ ರಸ್ತೆಯನ್ನು ಮಾಡಿದ್ದು ಗುತ್ತಿಗೆದಾರರನ್ನು ನಿಗಧಿಪಡಿಸಲು ಕ್ರಮ ಕೈಗೊಳ್ಳಲಾಗಿದೆ.

**2. ಪಿ.ಎಸ್.ಸಿ. ಪೈಪ್‌ಲೈನ್:**

ನದಿಯಿಂದ ಪಟ್ಟಣದವರೆಗೆ ನೀರು ಕೊಳವೆ ಹಾಕಲು ನಿಗಧಿಪಡಿಸಿದ್ದ ಗುತ್ತಿಗೆದಾರನು ಕಾಮಗಾರಿ ಮಾಡಲು ವಿಫಲವಾದ್ದರಿಂದ ಕೈಗೊಳ್ಳಲು ಯೋಜಿಸಲಾಗಿದೆ.

**3. ಜಲಶುದ್ಧೀಕರ ಘಟಕ :**

ಜಲಶುದ್ಧಿಕರಣಾ ಘಟಕಕ್ಕೆ ಅವಶ್ಯಕತೆ ಇರುವ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಕ್ರಮ ತೆಗೆದುಕೊಳ್ಳಲಾಗಿದೆ.

**ವಿಷಯ : ಖಾಸಗಿ ಜಮೀನಿನಲ್ಲಿ ಗ್ರಾನೈಟ್ ಶಿಲೆಗಳನ್ನು ತೆಗೆಯುವುದು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 749 (720)

ಶ್ರೀ ಕರಡಿ ಸಂಗಣ್ಣ ಅಮರಪ್ಪ (ಕೊಪ್ಪಳ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಖಾಸಗಿ ಜಮೀನಿನಲ್ಲಿ ಎಲ್ಲೆಲ್ಲಿ ಗ್ರಾನೈಟ್ ಶಿಲೆಗಳನ್ನು ತೆಗೆಯಲಾಗಿದೆ : (ಜಿಲ್ಲಾವಾರು ವಿವರಗಳನ್ನು ನೀಡುವುದು)

ಆ. ಗ್ರಾನೈಟ್ ಉದ್ದಿಮೆಯಿಂದ ಸರ್ಕಾರಕ್ಕೆ ವಾರ್ಷಿಕ ಬರುವ ವರಮಾನ ಎಷ್ಟು?

ಇ. ವರಮಾನ ಹೆಚ್ಚಿಸಲು ಸರ್ಕಾರ ಕೈಗೊಂಡ ಕ್ರಮಗಳೇನು?

ಶ್ರೀ ಎಸ್.ಡಿ. ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು): :

ಅ. ಬೆಂಗಳೂರು ಜಿಲ್ಲೆಯ ಕನಕಪುರ, ರಾಮನಗರ, ಚನ್ನಪಟ್ಟಣ ತಾಲ್ಲೂಕಿನ ಕೆಲವು ಪ್ರದೇಶಗಳಲ್ಲಿ, ಕೋಲಾರ ಜಿಲ್ಲೆಯಲ್ಲಿ, ತುಮಕೂರು ಜಿಲ್ಲೆಯ ತಿಪಟೂರು, ಕುಣಿಗಲ್ ಹಾಗೂ ತುರುವೇಕೆರೆ ತಾಲ್ಲೂಕಿನ ಹಲವು ಪ್ರದೇಶಗಳಲ್ಲಿ ಮೈಸೂರು ಜಿಲ್ಲೆಯ ಚಾಮರಾಜನಗರ, ಕೊಳ್ಳೆಗಾಲ ಮತ್ತು ಯಳಂದೂರು ತಾಲ್ಲೂಕುಗಳಲ್ಲಿ, ರಾಯಚೂರು ಜಿಲ್ಲೆಯ ಕುಷ್ಟಗಿ, ಯಲ್ಬುರ್ಗಾ ತಾಲ್ಲೂಕಿನ ಕೆಲವು ಪ್ರದೇಶಗಳಲ್ಲಿ, ಬಿಜಾಪುರದ ಹುನಗುಂದ ತಾಲ್ಲೂಕಿನ ಪ್ರದೇಶಗಳಲ್ಲಿ ಖಾಸಗಿ (ಪಟ್ಟಾ) ಜಮೀನಿನಲ್ಲಿ ಗ್ರಾನೈಟ್ ಶಿಲೆಗಳನ್ನು ತೆಗೆಯಲಾಗುತ್ತಿದೆ. ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಆ. 1993-94ನೇ ಸಾಲಿಗೆ - ರೂ.800 ಲಕ್ಷಗಳು
1994-95ನೇ ಸಾಲಿಗೆ - ರೂ.1847 ಲಕ್ಷಗಳು
(ಫೆಬ್ರವರಿ ಅಂತ್ಯದವರೆಗೆ) ವರಮಾನ ಬಂದಿದೆ.

ಇ. ವರಮಾನ ಹೆಚ್ಚಿಸಲು ಪರ್ಮಿಟ್ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ. ಅನಧಿಕೃತ ಚಟುವಟಿಕೆಗಳನ್ನು ತಡೆಯಲು ಇಲಾಖೆಯು ರಾಜ್ಯದ ಹಲವೆಡೆ ನಾಕಾ ಠಾಣೆಗಳನ್ನು ಸ್ಥಾಪಿಸಿದೆ. ಪರವಾನಿಗಿ ಇಲ್ಲದೆ ಸಾಗಿಸುವ ಖನಿಜಕ್ಕೆ ದಂಡ ವಸೂಲಿ ಮಾಡಲಾಗುತ್ತಿದೆ. ಕಂದಾಯ ಇಲಾಖೆ, ಸಾರಿಗೆ ಹಾಗೂ ವಾಣಿಜ್ಯ ತೆರಿಗೆ ಇಲಾಖೆಯ ನಾಕಾಠಾಣಾಧಿಕಾರಿಗಳಿಗೆ ಮತ್ತು ಅರಣ್ಯ ಇಲಾಖೆಯ ನಾಕಾಠಾಣಾಧಿಕಾರಿಗಳಿಗೆ ಸಾಗಣೆಯಲ್ಲಿರುವ ಖನಿಜವನ್ನು ತಪಾಸಿಸುವ ಮತ್ತು ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರವನ್ನು ನೀಡಲಾಗಿದೆ. ಮುಟ್ಟುಗೋಲು ಹಾಕಿದ ಖನಿಜವನ್ನು ಹರಾಜು ಹಾಕಿ ಬಂದ ಆದಾಯವನ್ನು ಸರ್ಕಾರಕ್ಕೆ ಜಮಾ ಮಾಡಲಾಗುತ್ತಿದೆ. ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮವನ್ನು ಮೇ 28, 1994 ರಿಂದ ಜಾರಿಗೆ ತಂದಿದ್ದು, ರಾಜಧನ ಹಾಗೂ ಸ್ಥಿರ ತೆರಿಗೆಯನ್ನು ಮೊದಲಿದುದ್ದಕ್ಕಿಂತ ಸುಮಾರು ದುಪ್ಪಟ್ಟು ಮಾಡಿದೆ ಮತ್ತು ಕಟ್ಟುನಿಟ್ಟಾಗಿ ವಸೂಲಿ ಮಾಡಲಾಗುತ್ತಿದೆ.

## ANNEXURE

### DISTRICT WISE LIST OF PATTADAR WORKING UNDER COURT ORDERS

| Sl. No. | District | No. of Pattadars | Extent |
|---|---|---|---|
| 1. | Bangalore South | 129 | 507-04 |
| 2. | Bangalore North | 17 | 115-35 |
| 3. | Bijapur | 64 | 1663-11 |
| 4. | Mysore | 41 | 136-20 |
| 5. | Raichur | 149 | 1087-016 |
| 6. | Kolar | 11 | 23-17 |
| 7. | Tumkur | 9 | 22-08 |
| | Total | 420 | 3555 Acres |

**ವಿಷಯ : ರಾಜ್ಯದಲ್ಲಿ ಲಭ್ಯವಿರುವ ಖನಿಜ ಸಂಪತ್ತಿನ ವಿವರ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 750(718)

ಶ್ರೀ ಕರಡಿ ಸಂಗಣ್ಣ ಅಮರಪ್ಪ (ಕೊಪ್ಪಳ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಲಭ್ಯವಿರುವ ಖನಿಜ ಸಂಪತ್ತು ಯಾವುದು?

ಆ. ವಿವಿಧ ಖನಿಜಗಳ ಉತ್ಪಾದನೆಯ ವಿವರಗಳೇನು?

ಇ. ರಾಜ್ಯದಲ್ಲಿರುವ ಗ್ರಾನೈಟ್ ಸಂಪತ್ತು ಎಲ್ಲೆಲ್ಲಿದೆ ಇದರಲ್ಲಿ ಅಂತರ ರಾಷ್ಟ್ರೀಯ ಮಾನ್ಯತೆ ಇರುವ ಗ್ರಾನೈಟ್ ಕ್ಷೇತ್ರ ಎಷ್ಟು?

ಈ. ಸರ್ಕಾರ ಹಾಗೂ ಸರಕಾರಿ ಸಂಸ್ಥೆಗಳು ಗ್ರಾನೈಟ್ ಉದ್ಯಮದಲ್ಲಿ ತೊಡಗಿಸಿದ ಕ್ಷೇತ್ರವೆಷ್ಟು? ಸರಕಾರಿ ಕ್ಷೇತ್ರವನ್ನು ಖಾಸಗಿಯವರಿಗೆ ಕರಾರಿನ ಮೇಲೆ ಕೊಟ್ಟ ಕ್ಷೇತ್ರದ ವಿವರವೇನು?

ಶ್ರೀ ಎಸ್.ಡಿ.ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು):

ಅ. ರಾಜ್ಯದಲ್ಲಿ ಬ್ಲಾಕ್ ಗ್ರಾನೈಟ್, ಪಿಂಕ್ ಗ್ರೇ ಗ್ರಾನೈಟ್ ಮಲ್ಟಿ ಕಲರ್ ಗ್ರಾನೈಟ್ ಮತ್ತು ಹಾಸನ ಗ್ರೀನ್ ಗ್ರಾನೈಟ್ ಲಭ್ಯವಿದೆ.

ಆ. ಅನುಬಂಧದಲ್ಲಿ ನೀಡಿದೆ.

ಇ. ರಾಜ್ಯದಲ್ಲಿನ ಗ್ರಾನೈಟ್ ಸಂಪತ್ತು, ಬೆಂಗಳೂರು, ಮೈಸೂರು, ಕೋಲಾರ, ತುಮಕೂರು, ಬಿಜಾಪುರ , ರಾಯಚೂರು ಬಳ್ಳಾರಿ, ಮಂಗಳೂರು ಶಿವಮೊಗ್ಗ ಜಿಲ್ಲೆಗಳ

ಹಲವು ಪ್ರದೇಶಗಳಲ್ಲಿ ಲಭ್ಯವಿದೆ. ಅಂತರರಾಷ್ಟ್ರೀಯ ಯೋಗ್ಯವಾದ ಗ್ರಾನೈಟ್ ಶಿಲೆಯು ಸುಮಾರು 180 ಚ.ಕಿ.ಮೀ.ನಲ್ಲಿದೆಯೆಂದು ಅಂದಾಜು ಮಾಡಲಾಗಿದೆ.

ಈ. ಸರಕಾರಿ ಸಂಸ್ಥೆಯಾದ ಮೆ:ಮೈಸೂರು ಮಿನರಲ್ಸ್ ಸಂಸ್ಥೆ ರಾಜ್ಯದ ಹಲವೆಡೆ 41 ಕಲ್ಲುಗಣಿ ಗುತ್ತಿಗೆಗಳನ್ನು ಅಲಂಕಾರಿಕ ಶಿಲೆಗೆ ಹೊಂದಿದ್ದು, 1295-23 ಎಕರ ಪ್ರದೇಶವನ್ನು ಒಳಗೊಂಡಿದೆ. ಬಹುತೇಕ ಕಲ್ಲುಗಣಿಗುತ್ತಿಗೆಗಳ ಅವಧಿ ಮುಗಿದಿದ್ದು ನವೀಕರಣ ಮಾಡಬೇಕಾಗಿದೆ. ಸರಕಾರಿ ಕ್ಷೇತ್ರವನ್ನು ಖಾಸಗಿಯವರಿಗೆ ಕರಾರಿನ ಮೇಲೆ ನೀಡಿರುವುದಿಲ್ಲ.

## ANNEXURE
## PRODUCTION OF GRANITES FOR THE YEAR 1993 IN CUBIC METER

| Sl. No. | District | Hassan Green | Grey Granite | Multi Colour | Black Granite/ Dyke |
|---|---|---|---|---|---|
| 1. | Bangalore south | - | 68.313 | 2251.503 | - |
| 2. | Bangalore North | - | 36.848 | 939.151 | - |
| 3. | Chitradurga | - | 210.67 | - | - |
| 4. | Bellary | - | 10.85 | - | - |
| 5. | Kolar | - | 066.00 | - | - |
| 6. | Hassan | 711.00 | 539.00 | - | - |
| 7. | Chickmangalore | 473.00 | - | - | - |
| 8. | Bijapur | - | - | 201.72 | - |
| 9. | Tumkur | - | 4643.636 | 355.734 | - |
| 10. | Raichur | - | 3511.743 | 1988.667 | 3352.00 |
| 11. | Mysore | - | - | - | 4807.735 |
| | Total | 1184.00 | 10161.21 | 25707.055 | 8159.735 |
| | | | Grand Total | | 45212.000 |

### ವಿಷಯ : ಹೈಸ್ಕೂಲ್ ಪದವಿಪೂರ್ವ ಕಾಲೇಜುಗಳ ಹಾಸ್ಟೆಲ್‌ಗಳ ಬಗ್ಗೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 751 (721)

ಶ್ರೀ ಕರಡಿ ಸಂಗಣ್ಣ ಅಮರಪ್ಪ (ಕೊಪ್ಪಳ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. 1995-96ನೇ ಸಾಲಿನಲ್ಲಿ ಹೈಸ್ಕೂಲ್ ಹಾಗೂ ಪದವಿಪೂರ್ವ ಕಾಲೇಜುಗಳಿಗೆ ಎಷ್ಟು ಹಾಸ್ಟೆಲ್‌ಗಳನ್ನು ಪ್ರಾರಂಭಿಸಲು ಸರ್ಕಾರ ಉದ್ದೇಶಿಸಿದೆ?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಸಮಾಜ ಕಲ್ಯಾಣ ಇಲಾಖೆ (ಪ.ಜಾತಿ : ಪ.ವರ್ಗ)

1995-96ನೇ ಸಾಲಿನಲ್ಲಿ 40 ಮೆಟ್ರಿಕ್‌ಪೂರ್ವ ಹಾಗೂ 39 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ.

ಬಿ.ಸಿ.ಎಂ. ಇಲಾಖೆ:

1995-96ನೇ ಸಾಲಿನಲ್ಲಿ 50 ಮೆಟ್ರಿಕ್‌ಪೂರ್ವ ಮತ್ತು 25 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ.

**ವಿಷಯ : ಹಿಂದುಳಿದ ವರ್ಗಗಳ ಮೀಸಲಾತಿ ಜಾರಿಗೆ ನಿಯಮಗಳು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 753(726)

ಶ್ರೀ ಕುಂಬ್ಳೆ ಸುಂದರರಾವ್ (ಸುರತ್ಕಲ್) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿಯ ಕುರಿತಾಗಿ ಜಾರಿ ಮೀಸಲಾತಿಯ ಕುರಿತಾಗಿ ಜಾರಿಯಲ್ಲಿರುವ ನಿಯಮಗಳೇನು;

ಆ. ಪ್ರಸಕ್ತ ವರ್ಷದಲ್ಲಿ ವೃತ್ತಿ ಶಿಕ್ಷಣಕ್ಕೆ ಸಂಬಂಧಪಟ್ಟ ಹಾಗೆ ಈ ಆದೇಶವನ್ನು ಜಾರಿಗೊಳಿಸಲಾಗಿದೆಯೇ?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಅ. ರಾಜ್ಯದಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಕುರಿತಂತೆ ವೃತ್ತಿಪರ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶವನ್ನು ಪಡೆಯಲು ಭಾರತ ಸಂವಿಧಾನದ ಅನುಚ್ಛೇದ 5(4)ರ ಮೇರೆಗೆ (1994-95ನೇ ಸಾಲಿಗೆ ) ಸರ್ಕಾರಿ ಆದೇಶ ಸಂಖ್ಯೆ ಸಕಇ 150 ಬಿಸಿಎ 94 ದಿನಾಂಕ: 17-9-94 ಮತ್ತು ರಾಜ್ಯಾಧೀನ ಸೇವೆಗಳಲ್ಲಿನ ನೇಮಕಾತಿಗೆ ಭಾರತ ಸಂವಿಧಾನದ ಅನುಚ್ಛೇದ 16(4) ರ ಮೇರೆಗೆ ಸರ್ಕಾರಿ ಆದೇಶ ಸಂಖ್ಯೆ ಸಕಇ 251 ಬಿಸಿಎ 94 ದಿನಾಂಕ : 31-1-1995 (31-5-1995 ರವರೆಗೆ)ಗಳಲ್ಲಿ ಹೊರಡಿಸಿರುವಂತೆ ನಿಯಮಗಳು ಜಾರಿಯಲ್ಲಿರುತ್ತದೆ.

ಆ. ಪ್ರಸಕ್ತ ವರ್ಷದಲ್ಲಿ (ಅಂದರೆ 1994-95ನೇ ಸಾಲಿಗೆ ವೃತ್ತಿ ಶಿಕ್ಷಣಕ್ಕೆ ಸಂಬಂಧಪಟ್ಟ ಹಾಗೆ ಭಾರತ ಸಂವಿಧಾನದ ಅನುಚ್ಛೇದ 15(4) ಮೇರೆಗೆ ಆದೇಶ ಸಂಖ್ಯೆ ಸಕಇ 150 ಬಿಸಿಎ 94 ದಿನಾಂಕ : 17-9-1994 ಜಾರಿಯಲ್ಲಿದೆ.

**ವಿಷಯ : ಸೂರತ್ಕಲ್‌ನಗರದ ಮಧ್ಯದಲ್ಲಿರುವ ಹೊಟೆಲ್‌ಗಳ ಕಲ್ಮಶ ನೀರು ಜನರು ನಡೆದಾಡುವ ರಸ್ತೆಯಲ್ಲಿ ಹರಿಯುತ್ತಿರುವುದರ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 754(1024)

ಶ್ರೀ ಕುಂಬ್ಳೆ ಸುಂದರ್‌ರಾವ್ (ಸೂರತ್ಕಲ್) ಮಾನ್ಯ ನಗರಾಭಿವೃದ್ಧಿ ಮತ್ತು ಕಾಡಾ ಕರ್ನಾಟಕ ಹೈದರಾಬಾದ್ ಅಭಿವೃದ್ಧಿ ಮಂಡಳಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಸೂರತ್ಕಲ್ ನಗರದ ಮಧ್ಯದಲ್ಲಿರುವ ಹೋಟೆಲ್‌ಗಳ ಕಲ್ಮಶ ನೀರು ಜನರು ನಡೆದಾಡುವ ರಸ್ತೆಗಳಲ್ಲಿ ಹರಿಯುತ್ತಿರುವ ಬಗ್ಗೆ ದೂರು ಬಂದಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ. ಹಾಗಿದ್ದಲ್ಲಿ, ಈ ವಿಷಯದ ಬಗ್ಗೆ ಕೈಗೊಂಡ ಕ್ರಮಗಳೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಮತ್ತು ಕಾಡಾ ಕರ್ನಾಟಕ ಹೈದರಾಬಾದ್ ಅಭಿವೃದ್ಧಿ ಮಂಡಳಿ ಸಚಿವರು) :

ಅ. ಬಂದಿದೆ.

ಆ. ದಕ್ಷಿಣ ಕನ್ನಡ ಜಿಲ್ಲಾ 3ನೇ ಮುನ್ಸಿಫ್ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ 132: 92 ರ ಬಾಕಿಯಿದೆ ಅಲ್ಲದೆ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ 1709 ಮತ್ತು 1710:90 ಬಾಕಿಯಿವೆ.

ಆದರೆ ಸೂರತ್ಕಲ್ ಪುರಸಭೆಯ ಒಳಚರಂಡಿ ಯೋಜನೆಯ ವ್ಯವಸ್ಥೆಗಾಗಿ ರೂ. 385.00 ಲಕ್ಷ ರೂಪಾಯಿಗಳ ಅಂದಾಜು ಪಟ್ಟಿಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ತಯಾರಿಸಿದೆ. ಇದು ಪರಿಶೀಲನೆಯಲ್ಲಿದೆ. ಈ ಮೇಲಿನ ಹೋಟೆಲ್‌ಗಳ ಪರವಾನಗಿಗಳು 31-3-95ರಂದು ಮುಗಿದಿದೆ. ಇವರ ಪರವಾನಗಿಯನ್ನು 1-4-95ರ ನಂತರ ನವೀಕರಿಸುವುದಿಲ್ಲ ಮತ್ತು ಹೋಟೆಲ್‌ಗಳನ್ನು ಮುಚ್ಚಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ವಿಷಯ : ಸೂರತ್ಕಲ್ ಪುರಸಭೆಯ ವ್ಯಾಪ್ತಿಯಲ್ಲಿ ಬರುವ ಒಳಚಂಡಿಗಳ ವ್ಯವಸ್ಥೆಗೆ ಹಣ ಬಿಡುಗಡೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 755(1024 'ಎ')

ಶ್ರೀ ಕುಂಬ್ಳೆ ಸುಂದರ್‌ರಾವ್ (ಸೂರತ್ಕಲ್) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಒಳಚರಂಡಿ ವ್ಯವಸ್ಥೆಗಾಗಿ ಸರ್ಕಾರದವರು ಸೂರತ್ಕಲ್ ಮುನ್ಸಿಪಾಲಿಟಿಗೆ ಹಣವನ್ನು ಬಿಡುಗಡೆ ಮಾಡಿರುವರೆ, ಮಾಡಿದ್ದಲ್ಲಿ ಎಷ್ಟು: ಮಾಡಿಲ್ಲವಾದಲ್ಲಿ ಕಾರಣಗಳೇನು?

ಆ. ಒಳಚರಂಡಿ ವ್ಯವಸ್ಥೆಯನ್ನು ತುರ್ತಾಗಿ ಮಾಡಲು ಸರ್ಕಾರದವರು ಕಾರ್ಯ ಕ್ರಮಗಳೇನು?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಸೂರತ್ಕಲ್ ಪಟ್ಟಣಕ್ಕೆ ಒಂದು ಒಳಚರಂಡಿ ಯೋಜನೆಯನ್ನು ರೂ.. 385.00 ಲಕ್ಷ ಅಂದಾಜಿನಲ್ಲಿ ರೂಪಿಸಲಾಗಿದ್ದು, ಪುರಸಭೆಯ ಪಾಲು ಶೇ.20ರಷ್ಟು, ರೂ 77.00 ಲಕ್ಷಗಳಾಗಿವೆ. ಪುರಸಭೆ ತನ್ನ ಪಾಲಿನ ವಂತಿಗೆಯನ್ನು ಪಾವತಿ ಮಾಡಿದ ನಂತರ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗುವುದು.

ಆ. ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ ಸಕಾಲಕ್ಕೆ ಕಾರ್ಯವನ್ನು ಕೈಗೊಳ್ಳಲಾಗುವುದು.

**ವಿಷಯ: ಕರ್ನಾಟಕದಲ್ಲಿರುವ ವಿದ್ಯುತ್ ಮಗ್ಗಗಳ ಸಂಖ್ಯೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 756(724)

ಶ್ರೀ ಕುಂಬ್ಳೆ ಸುಂದರರಾವ್ (ಸೂರತ್ಕಲ್): ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ, ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿದ್ಯುತ್ ಮಗ್ಗಗಳ ಸಂಖ್ಯೆ ಎಷ್ಟು?

ಆ. ಕರ್ನಾಟಕ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮವು ಸ್ಥಾಪಿಸಿದ ನಂತರ ಕಾರ್ಯಗತಗೊಳಿಸಿರುವ ಯೋಜನೆಗಳು ಯಾವುವು? ನಿಗಮದ ಮುಂದಿರುವ ಅಭಿವೃದ್ಧಿ ಪರ ಯೋಜನೆಗಳು ಯಾವುವು?

ಇ. ರಾಜ್ಯದಲ್ಲಿರುವ (ಅಸ್ತಿತ್ವದಲ್ಲಿರುವ) ಒಟ್ಟು ವಿದ್ಯುತ್ ಮಗ್ಗಗಳ ಸಹಕಾರಿ ಸಂಘಗಳ ಸಂಖ್ಯೆ ಎಷ್ಟು? (ಪೂರ್ಣ ವಿವರಗಳನ್ನು ನೀಡುವುದು)

ಈ. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿರುವ ವಿದ್ಯುತ್ ಮಗ್ಗ ಸಹಕಾರ ಸಂಘಕ್ಕೆ ವಿದ್ಯುತ್ ಮಗ್ಗದ ಕಾಂಪ್ಲೆಕ್ಸ್ ನಿರ್ಮಾಣವನ್ನು ಮಾಡಲು ಅಗತ್ಯ ಕ್ರಮವನ್ನು ಕೈಗೊಳ್ಳಲಾಗಿದೆಯೇ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ತಿಳಿಸುವುದು.

ಉ. ಈ ವಿದ್ಯುತ್ ಸಹಕಾರ ಮಗ್ಗಗಳ ಸಂಘಗಳಿಗೆ ಸರ್ಕಾರದವರು ನೀಡುವ ಪಾಲು ಬಂಡವಾಳ ಹಣ ಮತಿತ್ತರ ಮೂಲ ಸೌಲಭ್ಯಗಳನ್ನು ಒದಗಿಸುವಲ್ಲಿ ವಿಳಂಬ ಇತ್ಯಾದಿಗಳನ್ನು ನಿವಾರಿಸಲು ಸರ್ಕಾರದವರು ಸಕಾಲಿಕ ಕ್ರಮವನ್ನು ಜರುಗಿಸುವರೇ?

ಶ್ರೀ ಪಿ.ಸಿ.ಸಿದ್ಧನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಜೀವಿ ಶಾಸ್ತ್ರ ರಾಜ್ಯ ಸಚಿವರು) :

ಅ. 55,727

ಆ. ನಿಗಮದ ಯೋಜನೆಯಡಿಯಲ್ಲಿ ವಿದ್ಯುತ್ ಮಗ್ಗ ವಲಯಕ್ಕೆ ಆರ್ಥಿಕ ನೆರವು ನೀಡಿ ವಿದ್ಯುತ್ ಮಗ್ಗದ ಪೂರ್ವ ಮತ್ತು ನಂತರದ ಸೌಲಭ್ಯಗಳನ್ನು ನೀಡಲು ರೂಪಿಸಲಾಗಿದೆ. ನಿಗಮವು ವಿದ್ಯುತ್ ಮಗ್ಗ ನೇಕಾರರಿಗೆ ತರಬೇತಿ ನೀಡುವುದು ನೇಕಾರರ ಸಾಮೂಹಿಕ ವಿಮೆ ಮತ್ತು ನಿಪ್ಪಾಣಿಯಲ್ಲಿ ವಿದ್ಯುತ್ ಮಗ್ಗ ಸಂಕೀರ್ಣ ಸ್ಥಾಪನೆಗೊಳಿಸುವುದು. ಮುಂತಾದ ಯೋಜನೆಗಳನ್ನು ಕಾರ್ಯಗತಗೊಳಿಸುವ ಕಾರ್ಯಕ್ರಗಳನ್ನು ಹಮ್ಮಿಕೊಂಡಿದೆ.

ಇ. ರಾಜ್ಯದಲ್ಲಿ ಒಟ್ಟು 14 ವಿದ್ಯುತ್ ಮಗ್ಗಗಳ ಸಹಕಾರಿ ಸಂಘಗಳಿವೆ. ವಿವರಗಳ ಪಟ್ಟಿ ಲಗತ್ತಿಸಿದೆ.

ಈ. ಮುಲ್ಕಿಯಲ್ಲಿ ಕಾರ್ಯ ನಿರ್ವಾಹಕ ವಿದ್ಯುತ್‌ಮಗ್ಗ ವಸಾಹತು : ವಿದ್ಯುತ್ ಮಗ್ಗ ಸಂಕೀರ್ಣವನ್ನು ವಿಶ್ವ ಯೋಜನೆಯಲ್ಲಿ ಸ್ಥಾಪಿಸುವ ಪ್ರಸ್ತಾವನೆಯನ್ನು ರಾಜ್ಯ ಮಟ್ಟದ ಅಧಿಕಾರರೂಢ ಸಮಿತಿ ಅನುಮೋದನೆ ನೀಡಿದೆ.

ಸದರಿ ಯೋಜನೆಯಲ್ಲಿ 52 ಕಾರ್ಯಾಗಾರಗಳ ಸ್ಥಾಪನೆಯನ್ನು ಒಳಗೊಂಡಿದಂತೆ ಇವುಗಳನ್ನು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ವಿಶ್ವ ಯೋಜನೆಯ ಆರ್ಥಿಕ ಸಹಕಾರ ರೂ. 24.94 ಲಕ್ಷದೊಂದಿಗೆ ಸ್ಥಾಪಿಸಲಾಗುವುದು. ಯೋಜನೆಯ ಒಟ್ಟು ವೆಚ್ಚ ರೂ. 62.35 ಲಕ್ಷಗಳು ಒಂದೊಂದು ಷೆಡ್ಡಿನಲ್ಲೂ 4 ರಿಂದ 8 ಮಗ್ಗಗಳು ಇರುವುದು. ವಿದ್ಯುತ್‌ಮಗ್ಗ ಸಂಕೀರ್ಣ ಪೂರ್ಣ ಪ್ರಮಾಣದಲ್ಲಿ ಕಾರ್ಯಾರಂಭ ಮಾಡಿದರೆ ಸುಮಾರು 200 ರಿಂದ 400 ಮಗ್ಗಗಳು ಕಾರ್ಯ ನಿರ್ವಹಿಸುತ್ತವೆ

ಉ. ಸೂಕ್ತ ಕ್ರಮ ಕೈಗೊಳ್ಳಲಾಗುವುದು.

ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :724 ಕ್ಕೆ ಅನುಬಂಧ:

**ನೋಂದಾಯಿತ ವಿದ್ಯುತ್ ಮಗ್ಗ ನೇಕಾರ ಸಂಘಗಳ ಪಟ್ಟಿ**

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಸದಸ್ಯತ್ವ | ಮಗ್ಗಗಳ ಸಂಖ್ಯೆ |
|---|---|---|---|
| 1 | 2 | 3 | 4 |
| | ಬೆಂಗಳೂರು (ಗ್ರಾಮಾಂತರ) | | |
| 1. | ಕೃತಕ ರೇಷ್ಮೆ ಮತ್ತು ಅಪ್ಪಟ ರೇಷ್ಮೆ ಉತ್ಪಾದನೆ ಹಾಗೂ ವ್ಯಾಪಾರ ವಿದ್ಯುತ್‌ಮಗ್ಗ ನೇಕಾರರ ಸಹಕಾರ ಸಂಘ, ನಿ. ನಂ.1677, ಕೊಂಗಾಡಿಯಪ್ಪ ರಸ್ತೆ, ದೊಡ್ಡಬಳ್ಳಾಪುರ. | 627 | 1,731 |
| 2. | ಕಲ್ಪತರು ವಿದ್ಯುತ್‌ಮಗ್ಗ ನೇಕಾರರ ಅಪ್ಪಟ ಮತ್ತು ಕೃತಕ ರೇಷ್ಮೆ ಬಟ್ಟೆ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ, ನಿ. ಕುಚ್ಚಪ್ಪವರ್, ದೊಡ್ಡಬಳ್ಳಾಪುರ. | 584 | 3,004 |
| 3. | ದೊಡ್ಡಬಳ್ಳಾಪುರ ವಿದ್ಯುತ್‌ಮಗ್ಗ ನೇಕಾರರ ಸಹಕಾರ ಸಂಘ ನಿ. ಮುಖ್ಯರಸ್ತೆ, ದೊಡ್ಡಬಳ್ಳಾಪುರ. | 604 | 425 |
| 4. | ಕೈಮಗ್ಗ ಮತ್ತು ವಿದ್ಯುತ್‌ಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟಗಾರರ ಸಹಕಾರ ಸಂಘ. ನಿ. ಸುಂಕಲಪೇಟೆ ದೊಡ್ಡಬಳ್ಳಾಪುರ. | 1,500 | 500 |
| 5. | ವಿದ್ಯುತ್‌ಮಗ್ಗ ಬಟ್ಟೆ ತಯಾರಕರ ಸಹಕಾರ ಸಂಘ, ನಿ. ಕುಚಪ್ಪಪೇಟೆ, ದೊಡ್ಡಬಳ್ಳಾಪುರ. | 594 | 1,172 |
| 6. | ಆನೇಕಲ್ ತಾಲ್ಲೂಕು ವಿದ್ಯುತ್‌ಮಗ್ಗ ರೇಷ್ಮೆ ಬಟ್ಟೆ ತಯಾರಕರ ಸಹಕಾರ ಸಂಘ, ನಿ. ಆನೇಕಲ್ | 320 | 500 |

| | | | |
|---|---|---|---|
| 7. | ಚೌಡೇಶ್ವರಿ ವಿದ್ಯುತ್ ಮಗ್ಗ ನೇಕಾರರ ಸಹಕಾರ ಸಂಘ, ನಿ. ನೆಲಮಂಗಲ | 100 | 200 |
| 8. | ಅಗ್ರಹಾರ ವಿದ್ಯುತ್ ಮಗ್ಗ ನೇಕಾರರ ಸಂಘ, ನಿ. ಯಲಹಂಕ. | 60 | 37 |
| 9. | ವೆಂಕಟೇಶ್ವರ ವಿದ್ಯುತ್ ಮಗ್ಗ ನೇಕಾರರ ಸಹಕಾರ ಸಂಘ, ನಿ. ಯಲಹಂಕ | 60 | 100 |
| | **ಬೆಂಗಳೂರು ( ನಗರ )** | | |
| 10. | ಮೈಸೂರು ರಾಜ್ಯ ವಿದ್ಯುತ್‌ಮಗ್ಗ ಬಟ್ಟೆ ತಯಾರಕರ ಸಹಕಾರ ಸಂಘ, ನಿ. ನಂ. 99:100 ಅವೆನ್ಯೂ ರಸ್ತೆ, ಬೆಂಗಳೂರು. | 5,414 | 13,966 |
| 11. | ಕರ್ನಾಟಕ ರಾಜ್ಯ ರೇಷ್ಮೆ ಮಾರುಕಟ್ಟೆ ವಿದ್ಯುತ್ ಮಗ್ಗ ಸಂಯುಕ್ತ ಸಂಘ, ನಿ. 99:100 ಅವೆನ್ಯೂ ರಸ್ತೆ ಬೆಂಗಳೂರು-2 | 11 | - |
| | **ಮೈಸೂರು ಜಿಲ್ಲೆ** | | |
| 12. | ಮೈಸೂರು ನಗರ ವಿದ್ಯುತ್ ಮಗ್ಗ ಮಾಲೀಕರ ಸಹಕಾರ ಸಂಘ, ನಿ. ಚಿಕ್ಕವೀರಣ್ಣ ರಸ್ತೆ ಹೊಸ ಬನ್ನಿಮಂಟಪ, ಮೈಸೂರು-15 | 300 | 655 |
| | ಶಿವಮೊಗ್ಗ ಜಿಲ್ಲೆ | | |
| 13. | ವಿದ್ಯುತ್ ಮಗ್ಗ ನೇಕಾರರ ಸಹಕಾರ ಸಂಘ, ನಿ. ಸೂರಹೊನ್ನೆ-577223, ಹೊನ್ನಳ್ಳಿ ತಾ: ಶಿವಮೊಗ್ಗ ಜಿಲ್ಲೆ (1994-95ನೇ ಸಾಲಿಗೆ ಹೊಸ ನೋಂದಣಿ) | 100 | - |
| | **ದಕ್ಷಿಣ ಕನ್ನಡ ಜಿಲ್ಲೆ** | | |
| 14. | ದಕ್ಷಿಣ ಕನ್ನಡ ಜಿಲ್ಲೆ ವಿದ್ಯುತ್ ಮಗ್ಗ ನೇಕಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಮಟ್ಟದಕಣಿ (ಬೋಲೂರು) ಮಂಗಳೂರು (ಹೊಸ ನೋಂದಣಿ 94) | 583 | - |
| 15. | ಚೆರ್ಕಾಡಿ ವಿದ್ಯುತ್ ಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ ದರ್‌ಕಾಡಿ, ಉಡುಪಿ ತಾಲ್ಲೂಕು, (ಹೊಸನೋಂದಣಿ 94-95) | 100 | - |
| | ರಾಯಚೂರು ಜಿಲ್ಲೆ | | |

| | | | |
|---|---|---|---|
| 16. | ಭಾಗ್ಯನಗರ ವಿದ್ಯುತ್ ನೇಕಾರರ ಉತ್ಪಾದಕರು ಹಾಗೂ ಮಾರಾಟಗಾರರ ಸಹಕಾರ ಸಂಘ, ನಿಯಮಿತ, ಭಾಗ್ಯನಗರ ಕೊಪ್ಪಲ್ ತಾಲ್ಲೂಕು. | 266 | - |
| | ಚಿತ್ರದುರ್ಗ ಜಿಲ್ಲೆ | | |
| 17. | ಹೊಲಕೆರೆ ತಾಲ್ಲೂಕು ವಿದ್ಯುತ್ ಮಗ್ಗ ನೇಕಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ ಮಲ್ಲಾಡಿ ಹಳ್ಳಿ | 119 | 22 |
| | ಉತ್ತರಕನ್ನಡ ಜಿಲ್ಲೆ | | |
| 18. | ಶ್ರೀ ತುಲಜಭವಾನಿ ವಿದ್ಯುತ್ ಮಗ್ಗ ಸಹಕಾರ ಸಂಘ ನಿಯಮಿತ ಹಲಿಯಾಲ ತಾಲ್ಲೂಕು (ಹೊಸ ನೋಂದಣಿ 94-95) | 100 | - |
| | **ಬಿಜಾಪುರ ಜಿಲ್ಲೆ** | | |
| 19. | ಕರ್ನಾಟಕ ವಿದ್ಯುತ್ ಚಾಲಿತ ಮಗ್ಗಗಳ ಔದ್ಯೋಗಿಕ ಸಹಕಾರಿ ಸಂಘ ನಿಯಮಿತ, ರಬಕವಿ, ಜಖಮಂಡಿ, ತಾ: | 331 | 240 |
| 20. | ಬಾಣಹಟ್ಟಿ ವಿದ್ಯುತ್ ಮಗ್ಗಗಳ ಸಹಕಾರಿ ಸಂಘ ನಿಯಮಿತ, ಬಾಣಹಟ್ಟಿ, ಜಮಖಂಡಿ ತಾಲ್ಲೂಕು | 200 | 300 |
| | **ಧಾರವಾಡ ಜಿಲ್ಲೆ** | | |
| 21. | ಗದಗ ವಿದ್ಯುತ್ ಮಗ್ಗ ಸಹಕಾರ ಕೈಗಾರಿಕಾ ಬಡಾವಣೆ ಗದಗ, ಧಾರವಾಡ ಜಿಲ್ಲೆ. | 3,3113 | 50 |
| 22. | ವಿವೇಕಾನಂದ ವಿದ್ಯುತ್ ಮಗ್ಗ ನೇಕಾರರ ಸಹಕಾರ ಉತ್ಪಾದಕರ ಹಾಗೂ ಮಾರಾಟಗಾರರ ಸಂಘ ನಿಯಮಿತ, ಹುಬ್ಬಳ್ಳಿ (ಹೊಸ ನೋಂದಣಿ 94-95) | 100 | - |
| | **ಗುಲ್ಬರ್ಗ ಜಿಲ್ಲೆ** | | |
| 23. | ಹರಿಜನ ಗಿರಿಜನ ಮತ ಹಿಂದುಳಿದ ವರ್ಗಗಳ ಸಮತಾ ವಿದ್ಯುತ್ ಮಗ್ಗಗಳ ನೇಕಾರ ಸಹಕಾರ ಸಂಘ ನಿಯಮಿತ ಮದನಹಿಪ್ಪರಗ | 400 | 50 |
| | **ಬೆಳಗಾಂ ಜಿಲ್ಲೆ** | | |
| 24. | ಶ್ರೀ ಸಿದ್ಧಾರೂಢ, ನೇಕಾರ ಉತ್ಪಾದಕರ ಸಹಕಾರ ಸಂಘ ನಿಯಮಿತ, ಖಾನ್‌ಬಾಗ್, ಬೆಳಗಾಂ | 67 | 67 |

| | | | |
|---|---|---|---|
| 25. | ಶ್ರೀ ಶಿವಬಸವ ವಿದ್ಯುತ್ ಮಗ್ಗಗಳ ಹಾಗೂ ಕೈಮಗ್ಗಗಳ ಉದ್ಯೋಗಿಕ ಸಂಘ ನಿಯಮಿತ ಶಿವಬಸವನಗರ, ನಿಪ್ಪಾಣಿ. | 327 | 590 |
| 26. | ಮಹಾತ್ಮ ಗಾಂಧಿ ಹರಿಜನ ಗಿರಿಜನ ವಿದ್ಯುತ್ ಮಗ್ಗ ಕೈಗಾರಿಕಾ ಸಹಕಾರಿ ಸಂಘ ನಿಯಮಿತ, ಮಜಲಟ್ಟಿ, ಚಿಕ್ಕೋಡಿ ತಾಲ್ಲೂಕು | 900 | 75 |
| 27. | ಜೈಹಿಂದ್ ವಿದ್ಯುತ್ ಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ, ಎದೆಗೂನ್, ಬೆಳಗಾಂ | 209 | 25 |
| 28. | ಸೈನಾಥ್ ನೇಕಾರರ ಸಹಕಾರ ಸಂಘ ನಿಯಮಿತ, ಚೌಡಿಗಳ್ಳ, ಬೆಳಗಾಂ. | 60 | 15 |
| 29. | ತುಕರಾಂ ನೇಕಾರ ಉತ್ಪಾದಕರ ಸಹಕಾರಿ ಸಂಘ ನಿಯಮಿತ, ತೆಗ್ಗಿನಹಳ್ಳಿ, ಎಂ.ವಡಕೋನ್, ಬೆಳಗಾಂ | 60 | 60 |
| 30. | ಬಸವೇಶ್ವರ ವಿದ್ಯುತ್ ಚಾಲಿತ ಮಗ್ಗಗಳ ಔದ್ಯೋಗಿಕ ಸಹಕಾರಿ ಸಂಘ ನಿಯಮಿತ, ಮಜಲಟ್ಟಿ, ಚಿಕ್ಕೋಡಿ ತಾಲ್ಲೂಕು | 1,500 | 100 |
| 31. | ಬೆಳಗಾಂ ವಿದ್ಯುತ್ ಮಗ್ಗ ಬಟ್ಟೆ ಉತ್ಪಾದಕರ ಸಹಕಾರ ಸಂಘ, ನಿಯಮಿತ, ಎಂ. ವಡಗೋನ್, ಬೆಳಗಾಂ | 1,500 | 60 |
| 32. | ರತ್ನಜ್ಯೋತಿ ವಿದ್ಯುತ್‌ಮಗ್ಗ ಮತ್ತು ಕೈಗಾರಿಕಾ ಉದ್ಯೋಗ ಸಹಕಾರಿ ಸಂಘ ನಿಯಮಿತ, ಬೋರಗಾಗ್, ಚಿಕ್ಕೋಡಿ ತಾ: | 65 | |
| 33. | ಖಸ್‌ಬಾಗ್ ವಿದ್ಯುತ್ ಮಗ್ಗ ಮತ್ತು ಕೈಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ, ಬೆಳಗಾಂ | 60 | 60 |
| 34. | ಪಂತಮುರಿ ನೇಕಾರ ಸಹಕಾರಿ ಉತ್ಪಾದಕರ ಸಂಘ ನಿಯಮಿತ, ಭಾರತಿನಗರ, ಸಹಕಾಪುರ. | 195 | 37 |
| 35. | ಸೋಮನಾಥ ಸಹಕಾರಿ ಉತ್ಪಾದಕ ಸಂಘ ನಿಯಮಿತ, ಬಸ್‌ಬಾಗ್, ಬೆಳಗಾಂ | 70 | 70 |
| 36. | ನಿಪ್ಪಾಣಿ ಪ್ರಾಥಮಿಕ ವಿದ್ಯುತ ಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ, ನಿಪ್ಪಾಣಿ | 124 | 20 |
| 37. | ಮುನವಳ್ಳಿ ಪ್ರಾಥಮಿಕ ವಿದ್ಯುತ್‌ಮಗ್ಗ ನೇಕಾರರ ಸಹಕಾರ ಸಂಘ ನಿಯಮಿತ, ಮನವಳ್ಳಿ, ಸೌಂದಟ್ಟಿ ತಾಲ್ಲೂಕು | 154 | 200 |

| | | | |
|---|---|---|---|
| 38. | ಶಾಖಾಂಬರಿ ನೇಕಾರರ ಸಹಕಾರ ಸಂಘ, ನಿಯಮಿತ, ಸೂಳೇ ಭಾವಿ, ಬೆಳಗಾಂ ಜಿಲ್ಲೆ | 65 | 65 |
| 39. | ಸುರೇಭಾನ್ ನಂ.2 ನೇಕಾರರ ಸಹಕಾರ ಸಂಘ ನಿಯಮಿತ, ಸುಹರೇಭಾನ್, ಬೆಳಗಾಂ ಜಿಲ್ಲೆ | 65 | 65 |
| 40. | ಶ್ರೀ ಬನಶಂಕರಿ ಪ್ರಾಥಮಿಕ ವಿದ್ಯುತ್ ಮಗ್ಗ ನೇಕಾರರ ಸಹಕಾರ ಸಂಘ ನಿ. ವಖುಂಡ, ಬೈಲಹೊಂಗಲ ತಾ: | 26 | 26 |
| 41. | ಮಹಾತ್ಮಗಾಂಧಿ ವಿದ್ಯುತ್ ಚಾಲಿತ ಮಗ್ಗಗಳ ಔದ್ಯೋಗಿಕ ಸಹಕಾರಿ ಸಂಘ ನಿಯಮಿತ, ಹೆಬ್ಬಾಳ್, ಹುಕ್ಕರಿ ತಾಲ್ಲೂಕು (ಹೊಸ ನೋಂದಣಿ 94-95) | 110 | - |
| 42. | ಶ್ರೀ ಬನಶಂಕರಿ ವಿದ್ಯುತ್ ಚಾಲಿತ ಮಗ್ಗಗಳ ಔದ್ಯೋಗಿಕ ಸಹಕಾರಿ ಸಂಘ ನಿಯಮಿತ, ಯಮಕನಮರ್ಡಿ, ಹುಕ್ಕೇರಿ ತಾಲ್ಲೂಕು (ಹೊಸ ನೋಂದಣಿ 94-95) | 100 | - |
| 43. | ಕರ್ನಾಟಕ ವಿದ್ಯುತ್ ಮಗ್ಗ ಉತ್ಪಾದಕರ ಹಾಗೂ ಮಾರಾಟಗಾರರ ಸಂಘ ನಿ, ನೇಕಾರನಾಗಾಸ್ ನಂ. 339, 7ನೇ ಕ್ರಾಸ್, ಗೊಟ್ಟಿಗೇರೆ, ಅಂಕೆ ಬೆಂಗಳೂರು-83 | | |
| 44. | ಕೋಲಾರ ಜಿಲ್ಲೆ ವಿದ್ಯುತ್ ಮಗ್ಗ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ಕೋಲಾರ ಜಿಲ್ಲೆ (ಹೊಸದು) | | |

---

**ವಿಷಯ : ಆಶ್ರಯ ಯೋಜನೆಯಲ್ಲಿ ಹಂಚಲಾಗುವ ನಿವೇಶನಗಳ ಸಂಖ್ಯೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ. .757 410

ಶ್ರೀ ಟಿ.ಬಿ. ಜಯಚಂದ್ರ (ಕಳ್ಳಂಬೆಳ್ಳ)

ಮಾನ್ಯ ವಸತಿ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಆಶ್ರಯ ಯೋಜನೆಯಡಿಯಲ್ಲಿ ಇದುವರೆವಿಗೂ ಹಂಚಲ್ಪಡಬೇಕಾಗಿದ್ದ ಮತ್ತು ಹಂಚಿರುವ ನಿವೇಶನಗಳ ಸಂಖ್ಯೆ ಎಷ್ಟು

ಆ. ನಿವೇಶನ ರಹಿತರಿಗೆ ಈ ಯೋಜನೆ ''ಅಶಾ ಕಿರಣವಾಗಿದ್ದು'' ಸರ್ಕಾರದ ಅದೇಶದಿಂದ ಕಳೆದ ತಿಂಗಳಿನಿಂದ ಕಾರ್ಯಾಚರಣೆ ಸ್ಥಗಿತಗೊಂಡು ಕಾರ್ಯಕ್ರಮ ಕುಂಠಿತವಾಗಿರುವುದು ನಿಜವಲ್ಲವೇ

ಇ. ಈ ಯೋಜನೆ ಮುಂದುವರೆಸುವ ಇಚ್ಛೆ ಸರ್ಕಾರಕ್ಕೆ ಇದೆಯೋ

ಈ. ಹಾಗಿದ್ದಲ್ಲಿ ಈ ಯೋಜನೆಯಡಿಯಲ್ಲಿ ಮೀಸಲ್ಪಟ್ಟಿರುವ ಹಣ ಎಷ್ಟು

ಶ್ರೀ ಬಸವರಾಜ ರಾಯರೆಡ್ಡಿ (ವಸತಿ ರಾಜ್ಯ ಸಚಿವರು):

ಅ. ಹಂಚಲ್ಪಡಬೇಕಾಗಿರುವ ನಿವೇಶನಗಳ ಸಂಖ್ಯೆ 6,50,000
ಹಂಚಲಾಗಿರುವ ನಿವೇಶನಗಳ ಸಂಖ್ಯೆ 8,13,343

ಆ. ಆಶ್ರಯ ನಿವೇಶನ ವಿತರಣೆ ಮಾಡುವ ಸಮಿತಿಗಳು ರದ್ದುಗೊಳಿಸಲಾಗಿದೆ. ಆದರೆ ಸದರಿ ಕೆಲಸ ಮುಂದುವರೆಸುವ ಜವಾಬ್ದಾರಿ ರಾಜ್ಯದ ಎಲ್ಲಾ ಉಪ ವಿಭಾಗಾಧಿಕಾರಿಗಳಿಗೆ ವಹಿಸಲಾಗಿದೆ. ಕಾರ್ಯಕ್ರಮ ಕುಂಠಿತವಾಗಿರುವುದಿಲ್ಲ.

ಇ. ಹೌದು, ಈ ಯೋಜನೆಯನ್ನು 95-96 ವರ್ಷದಲ್ಲೂ ಮುಂದುವರೆಸಲಾಗಿದೆ.

ಈ. ನಿವೇಶನಕ್ಕಾಗಿ ಜಮೀನು ಸ್ವಾಧೀನಪಡಿಸಿಕೊಳ್ಳಲು ರೂ. 15.00 ಕೋಟಿ ಒದಗಿಸಲಾಗಿದೆ.

**ವಿಷಯ : ಶಾಶ್ವತ ಕೈಗಾರಿಕಾ ವಸ್ತು ಪ್ರದರ್ಶನ ಸ್ಥಾಪಿಸುವುದರ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 758 (409)

ಶ್ರೀ ಟಿ.ಬಿ. ಜಯಚಂದ್ರ (ಕಳ್ಳಂಬೆಳ್ಳ) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಬೆಂಗಳೂರಿನ ಕೈಗಾರಿಕಾ ಕ್ಷೇತ್ರವು ಬೃಹದಾಕಾರವಾಗಿ ಬೆಳೆಯುತ್ತಿರುವುದು ಮತ್ತು ವಿದೇಶಿ ಬಂಡವಾಳ ಹೂಡಿಕೆ ಹೆಚ್ಚಾಗಿರುವುದು ಸರ್ಕಾರಕ್ಕೆ ತಿಳಿದಿದೆಯೆ ?

ಆ. ಕೈಗಾರಿಕಾ ಬೆಳವಣಿಗೆಯ ದೃಷ್ಟಿಯಿಂದ ದೆಹಲಿ ಮಾದರಿಯ 'ಪ್ರಗತಿ ಮೈದಾನ' ರೀತಿ ಶಾಶ್ವತ ಕೈಗಾರಿಕಾ ವಸ್ತುಪ್ರದರ್ಶನ ಕೇಂದ್ರ ಸ್ಥಾಪಿಸಲು ಸರ್ಕಾರವು ಯೋಚಿಸುತ್ತಿದೆಯೆ ?

ಇ. ಬೆಂಗಳೂರು ಇಡೀ ದಕ್ಷಿಣ ಭಾರತದಲ್ಲೇ ಪ್ರತಿಷ್ಠಿತ ಕೈಗಾರಿಕಾ ಕೇಂದ್ರವಾಗಿ ಬೆಳೆಯುತ್ತಿರುವುದರಿಂದ ಅಂತಹ ಒಂದು ವಸ್ತುಪ್ರದರ್ಶನಾಲಯ ಸ್ಥಾಪಿಸಲು ಕ್ರಮ ಕೈಗೊಳ್ಳುವಿರಾ ?

ಶ್ರೀ ಆರ್. ವಿ. ದೇಶಪಾಂಡೆ (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು):

ಅ. ಹೌದು.

ಆ. ಹೌದು.

ಇ. ಹೌದು. ಸರ್ಕಾರವು ಈ ರೀತಿಯ ಕಾರ್ಯಕ್ರಮವನ್ನು ಪ್ರೋತ್ಸಾಹಿಸುವುದು.

**ವಿಷಯ : ರಾಜ್ಯದಲ್ಲಿ ಹೊಸ ಕೈಗಾರಿಕೆಗಳ ಸ್ಥಾಪನೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 760 (709)

ಶ್ರೀ ಗುರುಪಾದಪ್ಪ ನಾಗಮಾರಪಳ್ಳಿ (ಔರಾದ್) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರಾ.

ಅ. ಇತ್ತೀಚಿನ ವಿದೇಶಿ ಪ್ರವಾಸದ ಸಮಯದಲ್ಲಿ ರಾಜ್ಯದಲ್ಲಿ ವಿದೇಶಿ ಸಂಸ್ಥೆಗಳಿಂದಾಗಲಿ ಅಥವಾ ಅನಿವಾಸಿ ಭಾರತೀಯರಿಂದಾಗಲಿ ಹೊಸ ಕೈಗಾರಿಕೆಗಳನ್ನು ಸ್ಥಾಪಿಸುವ ಬಗ್ಗೆ ಚರ್ಚಿಸಲಾಯಿತೆ ?

ಆ. ಈ ಸಂಬಂಧವಾಗಿ ಎಷ್ಟು ವಿದೇಶಿ ಕಂಪನಿಗಳೊಂದಿಗೆ ಒಪ್ಪಂದಗಳಿಗೆ ಸಹಿ ಮಾಡಲಾಗಿದೆ (ಎಂ.ಒ.ಯು) ಹಾಗೂ ಎಷ್ಟು ಅನಿವಾಸಿ ಭಾರತೀಯರು ರಾಜ್ಯದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಆಸಕ್ತಿ ತೋರಿದ್ದಾರೆ ?

ಇ. ಇತ್ತೀಚಿನ ಕೈಗಾರಿಕಾ ಸಚಿವರ ವಿದೇಶಿ ಪ್ರವಾಸದಿಂದ ರಾಜ್ಯದಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ ಯಾವ ರೀತಿ ಸಹಕಾರಿಯಾಗಿದೆ ?

ಈ. ಒಪ್ಪಂದದ ಸಂಬಂಧವಾಗಿ ವಿದೇಶಿ ಕಂಪನಿಗಳಿಗೆ ಅಥವಾ ಸಂಸ್ಥೆಗಳಿಗೆ ರಾಜ್ಯದಿಂದ ಪಾವತಿ ಮಾಡಲಾಗಿರುವ ಟೆಕ್ನಾಲಜಿ ಶುಲ್ಕ ಅಥವಾ ಇತರೆ ಶುಲ್ಕಗಳ ಮೊತ್ತವೆಷ್ಟು ?

ಶ್ರೀ ಆರ್.ವಿ. ದೇಶಪಾಂಡೆ (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು):

ಅ. ಹೌದು

ಆ. (ಕೆ.ಎಸ್.ಐ.ಐ.ಡಿ.ಸಿ) ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತವು ಐದು ಒಪ್ಪಂದಕ್ಕೆ (ಎಂ.ಒ.ಯು) ಇಸ್ರೇಲಿ ಕಂಪನಿಗಳೊಂದಿಗೆ ಸಹಿ ಮಾಡಿದೆ.

ಇ. ಸಚಿವರು ವಿದೇಶದಲ್ಲಿ ಪ್ರವಾಸ ಮಾಡಿದಾಗ ರಾಜ್ಯದಲ್ಲಿ ಕೈಗಾರಿಕಾ ಬೆಳವಣಿಗೆ ಇಂದು ಅನುಕೂಲಕರ ಅವಕಾಶ ಇರುವುದನ್ನು ವಿದೇಶಿ ಉದ್ಯಮಿದಾರರಿಗೆ ಮನದಟ್ಟು ಮಾಡಿಕೊಟ್ಟಿರುತ್ತಾರೆ. ಹೀಗಾಗಿ ಹಲವಾರು ಉದ್ಯಮಿದಾರರು ರಾಜ್ಯದಲ್ಲಿ ಆಧುನಿಕ ತಂತ್ರಜ್ಞಾನದ ಉದ್ಯಮಗಳನ್ನು ಸ್ಥಾಪಿಸಲು ಮುಂದೆ ಬಂದಿರುತ್ತಾರೆ.

ಈ. ತಾಂತ್ರಿಕ ಶುಲ್ಕವನ್ನು ಒಳಗೊಂಡಂತೆ ಯೋಜನಾ ವಿವರಗಳು ಯೋಜನೆಯನ್ನು ಅಂತಿಮಗೊಳಿಸಿದ ನಂತರವೇ ತಿಳಿದು ಬರುವುದು.

**ವಿಷಯ : ಬೆಂಗಳೂರಿನಲ್ಲಿ ಪ್ರಾರಂಭಿಸಲಾಗುವ ಟೆಕ್ನಾಲಿಜಿ ಪಾರ್ಕ್.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ761 (711)

ಶ್ರೀ ಗುರುಪಾದಪ್ಪ ನಾಗಮಾರಪಳ್ಳಿ (ಔರಾದ್) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಬೆಂಗಳೂರಿನ ಯಾವ ಸ್ಥಳದಲ್ಲಿ ಟೆಕ್ನಾಲಜಿ ಪಾರ್ಕನ್ನು ಸ್ಥಾಪಿಸಲು ಸರ್ಕಾರದವರು ನಿರ್ಧರಿಸಿರುವರು ?

ಆ. ಇದರ ಅಡಿಗಲ್ಲು ಸಮಾರಂಭ ಯಾವಾಗ ನೆರವೇರಿತು ?

ಇ. ಇದಕ್ಕೆ ಕೇಂದ್ರ ಸರ್ಕಾರದ ಒಪ್ಪಿಗೆ ಸಿಕ್ಕಿದೆಯೇ ? ಕೇಂದ್ರದಿಂದ ಇದಕ್ಕೆ ಬರಲಿರುವ ಧನ ಸಹಾಯವೆಷ್ಟು ? ಹಾಗೂ ರಾಜ್ಯ ಸರ್ಕಾರ ಎಷ್ಟು ಹಣವನ್ನು ಖರ್ಚು ಮಾಡಲಿದೆ ?

ಈ. ಯಾವ ಯಾವ ರಾಷ್ಟ್ರಗಳ ಸಹಯೋಗದೊಂದಿಗೆ ಇದನ್ನು ಪ್ರಾರಂಭಿಸಲಾಗುವುದು ?

ಉ. ರಾಜ್ಯದಲ್ಲಿ ಕೈಗಾರಿಕೆಗಳ ಬೆಳವಣಿಗೆಗೆ ಇದು ಯಾವ ರೀತಿ ಸಹಕಾರಿಯಾಗಲಿದೆ ?

ಶ್ರೀ ಆರ್. ವಿ. ದೇಶಪಾಂಡೆ (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು):

ಅ. ಬೆಂಗಳೂರಿನಿಂದ 18 ಕಿ.ಮೀ. ದೂರದಲ್ಲಿ ಬೆಂಗಳೂರು ವೈಟ್‌ಫೀಲ್ಡ್ ರಸ್ತೆಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕಿನ ಸಾದರಮಂಗಲ ಮತ್ತು ಪಟ್ಟಂದೂರು ಅಗ್ರಹಾರ ಗ್ರಾಮಗಳ 55 ಎಕರೆ 19 ಗುಂಟೆ ಜಮೀನಿನಲ್ಲಿ ಟೆಕ್ನಾಲಜಿ ಪಾರ್ಕ್ ಸ್ಥಾಪನೆಯಾಗಲಿದೆ.

ಆ. ಯೋಜನಾ ಪ್ರಾರಂಭಿಕ ಸಮಾವೇಶವು ದಿನಾಂಕ 28.1.1994 ರಂದು ನೆರವೇರಿತು.

ಇ. ಇದಕ್ಕೆ ಕೇಂದ್ರ ಸರ್ಕಾರದ ಒಪ್ಪಿಗೆ ಸಿಕ್ಕಿದೆ. ಕೇಂದ್ರ ಸರ್ಕಾರ ಇದರಲ್ಲಿ ಭಾಗವಹಿಸುತ್ತಿಲ್ಲ. ರಾಜ್ಯ ಸರ್ಕಾರವು ಕೆ.ಐ.ಎ.ಡಿ.ಬಿ.ಯ ಮುಖಾಂತರ ಶೇಕಡ 20 ರಷ್ಟು ಈಕ್ವಿಟಿಯನ್ನು ತೊಡಗಿಸುವುದರ ಮೂಲಕ ಇದರಲ್ಲಿ ಭಾಗವಹಿಸುತ್ತಿದೆ.

ಈ. ಸಿಂಗಾಪೂರ್ ದೇಶದ ಇನ್‌ಫರ್ಮೇಷನ್ ಟೆಕ್ನಾಲಜಿ ಪಾರ್ಕ್ ಪಿ.ಯು.ಟಿ.ಯು.ಇ ಲಿಮಿಟೆಡ್ ಸಂಸ್ಥೆಯ ಸಹಯೋಗದೊಂದಿಗೆ ಇದನ್ನು ಪ್ರಾರಂಭಿಸಲಾಗುತ್ತಿದೆ.

ಉ. ಈ ಟೆಕ್ನಾಲಜಿ ಪಾರ್ಕ್‌ನಲ್ಲಿ ಸ್ಥಾಪನೆಯಾಗಲಿರುವ ಉದ್ದಿಮೆಗಳ ಬಂಡವಾಳವು ಸುಮಾರು 2 ಸಾವಿರ ಕೋಟಿ ಎಂದು ಅಂದಾಜು ಮಾಡಲಾಗಿದೆ. ಸುಮಾರು 17 ಸಾವಿರ ಜನರಿಗೆ ಉದ್ಯೋಗಾವಕಾಶ ದೊರಕಲಿದೆ. ಮಿತ ಅಂದಾಜಿನ ಪ್ರಕಾರ ಸದರಿ ಕಂಪನಿಗಳ ವ್ಯಾಪಾರವು ಮೊದಲನೇ ವರ್ಷದಲ್ಲಿ ಎರಡು ಸಾವಿರ ಕೋಟಿ ರೂಪಾಯಿಗಳಿಗೂ ಮೀರಲಿದ್ದು ಅದರಲ್ಲಿ ಶೇಕಡ 60 ರಿಂದ 65 ಭಾಗ ರಫ್ತಾಗುವ ನಿರೀಕ್ಷೆಯಿದೆ. ಟೆಕ್ನಾಲಜಿ ಪಾರ್ಕ್‌ನಲ್ಲಿ ಅಂತರರಾಷ್ಟ್ರೀಯ ಮಟ್ಟದ ಮೂಲಭೂತ ಸೌಕರ್ಯಗಳನ್ನು ಒದಗಿಸಲಿದ್ದು, ಹೆಚ್ಚಿನ ತಂತ್ರಜ್ಞಾನದ ಕಂಪ್ಯೂಟರ್ ಟೆಲಿಕಮ್ಯೂನಿಕೇಷನ್ ಎಲೆಕ್ಟ್ರಾನಿಕ್ ಮತ್ತು ಇತರೆ ಸಂಬಂಧಿತ ಕೈಗಾರಿಕೆಗಳ ಸ್ಥಾಪನೆಗೆ ನಾಂದಿಯಾಗುವುದು. ಇದರಿಂದ ಪೂರಕ ಉದ್ದಿಮೆಗಳ ಬೆಳವಣಿಗೆಗೂ ಅವಕಾಶವಾಗಲಿದೆ.

**ವಿಷಯು : ಪುತ್ತೂರು ಪುರಸಭೆ ವ್ಯಾಪ್ತಿಯಲ್ಲಿರುವ ಜನರಿಗೆ ಕುಡಿಯುವ ನೀರಿನ್ನು ಒದಗಿಸುವ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 762 (975)

ಶ್ರೀ ಡಿ.ವಿ. ಸದಾನಂದ ಗೌಡ (ಪುತ್ತೂರು) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

1. ದಕ್ಷಿಣ ಕನ್ನಡ ಜಿಲ್ಲಾ ಪುತ್ತೂರು ಪುರಸಭೆಯ ವ್ಯಾಪ್ತಿಯಲ್ಲಿರುವ ಜನರಿಗೆ ಕುಡಿಯುವ ನೀರಿನ ಶ್ರಮವನ್ನು ತಪ್ಪಿಸುವ ಬಗ್ಗೆ ಪುತ್ತೂರು ಪುರಸಭೆಯು ತನ್ನ ಪಾಲನ್ನು ದೇಣಿಗೆಯಾಗಿ ಕೊಟ್ಟಿರುವುದು ನಿಜವೇ ?

2. ಹಾಗಿದ್ದಲ್ಲಿ ಈ ಕಾಮಗಾರಿಯೂ ಇನ್ನೂ ಕಾರ್ಯರೂಪಕ್ಕೆ ಬರದಿರಲು ಕಾರಣವೇನು ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

1. ಹೌದು. ಪುತ್ತೂರಿಗೆ ಕುಡಿಯುವ ನೀರು ಸರಬರಾಜು ಯೋಜನೆಯ ಅಂದಾಜು ವೆಚ್ಚ ರೂ. 41.00 ಲಕ್ಷಗಳಾಗಿದ್ದು ಪುರಸಭೆಯ ವಂತಿಗೆ ರೂ. 6.15 ಲಕ್ಷದಲ್ಲಿ 1/3 ಕಂತಿನ ಹಣ ರೂ. 2.05 ಲಕ್ಷಗಳನ್ನು ಮಂಡಳಿಗೆ ರೇವಣಿ ಮಾಡಿದ್ದಾರೆ. ಈ ಯೋಜನೆಗೆ ಕೂಡಲೇ ಆಡಳಿತಾತ್ಮಕ ಅನುಮೋದನೆ ನೀಡಲಾಗುವುದು.

**ವಿಷಯ : ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿ ಛೇರ್‌ಮನ್ ನಿಧಿ ಸಂದಾಯವಾದ ಹಣ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 763 (832)

ಶ್ರಿ ವಿ. ಎಸ್. ಕೌಜಲಗಿ (ಅರಭಾವಿ) : ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಪರಿಸರ ಮಾಲಿನ್ಯ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆಯ ಆಡಳಿತ ಮಂಡಳಿಯವರು ಛೇರಮನ್ ನಿಧಿ ಎಂದು ಪ್ರತಿ ಟನ್ನಿಗೆ 5-00 ರೂಪಾಯಿಗಳನ್ನು ಕಬ್ಬಿನ ಬಿಲ್ಲಿನಲ್ಲಿ ಹಿಡಿದು ಕೊಳ್ಳುತ್ತಲಿದ್ದು, ಇದುವರೆಗೆ ಈ ಕುರಿತು ಸಂದಾಯವಾದ ಹಣವೆಷ್ಟು.

ಆ. ಈ ರೀತಿ ಛೇರ್‌ಮನ್‌ನಿಧಿ ಸಂಗ್ರಹಿಸಲು ಕಾನೂನಿನಲ್ಲಿ ಅವಕಾಶವಿದೆಯೇ

ಇ. ಛೇರ್‌ಮನ್ ನಿಧಿಯಲ್ಲಿ ಸಂಗ್ರಹವಾಗಿರುವ ಹಣವನ್ನು ಯಾವ ಯಾವ ಬಾಬುಗಳಿಗೆ ಖರ್ಚು ಮಾಡಲಾಗಿದೆ?

ಶ್ರೀ. ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ, ಯಂತ್ರಕಲೆ, ಪರಿಸರ ಮತ್ತು ಜೀವಪರಿಸ್ಥಿತಿ ಶಾಸ್ತ್ರ ರಾಜ್ಯ ಸಚಿವರು):

ಅ. ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯ ಆಡಳಿತ ಮಂಡಳಿಯವರು ಛೇರ್‌ಮನ್ ನಿಧಿ ಎಂದು ಪ್ರತಿ ಟನ್ನಿಗೆ ರೂ. 5-00 ರಂತೆ 1992-93 ಸಾಲಿನಲ್ಲಿ ಮಾತ್ರ ಸಂಗ್ರಹಿಸಿದ್ದು ಒಟ್ಟು ರೂ 11.03 ಲಕ್ಷವಾಗಿರುತ್ತದೆ.

ಆ. ಸರ್ವಸದಸ್ಯರ ಸಭೆ : ಸರ್ಕಾರದ ಅನುಮೋದನೆ ಇಲ್ಲದೆ ಕಾರ್ಖಾನೆಯ ಆಡಳಿತ ಮಂಡಳಿಯು ಈ ರೀತಿ ಛೇರ್‌ಮನ್ ನಿಧಿ ಸಂಗ್ರಹಿಸಲು ಅವಕಾಶವಿರುವುದಿಲ್ಲ.

ಇ. ಛೇರ್‌ಮನ್ ನಿಧಿಯಲ್ಲಿ ಸಂಗ್ರಹಿಸಲಾಗಿರುವ ಹಣವನ್ನು ಜುಲೈ 1994ರಲ್ಲಿ ಗೋಕಾಕ್ ತಾಲ್ಲೂಕಿನಲ್ಲಿ ಘಟಪ್ರಭಾ ನದಿಗೆ ಭೀಕರ ಮಹಾಪುರ ಬಂದು ಆ ಸಮಯದಲ್ಲಿ ನೆರೆ ಹಾವಳಿಗೆ ತುತ್ತಾದ ನೆರೆ ಸಂತ್ರಸ್ತರಿಗೆ ಅಕ್ಕಿ, ಜೋಳ ಚಾದರ ಮತ್ತು ಜಿ.ಐ. ಶೀಟುಗಳ ವಿತರಣೆಗಾಗಿ ಬಳಸಲಾಗಿದೆ. ಬೆಳಗಾವಿ ಜಿಲ್ಲಾಧಿಕಾಯವರು ತಮ್ಮ ಪತ್ರ ಸಂಖ್ಯೆ ಕ್ರಮ ಸಂಖ್ಯೆ ಡಿಸಿ.ಎಫ್.ಎಫ್.ಎಲ್.ಸಿ.ಆರ್. 17: 94-95

ದಿನಾಂಕ 1-7-1994ರ ಕೆಳಗೆ ನೆರೆ ಹಾವಳಿ ಸಂತ್ರಸ್ತರಿಗೆ ಪರಿಹಾರ ಒದಗಿಸಲು ವಿನಂತಿಸಿ ಕೊಂಡಿದ್ದು, ಕಾರ್ಖಾನೆಯ ವತಿಯಿಂದ ಮೇಲ್ಕಂಡ ಬಾಬ್ತುಗಳಿಗೆ ಖರ್ಚು ಮಾಡಲಾಗಿದೆ.

**ವಿಷಯ : ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆಯ 'ಅ' ವರ್ಗದ ಸದಸ್ಯರು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 764 (844)

ಶ್ರೀ. ವಿ. ಎಸ್. ಕೌಜಲಗಿ (ಅರಭಾವಿ) : ಮಾನ್ಯ ಸಕ್ಕರೆ, ಜವಳಿ, ಪರಿಸರ ಮಾಲಿನ್ಯ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆಯಲ್ಲಿರುವ 'ಅ' ವರ್ಗದ ಸದಸ್ಯರ ಸಂಖ್ಯೆ ಎಷ್ಟು ? 'ಅ' ವರ್ಗದ ಪ್ರತಿಯೊಬ್ಬ ಸದಸ್ಯರು ತುಂಬಬೇಕಾದ ಷೇರು ಹಣದ ಮೊತ್ತವೆಷ್ಟು ?

ಆ. ಸದರಿ ಸಕ್ಕರೆ ಕಾರ್ಖಾನೆ ಕಬ್ಬು ಅರೆಯುವ ಈಗಿರುವ ಸಾಮರ್ಥ್ಯವನ್ನು ಹೆಚ್ಚಿಸಲು ಸರ್ಕಾರವು ಅನುಮತಿ ನೀಡಲಾಗಿದೆಯೇ

ಇ. ಅನುಮತಿ ಕೊಟ್ಟಿದಲ್ಲಿ 'ಅ' ವರ್ಗದ ಸದಸ್ಯರು ತುಂಬಬೇಕಾದ ಹೆಚ್ಚುವರಿ ಷೇರು ಹಣದ ಮೊತ್ತವೆಷ್ಟು ಈಗಾಗಲೇ ಹೆಚ್ಚುವರಿ ಷೇರು ಹಣವನ್ನು ತುಂಬಿರುವವರ ಸಂಖ್ಯೆ ಎಷ್ಟು

ಈ. ಹೆಚ್ಚಿನ ಷೇರು ಹಣವನ್ನು ತುಂಬದೇ ಆರ್ಥಿಕ ತೊಂದರೆಯನ್ನು ಅನುಭವಿಸುತ್ತಿರುವ 'ಅ' ವರ್ಗದ ಸದಸ್ಯರಿಗೆ ಸಂಬಂಧಿಸಿದಂತೆ ಸರ್ಕಾರವು ಹೆಚ್ಚುವರಿ ಷೇರು ಹಣ ತುಂಬುವ ಕುರಿತು ಯಾವ ಕ್ರಮ ಕೈಗೊಳ್ಳಲಾಗಿದೆ.

ಉ. ಹೆಚ್ಚುವರಿ ಷೇರು ಹಣವನ್ನು ತುಂಬದೇ ಇರುವ ಸದಸ್ಯರಿಗೆ ಚುನಾವಣೆಯಲ್ಲಿ ಮತ ಚಲಾಯಿಸಲು ಅವಕಾಶವಿದೆಯೇ ?

ಶ್ರೀ ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ ವಿಜ್ಞಾನ, ಯಂತ್ರಕಲೆ ಪರಿಸರ ಮತ್ತು ಜೀವ ಪರಿಸ್ಥಿತಿ ರಾಜ್ಯ ಸಚಿವರು):

ಅ. 'ಅ' ವರ್ಗದ ಸದಸ್ಯರ ಸಂಖ್ಯೆ. 11841 'ಅ' ವರ್ಗದ ಪ್ರತಿಯೊಬ್ಬ ಸದಸ್ಯರು ತುಂಬಬೇಕಾದ ಷೇರು ಹಣದ ಮೊತ್ತ ಪ್ರತಿ ಶೇರಿಗೆ ರೂ 2000.00

ಆ. ಸದರಿ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 1250 ಟನ್‌ಗಳಿಂದ 2500 ಟನ್‌ಗಳಿಗೆ ಹೆಚ್ಚಿಸಲು ಭಾರತ ಸರ್ಕಾರ ಅನುಮತಿ ನೀಡಿರುತ್ತದೆ. ಆದರೆ ಕಾರ್ಖಾನೆಯು 2500 ಟನ್‌ಗಳಿಗೆ ಬದಲು 3500ಟನ್‌ಗಳಿಗೆ ಸಾಮರ್ಥ್ಯವನ್ನು ವಿಸ್ತರಿಸಲು ಕೋರಿದ್ದು ರಾಜ್ಯ ಸರ್ಕಾರವು ಕಾರ್ಖಾನೆಯ ಕೋರಿಕೆಯನ್ನು ಭಾರತ ಸರ್ಕಾರಕ್ಕೆ ಶಿಫಾರ್ಸು ಮಾಡಿದೆ. ಈ ವಿಷಯ ಭಾರತ ಸರ್ಕಾರದ ಪರಿಶೀಲನೆಯಲ್ಲಿದ್ದು 3500 ಟನ್‌ಗಳಿಗೆ ಹೆಚ್ಚಿಸಲು ಅನುಮತಿ ಪತ್ರವನ್ನು ನಿರೀಕ್ಷಿಸಲಾಗಿದೆ.

ಇ. ಕಾರ್ಖಾನೆಯ ಬೈಲಾ ತಿದ್ದುಪಡಿಯ ಪ್ರಕಾರ ಪ್ರತಿ ಷೇರಿನ ಬೆಲೆ

ರೂ. 1000 ರಿಂದ ರೂ. 2000ಕ್ಕೆ ಹೆಚ್ಚಿಸಲಾಗಿರುವುದರಿಂದ ರೂ. 1000 ಷೇರು ಹೊಂದಿದ್ದ ಪ್ರತಿ ಒಬ್ಬ 'ಅ' ವರ್ಗದ ಸದಸ್ಯರು ಹೆಚ್ಚುವರಿ ರೂ. 1000 ತುಂಬಬೇಕಾಗುತ್ತದೆ. ಆ ಪ್ರಕಾರ 'ಅ' ವರ್ಗದ 11841 ಸದಸ್ಯರು ಈ ಹೆಚ್ಚುವರಿ ಹಣವನ್ನು ತುಂಬಿರುತ್ತಾರೆ.

ಈ. ಕಾರ್ಖಾನೆಯ ಬೈಲಾ ನಿಯಮಕ್ಕೆ ತಿದ್ದುಪಡಿಯಾದ ಮೇಲೆ 'ಅ' ವರ್ಗದ 11841 ಸದಸ್ಯರು ಹೆಚ್ಚುವರಿ ಷೇರು ಹಣವನ್ನು ತುಂಬಿದೆ ಇದ್ದ ಸದಸ್ಯರ ಸಂಖ್ಯೆ. 1924. ಹೆಚ್ಚುವರಿ ಷೇರು ಹಣವನ್ನು ತುಂಬಬೇಕಾದ್ದರ ವಿರುದ್ಧ 5 ಜನ ಸದಸ್ಯರು ಕರ್ನಾಟಕ ಶ್ರೇಷ್ಠ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ. 18112:94 ಸಲ್ಲಿಸಿದ್ದು ವಾದಿಗಳು ಒಪ್ಪಂದದ ಮೇಲೆ ಅಂತರದ ಷೇರು ಹಣವನ್ನು ತುಂಬಿಸಿಕೊಂಡು ಅವರ ಸದಸ್ಯತ್ವವನ್ನು ಮುಂದುವರೆಸಬೇಕೆಂದು ದಿನಾಂಕ 9-1-95ರಲ್ಲಿ ನ್ಯಾಯಾಲಯದ ಆದೇಶವಾಗಿದೆ. ಸಂಬಂಧಪಟ್ಟ ಬೈಲಾ ನಿಯಮಕ್ಕೆ ತಿದ್ದುಪಡಿಯಾಗಿ ಪ್ರತಿ ಷೇರಿನ ಬೆಲೆಯನ್ನು ಹೆಚ್ಚಿಸಿಕೊಂಡಿರುವುದರಿಂದ ಸರ್ಕಾರವು ಕೈಗೊಳ್ಳಬೇಕಾದ ಕ್ರಮ ಇರುವುದಿಲ್ಲ. ಷೇರಿನ ಬೆಲೆಯನ್ನು ಕಾನೂನಿನ ಚೌಕಟ್ಟಿನಲ್ಲಿ ಹೆಚ್ಚಿಸುವ ಕ್ರಮ ಏರ್ಪಟ್ಟಿರುವುದರಿಂದ ಅದಕ್ಕೆ ಸಮ್ಮತಿ ಇಲ್ಲದವರು ಕಾನೂನು ಚೌಕಟ್ಟಿನಲ್ಲಿ ಪರಿಹಾರ ಪಡೆಯಬೇಕಾಗಿರುತ್ತದೆ.

ಉ. ಕಾರ್ಖಾನೆಯ ತಿದ್ದುಪಡಿಯಾಗಿರುವ ಬೈಲಾ ನಿಯಮದ ಪ್ರಕಾರ 'ಅ' ವರ್ಗದ ಷೇರಿನ ಬೆಲೆ ರೂ 2000 ಆಗಿರುತ್ತದೆ. ಆದುದರಿಂದ ರೂ. 2000 ಷೇರು ಹಣವನ್ನು ಹೊಂದಿರುವ 'ಅ' ವರ್ಗದ ಸದಸ್ಯರು ಚುನಾವಣೆಯಲ್ಲಿ ಭಾಗವಹಿಸಲು ಅವಕಾಶವುಳ್ಳವರಾಗಿರುತ್ತಾರೆ.

**ವಿಷಯ : ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆ ಕುರಿತು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 765 (842)

ಶ್ರೀ ವಿ. ಎಸ್. ಕೌಜಲಗಿ (ಅರಭಾವಿ) : ಮಾನ್ಯ ಸಕ್ಕರೆ, ಜವಳಿ, ಪರಿಸರ ಮಾಲಿನ್ಯ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆಯು 'ಅ' ವರ್ಗದ ಸದಸ್ಯರ ಕಬ್ಬನ್ನು ನುರಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

ಆ. ಹಾಗಿದ್ದಲ್ಲಿ ಈ ಕುರಿತು ಸರಕಾರ ಯಾವ ಕ್ರಮ ಕೈಗೊಂಡಿರುವುದು.

ಇ. ಇದುವರೆಗೆ ಕಾರ್ಖಾನೆಯು ನುರಿಸಿದ 'ಅ' ವರ್ಗದ ಸದಸ್ಯರ ಕಬ್ಬಿನ ಪ್ರಮಾಣವೆಷ್ಟು ?

ಶ್ರೀ ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ, ಯಂತ್ರ ಕಲೆ ಪರಿಸರ ಮತ್ತು ಜೀವಪರಿಸ್ಥಿತಿ ರಾಜ್ಯ ಸಚಿವರು):

ಅ. ಇಲ್ಲ.

ಆ. ಉದ್ಭವಿಸುವುದಿಲ್ಲ.

ಇ. 2,37,096 ಟನ್‌ಗಳು.

**Sub : Stay to construct commercial complex by Shimoga Corporation.**

Unstarred L.A. Question No. 766 (1201)

Sri. K.S. Eshwarappa (Shimoga) : Will the Minister for Urban Development, CADA & Hyderabad-Karnataka Development Board be pleased to state.

a. Whether it is a fact that the Government has given temporary stay to construct commercial complex by Shimoga-Bhadravathi City Corporation ?

b. If so, the reasons and when the stay would be removed.

Sri. Vaijanath Patil (Minister for Urban Development, CADA, and Hyderabad-Karnataka Development Board.):

a. Yes.

b. Stay was granted keeping view the overall law and order situation. Government will consider the matter and would take an appropriate decision based on the recommendations of the Deputy Commissioner, Shimoga.

**ವಿಷಯ : ಚಿಕ್ಕಬಳ್ಳಾಪುರ ವಿಭಾಗದಲ್ಲಿ ಬೃಹತ್ ಉದ್ದಿಮೆಗಳ ಸ್ಥಾಪನೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 768 (1245)

ಶ್ರೀ ಶಿವಾನಂದ ( ಚಿಕ್ಕಬಳ್ಳಾಪುರ) : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದ ಉಪ ವಿಭಾಗದಲ್ಲಿರುವ ಬೃಹತ್ ಉದ್ದಿಮೆಗಳ ಸಂಖ್ಯೆ ಎಷ್ಟು ?

ಆ. ಓಂದುಳಿದ ಈ ಜಿಲ್ಲೆಯ ಉಪ ವಿಭಾಗವನ್ನು ಉದ್ದಿಮೆ ಸ್ಥಾಪಿಸಲು ಸರ್ಕಾರದವರು ಕೈಗೊಂಡಿರುವ ಕ್ರಮವೇನು ?

ಶ್ರೀ. ಆರ್. ವಿ. ದೇಶಪಾಂಡೆ (ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು):

ಅ. 8

ಆ. ಚಿಕ್ಕಬಳ್ಳಾಪುರ ಉಪ ವಿಭಾಗದಲ್ಲಿ ಒಂದು ಕೈಗಾರಿಕಾ ಪ್ರದೇಶವನ್ನು ಅಭಿವೃದ್ಧಿ ಪಡಿಸಲಾಗಿದೆ. ಕೆಎಸ್ಎಸ್ಐಡಿಸಿ ವತಿಯಿಂದ ನಾಲ್ಕು ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಲಾಗಿದೆ. ರಾಜ್ಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ

ಏಕಗವಾಕ್ಷಿ ಸಮಿತಿಯಿಂದ ಭಾವಿ ಉದ್ದಿಮೆದಾರರಿಗೆ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂದೆ ಬಂದಲ್ಲಿ ಸರ್ಕಾರದ ವತಿಯಿಂದ 1993ನೇ ಸಾಲಿನ ಕೈಗಾರಿಕಾ ನೀತಿಯಂತೆ ಸವಲತ್ತುಗಳನ್ನು ನೀಡಲಾಗುತ್ತಿದೆ. ಹಾಗೂ ವಿದ್ಯುಚ್ಛಕ್ತಿ. ಕೈಗಾರಿಕಾ ಸ್ಥಳ, ಪೂರಕ ವ್ಯವಸ್ಥೆಗಳನ್ನು ನೀಡಲಾಗುತ್ತಿದೆ. ಉದ್ದಿಮೆದಾರರಿಗೆ ಉದ್ಯಮಶೀಲತಾ ಕಾರ್ಯಕ್ರಮ ಏರ್ಪಡಿಸಲಾಗುತ್ತಿದೆ ಹಾಗೂ ಅವಶ್ಯವಿದ್ದಲ್ಲಿ ತರಬೇತಿಯನ್ನೂ ಸಹ ನೀಡಲಾಗುತ್ತಿದೆ.

**ವಿಷಯ : ಧಾರವಾಢ - ಹುಬ್ಬಳ್ಳಿ ಮಹಾನಗರದಲ್ಲಿ ಮೂಲ ಭೂತ ಸೌಲಭ್ಯಗಳಾದ ಕುಡಿಯುವ ನೀರು ಒಳಚರಂಡಿ ವಗ್ಯೆರೆ ಕೊರತೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 770 (960)

ಶ್ರೀ ಚಂದ್ರಕಾಂತಬೆಲ್ಲದ್ (ಧಾರಾವಾಡ ಗ್ರಾಮಾಂತರ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಧಾರವಾಡ-ಹುಬ್ಬಳ್ಳಿ ಮಹಾನಗರದಲ್ಲಿ ಮೂಲಭೂತ ಸೌಲಭ್ಯಗಳ (ಕುಡಿಯುವ ನೀರು ಒಳಚರಂಡಿ ಹಾಗೂ ರಸ್ತೆ ಇತ್ಯಾದಿ) ಕೊರತೆಯಿಂದಾಗಿ ಜನತೆ ಚಳುವಳಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ ?

ಆ. ಈ ಸಮಸ್ಯೆಯ ಪರಿಹಾರಕ್ಕೆ 1988-89ರಲ್ಲಿ ವಿಶ್ವಬ್ಯಾಂಕ್‌ನಿಂದ ಸಾಲ ಪಡೆಯಲಾಗಿದೆಯೇ ? ವಿವರ ತಿಳಿಸುವುದು.

ಇ. ಈ ಮಹಾನಗರ ಕಳೆದ ಹತ್ತು ವರ್ಷಗಳಲ್ಲಿ ಶೀಘ್ರವಾಗಿ ಬೆಳೆಯುತ್ತಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ ?

ಈ. ಈ ಸೌಲಭ್ಯಗಳನ್ನು ಒದಗಿಸಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು ?

ಶ್ರೀ. ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಹುಬ್ಬಳ್ಳಿ-ಧಾರವಾಡ ನಗರಗಳಿಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಹುಬ್ಬಳ್ಳಿ ಧಾರವಾಡ ಮಹಾನಗರ ಸಭೆಗೆ ಸಗಟು (ಬಲ್ಕ್) ನೀರು ಸರಬರಾಜು ಮಾಡುತ್ತಿರುವ, ಕುಡಿಯುವ ನೀರಿನ ವಿತರಣೆಯನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆಯವರು ನಿರ್ವಹಿಸುತ್ತಿದ್ದಾರೆ. ಒಳಚರಂಡಿ ವ್ಯವಸ್ಥೆ ಕೂಡ ಮಹಾನಗರ ಸಭೆಯ ಉಸ್ತುವಾರಿಯಲ್ಲಿದೆ. ವಿದ್ಯುತ್ ವೋಲ್ಟೇಜ್ ಕೊರತೆಯಿಂದಾಗಿ ಸ್ವಲ್ಪಮಟ್ಟಿಗೆ ನೀರು ಸರಬರಾಜಿನಲ್ಲಿ ವ್ಯತ್ಯಾಸವಾಗಿದೆ.

ಆ. ಇಲ್ಲ

ಇ. ಬಂದಿದೆ.

ಈ. ಹುಬ್ಬಳಿ-ಧಾರವಾಡ ನಗರಗಳಿಗೆ ಕುಡಿಯುವ ನೀರಿನ ಸಮಸ್ಯೆಯನ್ನು ಉತ್ತಮಪಡಿಸಲು ಸರ್ಕಾರವು ಈ ಕೆಳಕಂಡ ಯೋಜನೆಗಳನ್ನು ಕೈಗೊಂಡಿದೆ.

ಅ. ನಗರಗಳ ವಿತರಣಾ ವ್ಯವಸ್ಥೆಯ ನವೀಕರಣಕ್ಕಾಗಿ 700 ಲಕ್ಷಗಳ ಅಂದಾಜಿನ ಯೋಜನೆ ಹಾಗೂ

ಆ. ಮಲಪ್ರಭಾ 2ನೇ ಹಂತದ ಕುಡಿಯುವ ನೀರಿನ ಯೋಜನೆಯನ್ನು ಕೈಗೊಳ್ಳಲಾಗಿದ್ದು ಈ ಯೋಜನೆಯು ಪೂರ್ಣಗೊಳಿಸುವ ಹಂತದಲ್ಲಿದೆ.

**ವಿಷಯ : ಶಿರಸಿ ಪುರಸಭೆಯನ್ನು ನಗರ ಸಭೆಯನ್ನಾಗಿ ಪರಿವರ್ತಿನೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 771(1274)

ಶ್ರೀ ಪಿ.ಎಸ್. ಜಯವಂತ್(ಶಿರಸಿ): ಮಾನ್ಯ ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಶಿರಸಿ ನಗರದ ಜನಸಂಖ್ಯೆಯೆಷ್ಟು?

ಆ. ಶಿರಸಿ ಪುರಸಭೆಯನ್ನು ನಗರಸಭೆಯಾಗಿ ಪರಿವರ್ತಿಸಲಾಗಿದೆಯೇ? ಹಾಗದ್ದಲ್ಲಿ, ಇದರಲ್ಲಿ ಸೇರಿಸಿರುವ ಸುತ್ತಮುತ್ತಲಿನ ಗ್ರಾಮುಗಳ ಸಂಖ್ಯೆ ಎಷ್ಟು?

ಇ. ಈ ಗ್ರಾಮುಗಳಿಗೆ ನಗರ ಸೌಲಭ್ಯ ನೀಡಲಾಗುವುದೇ?

ಈ. ಈ ಗ್ರಾಮುಗಳನ್ನು ಹೊರತುಪಡಿಸಿ ನಗರ ಸಭೆಯಾಗಿ ಪರಿವರ್ತಿಸಲು ಸಾಧ್ಯವಿಲ್ಲವೇ?

ವೈಜನಾಥ್ ಪಾಟೀಲ್ ( ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು):

ಅ. 1991ರ ಜನಗಣತಿಯ ಪ್ರಕಾರ ಶಿರಸಿ ನಗರದ ಜನಸಂಖ್ಯೆ 41,747 ಇರುತ್ತದೆ.

ಆ.ಇ.ಈ. ಸಂವಿಧಾನದ(74ನೇ ತಿದ್ದುಪಡಿ) ಕಾಯ್ದೆ 1992ರನ್ವಯ ಇದನ್ನು ಪರಿಶೀಲಿಸಲಾಗುತ್ತದೆ.

**ವಿಷಯ : ಕೈಮಗ್ಗ ಮತ್ತು ವಿದ್ಯುತ್ ಮಗ್ಗಗಳ ಸಮಯಕ್ಕೆ ಸರಿಯಾಗಿ ನೂಲು ಪೂರೈಕೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 773(717)

ಶ್ರೀ ಕರಡಿ ಸಂಗಣ್ಣ ಅಮರಪ್ಪ (ಕೊಪ್ಪಳ) : ಮಾನ್ಯ ಸಕ್ಕರೆ, ಜವಳಿ, ವಿಜ್ಞಾನ ಮತ್ತು ತಂತ್ರಜ್ಞಾನ ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

1. ಕೈಮಗ್ಗ ಮತ್ತು ವಿದ್ಯುತ್ ಮಗ್ಗಗಳಿಗೆ ಸರಿಯಾದ ಸಮಯಕ್ಕೆ ನೂಲು ಪೂರೈಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

2. ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು?

ಶ್ರೀ ಪಿ.ಸಿ.ಸಿದ್ದನಗೌಡರ್(ಸಕ್ಕರೆ, ಜವಳಿ ವಿಜ್ಞಾನ, ತಂತ್ರಜ್ಞಾನ, ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಸಚಿವರು):

1. ಹೌದು.

2. ಕೈಮಗ್ಗ ನೇಕಾರರಿಗೆ ಸಕಾಲದಲ್ಲಿ ನೂಲು ಪೂರೈಕೆಯನ್ನು ಮಾಡಲು ಈ ಕೆಳಕಂಡ ಕ್ರಮಗಳನ್ನು ತೆಗೆದುಕೊಂಡಿದೆ:

ಅ. ರಾಜ್ಯದಲ್ಲಿರುವ ಹಾಗೂ ಹೊರ ರಾಜ್ಯಗಳಲ್ಲಿರುವ ಸಹಕಾರಿ ನೂಲಿನ ಗಿರಣಿಗಳಿಂದ ರಾಷ್ಟ್ರೀಯ ಜವಳಿ ನಿಗಮದ (ಎಸ್.ಟಿಸಿ.) ಗಿರಣಿಗಳಿಂದ ಮತ್ತು ರಾಷ್ಟ್ರೀಯ ಕೈಮಗ್ಗ ಅಭಿವೃದ್ಧಿ ನಿಗಮದಿಂದ (ಎನ್.ಹೆಚ್.ಡಿ.ಸಿ.) ಅಗತ್ಯ ಪ್ರಮಾಣದ ನೂಲನ್ನು ಖರೀದಿಸಿ ನೇಕಾರರಿಗೆ ಸಕಾಲದಲ್ಲಿ ಸರಬರಾಜು ಮಾಡುವುದು.

ಆ. ಸರ್ಕಾರದಿಂದ ನಿಗಮಕ್ಕೆ ಸಂದಾಯವಾಗಬೇಕಾಗಿರುವ ಹಣವನ್ನು ಬಿಡುಗಡೆ ಮಾಡಲಾಗಿದ್ದು ನೂಲಿನ ಗಿರಣಿಗಳಿಂದ ನಿಗಮವು ಖರೀದಿಸಿ ನೂಲಿನ ಬಾಕಿ ಹಣವನ್ನು ಪಾವತಿ ಮಾಡಿ ಅವಶ್ಯಕ ಪ್ರಮಾಣದಲ್ಲಿ ನೂಲನ್ನು ಖರೀದಿಸಿ ನೇಕಾರರಿಗೆ ಪೂರೈಸುವುದು.

ವಿದ್ಯುತ್ ಮಗ್ಗಗಳಿಗೆ ನೂಲು ಪೂರೈಸುವ ಬಗ್ಗೆ ಸದ್ಯದಲ್ಲಿ ಸರ್ಕಾರದಲ್ಲಿ ಯಾವುದೇ ಯೋಜನೆ ಇರುವುದಿಲ್ಲ.

**ವಿಷಯ: ಬಂಟಮಲ್ಯೆ ರಕ್ಷಿತಾರಣ್ಯಜಲ್ಲಿ ಸಿಗುವ ನಿಧಿ ನಿಕ್ಷೇಪದ ವಿವರ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 774(739)

ಶ್ರೀ ಎಸ್. ಅಂಗಾರ (ಸೂಳ್ಯ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಸೂಳ್ಯ ತಾಲ್ಲೂಕಿನ ಅಂಬೆಕಲ್ಲು ಹತ್ತಿರದ ಬಂಟಮಲ್ಯೆ ರಕಿತಾರಣ್ಯದಲ್ಲಿ ಸಿಗುವ ಅದಿರುಗಳು ಯಾವುವು?

ಆ. ಇದರಲ್ಲಿ ಎಷ್ಟು ಶೇಕಡ ಲೋಹದ ಅಂಶ ಇದೆ?

ಇ. ಸೂಳ್ಯ ತಾಲ್ಲೂಕಿನ ಬಾಳಗೋಡುವುನ ಸೂಜಿಮಲ್ಯೆಯಲ್ಲಿ ಅರಳು ಕಲ್ಲುಗಳನ್ನು ಅಗೆಯುತ್ತಿರುವುದು ನಿಜವೆ?

ಈ. ಹಾಗಿದ್ದಲ್ಲಿ ಈ ಬಗ್ಗೆ ಯಾವ ಕ್ರಮಕೈಗೊಳ್ಳಲಾಗಿದೆ?

ಶ್ರೀ ಎಸ್.ಡಿ.ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು):

ಅ. ಕಯನೈಟ್ ಮಾತ್ರ

ಆ. ಅಲ್ಯೂಮಿನಿಯಂ ಆಕ್ಸೈಡ್ ಶೇಕಡ 52.

ಇ. ಹೌದು.

ಈ. 1992ರಲ್ಲಿ ಅನಧಿಕೃತ ಗಣಿಗಾರಿಕೆಯನ್ನು ತಡೆಯಲಾಗಿದೆ. ಸೂಜಿಮ್ಯೆ ಪ್ರದೇಶವು ಕಾದಿಟ್ಟ ಅರಣ್ಯ ಪ್ರದೇಶದಲ್ಲಿ ಬರುವುದರಿಂದ ಅರಣ್ಯ ಇಲಾಖೆಯನ್ನು ಅನಧಿಕೃತ ಗಣಿಗಾರಿಕೆಯನ್ನು ತಡೆಗಟ್ಟಲು ಕೋರಲಾಗಿದೆ. ಅಲ್ಲದೇ ಇತ್ತೀಚಿನ ದಿನಗಳಲ್ಲಿ ಅನಧಿಕೃತ ಗಣಿಗಾರಿಕೆ ನಡೆದ ಬಗ್ಗೆ ಮಾಹಿತಿ ಇರುವುದಿಲ್ಲ.

**ವಿಷಯ : ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಕಾಯ್ದಿರಿಸಿದ ಹಣ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 774(740)

ಶ್ರೀ ಎಸ್. ಅಂಗಾರ (ಸೂಳ್ಯ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. 1994-95ನೇ ಸಾಲಿನ ವಿಶೇಷ ಘಟಕ ಯೋಜನೆಯ ಅಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಕಾಯ್ದಿರಿಸಿದ ಹಣದಲ್ಲಿ ಸೂಳ್ಯ ತಾಲ್ಲೂಕಿಗೆ ಬಿಡುಗಡೆಯಾಗಿರುವ ಮೊತ್ತವೆಷ್ಟು:

ಆ. ಇದರ ಫಲಾನುಭವಿಗಳು ಯಾರು? (ವಿವರ ನೀಡುವುದು).

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಅ. ಸುಳ್ಯ ತಾಲ್ಲೂಕಿಗೆ 1994-95ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯವರಿಗಾಗಿ ಅನುಷ್ಠಾನಗೊಳಿಸುತ್ತಿರುವ ವಿಶೇಷ ಘಟಕ ಯೋಜನೆಯ ಅಡಿಯಲ್ಲಿ ಒಟ್ಟು 20.54 ಲಕ್ಷ ರೂ.ಗಳನ್ನು ಹಾಗೂ ಪರಿಶಿಷ್ಟ ವರ್ಗದವರಿಗಾಗಿ ಅನುಷ್ಠಾನಗೊಳಿಸುತ್ತಿರುವ ಗಿರಿಜನ ಉಪಯೋಜನೆಯ ಅಡಿಯಲ್ಲಿ 21.80 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಆ. ವಿಶೇಷ ಘಟಕ ಯೋಜನೆಯ ಅಡಿಯಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಸಣ್ಣ ರೈತರು ಹಾಗೂ ಗಿರಿಜನ ಉಪ ಯೋಜನೆಯ ಅಡಿಯಲ್ಲಿ ಪರಿಶಿಷ್ಟ ವರ್ಗಕ್ಕೆ ಸೇರಿದ ಕಡು ಬಡವರು ಮತ್ತು ಸಣ್ಣ ರೈತರು ಮೇಲಿನ ಕಾರ್ಯಕ್ರಮಗಳ ಅಡಿಯಲ್ಲಿ ಫಲಾನುಭವಿಗಳಾಗಿರುತ್ತಾರೆ.

ಫಲಾನುಭವಿಗಳ ವಿವರಗಳನ್ನು ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ.

ವಿಧಾನ ಸಭಾ ಸದಸ್ಯರಾದ ಶ್ರೀ ಎಸ್. ಅಂಗಾರ ಇವರ ಚುಕ್ಕೆ ಗುರುತಿಲ್ಲ ಪ್ರಶ್ನೆ ಸಂಖ್ಯೆ : 710ರ ಉತ್ತರಕ್ಕೆ ಅನುಬಂಧ:

**ಅನುಬಂಧ**

**ವಿಶೇಷ ಘಟಕ ಯೋಜನೆ**

**ಪಶುಸಂಗೋಪನಾ ಇಲಾಖೆ**

| ಕ್ರಸಂ: | ಫಲಾನುಭವಿಗಳು |
|---|---|
| 1. | ಮಿನ್ನು ಬಿಲ್ ಮುದರ ಮನ್ನ ಕಳಂಬ |
| 2. | ಕೊಡಿಯ ಮುಗೇರ ಬಿನ್ ಬೈರ, ಪಂಜ |
| 3. | ಬಿಜಲ ಮನ್ನ ಬಿನ್ ಟೀಂಕ್ರ ಮನ್ಸ ಕಳಂಜ |
| 4. | ಕರಿಯ ಮೇರ ಬಿನ್ ಚೊಕು, ಕೆಳಂದಲ್ಲ, ಅರಂತೋಡು |
| 5. | ಮನ್ಸ್ ಮೇರ ಬಿನ್ ಮುಗರ ಅರಂತೋಡು |
| 6. | ಕೆ.ಕೆ. ಶೀನ್ ಬಿನ್ ಕೆ. ಬಾಬು ಅರಂತೋಡು |

7. ಶ್ರೀಮತಿ. ಯು.ಪಾಜು, ವೈ. ಆಫ್.ವೆಂಕಪ್ಪ, ಅಲೆಟ್ಟಿ
8. ಕರಿಯ ಮುಗೇರ, ಬಿನ್ ನಿಯ ಮುಗೇರ, ಪಂಜ,
9. ಶ್ರೀಮತಿ. ಹುಕ್ರು, ವೈ. ಆಫ್. ಚಲ್ಲಮುಗೇರ, ಕಲ್ಮಡ್ಕ
10. ಗೋಪಾಲ ಬೈರ, ಬಿನ್ ಸುಬ್ಬ ಬೈರ ಕಲ್ಮಡ್ಕ
11. ಕೊರಗ ಮುಗೇರ ಬಿನ್ ಕೌಪ್ರ ಮುಗೇರ, ಎಣ್ಮಾಡು
12. ಬಿ. ಉಗ್ರಪ್ಪ ಬಿನ್ ನಿಟ್ಯೋಣಿ, ಅಜಿಲಯಾ ಕಲ್ಮಡ್ಕಿ,
13. ಗೋಪಾಲ ಬಿ. ಬಿನ್ ಮತ್ತಡಿ ಮೇರ ಕಲ್ಮಡ್ಕ

**ರೇಷ್ಮೆ ಇಲಾಖೆ:**

1. ಬಾಬು ಅಜಿಲ ಅಲೆಟಿ
2. ಬಾಬು ಬಿನ್ ಕೇಪು ಅಜಿಲ, ಅಲೆಟ್ಟಿ,
3. ಮುದ್ದ, ಬಿನ್ ಕೊರಗ ಸಂಪಾಜೆ,
4. ಬಾಳಪ್ಪ ಬಿನಳ ಜೋಮ ಕಳಂಜ,
5. ಕರಿಯ ಬಿನ್ ಚನಿಯ ಕೆನ್ಯ

**ಅರಣ್ಯ ಇಲಾಖೆ**

1. ಮುಡಿಲ ಬಿನ್ ಕುಂಡ ಮಚ್ಚಿನಡ್ಕ ಐರ್ವನಾಡು,

**ಖಾದಿ : ಗ್ರಾಮೋದ್ಯೋಮ ಇಲಾಖೆ**

1. ಕೆ. ಪುಷ್ಪಾವತಿ ಬಿನ್ ಸೋಮಪ್ಪ ಅಂಕರಡ್ಕ
2. ಯಾದರತ್ನ ಬಿನ್ ಮಗ್ಗಲಡ್ಕ
3. ಗೋಪಾಲ ಬಿನ್ ರಂಗಪ್ಪ, ನದಿಬೈಲು

**ಕೃಷಿ ಇಲಾಖೆ:**

1. ಜೌರ, ಮರ್ಕಂಜ
2. ಪಿಬಿನ, ಮರ್ಕಂಜ
3. ಕೇಮಳ, ಮರ್ಕಂಜ
4. ಮುತ್ತ, ಕಲ್ಲಗುಂಡಿ
5. ಜೋಮ ಬದಿಯ ಕೊಡಿಯಾಲ
6. ಗುರುವ ಕೊಡಿಯಾಲ
7. ಮಾಂಕು, ಮರ್ಕಂಜ
8. ಗುರವ ಕಲ್ಮಡ್ಕ
9. ಲಿಂಗ, ಹೊರಳ್ಳಿ

ಭೂಸಾರ : ಭೂ ಸಮತಟ್ಟು

1. ಚನಿಯಾ ಮಾಯಿಲ್, ಕದುಕುಂಜ
2. ಮಂಡಿಲ ಮುಗೇರ ಬಿನ್ ಜೋಮ ಮುಗೇರ, ಐವತ್ತಾರು
3. ಅತ್ತು ಮುಗೇರ ವೈ.ಅಪ್, ಮನ್ಸ್ ಮುಗೇರ
4. ಕೃಷ್ಣ ಬೇರ, ದೇವನಹಳ್ಳಿ
5. ಕರಿಯಾ ಅಜಿ, ಸಾಲ್ಲೂರು, ಗ್ರಾಮ,
6. ಮಂಜಿಲ ಬಿನ್ ಅಂಗರ ಮೇರ
7. ಅಂಬಥಂಡಿ ಮೇರ, ಅರಂತೋಡು,

ಪಂಪುಸೆಟ್ಟು ಪೂರೈಕೆ:

1. ಅನಂತ ಎಂ. ಬಿನ್ ಅಣ್ಣ ಮುಗೇರ, ಮುಲ್ಯ ಹೊಸಗುದ್ದೆ
2. ಧನಿಯಾ ಮೇರ ಬಿನ್ ಕುಸ್ನ ಮೇರೆ, ತಾರಿ ಮನೆ ಅಮದುನ್ಸೂನರು
3. ಬಾಬುಫರವ ಬಿನ್ ಲೇಟ್ ತಿಮ್ಮಫರವ್, ಮುಪ್ಪರಿಯಾ ಬಾಳಿಲ
4. ದನಿಯಾ ಬಿನ್ ಕುಶ್ಕ ಮೇರೆ ಅರಿಯಡ್ಕ ಜಾಲ್ಲೂರು
5. ಮನ್ನ ಬಿನ್ ಸಣ್ಣ ಕುಕ್ಕ, ಕಲ್ಮಡ್ಕ
6. ತಿಮ್ಮಫರವ ಬಿನ್ ರೂಲಿಂಗ್ ಪರವ, ಯೇನೆಕಲ್ಲು, ಸುಬ್ರಮಣ್ಯ
7. ತಮ್ಮಣ್ಣ ಬಿನ್ ಕಾಳ ಮೊಯಿಲ, ಸುಬ್ರಮಣ್ಯ (ಯೋನೆಕಲ್ಲು)
8. ರಾಮ ಬಿನ್ ಸುಬ್ಬ, ವೈಜಾರು ಸುಳ್ಯ,
9. ಓಜನ ಬಿನ್ ಜೋಮ, ಮರ್ಕಂಡಿ

ವ್ಯವಸಾಯ ಕಾಲನಿಗಳ ಪುನರುಜ್ಜೀವನ

1. ಹೆನ್ನರ್ ಬಿನ್ ಕಾಜ
2. ಜೋಮ ಬಿನ್ ಕಾಳ
3. ಮಾದ ಬಿನ್ ಕಾಳ
4. ಕೋರಗಪ್ಪ ಬಿನ್ ಅಂಗಾರ
5. ಮತ್ತಡಿ ಬಿನ್ ಪೆರ್ಸ
6. ದೆಯ್ಯು ಬಿನ್ ಭೀಮ,
7. ಸಣ್ಣ ಪೆರ್ನ ಬಿನ್ ಭೀಮ
8. ಕೃಷ್ಣ ಬಿನ್ ದೆಯ್ಯು
9. ಜೋಮ ಬಿನ್ ದೆಯ್ಯು
10. ಒದಿ ಬಿನ್ ದೆಯ್ಯು
11. ಗಂಗಮ್ಮ ಬಿನ್ ಕುಂಜ
12. ಚಣಪ್ಪ ಬಿನ್ ಗುರುವ
13. ಮೋಹಿನಿ ಬಿನ್ ಗುರುವ
14. ಶೇಖರ್ ಬಿನ್ ದೇವು

**ತೋಟಗಾರಿಕೆ ಇಲಾಖೆ**

1. ಕೆ.ಶಿವಪ್ಪದಾಸ್ ಬಿನ್ ಕೃಷ್ಣದಾಸ್, ಉಮರಡ್ಕ ಮಿತ್ತೂರು,
2. ಹುಕ್ರಮೇರ ಓನ್ ಜೋಮ, ಕೊಡಿಯಾಲ
3. ದಿ.ಕೊಂಗ ಬಿನ್ ನಿಟ್ಟೋಣಿ, ಕಲ್ಮಡ್ಕ
4. ತುಕ್ರಮೇರ ಬಿನ್ ಕುಜುಂಬ, ಕಲ್ಮಡ್ಕ
5. ಬಟ್ಯಮೇರ ಬಿನ್ ಕುಕ್ಕಮೇರ, ಉಮರಡ್ಕ ಮಿತ್ತೂರು
6. ಪಕೀರ ಬಿನ್ ಮೇಗೆಂಕಿಲ, ಯಾವುಟಿ, ಉಮರಡ್ಕ ಮಿತ್ತೂರು
7. ಮೈರಮೇರ ಬಿನ್ ಕುಕ್ಕಮೇರ, ಉಮರಡ್ಕ ಮಿತ್ತೂರು,
8. ಕುಂಞಮೇರ ಬಿನ್ ಕೊರಗಮೇರ, ಉಮರಡ್ಕ ಮಿತ್ತೂರು
9. ಗುರುವ ಬಿನ್ ಮೊಡೆಯಾಲಾ, ಕೊಡಿಯಾಲಾ
10. ಬಾಬು ಬಿನ್ ಮಲ್ಲ, ಅಜ್ಜಾವಲ
11. ಕುಜುಂಬ ಬಿನ್ ಮಂಡಿಲ, ಪರ್ಕಂಜ
12. ಕೇಪು ಬಿನ್ ಕುಕ್ಲೆ ಪರ್ಕಂಜ
13. ಗುರುವ ಬಿನ್ ಮುಂಡಿಲ ಪರ್ಕಂಜ
14. ಚೌರ ಬಿನ್ ಐತ್ತ ಪರ್ಣೆ, ಪರ್ಕಂಜ,
15. ಕೈಪಳ ಬಿನ್ ಓಡಿ, ವನ್ನೆಬೈಲು, ಪರ್ಕಂಜ
16. ಪಿಜಿಲ ಬಿನ್ ಜೋಮ ಪರ್ಕಂಜ
17. ಬೀತ್ರ ಬಿನ್ ಮನ್ಸಮೇರ ಸಂಪಾಜೆ
18. ಮಾಣಿಕ ಬಿಕ್ ಬಟ್ಯ ಹರಿಜನ ಸಂಪಾಜೆ
19. ಅಂಬೋಡಿ ಮುಗೇರ ಬಿನ್ ಮನ್ಸಮೇರ ಎಡಮಂಗ್ಲ
20. ಬಿಯಾಲು ಬಿನ್ ಗುರುವ ಕೊಡಿಯಾಲ ಗ್ರಾಮ
21. ಗುರುವ ಮೇರ ಬಿನ್ ಚಲ್ಲ ಮೇರ, ಕಲ್ಮಡ್ಕ
22. ಮತ್ತನಿ ಬಿನ್ ಕಾವೇರಿ ಮ್ಯಾಲ ಕಲ್ಮಡ್ಕ
23. ಜೋಮಮೇರ ಬಿನ್ ದೇಯ್ಯ, ಪಂಚಿತ್ತಾಡಿ ಗ್ರಾಮ
24. ಐತ ಮೇರ ಬಿನ್ ಶುಕ್ರಮೇರ, ಅಮರ ಮುದ್ನೂರು
25. ಕೊಡ್ಗು ಮೇರಾ ಬಿನ್ ಕರಿಯಾ ಮೇರ, ಉಮರಡ್ಕ ಮಿತ್ತೂರು
26. ಎಂ. ದೆಯ್ಯ ಅಜಿಲ, ಬೊಳಿಯ ಅಜಿಲ, ಕೊಲ್ಲಮೊಗರು
27. ಕೆ.ಗುಡ್ಡ ಅಜಿಲ, ಬಿನ್ ಬಂಡಾರ ಅಜಿಲ, ಕೊಲ್ಲಮೊಗರು
28. ಕೇಡು ಬಿನ್ ಪಕೀರ, ಕಲ್ಮಡ್ಕ ಗ್ರಾಮ
29. ಕುಟ್ಟಿ ಬಿನ್ ಬೀಯಾಲು ಮುರ್ಕ್ಯಳ ಗ್ರಾಮ
30. ಮಲ್ಸಮೇರ ಕುಕ್ಕಮೇರ, ಕಲ್ಮಡ್ಕ
31. ಮುದರ ಬಿನ್ ಗುರುವ ಬೆಳ್ಳಾರೆ.





**ಜಾಯಿ ಕಾಯಿ ತೋಟ ಸ್ಥಾಪನೆ:**

1. ಕೆ.ಶಿವಪ್ಪದಾಸ್ ಬಿನ್ ಕೃಷ್ಣದಾಸ್, ಉಮರದ ಮಿತ್ತೂರು
2. ಮಾಲಿಂಗ ಬಿನ್ ಕರಿಯಾ, ಉಮರದ ಮಿತ್ತೂರು,
3. ಗುರಕೊವ ಬಿನ್ ಮಾಡೆಂಕಿಲ ಹೊಡಿಯಾಲ ಗ್ರಾಮ
4. ಮನ್ಸ ಬಿನ್ ಕುಕ್ಕ ಕಲ್ಮಡ್ಕ
5. ಜೋಮ ಮ್ಯಾಲ ಬಿನ್ ಸಾಲೆ ಮ್ಯೊಲ ಚಿತ್ತಾರ
6. ಕೇಪು ಬಿನ್ ಕುಕ್ಕೆ ಪರ್ಕಂಜ ಗ್ರಾಮ

**ಗೇರು ತೋಟ ಸ್ಥಾಪನೆ**

1. ಬಟ್ಯಮೇರ ಬೀನ್ ಕುಕ್ಕ ಮಿತ್ತೂರು
2. ಕೊರಗು ಬಿನ್
3. ಕಮಲ ಬಿನ್ ಪಂಕಜ
4. ಕೊರಗ ಬಿನ್ ಮುಂದ ಪಂಕಾಜೆ
5. ಉಕ್ರೂ ಬಿನ್ ಜೋಡು ಪಂಕಾಜೆ
6. ಗುರುವ ಮುಗೇರ ಬಿನ್ ಕೊರಗ ಮುಗೇರ ಎರಮಂಗಲ
7. ಗುರುವ ಮುಗೇರ ಬಿನ್ ಕೊರಗ ಮುಗೇರ ಎರಮಂಗಲ
8. ಕುಂಜು ಬಿನ್ ಕುಕ್ಕ ಉಮರಕ್ಕ ಮಿತ್ತೂರು
9. ಜೌಕಾರು ಬಿನ್ ಮೊರೆಂಡಿಲ ಕೊಡಿಯಾಲ
10. ಮುಂದಿನ ಬಿನ್ ಗುರುವ ಕೊಡಿಯಾಲ
11. ಗೋಜ ಬಿನ್ ಗುರುವರ ಕೊಡಿಯಾಲ
12. ಅಂದ್ರ ಬಿನ್ ಮ್ಯೊಲ ಕೊಡಿಯಾಲ
13. ಕೊರಗು ಬಿನ್ ಮೊಹೆಂಕಿಲ, ಕೊಡಿಯಾಲ
14. ಎಂ. ಅಂಗಾರ ಮನ್ಸ ಮೊಹೆಂಕಿಲ, ಕೊಡಿಯಾಲ
15. ಎಂ. ಬಾಬು ಮನ್ಸ ಮೊಹೆಂಕಿಲ ಕೊಡಿಯಾಲ
16. ಹೊಂಕು ಮುಗೇರ, ಗುರುವ ಮುಗೇರ, ಕೊಡಿಯಾಲ
17. ಕೊರಗ ಬಿನ್ ಕುಂದ, ಉಮರಕ್ಕ ಮಿತ್ತೂರು
18. ಕುಂಜೆ ಮೇರ ಬಿನ್ ಕೊರಗಮೇರ, ಉಮರಕ್ಕ
19. ಮಾಡಿಗ ಬಿನ್ ಮ್ಯೊಲ, ಕೋಡಿಯಾಡ್ಕ ಮನೆ, ಉಮರಕ್ಕ ಮಿತ್ತೂರು
20. ಕೆ.ಪೊಡಿಯ ಬಿನ್ ಅಂಗಾರಕಜೆ, ಮದಪ್ಪಾಡಿ ಗ್ರಾಮ
21. ಎಸ್. ಕೇಪು ಮೇರ, ಬಿನ್ ಪಕೀರ, ಕಲ್ಮಡ್ಕ
22. ಕೇಪು ಮೇರ ಬಿನ್ ಅಂಗಾರ ಕಲ್ಮಡ್ಕ
23. ಪಿ.ಬಾಬು ಬಿನ್ ಕರಿಯ ಪಲ್ಲತಲ್ತ ಮನೆ, ಅಜ್ಜಾವರ
24. ಕುಟ್ಟಿಮೇರ ಬಿನ್ ನಿಟ್ಟೋಣಿ ಮೇರ, ಸುಳ್ಯ
25. ಜೋಮ ಅಜಿಲ, ದೆಯ್ಯ, ಅಜಿಲ, ಹರಿಹರಪಲ್ಲತಡ್ಕ

26. ಪಿ. ಚೌಕಾಡು ಬಿನ್ ಸಣ್ಣಮುಗೇರ ಬಾಳುಗೋಡು
27. ಕರಿಯ ಮುಗೇರ ಬಿನ್ ಗುರುವ ಮುಗೇರ, ಬಾಳುಗೋಡು
28. ಭೈರ ಬಿನ್ ಕೊರಗ ಕೆರ್ಮಾಜೆ
29. ಮಾಲಿಂಗ ಪರವ ಬಿನ್ ತಿಮ್ಮ ಪರಮುಎನೆಕಲ್ಲು ಗ್ರಾಮ
30. ತಿಮ್ಮ ಬಿನ್ ಕರ್ಪಮೇರ, ಅಜ್ಜಾವರ
31. ಮುದ್ದ ಬಿನ್ ಅಣ್ಣುಮೇಡ, ಅಜ್ಜಾವರ
32. ಕೊರಗ ಬಿನ್ ಅಂಗುಮೇರ, ಅಜ್ಜಾವರ
33. ಐತ್ತ ಬಿನ್ ಪೆರ್ನ, ಅಜ್ಜಾವರ
34. ಸುಬ್ಬ ಬಿನ್ ಅಣ್ಣು ಮುಗೇರ ಅಜ್ಜಾವರ
35. ನಂದ ಬಿನ್ ಜೋಮ
36. ಜೊಮ ಬಿನ್ ಕುಂಞ ಮೇರ ಅಜ್ಜಾವರ
37. ಮಾಣಿ ಬಿನ್ ಮ್ಯಾಲ, ಅಜ್ಜಾವರ
38. ಬೀಯಾಲು ಬಿನ್ ಗುರುವಕೊಡಿಯಾಲ
39. ಹ್ಯೊಲಪ್ಪ ಬಿನ್ ಮನ್ಸ ಮುಗೇರ ಕೇನ್ಯಾ ಗ್ರಾಮ
40. ಹುಕ್ರಮುಗೇರ ಬಿನ್ ಕೊರಗುಮುಗೇರ, ಕೇನ್ಯಾ

**ಇಂಜಿನಿಯರಿಂಗ್ ವಿಭಾಗ: ಕಿರು ನೀರು ಸರಬರಾಜು**

1. ಎಣ್ಣೂರಿನ ಕೆಳಗಿನಗುತ್ತು ಪ.ಜಾತಿ ಕಾಲನಿ ಎಣ್ಣುರು
2. ನಾರಾಜೆ ಪ.ಜಾತಿ ಕಾಲನಿ ಸುಳ್ಯ
3. ದೇವರಕಾಸ ಗುಲ್ಲ ಪಾರಿ ಪ.ಜಾತಿ ಐವರ್ನಾಡು

**ಸಾಮಾಜಿಕ ನೀರಾವರಿ ಬಾವಿ**

1. ಸುಬ್ರಹ್ಮಣ್ಯ ಮಂಡಲದ ಪದ್ಮಡ್ಕ ಪ.ಜಾತಿ ಕಾಲನಿ
2. ಗುತ್ತಿಕಾರಿನ ದೇವಹಳ್ಳ ಪ.ಜಾತಿ ಕಾಲನಿ

**ರಸ್ತೆ-ಸೇತುವೆ**

1. ಅಜ್ಜಾಪುರ ಗ್ರಾಮದ ದೊಡ್ಡೇಗಿ ಪ.ಜಾತಿ ಕಾಲನಿ ಕೂಡು ರಸ್ತೆ
2. ಮುರುಳ್ಯ ಪ.ಜಾತಿ ಕಾಲನಿ ರಸ್ತೆ ಡಾಂಬರು
3. ಬೆಳ್ಳಾರೆ ಗ್ರಾಮದ ಹರ್ಕಾಸು ಮುದ್ಕಜೆ ಪ.ಜಾತಿ ಕಾಲನಿ ರಸ್ತೆ
4. ಸುಬ್ರಹ್ಮಣ್ಯ ಮಂಡಲದ ದೇವರಗ್ ಸೇತುವೆ ರಚನೆ
5. ಸುಳ್ಯ ಮಂಡಲದ ಹೊಸಗದ್ದೆ ಎಂಬಲ್ಲಿ ಹೊಯಿಲ ಮಾಲೆ ಕಿರು ಸೇತುವೆ ರಚನೆ
6. ಮುರುಳ್ಯ ಗ್ರಾಮದ ಪಾರ್ಲಜೀತ ಮುಕ್ತ ಹರಿಜನರಸ್ತೆ ರಚನೆ
7. ಹರ್ಕಾಸು ಮದ್ಕಜೆ ಹರಿಜನ ಕಾಲನಿ ರಸ್ತೆ ರಚನೆ
8. ಚಟ್ಟಹಳ್ಳ ಕೊಡಿಯಲಬೈಲು ಪ.ಜಾತಿ ಕಾಲನಿ ರಸ್ತೆ 8 ಕಿ.ಮೀ.
9. ಬೆಳ್ಳಾರೆ ಕೊಡಿಯಾಲ ಗ್ರಾಮದ ಹೊನಡ್ಕ ಪೊಟ್ಲೆ ಕಲ್ಮಡಿ ಪ. ಜಾತಿ

ಕೊಳವೆ ಬಾವಿಗಳು

1. ಸುಣ್ಣದಮೂಲೆ ಪದಪದ್ಕ ಪ.ಜಾತಿ ಕಾಲನಿ ಕನಕಮಜಲು
2. ಬದಿಮೂಲೆ . ಪ.ಜಾತಿ ಕಾಲನಿ ಕನಕಮಜಲು
3. ಮುದಲಿ ಅಲೆಕ್ಕಾಡಿ ಪ.ಜಾತಿ ಎಣ್ಮೂಡು

ಗಿರಿಜನ ಉಪಯೋಜನೆ

ತೋಟಗಾರಿಕೆ ಇಲಾಖೆ:

1. ರಾಮಚಂದ್ರ ಬಿನ್ ಲಿಂಗನಾಯ್ಕ, ಶಾಂತಿಮೂಲೆ ಐವರ್ನಾಡು
2. ಲಕ್ಷ್ಮಣ ನಾಯ್ಕ ಬಿನ್ ಸುಬ್ಬನಾಯ್ಕ, ಐರ್ವರ್ನಾಡು
3. ಶಾಂತಪ್ಪ ನಾಯ್ಕ ಬಿನ್ ಐತ್ತಪ್ಪನಾಯ್ಕ, ಬಾಂಜಿಕೋಡಿ, ಐವರ್ನಾಡು
4. ದಾಸಪ್ಪ ನಾಯಕ್ಕ ಬಿನ್ ಕುಂಞ ನಾಯ್ಕ, ಉದ್ದಂಪಡಿ, ಐವರ್ನಾಡು
5. ವಾಸುನಾಯ್ಕ ಬಿನ್ ಬಾಬುನಾಯ್ಕ ಬಸ್ಮಡ್ಕ, ಸುಳ್ಯ
6. ಜೆ. ಐತಪ್ಪ ನಾಯ್ಕ ಬಿನ್ ರಾಮಣ್ಣನಾಯ್ಕ, ಜೋಗಿಯಪ್ಪ ಅಮರಪದ್ನೂರು
7. ಪಕೀರ ನಾಯ್ಕ ಬಿನ್ ಐತ ನಾಯ್ಕ ಜೇಕಾಜ್, ಕನಕಮಜಲು
8. ತುಕ್ರಪ್ಪ ನಾಯಕ್ ಬಿನ್ ಕೃಷ್ಣನಾಯ್ಕ, ಕನ್ನಡ್ಕ, ಕನಕಮಜಲು
9. ಗಣಪಯ್ಯ ನಾಯ್ಕ ಬಿನ್ ಕುಕ್ಕಪ್ಪ ನಾಯ್ಕ, ಕಲ್ಲಡ್ಕ ಮನೆ, ಮಂದೆಕೋಲು
10. ದೇವಪ್ಪ ನಾಯ್ಕ ಬಿನ್ ಚನಿಯಪ್ಪ ನಾಯ್ಕ, ಕಲ್ಲಡ್ಕ, ಮಂದೆಕೋಲು
11. ಬಾಬುನಾಯ್ಕ ಬಿನ್ ಜೋಮಣ್ಣ ನಾಯ್ಕ, ಕನ್ಯಾನ ಮಂದೇಕೋಲು
12. ಕೆ.ಪರಮೇಶ್ವರನಾಯ್ಕ ಬಿನ್ ಒಬಯ್ಯ ನಾಯ್ಕ, ಕನ್ಯಾನ ಮಂದೆಕೋಲು
13. ಕೆ.ಕುಶಾಲಪ್ಪನಾಯ್ಕ ಬಿನ್ ಮೊಂಕು ನಾಯ್ಕ, ಅಮರಪದ್ನೂರು
14. ಎಸ್.ಬಿತ್ತಪ್ಪ ಬಿನ್ ಕುಕ್ಕಪ್ಪ, ಸಂಕೇಶ, ಅಮರಥಮುದ್ನೂರು
15. ಎಂ. ನಾರಾಯಣನಾಯ್ಕ ಬಿನ್ ಕೊರಗ ನಾಯ್ಕ, ಅಲೆಟ್ಟಿ
16. ಕುಂಚಣ್ಣ ನಾಯ್ಕ ಬಿನ್ ಕೊಡಗ ನಾಯ್ಕ ಜಾಲ್ಸೂರು
17. ಕೆ.ಅಪ್ಪಯ್ಯ ಬಿನ್ ನಾರ್ಣ ನಾಯ್ಕ, ಕೊಟೇಲು, ಅಲೆಟ್ಟಿ
18. ಕುಂದ ಕೊರಗ ಬಿನ್ ಐತ ಕೊರಗ, ಪರ್ವಮುಕ್ಕ, ಸುಬ್ರಹ್ಮಣ್ಯ
19. ಬಾಳುನಾಯ್ಕ, ಬಿನ್ ವೆಂಕಪ್ಪ ನಾಯ್ಕ ಸುಬ್ರಹ್ಮಣ್ಯ
20. ಆರ್. ಮಾಲಿಂಗ ನಾಯ್ಕ ಬಿನ್ ಅಣ್ಣಪ್ಪ ನಾಯ್ಕ ರಂಗ್ತ ಮಲೆ, ಮರ್ಕಂದ
21. ದೇವಪ್ಪ ನಾಯ್ಕ, ರೆಂಜಾಳ, ಮರ್ಕಂಜ
22. ಪಿ.ಬೋಜಪ್ಪ ನಾಯ್ಕ, ರಂಜಾಳ, ಮರ್ಕಂಜ
23. ಸೋಮಯ್ಯ ನಾಯ್ಕ, ಗುಂಡಿ ಮನೆ, ಪರ್ಪಂಜ
24. ಪುಟ್ಟಣ್ಣ ಬಿನ್ ಮಾಂಕು ನಾಯ್ಕ, ಕಲಮ್ಮಗೆ ಬಳ್ಪ
25. ದನಿಯ ನಾಯ್ಕ ಬಿತ್ತಡ್ಕ ಮನೆ, ಪರ್ಪಂಜ ಗ್ರಾಮ
26. ಕೃಷ್ಣಪ್ಪ ನಾಯ್ಕ ಬಿನ್ ಚನಿಯ ನಾಯ್ಕ, ಪೆರ್ನಾಟ್ ಮನೆ ಕನಕಮಜಲು

1. ಮೋಂಟ ಮಲೆಕುಡಿಯ ಬಿನ್ ಅಂಗಾರ ಮಲೆಕುಡಿಯ ದೇವಬೆಳ್ಳ
2. ಮಾದಪ್ಪ ಮಲೆಕುಡಿಯ ಬಿನ್ ವೀರಪ್ಪ ಮಲೆಕುಡಿಯ ದೇವಬೆಳ್ಳ
3. ಮಾಣ್ಯಪ್ಪ ನಾಯ್ಕ ಬಿನ್ ಬೋಮಣ್ಣ ನಾಯ್ಕ ಹರಿವಾರಕಾನ ಅರಂಬೂರು
5. ಅಪ್ಪುಂಗ ನಾಯ್ಕ ಬಿನ್ ಚನಿಯಾ ನಾಯ್ಕ ಕಲ್ಲಡ್ಕ ಮಂದೆಗೋಲು
6. ಚನ್ನಪ್ಪ ನಾಯ್ಕ ಬಿನ್ ಚನಿಯ ನಾಯ್ಕ ಕಲ್ಲಡ್ಕ ಮಂದೆಕೋಲು
7. ಬಿ. ದೋನಪ್ಪ ನಾಯ್ಕ ಬಿನ್ ಮಾರುನಾಯ್ಕ ಬೇಂಗತ್ತಮಲೆ ಮಂದೆಕೋಲು
8. ನಾರಾಯಣ ನಾಯ್ಕ ಬಿನ್ ಗೋವಿಂದ ನಾಯ್ಕ ಕೂರುರು, ಮಂದೆಕೋಲು
9. ನಾರಾಯಣನಾಯ್ಕ ಬಿನ್ ಕೃಷ್ಣನಾಯ್ಕ, ಅಮೆಬೈಲು, ಅಮರಕನ್ನೂರು
10. ನಾರಾಯಣ ನಾಯ್ಕ ಬಿನ್ ಬಟ್ಯ ನಾಯ್ಕ ಐರ್ವಾಡು
11. ಗಣಪಯ್ಯ ನಾಯ್ಕ ಬಿನ್ ಬಟ್ಯ ನಾಯ್ಕ, ಅಜ್ಜಾವರ
12. ಚೆನ್ನಪ್ಪ ಮಲೆಕುಡಿಯ, ಅಜ್ಜಾವರ
13. ರಾಮಣ್ಣ ಮಲೆಕುಡಿಯ, ದೇವಚಳ್ಳಿ
14. ನಾರಾಯಣ ನಾಯ್ಕ, ಬಿನ್ ಸಂಕರಪ್ಪ ನಾಯ್ಕ, ಎಡಮಂಗಲ
15. ಗೋವಿಂದ ನಾಯ್ಕ ಬಿನ್ ಕರಿಯಪ್ಪ ನಾಯ್ಕ, ಎಡಮಂಗಲ

1. ಐತ್ತ ಕೊರಗ ಬಿನ್ ಮಾಂಕು ಕೊರಗ, ಕೊಲ್ಲಮೊಗ್ರು
2. ಎಂ. ನಾರಾಯಣ ಬಿನ್ ಕೊರಗ ನಾಯ್ಕ, ಅಜೆಟ್ಟಿ
3. ಟಿ. ನಾರಾಯಣ ಬಿನ್ ವೆಂಕಪ್ಪ ನಾಯ್ಕ, ಎಡಮಂಗಲ
4. ಗೋವಿಂದ ನಾಯ್ಕ ಬಿನ್ ಕರಿಯ ನಾಯ್ಕ, ಎಡಮಂಗಲ
5. ಪರಮೇಶ್ವರ ಬಿನ್ ಗೋವಿಂದ ನಾಯ್ಕ, ಕಲ್ಮಡ್ಕ
6. ಆರ್. ಮಹಾಲಿಂಗ ನಾಯ್ಕ ಬಿನ್ ಅಣ್ಣಪ್ಪ, ನಾಯ್ಕ ಅಲಿಟ್ಟಿ
7. ರಮೇಶನಾಯ್ಕ ಬಿನ್ ಸೋಮಣ್ಣ ನಾಯ್ಕ, ಅಲೆಟ್ಟಿ
8. ಬಿ. ಬಾಬು ನಾಯ್ಕ ಬಿನ್ ದೇವಯ್ಯನಾಯ್ಕ ತೋಡಿವಾನ
9. ಕೊರಗಪ್ಪ ನಾಯ್ಕ ಬಿನ್ ರಾಮನಾಯ್ಕ ಕಲ್ಮಡ್ಕ
10. ಕೆ. ವಿನೋದ್‌ಕುಮಾರ್ ಬಿನ್ ಗೋಪಾಲಕೃಷ್ಣ ನ್ಯಾಕ್, ಅಲೆಟ್ಟಿ
11. ಬಾಳು ನ್ಯಾಕ್ ಬಿನ್ ಅಪ್ಪಯ್ಯ ನ್ಯಾಕ್, ಕೋಕಿಕಾನ
12. ಬಾಬು ನ್ಯಾಕ, ಬಿನ್ ದೇವಣ್ಣ ನ್ಯಾಕ ತೋಡಿಕಾನ

1. ಕೆ. ವಿನೋದ್‌ಕುಮಾರ ಬಿನ್ ಗೋಪಾಲಕೃಷ್ಣ ನಾಯ್ಕ ಅಲೆಟ್ಟಿ
2. ಕೆ. ನಾರಾಯಣ ನಾಯ್ಕ, ಬಿನ್ ಅಪ್ಪಯ್ಯ ನಾಯ್ಕ ಅಲೆಟ್ಟಿ
3. ಬಾಬು ನಾಯ್ಕ ಬಿನ್ ಮಾಲಿಂಗ ನಾಯ್ಕ, ಮಾರ್ಕಜಿ, ಅಲೆಟ್ಟಿ
4. ಕೆ.ಬೆಳ್ಯಪ್ಪ ಬಿನ್ ಡಿ. ರಾಮಣ್ಣನಾಯ್ಕ, ಅಲೆಟ್ಟಿ
5. ಕೆ. ವೆಂಕಟಪ್ಪ ನಾಯ್ಕ ಬಿನ್ ಕೊರಗಪ್ಪ ನಾಯ್ಕ ಅಲೆಟ್ಟಿ
6. ಜೆ.ಕಾರ್ಯಪ್ಪ ಬಿನ್ ಐತ್ತು ನಾಯ್ಕ ಅಲೆಟ್ಟಿ
7. ಅಣ್ಣಪ್ಪ ನಾಯ್ಕ ಬಿನ್ ದೇವಪ್ಪ ನಾಯ್ಕ, ಅಲೆಟ್ಟಿ

8. ಎ. ಬಾಬು ಕೊರಗ ಬಿನ್ ಬಟ್ಯ ಕೊರಗ, ಅಮರಮುಗ್ನೂರು
9. ಬಟ್ಯ ಕೊರಗ ಬಿನ್ ಮತ್ತಾಡಿ ಕೊರಗ, ಕೊಲ್ಲಮೊಗ್ರು
10. ಗೋವಿಂದ ನ್ಯಾಕ ಬಿನ್ ಮ್ಯಾಲ ನ್ಯಾಕ, ಮಂದಗೋಲು
1. ಕೆ.ಎಸ್. ದೇವಿಪ್ರಸಾದ ಬಿನ್ ಸಿತಾರಾಮ ನ್ಯಾಕ, ಗಬ್ಬಲ್ಕಜೆ, ಅಲೆಟ್ಟಿ
2. ರಾಮಣ್ಣ ನಾಯ್ಕ ಬಿನ್ ಸಬ್ಬಪ್ಪ ನಾಯ್ಕ ಐವರ್ನಾಡು
3. ಎನ್ ಬಾಬು ನಾಯ್ಕ ಬಿನ್ ಗುಡ್ಡಪ್ಪ ನಾಯ್ಕ ಐವರ್ನಾಡು
4. ಕೆ. ತಿಮ್ಮಪ್ಪನಾಯ್ಕ ಬಿನ್ ನಾರಾಯಣನಾಯ್ಕ, ಐರ್ವನಾಡು
5. ನಾರ್ಣಪ್ಪ ಬಿನ್ ಅಪ್ಪು ನಾಯ್ಕ, ದೇವಚಳ್ಳ
6. ಕೊರಪೊಳು ಕೋಂ ಕೃಷ್ಣ ನಾಯ್ಕ ದೇವಚಳ್ಳ
7. ವೊಂಟ ಮಲೆಕುರಿಯ ಬಿನ್ ಅಂಗಾರ ಮಲೆಕುರಿಯ ದೇವಚಳ್ಳ
8. ಮಾದಪ್ಪ ಮಲೆಕುರಿಯ ಬಿನ್ ವೀರಪ್ಪ ಮಲೆಕುರಿಯ ದೇವಚಳ್ಳ
9. ಅಮ್ಮು ಮಲೆಕುರಿಯ ಬಿನ್ ಚನಿಯಪ್ಪ ಮಲೆಕುರಿಯ ಕನಕಮಜಲು
10. ಬಿ.ಚೆನ್ನಮ್ಮ ಕೋಂ ಕೇಡು ನಾಯ್ಕ, ಅಲೆಟ್ಟಿ
12. ಬಟ್ಯ ನಾಯ್ಕ ಬಿನ್ ಚನಿಯಾ ನಾಯ್ಕ ಕಲ್ಲಡ್ಕ, ಮಂದೆಕೋಲು
13. ಪುತ್ತಾಡಿ ನಾಯ್ಕ ಬಿನ್ ಮೈಲಾ ನಾಯ್ಕ, ಮಂದೆಕೋಲು
14. ಶುದ್ದ ನಾಯ್ಕ ಬಿನ್ ವೆಂಕಟಪ್ಪ ನಾಯ್ಕ, ಮಂದೆಕೋಲು
15. ಪುಕ್ರನಾಯ್ಕ ಬಿನ್ ಲಿಂಗಪ್ಪ ನಾಯ್ಕ ಮಂದೆಕೋಲು
16. ಕೆ.ಬಾಲಕೃಷ್ಣ ಬಿನ್ ಸೋಮಣ್ಣ ನಾಯ್ಕ ಮಂದೆಕೋಲು
17. ಪಿ.ಮಾಲಿಂಗನಾಯ್ಕ ಬಿನ್ ಮಾಧು ನಾಯ್ಕ, ಅಮರಪಡ್ನೂರು
18. ಎ. ಬಾಲಕೃಷ್ಣ ನಾಯ್ಕ ಬಿನ್ ಐತ್ತಪ್ಪ ನಾಯ್ಕ, ಅಜ್ಜಾಪುರ
19. ಪಾದು ಪೆಂಗ್ಸು ಕೆಲದಿ ಮ್ಯೊಲ ಅಜಿಲ, ದೇವಚಳ್ಳ
20. ರಾಘವ ಕೊರಗ ಬಿನ್ ಬಾಬು ಕೊರಗ ಕೊಲ್ಲಮೊಗಡು
22. ಐತಪ್ಪ ನಾಯ್ಕ ಬಿನ್ ಅಣ್ಣು ನಾಯ್ಕ ಕೊಡಿಯಾಲ
23. ಕೆ.ಶೇಷಪ್ಪ ಮಲೆ, ಬಿನ್ ಕರಿಯಪ್ಪ ಮಲೆ ಇನೆಂದು
24. ಶಿವಣ್ಣ ಮಲೆ ಬಿನ್ ಪುಟ್ಟಣ್ಣ ಮಲೆ. ಇನ್‌ಕಿಂಗು
25. ಲಿಂಗಪ್ಪ ನಾಯ್ಕ ಬಿನ್ ನಾಣು ನಾಯ್ಕ. ಕೆಮ್ರಾಜ್
26. ಚ. ಯಪ್ಪನಾಯ್ಕ, ಕುಲ್ಕುಂಡ, ಸುಬ್ರಹ್ಮಣ್ಯ

**ಖಾದಿ ಗ್ರಾಮೋದ್ಯೋಗ**

1. ಈಶ್ವರ ನ್ಯಾಕ, ಚೆನ್ನಪ್ಪ ನ್ಯಾಕರ ಮಗ, ಅಲೆಟ್ಟಿ
2. ವೀರಪ್ಪ ನ್ಯಾಕ, ಈಶ್ವರ ನ್ಯಾಕರ ಮಗ, ಕುತ್ಕುಂಜ
3. ಕೆ.ಹುಶಾಲಪ್ಪ ನ್ಯಾಕ್ ಮಾಂಕು ನ್ಯಾಕರ ಮಗ, ಅಮರಮುದ್ನೂರು
4. ಕೆ.ಪಿ.ಪುಟ್ಟಿ ನ್ಯಾಕರ ಮಗಳ್ಳು ಕಳಂಜ
5. ಸೀತಮ್ಮ ಕಿಟ್ಟು ನ್ಯಾಕರ ಮಗಳು, ಕಳಂಜ
6. ಸೀತಮ್ಮ ಅಣ್ಣಯ್ಯ ನ್ಯಾಕರ ಮಗಳು ಅಲೆಟ್ಟಿ

ಕೃಷಿ ಇಲಾಖೆ

1. ದೇವಪ್ಪ ನ್ಯಾಕ್, ರಾಮಣ್ಣ ನ್ಯಾಕರ ಮಗ, ಅಲೆಟ್ಟಿ
2. ರವಿಶಂಕರ್, ಗೋವಿಂದ ನ್ಯಾಕರ ಮಗ ಅಲೆಟ್ಟಿ
3. ಕರಿಯಪ್ಪ ನ್ಯಾಕ, ಶಿವ ನ್ಯಾಕರ ಮಗ, ಅಲೆಟ್ಟಿ
4. ಆರ್. ರಾಮಕ್ಕ, ಸುಬ್ಬ ನ್ಯಾಕರ ಪತ್ನಿ ಅಲೆಟ್ಟಿ
5. ಚಂದ್ರ ನ್ಯಾಕ ಚೆನ್ನಪ್ಪ ನ್ಯಾಕರ ಮಗ ಅಲೆಟ್ಟಿ
6. ಸರಸ್ವತಿ, ಚೋಮ ನ್ಯಾಕರ ಪತ್ನಿ ಅಲೆಟ್ಟಿ
7. ಆರ್.ದೇವಕಿ, ಪುರುಷೋತ್ತಮ ನ್ಯಾಕರ ಪತ್ನಿ , ಅಲೆಟ್ಟಿ
8. ಶೇಶಪ್ಪ, ನ್ಯಾಕಳ ದೇವಪ್ಪ ನ್ಯಾಕರ ಮಗ, ಅಲೆಟ್ಟಿ
9. ಆರ್. ರತ್ನಾಕರ, ಚೋಮಣ್ಣ ನ್ಯಾೌಕರ ಮಗ, ಅಲೆಟ್ಟಿ
10. ಆರ್. ಸರಸ್ವತಿ, ನಾರಾಯಣ ನ್ಯಾಕರ ಪತ್ನಿ ಅಲೆಟ್ಟಿ
11. ಲತಾ, ರಾಮಚಂದ್ರ ನ್ಯಾಕರ ಪತ್ನಿ ಅಲೆಟ್ಟಿ
12. ಲೋಕಯ್ಯ, ಪುಟ್ಟಣ ಮಲೆಕುಡಿಯನ ಮಗ, ಅರಂತೋಡು
13. ನಾರಾಯಣ ನ್ಯಾಕ ಐರತಪ್ಪ ನ್ಯಾಕರ ಮಗ, ಅರಂತೋಡು
14. ರಾಮ ನ್ಯಾಕ ಶಿವ ನ್ಯಾಕರ ಮಗ, ಅರಂತೋಡು
16. ರಾಮಣ್ಣನ್ಯಾಕ ಕೊರಗಪ್ಪ ನ್ಯಾಕರ ಮಗ ತೋಡಿಕಾನ
17. ಚೋಮಣ್ಣ ನ್ಯಾಕ ಕೊರಗ ನ್ಯಾಕರ ಮಗ, ತೋಡಿಕಾನ
18. ಶಿವಪ್ಪ ನ್ಯಾಕ ಮಂಜಣ್ಣ ನ್ಯಾಕರ ಮಗ, ಬಾಳಿಲ
19. ನಾರಾಯಣ ನ್ಯಾಕ ರಾಮ ನ್ಯಾಕರ ಮಗ ಬಾಳಲ
20. ದನಿಯಪ್ಪ ನ್ಯಾಕ, ಅಪ್ಪು ನ್ಯಾಕರ ಮಗ ಬಾಳಲ
21. ಕಮಲ, ಕಣ್ಣಪ್ಪ ನ್ಯಾಕರ ಪತ್ನಿ, ಬಾಳಿಲ
22. ಈಶ್ವರಪ್ಪ ನ್ಯಾಕ ಬಟ್ಯ ಮ್ಯಾಕರಮಗ ಮುಪ್ಪೇರಿಯ
23. ಕರ್ಗ ನ್ಯಾಕ, ಬನಿಯಪ್ಪ ಮ್ಯಾಗರ ಮಗ ಮುಕ್ಕೇರಿಯ
24. ಲಿಂಗಪ್ಪ ನ್ಯಾಕ ಬಟ್ಯ ನ್ಯಾಕ, ಮಕ್ಕೇರಿಯ
25. ನಾರಾಯಣ ನ್ಯಾಕ ಬಿನ್ ಕೊರಗ ನ್ಯಾಕ, ಮುಪ್ಪೇರಿಯ
26. ವೆಂಕಪ್ಪ ಬಿನ್ ಶೀನ್ ನ್ಯಾಕ ಬೆಳ್ಳಾರೆ
27. ಕೋಣಪ್ಪ ನ್ಯಾಕ ಬಿನ್ ನಾರಾಯಣ ನ್ಯಾಕ ಕಳಂಜ
29. ಪ್ರಭಾಕರ ನ್ಯಾಕ ಬಿನ್ ಸೋಮ ನ್ಯಾಕ ಕಳಂಜ
30. ಕೆ.ಎಸ್.ನಾರಾಯಣ ಬಿನ್ ಶೇಷಪ್ಪ ನ್ಯಾಕ, ಕಲ್ಮಂಜ
31. ಕೊರಗಪ್ಪ ನಾಕ್ ಬಿನ್ ಚೋಮ ನ್ಯಾಕ, ಕಲ್ಮಂಜ
32. ಹುಕ್ಕಪ್ಪ ಬಿನ್ ನಾರಾಯಣ ನ್ಯಾಕ, ಕಲ್ಮಂಜ
33. ನಿಲಮ್ಮ ಕೋಂ ಗಂಗು ನ್ಯಾಕ ಕಲ್ಮಂಜ
34. ವೆಂಕಪ್ಪ ನ್ಯಾಕ ಬಿನ್ ರಾಮ ಮ್ಯಾಕ ಕಲ್ಮಂಜ
36. ಕೆ. ಸೀತರಾಮ ನ್ಯಾಕ ಬಿನ್ ಬಾಬು ನ್ಯಾಕ ಕಲ್ಮಡ್ಕ

37. ಯು.ಸುಶೀಲ ಕೋಂ ಸಂಕಪ್ಪ ನ್ಯಾಕ್ ಕಲ್ಮಡ
38. ದಾಸಪ್ಪ ಕ್ಯಾಕ ಬಿನ್ ಸೇವಪ್ಪ ನ್ಯಾಕ ಕಲ್ಮಡ್ಕ
39. ಜಗನ್ನಾಥ ನ್ಯಾಕ ಬಿನ್ ಬಿ.ಶಿವಪ್ಪ, ಕಲ್ಮಡ್ಕ
40. ಭೀಮ ನ್ಯಾಕ ಬಿನ್ ಪುಟ್ಟ ಕಲ್ಮಡ್ಕ
41. ಚೆನ್ನಪ್ಪ ನ್ಯಾಕ ಬಿನ್ ಕೃಷ್ಣ ನ್ಯಾಕ ಕೊಡಿಯಾಲ
42. ಶೇಷಪ್ಪ ನ್ಯಾಕ ಬಿನ್ ರುಕ್ಮಯ್ಯ ನ್ಯಾಕ ಕೇನ್ಯ
43. ರುಕ್ಮಯ್ಯ ನ್ಯಾಕ ಬಿನ್ ಕರಿಯಣ್ಣ ನ್ಯಾಕ, ಕೇನ್ಯ
44. ಬಿ. ವೆಂಕಪ್ಪ ನ್ಯಾಕ ಬಿನ್ ಕೃಷ್ಣ ನ್ಯಾಕ, ಕುತ್ಕುಂಜ
45. ರಾಮ ನ್ಯಾಕ ಬಿನ್ ಈಶ್ವರ ನ್ಯಾಕ ಎಡಮಂಗಲ
46. ಪುಟ್ಟಣ್ಣ ನ್ಯಾಕ ಬಿನ್ ರಾಮ ನ್ಯಾಕ ಮುರುಳ್ಯ
47. ಕೃಷ್ಣಪ್ಪ ನ್ಯಾಕ ಬಿನ್ ಕೊರಗ ನ್ಯಾಕ ಮುರುಳ್ಯ
48. ಮೋನಪ್ಪ ನ್ಯಾಕ ಬಿನ್ ಶಿವಪ್ಪ ನ್ಯಾಕ ಮುರುಳ್ಯ

**ರೇಶ್ಮೆ ಇಲಾಖೆ**

1. ಗೋಪಾಲಕೃಷ್ಣ ನಾಯ್ಕ ಅಲೆಟ್ಟಿ
2. ಚಿನ್ನಪ್ಪ ನ್ಯಾಕ್ ಅಲೆಟ್ಟಿ
3. ಅಪ್ಪಣ್ಣ ನ್ಯಾಕ್, ಚೋಮನ ಮಗ, ಕಲ್ಮಡ್ಕ
4. ಬಟ್ಯ ನ್ಯಾಕ್ ಖಿದು ಕ್ಯಾಕರ ಮಗ ದೊಡ್ಡೇರಿ
5. ವೆಂಕಪ್ಪ ನ್ಯಾಕ್ ಚಿನ್ನಪ್ಪ ನ್ಯಾಕರ ಮಗ, ಬಡ್ಯಡ್ಕ
6. ದೇವರಾಜ ಕುಂಜ ನ್ಯಾಕರ ಮಗ ಅಶೆಟ್ಟಿ
7. ರಮೇಶ ಅಪ್ಪಣ್ಣ ನ್ಯಾಕರ ಮಗ ಮುಂದೆಕೋಲು
8. ಚನ್ನಪ್ಪ ನ್ಯಾಕ್ ಸುಬ್ಬ ನ್ಯಾಕರ ಮಗ ಅಶೆಟ್ಟಿ
1. ಲಿಂಗಪ್ಪ ನ್ಯಾಕ್,ಕುಂಞ ನ್ಯಾಕರ ಮಗ ಅಶೆಟ್ಟಿ
2. ವಿನೋದ್‌ಕುಮಾರ್ ಗೋಪಾಲ ಕೃಷ್ಣ ನ್ಯಾಕರ ಮಗ ಅಲೆಟ್ಟಿ
3. ಧನಂಜಯ ನ್ಯಾಕ್, ಬಾಬು ನ್ಯಾಕರ ಮಗ ದೊಡ್ಡೇರಿ
4. ಕೃಷ್ಣ ನ್ಯಾಕ್ ಬಟ್ಯ ನ್ಯಾಕರ ಮಗ
5. ಬಾಬು ನ್ಯಾಕ್ ಕಾಂತು ನ್ಯಾಕರ ಮಗ ದೊಡ್ಡೇರಿ
6. ವಾಸು ನ್ಯಾಕ್ ನಾರಾಯಣ ನ್ಯಾಕರ ಮಗ ದೊಡ್ಡೇರಿ
7. ನಾಣು ನ್ಯಾಕ್, ಜಾನು ನ್ಯಾಕರ ಮಗ, ಪಂಚಿತ್ತಾರಿ
8. ಲಿಂಗಪ್ಪ ನ್ಯಾಕ್, ವೆಂಕಟ್ರಮಣ ಕುತ್ಕುಂಜ
9. ಪರಮೇಶ್ವರ ಕರಿಯಪ್ಪನವರ ಮಗ ಎನೇಕಲ್
10. ನೀಲಮ್ಮ ಕೋಂ ಲಿಂಗಪ್ಪ ನ್ಯಾಕ್ ಬಾಳಿಲ

**ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಮುಖಾಂತರ**

1. ಬಟ್ಯಾ ನ್ಯಾಕ್, ಐತು ನ್ಯಾಕರ ಅಜ್ಜಾಪುರ
2. ಚಿನ್ನಪ್ಪ, ಸುಬ್ಬಾ ನ್ಯಾಕರ ಮಗ, ಅಲೆಟ್ಟಿ
3. ಲಿಂಗಪ್ಪ ನ್ಯಾಕ್ ಕುಂಜನ್ಯಾಕರ ಮಗ ಅಲೆಟ್ಟಿ

**ಪಶುಸಂಗೋಪನೆ :**

1. ನಾರಾಯಣ ನ್ಯಾಕ ಬಿನ್ ರಾಮ ನ್ಯಾಕ ಬಾಳಿಲ
2. ಕೆ.ಎಸ್. ನಾರಾಯಣ ಬಿನ್ ಕೆ. ಶೇಷಪ್ಪನ್ಯಾಕ ಕಳಂಜ
3. ಕೊರಗಪ್ಪ ನ್ಯಾಕ ಬಿನ್ ರಾಮ ನ್ಯಾಕ, ಕಳಂಜ
4. ಚನಿಯಪ್ಪ ನ್ಯಾಕ ಬಿನ್ ಅಪ್ಪು ನ್ಯಾಕ ಬಾಳಿಲ
5. ಕೃಷ್ಣ ನ್ಯಾಕ ಬಿನ್ ನಾರ್ಣ ನಾಯ್ಕ ಕಳಂಜ
6. ಕಮಲ ಕೋಂ ಕೃಷ್ಣಪ್ಪ ನಾಯ್ಕ, ಬಾಳಿಲ
7. ದಾಸಪ್ಪ ನಾಯ್ಕ ಬಿನ್ ಸೇಸಪ್ಪ ನಾಯ್ಕ, ಕಲ್ಮಡ್ಕ
8. ಜಗನ್ನಾಥನಾಯ್ಕ ಬಿನ್ ಬಿ ಶಿವಪ್ಪನಾಯ್ಕ
9. ಕೆ. ಭಿಮನಾಯ್ಕ ಬಿನ್ ಪುಟ್ಟನಾಯ್ಕ, ಕಲ್ಮಡ್ಕ
10. ಸುಂದರನಾಯ್ಕ ಬಿನ್ ಶೇಷಪ್ಪನಾಯ್ಕ ಪಂಬೆತ್ತಾದಿ
11. ಮಾಲಿಂಗ ನಾಯ್ಕ ಬಿನ್ ಸುಬ್ಬನಾಯ್ಕ ಪಂಬೆತ್ತಾದಿ
12. ಚಂದ್ರಾವತಿ ಕೋ ವೆಂಕಪ್ಪನಾಯ್ಕ, ಪಂಬೆತ್ತಾಡಿ
13. ಜೋಮಣ್ಣ ನಾಯ್ಕ ಬಿನ್ ದೇವಯ್ಯನಾಯ್ಕ ಪಂಬೆತ್ತಾಡಿ
14. ಸೋಮಪ್ಪ ನಾಯ್ಕ ಬಿನ್ ಐತ್ತಪ್ಪ ನಾಯ್ಕ ಬಡ್ಡಡ್ಕ ಕಲ್ಮಡ್ಕ
15. ಈಶ್ವರ ನಾಯ್ಕ ಬಿನ್ ನಾರಾಯಣನಾಯ್ಕ ಅಲೆಟ್ಟಿ
16. ಅರ್. ಜಯರಾಮನಾಯ್ಕ ಬಿನ್ ಜೋಮಣ್ಣ ನಾಯ್ಕ, ಅಲೆಟ್ಟಿ
17. ಟಿ. ನಾರಾಯಣ ಬಿನ್ ಟಿ. ಐತ್ತು ನಾಯ್ಕ, ಅಲೆಟ್ಟಿ
18. ಅರ್. ಜಗನ್ನಾಥನಾಯ್ಕ ಬಿನ್ ಲೋಕಯ್ಯ ನಾಯ್ಕ ಅಲೆಟ್ಟಿ
19. ಚೆನ್ನಪ್ಪ ಬಿನ್ ಕೃಷ್ಣನಾಯ್ಕ, ಕಲ್ಮಡ್ಕ
20. ನೀಲಮ್ಮ ಕೋಂ ಗಂಗುನಾಯ್ಕ ಕಲ್ಮಡ್ಕ
21. ಕೆ. ವೆಂಕಪ್ಪನಾಯ್ಕ ಬಿನ್ ಮ್ಯಾಲನಾಯ್ಕ ಕಲ್ಮಡ್ಕ
22. ಜೆ. ಕೊರಗಪ್ಪ ನಾಯ್ಕ ಬಿನ್ ರಾಮನಾಯ್ಕ ಕಲ್ಮಡ್ಕ
23. ಕೆ. ಸೀತಾರಾಮ ನಾಯ್ಕ ಬಿನ್ ಬಾಬುನಾಯ್ಕ ಕಲ್ಮಡ್ಕ
24. ಯಂ ಸುಶೀಲ ಕೋಂ ಸಂಕಪ್ಪನಾಯ್ಕ, ಕಲ್ಮಡ್ಕ
25. ದೇವಪ್ಪನಾಯ್ಕ ಬಿನ್ ಕುಟ್ಟಿ ಯಾನ ರಾಮಣ್ಣನಾಯ್ಕ, ಅಲೆಟ್ಟಿ
26. ರವಿಶಂಕರ್ ಬಿನ್ ಗೋವಿಂದ ಸಾಯ್ಕ ಅಲೆಟ್ಟಿ
27. ವೆಂಕಪ ಬಿನ್ ಸೀನನಾಯ್ಕ, ಬೆಳ್ಳಾರೆ
28. ಶಿವಪ್ಪ ನಾಯ್ಕ ಬಿನ್ ಮಂಜಣ್ಣನಾಯ್ಕ, ಬಾಳಿಲ
29. ಕೊನಪ್ಪ ನಾಯ್ಕ ಬಿನ್ ನಾರ್ಣ ನಾಯ್ಕ ಕಳಂಜ
30. ಮಾಧವನಾಯ್ಕ ಬಿನ್ ನಾರ್ಣ ನಾಯ್ಕ, ಕಳಂಜ
31. ಪ್ರಭಾಕರ ನಾಯ್ಕ ಬಿನ್ ಬೋಮನಾಯ್ಕ ಕಳಂಜ
32. ಎ. ರಾಮ ನಾಯ್ಕ ಬಿನ್ ಈಶ್ವರನಾಯ್ಕ, ಎಡಮಂಗಲ
33. ಈಶ್ವರನಾಯ್ಕ ಬಿನ್ ಬಟ್ಯ ನಾಯ್ಕ, ಮುಪ್ಪೇರಿಯ

34. ಕೊರಗನಾಯ್ಕ ಬಿನ್ ಚೆನಿಯಪ್ಪ ನಾಯ್ಕ ಮುಪ್ಪೇರಿಯ
35. ಲಿಂಗಪ್ಪನಾಯ್ಕ ಬಿನ್ ಬಟ್ಯನಾಯ್ಕ, ಮುಪ್ಪೇರಿಯ
36. ನಾರಾಯಣ ನಾಯ್ಕ ಬಿನ್ ಕೊರಗ ನಾಯ್ಕ, ಮುಪ್ಪೇರಿಯ
37. ಪುಟ್ಟಣ್ಣ ನಾಯ್ಕ ಬಿನ್ ರಾಮಣ್ಣ ನಾಯ್ಕ ಮುಪ್ಪೇರಿಯ
38. ಕೃಷ್ಣಪ್ಪನಾಯ್ಕ ಬಿನ್ ರಾಮಣ್ಣ ನಾಯ್ಕ ಮುರುಳ್ಯ
39. ಕೃಷ್ಣಪ್ಪ ನಾಯ್ಕ ಬಿನ್ ಕೊರಗನಾಯ್ಕ, ಮುರುಳ್ಯ
40. ಮೋನಪ್ಪ ನಾಯ್ಕ ಬಿನ್ ಶಿವಪ್ಪ ನಾಯ್ಕ, ಮುರುಳ್ಯ
41. ಶೇಷಪ್ಪ ನಾಯ್ಕ ಬಿನ್ ರುಕ್ಮಯ್ಯ ನಾಯ್ಕ, ಕೇಣ್ಯ
42. ರುಕ್ಮಯ್ಯ ನಾಯ್ಕ ಬಿನ್ ಕರಿಯ ನಾಯ್ಕ ಕೇಣ್ಯ
43. ಕೆ. ವೆಂಕಪ್ಪ ನಾಯ್ಕ ಬಿನ್ ಕೃಷ್ಣನಾಯ್ಕ, ಕುತ್ಕುಂಜ
44. ಲೋಕಯ್ಯ ಬಿನ್ ಪುಟ್ಟಣ್ಣ ಮಲೆಕುಡಿಯ ಅರಂತೋಡು
45. ನಾರಾಯಣ ನಾಯ್ಕ ಬಿನ್ ಐತ್ತಪ್ಪ ನಾಯ್ಕ ಅರಂತೋಡು
46. ರಾಮನಾಯ್ಕ ಬಿನ್ ಶಿವ ನಾಯ್ಕ, ಅರಂತೋಡು
47. ಕಾರ್ಯಪ್ಪ ನಾಯ್ಕ ಬಿನ್ ಐತ್ತು ನಾಯ್ಕ, ಅಲೆಟ್ಟಿ
48. ಆರ್. ರಾಮಕ್ಕ ಕೋಂ ಡಿ.ಆರ್. ಸುಬ್ಬನಾಯ್ಕ, ಅಲೆಟ್ಟಿ
50 ಚಂದ್ರನಾಯ್ಕ ಬಿನ್ ಚೆನ್ನಪ್ಪ ನಾಯ್ಕ ಅಲೆಟ್ಟಿ
51. ಆರ್. ದೇವಕಿ ಕೋಂ ಆರ್. ಪುರುಷೋತ್ತಮ ನಾಯ್ಕ ಅಲೆಟ್ಟಿ
52. ಆರ್. ಶೇಷಪ್ಪ ನಾಯ್ಕ ಬಿನ್ ಆರ್. ದೇವಪ್ಪ ನಾಯ್ಕ, ಅಲೆಟ್ಟಿ
53. ಆರ್. ರತ್ನಾಕರ ಬಿನ್ ಆರ್. ಜೋಮಣ್ಣನಾಯ್ಕ ಅಲೆಟ್ಟಿ
54. ಆರ್. ಸರಸ್ವತಿ ಕೋಂ ಆರ್ ನಾರಾಯಣ ನಾಯ್ಕ ಅಲೆಟ್ಟಿ
55. ಲತಾ ಆರ್ ನಾಯ್ಕ ಕೋಂ ರಾಮಚಂದ್ರ ನಾಯ್ಕ, ಅಲೆಟ್ಟಿ
56. ರಾಮಣ್ಣ ನಾಯ್ಕ ಬಿನ್ ಕೊರಗಪ್ಪ ನಾಯ್ಕ, ತೋಡಿಕಾನ
57. ಜೋಮಣ್ಣ ನಾಯ್ಕ ಬಿನ್ ಕೊರಗ ನಾಯ್ಕ, ತೋಡಿಕಾನ
58. ವೆಂಕಪ್ಪ ನಾಯ್ಕ ಬಿನ್ ಮರ್ತು ನಾಯ್ಕ ತೋಡಿಕಾನ
59. ರಾಮಚಂದ್ರ ನಾಯ್ಕ ಬಿನ್ ಪೂವಯ್ಯ ನಾಯ್ಕ, ತೋಡಿಕಾನ
60. ಬಾಲಕೃಷ್ಣ ಬಿನ್ ದೇವಯ್ಯ ನಾಯ್ಕ ತೋಡಿಕಾನ
61. ಎನ್. ಗೋಪಾಲಕೃಷ್ಣ ಬಿನ್ ಚನಿಯಪ್ಪ ನಾಯ್ಕ ತೋಡಿಕನಾ
62. ರಾಮಣ್ಣನಾಯ್ಕ ಬಿನ್ ದೇವಯ್ಯ ನಾಯ್ಕ ತೋಡಿಕಾನ
63. ಮಾಯಿಲಪ್ಪ ನಾಯ್ಕ ಬಿನ್ ಕೊರಪ್ಪ ನಾಯ್ಕ ತೋಡಿಕಾನ
64. ಕೃಷ್ಣ ನಾಯ್ಕ ಬಿನ್ ಅಣ್ಣು ನಾಯ್ಕ ತೋಡಿಕಾನ
65. ಶ್ರೀಮತಿ, ಸುಜನ ಕೋಂ ಅಂತೋನಿ ಕೊರಗ, ಐವತ್ತೊಕ್ಲು
66. ಶ್ರೀ. ಮಾರಿ ಕೋಂ ಐತ್ತ ಕೊರಗ,
67. ಶ್ರೀಮತಿ ಕಾತಿನ ಕೋಂ ಕವಿಕೊರಗ, ಐವತ್ತೊಕ್ಲು
68. ಸೆವೆರಿನ್ ಕೋಂ ಮರಿಯನ ಕೊರಗ, ಐವತ್ತೊಕ್ಲು
69. ಬೆಲ್ಲಾರ್ ಕೊರಗ ಬಿನ್ ಸೋಮಕೊರಗ, ಐವತ್ತೊಕ್ಲು

70. ಶ್ರೀಮತಿ : ಶರಮನ ಕೋಂ ಇನಾಸ್ ಕೊರಗ, ಐವತ್ತೊಕ್ಲು
71. ಶ್ರೀಮತಿ : ನಿರ್ಮಲ ಕೋಂ ಚಣ್ಯ ಕೊರಗ, ಐವತ್ತೊಕ್ಲು
72. ಸೆವೆರಿನ್ ಕೋಂ ಮಾಂಕು ಕೊರಗ, ಐವತ್ತೊಳ್ಳು
73. ಶ್ರೀಮತಿ ಶಾಂತಿ ಕೊರಗ, ಪರಬೇನ್ ಕೊರಗ ಐವತ್ತೊಕ್ಲು
74. ಮಾಂಕು ಕೊರಗ ಬಿನ್ ಬಟ್ಯ ಕೊರಗ, ಮಡಪ್ಪಾಡಿ
75. ಬೊಗ ಕೊರಗ ಬಿನ್ ಐತ್ತ ಕೊರಗ, ಮಡಪ್ಪಾಡಿ
76. ತನಿಯ ಕೊರಗ ಬಿನ್ ಐತ್ತ ಕೊರಗ, ಮಡಪ್ಪಾಡಿ
77. ತನಿಯ ಕೊರಗ ಬಿನ್ ಮೂಂಕು ಕೊರಗ, ಮಡಪ್ಪಾಡಿ
78. ಬಾಬು ಕೊರಗ ಬಿನ್ ಮುತ್ತಾಡಿ ಕೊರಗ ಅಮರಮೂಡ್ನೂರು
79. ಬಾಬು.ಐ. ಬಿನ್ ಬಟ್ಯ ಕೊರಗ, ಅಮರಮುಡ್ನೂರು

**ಅರಣ್ಯ ಇಲಾಖೆ**

1. ಬಾಲಕೃಷ್ಣ ನಾಯ್ಕ ಬಿನ್ ಐತ್ತಪ್ಪ ನಾಯ್ಕ ಅಜ್ಜಾವರ
2. ದೊಡ್ಡಣ್ಣ ನಾಯ್ಕ ಬಿನ್ ಅಪ್ಪಯ್ಯ ಕುತ್ಕುಂಜ
3. ಮುದಿಲಬಿನ್ ಕುಂಡ, ಐವರ್ನಾಡು
4. ಬಾಬು ನ್ಯಾಕ ಬಿನ್ ಶಿವಪ್ಪ ನ್ಯಾಕ, ಜಾಲ್ಸೂರು
5. ಪಕೀರ ನ್ಯಾಕ ಬಿನ್ ಐತು ನ್ಯಾಕ, ಕನಕಮಜಲು
6. ಲಕ್ಷ್ಮಣ ನಾಯ್ಕ ಬಿನ್ ಸುಬ್ಬನಾಯ್ಕ, ಐವರ್ನಾಡು
7. ಬಾಬು ಕೊರಗ ಬಿನ್ ಬಟ್ಯ ಕೊರಗ, ಅಮರುಮುಡ್ನೂರು
8. ಶ್ರೀಮತಿ ಲಲಿತ ಕೊರಗ ಕೋಂ ಬಾಬು ಕೊರಗ
9. ಮತ್ತಡಿ ಕೊರಗ ಬಿನ್ ಬಟ್ಯ ಕೊರಗ, ಅಮರಪಡ್ಮೂರು
10. ಕೃಷ್ಣಪ್ಪ ನ್ಯಾಕ ರಬಿನ್ ಐತ್ತಪ್ಪ ನ್ಯಾಕ, ಅಜ್ಜಾವರ
11. ಕೃಷ್ಣಪ್ಪ ನ್ಯಾಕ ಬಿನ್ ಬಟ್ಯ ನಾಯ್ಕ, ಅಜ್ಜಾವರ
12. ಡಿ. ಶಿವಪ್ಪ ನ್ಯಾಕ ಬಿನ್ ಟಬ್ಯ ನ್ಯಾಕ, ಅಜ್ಜಾವರ
13. ಡಿ. ಶಿವರಾಮ ಬಿನ್ ಕೃಷ್ಣಪ್ಪ ನ್ಯಾಕ, ಅಜ್ಜಾವರ
14. ಬಿ. ಐತ್ತಪ್ಪ ಬಿನ್ ಕೃಷ್ಣ ನ್ಯಾಕ, ಅಜ್ಜಾವರ
15. डि. ಜಾನಕಿ ಕೋಂ ಚನಿಯ ನ್ಯಾಕ, ಅಜ್ಜಾವರ
16. ಶ್ರೀಮತಿ, ಲಲಿತ ಕೋಂ ನಾರಾಯಣ ನ್ಯಾಕ
17. ಎಸ್. ಗೋಪಾಲ ಬಿನ್ ವೆಂಕಪ್ಪ ನ್ಯಾಕ
18. ಎಸ್. ಜಗದೀಶ ಬಿನ್ ಲಕ್ಷ್ಮಣ ನ್ಯಾಕ, ಐವರ್ನಾಡು
19. ಕೆ. ಚಂದ್ರಶೇಖರ ಬಿನ್ ವೆಂಕಪ್ಪ ನ್ಯಾಕ, ಐವರ್ನಾಡು

**ಸಮಾಜ ಕಲ್ಯಾಣ ಇಲಾಖೆ**

1. ರಾಮಚಂದ್ರ ಬಿನ್ ಮತ್ತಡಿ, ನಾರ್ಣಕಜೆ ಕೊರಗ ಕಾಲನಿ
2. ಬಾಬು ಬಿನ್ ಬಟ್ಯ ಕೊರಗ. ಕುಕ್ಕುಜಡ್ಕ ಕೊರಗ ಕಾಲನಿ

3. ಮತ್ತಾಡಿ ಕೊರಗ ಬಿನ್ ಬಟ್ಯ ಕೊರಗ, ಕುಕ್ಕುಜಡ್ಕ
4. ಮಾಂಕು ಕೊರಗ ಬಿನ್ ಬಟ್ಯ ಕೊರಗ, ಮಡಪ್ಪಾಡಿ
5. ಜೋಗ ಬಿನ್ ಅತ್ತ ಕೊರಗ, ಮಡಪ್ಪಾಡಿ ಕೊರಗ ಕಾಲನಿ

- - -

16. ಮಂದಿ ಕೊರಗ ವಿದ್ಯಾರ್ಥಿಗಳಿಗೆ ಹಾಗೂ ಹೆತ್ತವರಿಗೆ ಪ್ರೋತ್ಸಾಹ ಧನ
1. ವೆಂಕಪ್ಪ ನ್ಯಾಕ ಬಿನ್ ಕೊರಗ ನ್ಯಾಕ, ತಿಮ್ಮಣಮೂಲೆ, ಅಲೆಟ್ಟಿ
2. ನಾರಾಯಣ ನ್ಯಾಕ ಬಿನ್ ಚೋಮ ನ್ಯಾಕ, ಸೇನಾಜೆ, ದೇವಚಳ್ಳ,

- - -

1. ಆಶ್ರಮ ಶಾಲೆ, ಸುಬ್ರಹ್ಮಣ್ಯ
1. ಕುಕ್ಕು ಜಡ್ಕ ಕೊರಗ ಕಾಲನಿ
2. ಅಲೆಟ್ಟಿಗ್ರಾಮದ ಕಟ್ಟೆಕಲ
3. ಸಂಪಾಜೆ ಗ್ರಾಮದ ರಾಗಿಕುಮೇರಿ

- - -

1. ಎಡಮಂಗಲ ಗ್ರಾಮದ ದಡ್ಡು ಎಂಬಲ್ಲಿ ನಿರ್ಮಿಸಿದ ಕಿಂಡಿ ಅಣೆಕಟ್ಟಿನ ಕಾಮಗಾರಿಯನ್ನು ಸಂಪೂರ್ಣಗೊಳಿಸುವುದು.
2. ತೆಂಡೆ ದಾಂತಾರು ದಡ್ಡಲಡ್ಕ ಗಿರಿಜನ ಕಾಲನಿ ಕೂಡು ರಸ್ತೆ ಕಾಮಗಾರಿಯನ್ನು ಪೂರ್ಣಗೊಳಿಸಲು
3. ಅಜ್ಜಾವರ ಕುಡುಂಬಿ ಪೆರ್ಲಪಾಡಿ ಕಾಲನಿ ರಸ್ತೆ ಡಾಮರೀಕರಣ

**ಭೂ ಸಾರ ಸಂರಕ್ಷಣೆ**

1. ಜಾಲ್ಸೂರು ಪ. ವರ್ಗದ ಕಾಲನಿಯಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ
2. ಎಣ್ಮೂಕಜೆ ಪ.ವರ್ಗದ ಕಾಲನಿಯಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ

**ಗ್ರಾಮೀಣ ಆರೋಗ್ಯ**

1. ಗಿರಿಜನ ಸಂಚಾರಿ ಆರೋಗ್ಯ ಘಟಕ ಸುಳ್ಯ - ಔಷಧಿ ಒದಗಣೆ.

- - -

**ವಿಷಯ : ವಿರಾಜಪೇಟೆ ತಾಲ್ಲೂಕಿನಲ್ಲಿ ಉಚಿತ ನಿವೇಶನಗಳ ಹಂಚಿಕೆ.**

ಚುಕ್ಕೆ ಗುರ್ತಿಲ್ಲದ ಪ್ರಶ್ನೆ ಸಂಖ್ಯೆ 778 (1179)

ಶ್ರೀ. ಹೆಚ್.ಡಿ. ಬಸವರಾಜು (ವಿರಾಜಪೇಟೆ) : ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ವಿರಾಜಪೇಟೆ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ಎಷ್ಟು ಮಂದಿಗೆ ಉಚಿತ ಮನೆ ಮತ್ತು ನಿವೇಶನವನ್ನು ನೀಡಿರುತ್ತಾರೆ ಹಾಗೂ ಇನ್ನೂ ಎಷ್ಟು ಮಂದಿ ನಿರೀಕ್ಷಿಸುತ್ತಿದ್ದಾರೆ (ವಿವರಗಳನ್ನೊದಗಿಸುವುದು)

ಆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಎಷ್ಟು ಕಾಲೋನಿಗೆ ಸಂಪೂರ್ಣ ವಿದ್ಯುಚ್ಛಕ್ತಿ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಮತ್ತು ಸರಿಯಾದ ರಸ್ತೆ ವ್ಯವಸ್ಥೆ ಮಾಡಿರುತ್ತಾರೆ, ಅವುಗಳ ವಿವರ ಮತ್ತು ಇನ್ನೂ ಎಷ್ಟು ಕಾಲೋನಿಗಳಿಗೆ ಈ ಮೇಲಿನ ವ್ಯವಸ್ಥೆ ಮಾಡಬೇಕಾಗಿದೆ ?

ಶ್ರೀ ರಮೇಶ್ ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು):

ಅ. ವಿರಾಜಪೇಟೆ ತಾಲ್ಲೂಕಿನಲ್ಲಿ 386 ಪರಿಶಿಷ್ಟ ಜಾತಿ ಮತ್ತು 657 ಪರಿಶಿಷ್ಟ ವರ್ಗದವರಿಗೆ ಉಚಿತ ನಿವೇಶನ ನೀಡಲಾಗಿದ್ದು, ಇನ್ನು 61 ಜನರಿಗೆ ಮಾತ್ರ ಬಾಕಿ ಇರುತ್ತದೆ.

ಪರಿಶಿಷ್ಟ ಜಾತಿ : ವರ್ಗದವರಿಗೆ 889 ಉಚಿತ ಮನೆಗಳನ್ನು ನೀಡಲಾಗಿದೆ ಹಾಗೂ 600 ಮನೆಗಳ ಅವಶ್ಯಕತೆ ಇದೆ.

ಆ. ವಿರಾಜಪೇಟೆ ತಾಲ್ಲೂಕಿನಲ್ಲಿ 18 ಪರಿಶಿಷ್ಟ ಜಾತಿ ಮತ್ತು 29 ಪರಿಶಿಷ್ಟ ವರ್ಗದವರ ಕಾಲೊನಿಗಳಿಗೆ ವಿದ್ಯುಚ್ಛಕ್ತಿ ಒದಗಿಸಿದ್ದು, ಇನ್ನೂ 38 ಪರಿಶಿಷ್ಟ ಜಾತಿ ಮತ್ತು 37 ಪರಿಶಿಷ್ಟ ವರ್ಗದವರ ಕಾಲೋನಿಗಳಿಗೆ ವಿದ್ಯುಚ್ಛಕ್ತಿ ಒದಗಿಸಬೇಕಾಗಿದೆ.

109 ಪರಿಶಿಷ್ಟ ಜಾತಿಯ ಕಾಲೋನಿಗಳಿಗೆ ಹಾಗೂ 126 ಪರಿಶಿಷ್ಟ ವರ್ಗದವರ ಕಾಲೋನಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿದೆ. ಇನ್ನೂ 8 ಪರಿಶಿಷ್ಟ ಜಾತಿ 'ಪರಿಶಿಷ್ಟ ವರ್ಗದ ಕಾಲೋನಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕಾಗಿದೆ.

17 ಪರಿಶಿಷ್ಟ ಜಾತಿಯ ಮತ್ತು 24 ಪರಿಶಿಷ್ಟ ವರ್ಗದ ಕಾಲೊನಿಗಳಿಗೆ ರಸ್ತೆ ವ್ಯವಸ್ಥೆ ಮಾಡಲಾಗಿದೆ. ಇನ್ನೂ 15 ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದ ಕಾಲೋನಿಗಳಿಗೆ ರಸ್ತೆ ವ್ಯವಸ್ಥೆ ಮಾಡಬೇಕಾಗಿದೆ.

**ವಿಷಯ : ಶಿವಮೊಗ್ಗದ ಕುವೆಂಪು ರಂಗಮಂದಿರಕ್ಕೆ ಬಿಡುಗಡೆಯಾದ ಹಣದ ಕುರಿತು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ ; 779 (750)

ಶ್ರೀ ಕೆ. ಎಸ್. ಈಶ್ವರಪ್ಪ (ಶಿವಮೊಗ್ಗ)

ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

1. ಶಿವಮೊಗ್ಗದ ಕುವೆಂಪು ರಂಗಮಂದಿರ ಪ್ರಾರಂಭಿಸಲು 15.00 ಲಕ್ಷರೂಗಳನ್ನು ಸರ್ಕಾರ ಮಂಜೂರು ಮಾಡಿರುವುದು ನಿಜವೇ ?

2. ಹಾಗಿದ್ದಲ್ಲಿ ಈ ಹಣವನ್ನು ಬಿಡುಗಡೆ ಮಾಡಲಾಗಿದೆಯೇ ? ಮತ್ತು ಇಲ್ಲದಿದ್ದಲ್ಲಿ ಇದಕ್ಕೆ ಕಾರಣವೇನು ?

ಶ್ರೀಮತಿ ಬಿ.ಟಿ. ಲಲಿತಾನಾಯಕ್ (ಕನ್ನಡ ಮತ್ತು ಸಂಸ್ಕೃತಿ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು):

1. ನಿಜ
2. ಬಿಡುಗಡೆ ಮಾಡಲಾಗಿದೆ.

**ವಿಷಯ : ಪುತ್ತೂರು ಪುರಸಭೆಯ ಪುರಭವನ ನಿರ್ಮಾಣ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 780 (976)

ಶ್ರೀ ಡಿ. ವಿ. ಸದಾನಂದಗೌಡ, (ಪೂತ್ತೂರು) : ಮಾನ್ಯ ನಗರಾಭಿವೃದ್ಧಿ ಮತ್ತು ಕಾಡಾ ಮತ್ತು ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕಿನ ಪುತ್ತೂರು ಪುರಸಭೆಯ ಪುರಭವನ ನಿರ್ಮಾಣಕ್ಕೆ ಸಹಾಯಧನ ನೀಡಲು ಸರ್ಕಾರ ಒಪ್ಪಿರುವುದು ನಿಜವೇ ?

ಆ. ಹಾಗಿದ್ದಲ್ಲಿ ನೀಡಲು ಉದ್ದೇಶಿಸಿರುವ ಮೊತ್ತವೆಷ್ಟು ?

ಇ. ಈ ಸಹಾಯ ಧನವನ್ನು ಇದುವರೆಗೂ ಕೊಡದಿರಲು ಕಾರಣವೇನು ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು):

ಅ. ಇಲ್ಲ.
ಆ. ಉದ್ಭವಿಸುವುದಿಲ್ಲ.
ಇ. ಉದ್ಭವಿಸುವುದಿಲ್ಲ.

**ವಿಷಯ : ತರೀಕೆರೆ ಪಟ್ಟಣಕ್ಕೆ ಕುಡಿಯುವ ನೀರಿನ ಯೋಜನೆ ಕೆಲಸ ಪ್ರಾರಂಭಿಸುವ ಬಗ್ಗೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 781 (871)

ಶ್ರೀ. ಎಸ್ ಎಂ. ನಾಗರಾಜು (ತರೀಕೆರೆ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ತರೀಕೆರೆ ಪಟ್ಟಣದಲ್ಲಿ 3ನೇ ಹಂತದ ಕುಡಿಯುವ ನೀರಿನ ಯೋಜನೆಯ ಕೆಲಸವನ್ನು ಯಾವಾಗ ಪ್ರಾರಂಭಿಸಲಾಗುವುದು ಹಾಗೂ ಎಷ್ಟು ತಿಂಗಳಲ್ಲಿ ಯೋಜನೆಯ ಅನುಷ್ಠಾನಗೊಳ್ಳುವುದು ?

ಆ. ತರೀಕೆರೆ ಪಟ್ಟಣದಲ್ಲಿ ಕುಡಿಯುವ ನೀರಿನ ತೊಂದರೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ ?

ಇ. ಬಂದಿದ್ದರೆ ಸರ್ಕಾರ ಕೈಗೊಂಡಿರುವ ಕ್ರಮವೇನು ?

ಶ್ರೀ. ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ. ಪುರಸಭೆಯ ಯೋಜನೆಯ 1/3 ಭಾಗವನ್ನು ಪಾವತಿ ಮಾಡಿದ ನಂತರ ಹಾಗೂ ಹುಡ್ಕೋ ಸಂಸ್ಥೆಯು ಸಾಲವನ್ನು ನೀಡಿದ ನಂತರ, ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಗುವುದು.

ಆ. ಹೌದು

ಇ. ಬರಪರಿಹಾರ ಯೋಜನೆಯಡಿಯಲ್ಲಿ ಕೊಳವೆ ಬಾವಿಗಳನ್ನು ಕೊರೆಯಲು ಕ್ರಮ ಕೈಗೊಳ್ಳಲಾಗಿದೆ.

**ವಿಷಯ : ಮಾಗಡಿ ಪಟ್ಟಣಕ್ಕೆ ನೀರು ಸರಬರಾಜು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 783 (1162)

ಶ್ರೀ ಹೆಚ್. ಸಿ. ಬಾಲಕೃಷ್ಣ (ಮಾಗಡಿ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಮಾಗಡಿ ಪಟ್ಟಣಕ್ಕೆ ಕುಡಿಯುವುದಕ್ಕಾಗಿ ಮಂಚನಬೆಲೆ ಜಲಾಶಯದಿಂದ ನೀರೊದಗಿಸುವ ಕಾರ್ಯಕ್ಕಾಗಿ ಮಂಜೂರಾಗಿರುವ ಮೊತ್ತವೆಷ್ಟು ?

ಆ. ಇದುವರೆವಿಗೂ ಖರ್ಚಾಗಿರುವ ಮೊತ್ತವೆಷ್ಟು ?

ಇ. ಈ ಯೋಜನೆಯ ಕಾಮಗಾರಿ ನಿಧಾನವಾಗಿ ನಡೆಯುತಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ ?

ಈ. ಈ ಯೋಜನೆಯನ್ನು ಬೇಗನೆ ಕಾರ್ಯಗತಗೊಳಿಸಿ ಮಾಗಡಿ ಪಟ್ಟಣದ ಜನತೆಗೆ ಕುಡಿಯುವ ನೀರನ್ನು ಒದಗಿಸಲು ಸರ್ಕಾರ ಕೂಡಲೇ ಕ್ರಮ ಕೈಗೊಳ್ಳುವುದೇ? ತಿಳಿಸುವಿರಾ ?

ಶ್ರೀ. ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು):

ಅ. ರೂ. 250.00 ಲಕ್ಷಗಳು

ಆ. ರೂ. 14.07

ಇ. ಬಂದಿದೆ, ನೀರಾವರಿ ಇಲಾಖೆಯು ಮಂಚನಬೆಲೆ ಜಲಾಶಯದ ನೀರನ್ನು ಮಾಗಡಿ ಪಟ್ಟಣಕ್ಕೆ ಮತ್ತು ರಾಮನಗರ ಪಟ್ಟಣಕ್ಕೆ ಸರಬರಾಜು ಮಾಡಲು ಕಷ್ಟಕರವೆಂದು ತಿಳಿಸಿರುವುದರಿಂದ ಹಾಗೂ ಮೂಲಸ್ಥಾವರ ಕಾಮಗಾರಿಗಳಿಗೆ ಇನ್ನೂ ಅನುಮೋದನೆ ನೀಡಿಲ್ಲವಾದ್ದರಿಂದ ಈ ಯೋಜನೆಯ ಕಾಮಗಾರಿಗಳನ್ನು ಕಾರ್ಯಗತಗೊಳಿಸುವಲ್ಲಿ ವಿಳಂಬವಾಗಿದೆ.

ಈ. ಮೂಲಸ್ಥಾವರ ಕಾಮಗಾರಿಗಳಿಗೆ ನೀರಾವರಿ ಇಲಾಖೆಯವರಿಂದ ಅನುಮತಿ ದೊರೆತ ನಂತರ ಈ ಯೋಜನೆಯ ಕಾಮಗಾರಿಗಳನ್ನು ತ್ವರಿತಗತಿಯಲ್ಲಿ ಕೈಗೊಳ್ಳಲಾಗುವುದು.

**ವಿಷಯ : ಮೈಸೂರು ನಗರ ಪಾಲಿಕೆಯ ವೈರ್‌ಲೇಸ್ ಸೆಟ್ ಜಪ್ತಿ ಮಾಡಿರುವ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 784 (943)

ಶ್ರೀ ಹೆಚ್ ಎಸ್. ಶಂಕರಲಿಂಗೇಗೌಡ (ಚಾಮರಾಜ) : ಮಾನ್ಯ ನಗರಾಭಿವೃದ್ಧಿ ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಮೈಸೂರು ನಗರಪಾಲಿಕೆಯ ವೈರ್‌ಲೈಸ್ ಸೆಟ್ಟನ್ನು ಜಪ್ತಿ ಮಾಡಲು ಕಾರಣವೇನು ?

ಆ. ಬೆಂಗಳೂರು ಮಹಾನಗರ ಪಾಲಿಕೆಯಂತೆಯೇ ವೈರ್‌ಲೆಸ್ ಸೆಟ್ಟನ್ನು ಅಳವಡಿಸಲು ಮೈಸೂರು ನಗರಪಾಲಿಕೆಯು ರಹದಾರಿ ಪಡೆದಿದ್ದರೂ ಜಪ್ತಿ ಮಾಡಿರುವುದು ಸರಿಯೇ ?

ಇ. ಆಡಳಿತ ಚುರುಕುಗೊಳಿಸುವ ದೃಷ್ಟಿಯಿಂದ ಮೈಸೂರು ನಗರಪಾಲಿಕೆಗೆ ವೈರ್‌ಲೆಸ್ ಸೆಟ್ಟು ಅವಶ್ಯಕವೆಂದೆನಿಸುವುದಿಲ್ಲವೇ ?

ಈ. ಇನ್ನು ಮುಂದಾದರೂ ಮೈಸೂರು ನಗರ ಪಾಲಿಕೆಗೆ ಆಡಳಿತ ಚುರುಕುಗೊಳಿಸುವ ಸಲುವಾಗಿ ವೈರ್‌ಲೆಸ್ ಸೆಟ್ ಅನ್ನು ಅಳವಡಿಸಲು ಅವಕಾಶ ನೀಡಲಾಗುವುದೇ ?

ಶ್ರೀ. ವೈಜನಾಥ ಪಾಟೀಲ್ (ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು):

ಅ. ವೈರ್‌ಲೆಸ್ ಸೆಟ್ಟನ್ನು ಅಳವಡಿಸುವ ಮುನ್ನ ಮೈಸೂರು ಮಹಾನಗರ ಪಾಲಿಕೆಯು ಸರ್ಕಾರದಿಂದ ಪೂರ್ವಾನುಮತಿ ಪಡೆದಿರಲಿಲ್ಲ.

ಆ. ಮೇಲೆ 'ಅ' ಗೆ ನೀಡಿರುವ ಉತ್ತರದಿಂದಾಗಿ ಇದು ಉದ್ಭವಿಸುವುದಿಲ್ಲ.

ಇ)ಈ. ಪರಿಶೀಲಿಸಲಾಗುವುದು.

**ವಿಷಯ : ಸಣ್ಣ ಕೈಗಾರಿಕಾಗಳ ಸುಸ್ಥಿತಿ ಬಗ್ಗೆ ಸರ್ಕಾರದಿಂದ ಕೊಡಬೇಕಾದ ಸಹಾಯ ಧನ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. 785 (757)

ಶ್ರೀ ಜಿ.ಬಿ. ಶಿವಕುಮಾರ್ (ಕೆರೆಗೋಡ) : ಮಾನ್ಯ ಸಣ್ಣ ಪ್ರಮಾಣ ಕೈಗಾರಿಕಾ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ರಾಜ್ಯದಲ್ಲಿರುವ ಸಣ್ಣ ಕೈಗಾರಿಕೆಗಳು ಎಷ್ಟು ಇದರಲ್ಲಿ ಎಷ್ಟು ಮುಚ್ಚಿವೆ.

ಆ. ಕೈಗಾರಿಕೆಗಳು ಮುಚ್ಚಿರಲು ಕಾರಣಗಳೇನು ?

ಇ. ಸಣ್ಣ ಕೈಗಾರಿಕೆಗಳಿಗೆ ಈವರೆಗೆ ಸರ್ಕಾರ ಕೊಡಬೇಕಾಗಿರುವ ಸಹಾಯಧನ ಎಷ್ಟು

ಈ. ಮಂಡ್ಯ ಜಿಲ್ಲೆಯ ಸಣ್ಣ ಕೈಗಾರಿಕೆಗಳಿಗೆ ಈವರೆವಿಗೆ ಕೊಡಬೇಕಾಗಿರುವ ಸಹಾಯಧನ ಎಷ್ಟು ವರ್ಷವಾರು ವಿವರ ನೀಡುವುದು.

ಶ್ರೀ ಎಸ್. ಎಂ. ನಬೀ (ಸಣ್ಣ ಪ್ರಮಾಣ ಕೈಗಾರಿಕಾ ಸಚಿವರು):

ಅ. 1,61,774 ಇದರಲ್ಲಿ ಮುಚ್ಚಲ್ಪಟ್ಟ ಕೈಗಾರಿಕೆಗಳ ಬಗ್ಗೆ ವಿವರಗಳು ಲಭ್ಯವಿರುವುದಿಲ್ಲ. ಅದರೆ, ಭಾರತೀಯ ರಿಸರ್ವ್ ಬ್ಯಾಂಕಿನ ಮಾಹಿತಿಯ ಪ್ರಕಾರ ಒಟ್ಟು 13,950 ರೋಗಗ್ರಸ್ಥ ಕೈಗಾರಿಕಾ ಘಟಕಗಳು ರಾಜ್ಯದಲ್ಲಿ ದಿನಾಂಕ

31-3-94ರವರೆಗೆ ಇರುವುದಾಗಿ ವರದಿ ಮಾಡಿರುತ್ತಾರೆ ಈ ಪೈಕಿ 12,348 ಘಟಕಗಳನ್ನು ಪುನ:ಶ್ಚೇತನಗೊಳಿಸಲು ಸಾಧ್ಯವಿರುವುದಿಲ್ಲವೆಂದು ತಿಳಿಸಿದೆ.

ಆ. ಈ ಕೆಳಕಂಡ ಕಾರಣಗಳಿಂದ ಕೈಗಾರಿಕೆಗಳು ಮುಚ್ಚಲ್ಪಟ್ಟಿವೆ

1. ದುಡಿಮೆ ಬಂಡವಾಳದ ಕೊರತೆ
2. ಯೋಜನೆಯನ್ನು ಜಾರಿಗೊಳಿಸುವಲ್ಲಿ ಆದ ವಿಳಂಬ
3. ವಿದ್ಯುಚ್ಛಕ್ತಿಯ ತೊಂದರೆ
4. ಉದ್ಯಮಿಯು ಆಸಕ್ತಿವಹಿಸದೇ ಇರುವುದರಿಂದ
5. ಸರಿಯಾದ ತಾಂತ್ರಿಕ ಯೋಜನೆಯ ಅಭಾವದಿಂದ
6. ಸರಿಯಾದ ಆರ್ಥಿಕ ಯೋಜನೆಯ ಅಭಾವದಿಂದ
7. ಕಾರ್ಮಿಕ ಸಮಸ್ಯೆಗಳು
8. ಮೂಲಭೂತ ಸೌಲಭ್ಯಗಳ ತೊಂದರೆಗಳು
9. ಆರ್ಥಿಕ ಮುಗ್ಗಟ್ಟು.

ಇ. ರೂ. 33.12 ಕೋಟಿ

ಈ. ದಿನಾಂಕ 1-4-94ರ ಅವಧಿಯವರೆಗೆ ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಸಹಾಯಧನವನ್ನು ನೀಡಲಾಗಿದೆ. ಈ ಅವಧಿಯ ನಂತರ ಅಂದರೆ ದಿನಾಂಕ 1-4-94 ರಿಂದ 31-3-95ರವರೆಗೆ ರೂ. 134.44 ಲಕ್ಷಗಳ ಸಹಾಯಧನ ನೀಡಬೇಕಾಗಿರುತ್ತದೆ.

**ವಿಷಯ : ಘಟಪ್ರಬಾ ಸಹಕಾರಿ ಸಕ್ಕರೆ ಕಾರ್ಖಾನೆ ನೆರೆ ಸಂತ್ರಸ್ತರಿಗೆ ಪರಿಹಾರ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 786 (841)

ಶ್ರೀ ವಿ.ಎಸ್. ಕೌಜಲಗಿ (ಅರಭಾವಿ) : ಮಾನ್ಯ ಸಕ್ಕರೆ, ಜವಳಿ ಪರಿಸರ ಮಾಲಿನ್ಯ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಕಳೆದ ಜುಲೈ ತಿಂಗಳಲ್ಲಿ ಉಂಟಾದ ನೆರೆ ಹಾವಳಿಯ ಸಮಯದಲ್ಲಿ ನೆರೆ ಸಂತ್ರಸ್ತರಿಗೆ ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯಿಂದ ನೀಡಿರುವ ಪರಿಹಾರ ಧನದ ಮೊತ್ತವೆಷ್ಟು.

ಆ. ನೆರೆ ಸಂತ್ರಸ್ತರಿಗೆ ಪರಿಹಾರ ನೀಡಲು ಸರ್ಕಾರವು ಕಾರ್ಖಾನೆಯ ಆಡಳಿತ ಮಂಡಳಿಗೆ ಆದೇಶವನ್ನು ನೀಡಲಾಗಿತ್ತೇ ನೀಡಿದ್ದಲ್ಲಿ ಆದೇಶದ ಸಂಖ್ಯೆ ಹಾಗೂ ದಿನಾಂಕವೇನು

ಇ. ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆಯು ರೈತರ ಕಬ್ಬಿನ ಹಣವನ್ನು ಪೂರ್ಣವಾಗಿ ಪಾವತಿ ಮಾಡಲು ಸಹ ಸಾಧ್ಯವಾಗದಷ್ಟು ಹಣಕಾಸಿನ ತೊಂದರೆಯನ್ನು ಅನುಭವಿಸುತ್ತಿರುವ ಸಮಯದಲ್ಲಿ ಈ ರೀತಿ ನೆರೆ ಸಂತ್ರಸ್ತರಿಗೆ ಪರಿಹಾರ ನೀಡಿದ್ದು ಸಮಂಜಸವೇ ?

ಈ. ಹಾಗಿದ್ದಲ್ಲಿ ಈ ಕುರಿತು ಸರ್ಕಾರ ಕೈಗೊಂಡ ಕ್ರಮವೇನು ?

ಶ್ರೀ ಪಿ.ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ, ವಿಜ್ಞಾನ, ಯಂತ್ರಕಲೆ ಜೀವಪರಿಸ್ಥಿತಿ ಶಾಸ್ತ್ರ ಹಾಗೂ ಪರಿಸರ ರಾಜ್ಯ ಸಚಿವರು):

ಅ. ರೂ. 22.50

ಆ. ಇಲ್ಲ.

ಇ. ಘಟಪ್ರಬಾ ಸಹಕಾರ ಸಕ್ಕರೆ ಕಾರ್ಖಾನೆಯು ರೈತರಿಗೆ ಕೊಡಬೇಕಾದ ಯಾವುದೇ ಕಬ್ಬಿನ ಬಾಕಿ ಇರುವುದಿಲ್ಲ 1993-94ರ ಸಾಲಿನಲ್ಲಿ ಕಬ್ಬು ಸರಬರಾಜುದಾರರಿಗೆ ಟನ್ ಒಂದಕ್ಕೆ ರೂ. 751.00 ರಂತೆ ಸಾರಿಗೆ ಮತ್ತು ಕಟಾವು ವೆಚ್ಚ ಹೊರತುಪಡಿಸಿ ಪಾವತಿಸಿರುತ್ತದೆ. ಹಣಕಾಸಿನ ತೊಂದರೆ ಅನುಭವಿಸುತ್ತಿರುವುದಿಲ್ಲ. 1993-94ನೇ ಸಾಲಿನಲ್ಲಿ ರೂ. 85.89 ಲಕ್ಷ ನಿವ್ವಳ ಲಾಭಗಳಿಸಿರುತ್ತದೆ. ಬೆಳಗಾವಿ ಜಿಲ್ಲಾಧಿಕಾರಿಗಳವರು ತಮ್ಮ ಪತ್ರ ಕ್ರ. ಸಂ. ಡಿ.ಎಸ್. ಎಫ್.ಎಲ್.ಸಿ.ಅರ್. 1 7.94-95 ದಿನಾಂಕ 7-19-94ರ ಕೆಳಗೆ ನೆರೆ ಹಾವಳಿ ಸಂತ್ರಸ್ತರಿಗೆ ಪರಿಹಾರ ಒದಗಿಸಲು ವಿನಂತಿಸಿಕೊಂಡಿರುವುದರ ಮೇರೆಗೆ ಸದರಿ ಕಾರ್ಖಾನೆಯ ಆಡಳಿತ ಮಂಡಳಿಯ ಸಂತ್ರಸ್ತರಿಗೆ ಪರಿಹಾರ ನೀಡಿದೆ.

ಈ. ನೆರೆ ಹಾವಳಿಯ ಸಮಯದಲ್ಲಿ ಕಾರ್ಖಾನೆಯು ನೆರೆ ಸಂತ್ರಸ್ತರಿಗೆ ಪರಿಹಾರ ನೀಡಿರುವುದರ ಬಗ್ಗೆ ಸರ್ಕಾರ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಬೆಳಗಾವಿ ಜಿಲ್ಲಾಧಿಕಾರಿಯವರ ಮನವಿಯ ಮೇರೆ ಮಾನವೀಯತೆಯ ದೃಷ್ಟಿಯಿಂದ ಪರಿಹಾರ ಕ್ರಮಕೈಗೊಂಡಿದ್ದಾಗಿ ಕಾರ್ಖಾನೆಯಿಂದ ವರದಿ ಬಂದಿದ್ದು ಈ ಬಗ್ಗೆ ಪರಿಶೀಲಿಸಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು.

**ವಿಷಯ : ನವಲಗುಂದ ಹಾಗೂ ಅಣ್ಣೀಗೇರಿ ನಗರಕ್ಕೆ ಕುಡಿಯುವ ನೀರಿನ ಯೋಜನೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 789 (1118)

ಶ್ರೀ, ಕೆ.ಎನ್. ಗದ್ದಿ (ನವಲಗುಂದ): ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ನವಲಗುಂದ ಹಾಗೂ ಅಣ್ಣಿಗೇರಿ ನಗರಕ್ಕೆ ಕುಡಿಯುವ ನೀರಿನ ತೊಂದರೆ ಉಂಟಾಗಿರುವು ಬಗ್ಗೆ ಸರ್ಕಾರವದವರ ಗಮನಕ್ಕೆ ಬಂದಿದೆಯೇ ?

ಆ. ಹಾಗಾದರೆ ಕುಡಿಯುವ ನೀರನ್ನು ಒದಗಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮ ಏನು ?

ಶ್ರೀ. ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಹೌದು.

ಆ. ಅಣ್ಣಿಗೇರಿ-ನವಲಗುಂದ ಪಟ್ಟಣಗಳಿಗೆ ನೀರು ಒದಗಿಸಲು ಮಲಪ್ರಭಾ ಕಾಲುವೆಯನ್ನು ಮೂಲವಾಗಿಟ್ಟು ಕೊಂಡು ತಯಾರಿಸಿರುವ ಸಮಗ್ರ ನೀರು ಸರಬರಾಜು ಯೋಜನೆಯ 322.34 ಲಕ್ಷ ರೂ. ಅಂದಾಜಿಗೆ 22-6-93 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿದೆ.

**ವಿಷಯ : ಸಾರ್ವಜನಿಕ ಉದ್ಯಮಗಳ ವಿವರ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 788(949)

ಶ್ರೀ ಯು.ಬಿ.ಬಣಕಾರ್ (ಹಿರೇಕೇರೂರು): ಮಾನ್ಯ ಬೃಹತ್ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಸರ್ಕಾರಿ ಸಾಮ್ಯದ ಸಾರ್ವಜನಿಕ ಉದ್ಯಮಗಳು ಯಾವುವು?

ಆ. 1993-94ನೇ ಸಾಲಿನ ಅಂತ್ಯಕ್ಕೆ ಲಾಭವನ್ನು ಹೊಂದಿದ ಹಾಗೂ ನಷ್ಟವನ್ನೂ ಹೊಂದಿದ ಉದ್ಯಮಗಳು ಯಾವುವು, ಗಳಿಸಿರುವ ಲಾಭ ಹಾಗೂ ಅನುಭವಿಸಿರುವ ನಷ್ಟ ಎಷ್ಟು?

ಇ. 1993-94ನೇ ಸಾಲಿನ ಅಂತ್ಯಕ್ಕೆ ಒಟ್ಟು ಕ್ರೋಢಿಕರಿಸಿದ ನಷ್ಟ ಎಷ್ಟು ಸತತವಾಗಿ ಎಷ್ಟು ವರ್ಷದಿಂದ ನಷ್ಟ ಹೊಂದುತ್ತಾ ಇದೆ?

ಈ. ನಷ್ಟ ಹೊಂದಿದ ಉದ್ಯಮಗಳು 93-94ನೇ ಸಾಲಿನಲ್ಲಿ ಎಲ್ಲ ಮೂಲಗಳಿಂದ ಉತ್ಪಾದನೆ ಮಾಡಿದ ವೆಚ್ಚವೆಷ್ಟು ಹಾಗೂ ಉತ್ಪಾದನೆ ಎಷ್ಟು?

ಶ್ರೀ ಆರ್.ವಿ.ದೇಶಪಾಂಡೆ (ಭಾರಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಸಚಿವರು:

ಅ. 19 (ಬೃಹತ್ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಇಲಾಖೆಯ ವ್ಯಾಪ್ತಿಯಲ್ಲಿ)

ಆ. ವಿವರಗಳನ್ನು ಅನುಬಂಧ 1ರಲ್ಲಿ ನೀಡಲಾಗಿದೆ.

ಇ. ವಿವರಗಳನ್ನು ಅನುಬಂಧ 2ರಲ್ಲಿ ನೀಡಲಾಗಿದೆ.

ಈ. ವಿವರಗಳನ್ನು ಅನುಬಂಧ 3ರಲ್ಲಿ ನೀಡಲಾಗಿದೆ.

**ಅನುಬಂಧ-1**

| ಕ್ರಮ ಸಂಖ್ಯೆ | ಸಾರ್ವಜನಿಕ ಉದ್ಯಮದ ಹೆಸರು | 1993-94ನೇ ಸಾಲಿನ ಅಂತ್ಯಕ್ಕೆ ಹೊಂದಿದ ಲಾಭ: ಅನುಭವಿಸಿದ ನಷ್ಟ (ಲಕ್ಷ ರೂಗಳಲ್ಲಿ) | |
|---|---|---|---|
| | | ಲಾಭ | ನಷ್ಟ |
| 1. | ಚಾಮುಂಡಿ ಮೇಶೀನ್ ಟೂಲ್ಸ್ ನಿಯಮಿತ (ಸಿವಿಮ್‌ಟಿವಿಲ್) | - | 28.97 |
| 2. | ಹಟ್ಟಿ ಗೋಲ್ಡ್ ಮೈನ್ಸ್ ನಿಯಮಿತ (ಹೆಚ್‌ಜಿಎಮ್‌ಎಲ್) | 4.58 | - |
| 3. | ಕರ್ನಾಟಕ ಇಂಪ್ಲಿಮೆಂಟ್ಸ್ ಅಂಡ್ ಮಶಿನರೀಸ್ ಕಂಪನಿ ನಿಯಮಿತ (ಕಿಮ್ಕೋ) | - | 267.17 |
| 4. | ಕರ್ನಾಟಕ ಸ್ಟೇಟ್ ಎಲೆಕ್ಟ್ರಾನಿಕ್ಸ್ ಡೆವೆಲಪ್‌ಮೆಂಟ್ ಕಾರ್ಪೊರೇಷನ್ ನಿಯಮಿತ (ಕಿಯೋನಿಕ್ಸ್) | 57.38 | -0 |

| | | | |
|---|---|---|---|
| 5. | ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಇನ್‌ವೆಸ್ಟ್‌ಮೆಂಟ್ ಅಂಡ್ ಡೆವಲಪ್‌ಮೆಂಟ್ ಕಾರ್ಪೊರೇಷನ್ ನಿಯಮಿತ (ಕೆಎಸ್‌ಐಡಿಸಿ) | 183.00 | - |
| 6. | ಮೈಸೂರು ಅಸಿಟೇಟ್ ಅಂಡ್ ಕೆಮಿಕಲ್ಸ್ ಕಂಪನಿ ನಿಯಮಿತ (ಎಮ್‌ಎಸಿಸಿ) | - | 122.89 |
| 7. | ಕರ್ನಾಟಕ ಟೆಲಿಕಾಮ್ ಲಿಮಿಟೆಡ್ (ಕೆಟಿಎಲ್) | 108.58 | - |
| 8. | ಮೈಸೂರು ಕಾಸ್ಮೆಟಿಕ್ಸ್ ನಿಯಮಿತ (ಎಮ್‌ಸಿಎಲ್) | - | 4.80 |
| 9. | ಮೈಸೂರು ಶುಗರ್ ಕಂಪನಿ ನಿಯಮಿತ (ಮೈಶುಗರ್) | 222.03 | - |
| 10. | ನ್ಯೂ ಗೌರ್ನಮೆಂಟ್ ಎಲೆಕಿಟ್ರಿಕ್ ಫ್ಯಾಕ್ಟರಿ (ಎನ್‌ಜಿಇಎಫ್) | - | 2549.37 |
| 11. | ಕರ್ನಾಟಕ ವಿದ್ಯುತ್ ಕಾರ್ಖಾನೆ (ಕವಿಕ) | 277.25 | - |
| 12. | ಮೈಸೂರು ಪೈಂಟ್ಸ್ ಅಂಡ್ ವಾರ್ನಿಷ್ ನಿಯಮಿತ (ಎಮಪಿ ಅಂಡ್ ವಿಎಲ್) | 91.62 | - |
| 13. | ಕರ್ನಾಟಕ ಸೋಪ್ ಅಂಡ್ ಡಿಟರ್ಜಂಟ್ ನಿಯಮಿತ (ಕೆಎಸ್ ಅಂಡ್ ಡಿಎಲ್) | - | 562.67 |
| 14. | ಮೈಸೂರು ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ನಿಯಮಿತ (ಎಮ್‌ಇಐ) | 733.71 | - |
| 15. | ಮೈಸೂರು ಲ್ಯಾಂಪ್ ವರ್ಕ್ಸ್ ನಿಯಮಿತ (ಎಮ್‌ಎಲ್‌ಡಬ್ಲ್ಯೂ) | - | 125.11 |
| 16. | ಮೈಸೂರು ಕ್ರೋಂ ಟಾಯನಿಂಗ್ ಕಂಪನಿ ನಿಯಮಿತ (ಎಮ್‌ಸಿಟಿಸಿ) | - | 73.52 |
| 17. | ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ನಿಯಮಿತ (ಎಮ್‌ಎಸ್‌ಐಎಲ್) | 365.91 | - |
| 18. | ಮೈಸೂರು ಪೇಪರ್ ಮಿಲ್ಸ್ ನಿಯಮಿತ (ಎಮ್‌ಪಿಎಮ್) | 617.00 | - |
| 19. | ಮಾರ್ಕೆಟಿಂಗ್ ಕನ್‌ಸಲ್‌ಟೆಂಟ್ಸ್ ಅಂಡ್ ಏಜೆನ್ಸೀಸ್ ನಿಯಮಿತ (ಎಮ್‌ಸಿ ಅಂಡ್ ಎ) | 8.24 | - |

## ಅನುಬಂಧ-2

| ಕ್ರಮ ಸಂಖ್ಯೆ | ಸಾರ್ವಜನಿಕ ಉದ್ಯಮದ ಹೆಸರು | 1993-94ನೇ ಅಂತ್ಯಕ್ಕೆ ಗೊಂಡತೆ. ಕ್ರೋಢೀಕರಿಸಿದ ನಷ್ಟ | ಎಷ್ಟುವರ್ಷದಿಂದ ನಷ್ಟವನ್ನು ಅನುಭವಿಸುತ್ತಿದೆ |
|---|---|---|---|
| | | | ಲಕ್ಷ ರೂಗಳಲ್ಲಿ |
| 1. | ಚಾಮುಂಡಿ ಮೇಶಿನ್ ಟೂಲ್ಸ್ ನಿಯಮಿತ (ಸಿಎಮ್‌ಟಿಎಲ್) | 282.70 | ಕಳೆದ 5 ವರ್ಷ ಕ್ಕಿಂತಲೂ ಹೆಚ್ಚಿಗೆ |
| 2. | ಕರ್ನಾಟಕ ಇಂಪ್ಲಿಮೆಂಟ್ಸ್ ಅಂಡ್ ಮೆಶಿನರೀಸ್ ಕಂಪನಿ ನಿಯಮಿತ | 2514.09 | ,, |
| 3. | ಮೈಸೂರು ಅಸಿಟೇಟ್ ಅಂಡ್ ಕೆಮಿಕಲ್ಸ್ ಕಂಪನಿ ನಿಯಮಿತ | 121.47 | ಕಳೆದ ಒಂದು ವರ್ಷ ಕ್ಕಿಂತಲೂ ಹೆಚ್ಚಿಗೆ |
| 4. | ಮೈಸೂರು ಕಾರ್ನೋಟಿಕ್ಸ್ ನಿಯಮಿತ | 62.08 | ಕಳೆದ 5 ವರ್ಷ ಕ್ಕಿಂತಲೂ ಹೆಚ್ಚಿಗೆ |
| 5. | ಎನ್‌ಜಿಇಎಫ್ ನಿಯಮಿತ | 4703.16 | ಕಳೆದ 3 ವರ್ಷ ಕ್ಕಿಂತಲೂ ಹೆಚ್ಚಿಗೆ |
| 6. | ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ ನಿಯಮಿತ | 9899.49 | ಕಳೆದ 5 ವರ್ಷ ಕ್ಕಿಂತಲೂ ಹೆಚ್ಚಿಗೆ |
| 7. | ಮೈಸೂರು ಕ್ರೋಂ ಟ್ಯಾನಿಂಗ್ ಕಂಪನಿ ನಿಯಮಿತ | 818.20 | ,, |
| 8. | ಮೈಸೂರು ಲ್ಯಾಂಪ್ಸ್ ವರ್ಕ್ಸ್ ನಿಯಮಿತ | 125.11 | ಕಳೆದ 1 ವರ್ಷ ಕ್ಕಿಂತಲೂ ಹೆಚ್ಚಿಗೆ. |

**ಅನುಬಂಧ-3**

| ಕ್ರಮ ಸಂಖ್ಯೆ | ಸಾರ್ವಜನಿಕ ಉದ್ಯಮದ ಹೆಸರು | 1993-94ರಲ್ಲಿ ಉತ್ಪಾದನೆಗೆ ಮಾಡಿದ ವೆಚ್ಚ (ಲಕ್ಷ. ರೂಗಳಲ್ಲಿ) | 1993-94ರಲ್ಲಿ ಮಾಡಿದ ಉತ್ಪಾದನೆಯ ಮೌಲ್ಯ (ಲಕ್ಷ.ರೂಗಳಲ್ಲಿ) |
|---|---|---|---|
| 1. | ಚಾಮುಂಡಿ ಮೇಶೀನ್ ಟೂಲ್ಸ್ ನಿಯಮಿತ | 171.52 | 142.68 |
| 2. | ಕಿಮ್ಕೋ ನಿಯಮಿತ | 929.03 | 649.45 |
| 3. | ಮೈಸೂರು ಅಸಿಟೇಟ್ ಅಂಡ್ ಕೆಮಿಕಲ್ಸ್ ಕಂಪನಿ | 2174.94 | 2023.00 |
| 4. | ಮೈಸೂರು ಕಾಸ್ಮೆಟಿಕ್ಸ್ ನಿಯಮಿತ | 82.35 | 34.85 |
| 5. | ಎನ್.ಜಿ.ಇ.ಎಫ್. ನಿಯಮಿತ | 19468.00 | 15645.00 |
| 6. | ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ | 6339.68 | 5729.00 |
| 7. | ಮೈಸೂರು ಕ್ರೋಂ ಟ್ಯಾನಿಂಗ್ ನಿಯಮಿತ | 95.29 | |
| 8. | ಮೈಸೂರು ವ್ಯಾಂಪ್ಸ್ ವರ್ಕ್ಸ್ ನಿಯಮಿತ | 8215.92 | 8050.54 |

**ವಿಷಯ ; ಅಲದಹಳ್ಳಿಗ್ರಾಮದಲ್ಲಿ ಖನಿಜ ತೆಗೆಯುತ್ತಿರುವುದರ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 791 (1066)

ಶ್ರೀ ಬಿ. ಶಿವರಾಮ (ಗಂಡಸಿ) : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಗಂಡಸೀ ಹೋಬಳಿ ಆಲದ ಹಳ್ಳಿ ಗ್ರಾಮದ ಸುತ್ತ ಮುತ್ತ ಮೈಸೂರು ಮಿನರಲ್ಸ್ ಲಿಮಿಟೆಡ್ ಮೂಲಕ ಖನಿಜ ಅದಿರನ್ನು ತೆಗೆಯುತ್ತಿರುವ ಯೋಜನೆಯನ್ನು ನಿಲ್ಲಿಸುವ ಯೋಜನೆ ಇದೆಯೇ ? ಹಾಗಿದ್ದಲ್ಲಿ ಇದಕ್ಕೆ ಕಾರಣವೇನು ?

ಆ. ಆಲದ ಹಳ್ಳಿ ಪ್ರದೇಶದ ಖನಿಜ ಅದಿರನ್ನು ತೆಗೆಯಲು ಕಾರ್ಮಿಕರಿಗೆ ಒದಗಿಸಿರುವ ಸಾಮುಗ್ರಿ (ಇನ್‌ಸ್ಟ್ರುಮೆಂಟ್) ಮತ್ತು ಅವರಿಗೆ ಒದಗಿಸಿರುವ ವ್ಯವಸ್ಥೆಗಳೇನು ?

ಇ. ಈ ಯೋಜನೆಯನ್ನು ನಿಲ್ಲಿಸದೇ ಮುಂದುವರಿಸಲು ಸರ್ಕಾರ ಏನಾದರೂ ಕ್ರಮ ಕೈಗೊಳ್ಳುವುದೇ ?

ಈ. ಭೂ ಮಾಲೀಕರ ಸಮಸ್ಯೆಗಳು ಸರ್ಕಾರದ ಗಮನಕ್ಕೆ ಬಂದಿವೆಯೇ ?

ಶ್ರೀ ಎಸ್. ಡಿ. ಜಯರಾಂ (ಗಣಿ ಮತ್ತು ಭೂ ವಿಜ್ಞಾನ ಸಚಿವರು):

ಅ. ಇಲ್ಲ

ಆ. ದೈಹಿಕ ಶ್ರಮದ ಕೆಲಸಕ್ಕಾಗಿ ಬೇಕಾಗಿರುವ ಸಲಕರಣೆಗಳಾದ ಪಿಕಾಸಿ, ಟ್ರೇಗಳು, ಭೂಟುಗಳು ಮತ್ತು ಶಿರಸ್ತ್ರಾಣಗಳನ್ನು ಒದಗಿಸಲಾಗಿದೆ.

ಇ. ತಡೆಯಿಲ್ಲದೆ ಗಣಿಗಾರಿಕೆಯನ್ನು ಮುಂದುವರಿಸುವುದು ಆರ್ಥಿಕ ಸಾಧ್ಯತೆ ಮೇಲೆ ಅವಲಂಭಿತವಾಗಿದೆ.

ಈ. ಹೌದು.

**ವಿಷಯ : ದಿನಃಪ್ರತಿ ಚಲನ ಚಿತ್ರ ಪ್ರದರ್ಶನಗಳ ಸಂಖ್ಯೆ ಕಡಿಮೆಗೊಳಿಸುವುದರ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 792 (937)

ಶ್ರೀ ಜಿ.ಬಿ. ಶಿವಕುಮಾರ (ಕೆರೇಗೊಡು) : ಮಾನ್ಯ ಗೃಹ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಪ್ರತಿ ದಿನ ಎಷ್ಟು ಚಲನಚಿತ್ರ ಪ್ರದರ್ಶನಗಳನ್ನು ನಡೆಸಲು ಸರ್ಕಾರ ಅನುಮತಿ ನೀಡಿದೆ (ನಗರ ಪ್ರದೇಶ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ)

ಆ. ಈ ಸಂಖ್ಯೆಯನ್ನು ಹೆಚ್ಚಿಸುವ ಅಥವಾ ಕಡಿಮೆಗೊಳಿಸುವ ಯೋಜನೆ ಸರ್ಕಾರಕ್ಕೆ ಇದೆಯೇ ?

ಇ. ಮಹಿಳೆಯರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ಹಾಲಿ ಇರುವ ವ್ಯವಸ್ಥೆಯಿಂದ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ?

ಶ್ರೀ ಪಿ. ಜಿ. ಆರ್. ಸಿಂಧ್ಯ (ಗೃಹ ಸಚಿವರು):

ಅ. ಕರ್ನಾಟಕ ಸಿನಿಮಾ (ರೆಗ್ಯುಲೇಷನ್), ನಿಯಮಾವಳಿಗಳು, 1971ರ ನಿಯಮ 41-ಎ ಪ್ರಕಾರ ಒಂದು ದಿನಕ್ಕೆ ಕೇವಲ ನಾಲ್ಕು ಚಲನಚಿತ್ರ ಪ್ರದರ್ಶನಕ್ಕೆ ಮಾತ್ರ ಅನುಮತಿಯಿದೆ.

ಆ. ಉದ್ಭವಿಸುದಿಲ್ಲ.

ಇ. ಇಲ್ಲ.

**ವಿಷಯ : ಮೈಸೂರಿನಲ್ಲಿರುವ ವಿಕ್ರಾಂತ್ ಟೈರ್ಸ್ ಲಿಮಿಟೆಡ್ ಕಾರ್ಖಾನೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 793 (942)

ಶ್ರೀ. ಹೆಚ್.ಎಸ್. ಶಂಕರಲಿಂಗೇಗೌಡ (ಚಾಮರಾಜ) : ಮಾನ್ಯ ಭಾರಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಮೈಸೂರಿನಲ್ಲಿರುವ ವಿಕ್ರಾಂತ್ ಟೈರ್ಸ್ ಲಿಮಿಟೆಡ್ ಕಾರ್ಖಾನೆ ನಷ್ಟ ಅನುಭವಿಸುತ್ತಿರುವುದು ನಿಜವೇ ?

ಆ. ಹಾಗಿದ್ದರೆ ವಾರ್ಷಿಕವಾರು ನಷ್ಟವೆಷ್ಟು ?

ಇ. ನಷ್ಟವನ್ನೆ ಕಾರಣವಾಗಿಟ್ಟುಕೊಂಡು ಕಾರ್ಖಾನೆಯನ್ನು ಖಾಸಗಿಯವರಿಗೆ ವಹಿಸಿಕೊಡಲು ಪ್ರಯತ್ನ ನಡೆದಿರುವುದು ನಿಜವೇ ?

ಈ. ಇಲ್ಲವಾದಲ್ಲಿ, ಕಾರ್ಖಾನೆಯನ್ನು ಅಭಿವೃದ್ಧಿ ಪಡಿಸಿ ಲಾಭದತ್ತ ಕೊಂಡೊಯ್ಯಲು ಸರ್ಕಾರದ ಕ್ರಮಗಳೇನು ?

ಶ್ರೀ. ಅರ್.ವಿ. ದೇಶಪಾಂಡೆ (ಭಾರಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕಾ ಸಚಿವರು) :

ಅ. ಹೌದು

ಆ.

| | ಲಾಭ : (ನಷ್ಟ) ಕೋಟಿ ರೂಗಳಲ್ಲಿ |
|---|---|
| 1989-90 | 3.08 |
| 1990-91 | 7.32 |
| 1991-92 | 12.77 |
| 1992-93 | (3.37) |
| 1993-94 | (3.60) |

ಇ. ವಿಕ್ರಾಂತ್ ಟೈರ್ ನಿಯಮಿತದಲ್ಲಿ ಸರ್ಕಾರದ ಬಂಡವಾಳವು ಶೇಕಡ 50 ಕ್ಕಿಂತಲೂ ಕಡಿಮೆ ಇದ್ದು ಸದರಿ ಬಂಡವಾಳವನ್ನು ಕೆಎಸ್ಐಐಡಿಸಿ ಮೂಲಕ ಹೂಡಲಾಗಿದೆ. ಈ ಹಿನ್ನಲೆಯಲ್ಲಿ ಸದರಿ ಕಂಪನಿಯನ್ನು ಕಂಪನಿಗಳ ಅಧಿನಿಯಮದ ಪ್ರಕಾರ ಖಾಸಗಿ ಕಂಪನಿಯೆಂದೇ ಪರಿಗಣಿಸಲಾಗಿದೆ.

ಈ. ಪುನರ್‌ಸಜ್ಜೀಕರಣಗೊಳಿಸುವ ನಿಟ್ಟಿನಲ್ಲಿ ಹಲವಾರು ಪರ್ಯಾಯಗಳು ಸರ್ಕಾರದ ಪರಿಶೀಲನೆಯಲ್ಲಿವೆ.

**ವಿಷಯ : ಶಾಸಕರುಗಳನ್ನು ಆಶ್ರಯ ಯೋಜನೆ ಸಮಿತಿಯ ಅಧ್ಯಾಕ್ಷ ಸ್ಥಾನದಿಂದ ರದ್ದು ಮಾಡಿರುವುದು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 794 (931)

ಶ್ರೀ ಶಾಮನೂರು ಶಿವಶಂಕರಪ್ಪ, (ದಾವಣಗೆರೆ) : ಮಾನ್ಯ ವಸತಿ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಎಲ್ಲಾ ಶಾಸಕರನ್ನು ಅಶ್ರಯ ಯೋಜನೆ ಸಮಿತಿಯ ಅಧ್ಯಕ್ಷ ಸ್ಥಾನದಿಂದ ತೆಗೆದು ಹಾಕಿಲ್ಲ ಅಲ್ಲವೆ ?

ಆ. ಹಾಗಿದ್ದರೆ, ಅದಕ್ಕೆ ಕಾರಣಗಳೇನು ?

ಶ್ರೀ ಬಸವರಾಜ ರಾಯರೆಡ್ಡಿ (ವಸತಿ ರಾಜ್ಯ ಸಚಿವರು) :

ಅ. ಅಶ್ರಯ ಸಮಿತಿಗಳು ಈಗಾಗಲೇ ವಿಸರ್ಜಿಸಲ್ಪಟ್ಟಿದೆ.

ಆ. ಸಾಕಷ್ಟು ಕಡೆ ದೂರುಗಳು ಬಂದಿದ್ದರಿಂದ ಹಾಗೂ ಹೊಸದಾಗಿ ವಿಧಾನ ಸಭೆ ಸದಸ್ಯರು ಅಯ್ಕೆಯಾದ ಹಿನ್ನೆಲೆಯಲ್ಲಿ ಬದಲಾಯಿಸಲಾಗಿದೆ.

**ವಿಷಯ : ದಾವಣಗೆರೆಗೆ ನಗರ ಪಾಲಿಕೆ ರಚಿಸುವ ಬಗ್ಗೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 795 (933)

ಶ್ರೀ ಶಾಮನೂರು ಶಿವಶಂಕರಪ್ಪ (ದಾವಣಗೆರೆ) : ಮಾನ್ಯ ನಗರಾಭಿವೃದ್ಧಿ, ಕಾಡಾ ಮತ್ತು ಹೈದರಾಬಾದ್-ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಸುವರೆ.

ಅ. ದಾವಣಗೆರೆ ನಗರಪಾಲಿಕೆಯನ್ನು ಸರ್ಕಾರವು ಯಾವಾಗ ರಚಿಸುತ್ತದೆ ?

ಆ. ದಾವಣಗೆರೆಯಲ್ಲಿ ಒಳಚರಂಡಿ ಯೋಜನೆಯಡಿಯಲ್ಲಿ ಸಾಧಿಸಿರುವ ಪ್ರಗತಿ ಏನು ?

ಇ. ದಾವಣಗೆರೆ ರಸ್ತೆಯನ್ನು ಸುಧಾರಿಸಲು ಏನು ಕ್ರಮ ಕೈಗೊಳ್ಳಲಾಗಿದೆ ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಕಾಡಾ ಮತ್ತು ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಸಚಿವರು):

ಅ. ಸಂವಿಧಾನದ (74ನೇ ತಿದ್ದುಪಡಿ) ಕಾಯ್ದೆ 1992ರನ್ವಯ ಪರಿಶೀಲಿಸಲಾಗುತ್ತಿದೆ.

ಆ. ಶುದ್ಧೀಕರಣ ಸ್ಥಾವರವನ್ನು ಹೊರತುಪಡಿಸಿ ಉಳಿದ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ.

ಇ. ರಸ್ತೆಗಳಲ್ಲಿರುವ ಗುಂಡಿಗಳನ್ನು ಮುಚ್ಚಲು ಕ್ರಮ ಕೈಗೊಳ್ಳುಲಾಗುತ್ತಿದೆ. ಹಣದ ಲಭ್ಯತೆ ಮೇರೆಗೆ ಹೊಸ ರಸ್ತೆ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದು.

**ವಿಷಯ : ಬೀದರ್ ಹಮನಾಬಾದ್ ಮತ್ತು ಬಸವಕಲ್ಯಾಣಕ್ಕೆ ಕುಡಿಯುವ ನೀರಿನ ಯೋಜನೆ ಜಾರಿ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 797 (1801)

ಶ್ರೀ ಬಸವರಾಜ್ ಪಾಟೀಲ್ ಅಟ್ಟೂರ್ (ಬಸವಕಲ್ಯಾಣ) : ಮಾನ್ಯ ನಗರಾಭಿವೃದ್ಧಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ,

ಅ. ಬೀದರ್, ಹಮನಾಬಾದ್ ಮತ್ತು ಬಸವ ಕಲ್ಯಾಣ ಪಟ್ಟಣಗಳಿಲ್ಲಿ ತೀವ್ರವಾದ ಕುಡಿಯುವ ನೀರಿನ ಅಭಾವ ಉಂಟಾಗಿದ್ದು ಇದು ಸರ್ಕಾರದ ಗಮನಕ್ಕೆ ಬಂದಿದೆಯೇ ?

ಆ. ಹಾಗಿದ್ದಲ್ಲಿ, ಈ ಸ್ಥಳಗಳಲ್ಲಿ ಎಷ್ಟು ಬೋರ್‌ವೆಲ್‌ಗಳನ್ನು ಕೊರೆಯಲಾಗಿದೆ ?

ಇ. ಮೇಲಿನ ಸ್ಥಳಗಳಲ್ಲಿ ಪ್ರಜೆಗಳಿಗೆ ಕುಡಿಯುವ ನೀರನ್ನು ಒದಗಿಸಲು ಏನು ಕ್ರಮ ಕೈಗೊಳ್ಳಲಾಗಿದೆ ?

ಈ. ಇಲ್ಲಿಯವರೆವಿಗೆ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ ?

ಉ. ತೀವ್ರ ಕುಡಿಯುವ ನೀರಿನ ಅಭಾವವುಳ್ಳ ಸ್ಥಳಗಳಿಗೆ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಲಾಗುತ್ತಿದೆಯೇ ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಹೌದು.

ಆ. 1994-95ನೇ ಸಾಲಿನಲ್ಲಿ ಕೊರೆಯಲಾದ ಬೋರ್‌ವೆಲ್‌ಗಳ ವಿವರ.

| | | | |
|---|---|---|---|
| 1) | ಬೀದರ್ | - | 21 |
| 2) | ಹುಮನಾಬಾದ್ | - | 6 |
| 3) | ಬಸವಕಲ್ಯಾಣ | - | 10 |

ಇ. ಅತಿ ಹೆಚ್ಚು ಇಳುವರಿಯ ಬೋರ್‌ವೆಲ್‌ಗಳಿಗೆ ಪವರ್ ಪಂಪ್‌ಗಳನ್ನು ಅಳವಡಿಸಿ ಪೈಪ್‌ಲೈನ್ ಮೂಲಕ ನೀರು ಸರಬರಾಜು ಮಾಡಲು ಹಾಗೂ ಉಳಿದ ಬೋರ್‌ವೆಲ್‌ಗಳಿಗೆ ಕೈ ಪಂಪುಗಳನ್ನು ಅಳವಡಿಸಿ ಮತ್ತು ತೆರೆದ ಬಾವಿಗಳಿಂದ ಮೇಲಿನ ಪಟ್ಟಣಗಳಿಗೆ ನೀರು ಸರಬರಾಜು ಮಾಡುವ ಏರ್ಪಾಟನ್ನು ಈಗಾಗಲೇ ಮಾಡಲಾಗಿದೆ.

ಈ. ರೂ. 23.673 ಲಕ್ಷಗಳ

ಉ. ಹೌದು. ಬೀದರ್ ನಗರದಲ್ಲಿ ಮಾತ್ರ ಟ್ಯಾಂಕರ್ ಮೂಲಕ ಕುಡಿಯುವ ನೀರನ್ನು ಸರಬರಾಜು ಮಾಡಲಾಗುತ್ತಿದೆ.

**ವಿಷಯ : ಆಳಂದ ತಾಲ್ಲೂಕಿನಲ್ಲಿನ ಕೈಮಗ್ಗ ಕೇಂದ್ರಗಳ ಸಂಖ್ಯೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 798 (310)

ಶ್ರೀ ರೇವುನಾಯಕ್ ಬೆಳಮಗಿ (ಕಮಲಾಪುರ) : ಮಾನ್ಯ ಸಕ್ಕರೆ, ಜವಳಿ ಮತ್ತು ಪರಿಸರ ಮಾಲಿನ್ಯ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಆಳಂದ ತಾಲ್ಲೂಕಾದಲ್ಲಿ ಒಟ್ಟು ಕೈಮಗ್ಗ ಕೇಂದ್ರಗಳು ಎಷ್ಟು ಅವು ಯಾವುವು ಅಲ್ಲಿ ಕೆಲಸ ಮಾಡುತ್ತಿರುವ ಕೂಲಿಗಾರರ ಸಂಖ್ಯೆ ಎಷ್ಟು ?

ಆ. ಅವರ ಪ್ರತಿ ದಿನದ ಕೂಲಿ (ಡೈಲೀವೇಜ್) ಎಷ್ಟು? ಸರಾಸರಿ ವಾರಕ್ಕೆ ಎಷ್ಟು ದಿನ ಕೆಲಸ ಕೊಡಲಾಗುತ್ತಿದೆ ?

ಇ. ಅವರ ಬದುಕು ನಿರ್ವಹಣೆಗೆ ಕೊಡುತ್ತಿರುವ ಕೂಲಿ (ಡೈಲಿವೇಜ್) ಸರಿಯೆ ಎಂದು ಸರ್ಕಾರ ಭಾವಿಸಿದೆಯೇ ? ಈ ಕೂಲಿ ಹೆಚ್ಚಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ?

ಶ್ರೀ ಪಿ. ಸಿ. ಸಿದ್ದನಗೌಡರ್ (ಸಕ್ಕರೆ, ಜವಳಿ ವಿಜ್ಞಾನ ಮತ್ತು ತಂತ್ರಜ್ಞಾನ ಪರಿಸರ ಮತ್ತು ಜೀವಶಾಸ್ತ್ರ ರಾಜ್ಯ ಮಂತ್ರಿಗಳು) :

ಅ. ಆಳಂದ ತಾಲ್ಲೂಕಿನಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ವ್ಯಾಪ್ತಿಯಲ್ಲಿ ಒಟ್ಟು 6ಕ್ಕೆ ಮಗ್ಗ ಕೇಂದ್ರಗಳು ಕಾರ್ಯ ನಿರತವಾಗಿದೆ.

| ಹೆಸರು | ಕೂಲಿಗಾರರ ಸಂಖ್ಯೆ |
|---|---|
| 1. ಆಳಂದ | 457 |
| 2. ಹಿರೋಳ್ಳಿ | 163 |
| 3. ಯಳಸಂಗಿ | 38 |
| 4. ಚಂಚನನೂರು | 60 |
| 5. ಸುಂಟನೂರು | 70 |
| 6. ಮದನಹಿಪ್ಪರಗಾ | 180 |
| ಒಟ್ಟು : | 968 |

ಆ. ಪ್ರತಿ ದಿನದ ಕೂಲಿಯ ಪ್ರಮಾಣ ಉತ್ಪಾದನೆಯ ಗಾತ್ರವನ್ನೂ ಅವಲಂಭಿಸಿದೆ ಮತ್ತು ದಿನದ ಗಳಿಕೆ ರೂ. 80 ರಿಂದ 5 ರವರೆಗೂ ಆಗಬಹುದು, ವಾರದಲ್ಲಿ ಕೆಲಸದ ದಿನಗಳು ನೂಲಿನ ಸರಬರಾಜಿನ ಸ್ಥಿತಿಯನ್ನು ಅವಲಂಬಿಸಿದೆ ಮತ್ತು ವಾರದಲ್ಲಿ 5 ರಿಂದ 6 ಲಕ್ಷಗಳು ನೂಲು ಸರಬರಾಜು ಮಾಡಲು ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ.

ಇ. ಈ ಬಗ್ಗೆ ಪರಿಶೀಲಿಸಿ ಮುಂದಿನ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು.

**ವಿಷಯ : ಚಿಕ್ಕಮಗಳೂರಿಗೆ ಕುಡಿಯುವ ನೀರಿನ ಯೋಜನೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 799 (858)

ಶ್ರೀ ಸಿ.ಆರ್. ಸಗೀರ್ ಅಹಮದ್(ಚಿಕ್ಕಮಗಳೂರು) : ಮಾನ್ಯ ನಗರಾಭಿವೃದ್ಧಿ ಇಲಾಖೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ ?

ಅ. ಚಿಕ್ಕಮಗಳೂರು ಹಾಗೂ ಬೇಲೂರು ಪಟ್ಟಣಗಳಿಗೆ ಯಗಚಿ ನದಿಯಿಂದ ಕುಡಿಯುವ ನೀರಿನ ಯೋಜನೆಗೆ ಸರ್ಕಾರ ಅನುಮತಿ ನೀಡಿದೆಯೇ ?

ಆ. ಈ ಯೋಜನೆಯ ಅಂದಾಜು ವೆಚ್ಚ ಎಷ್ಟು ?

ಇ. ಈ ಯೋಜನೆ ಯಾವಾಗ ಪ್ರಾರಂಭವಾಗುವುದು ?

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) :

ಅ. ಈ ಕೆಳಗೆ ಸೂಚಿಸಿರುವ ಯೋಜನೆಗಳಿಗೆ ದಿನಾಂಕ 11-8-94ರಂದು ಅನುಮೋದನೆ ನೀಡಲಾಗಿದೆ.

1) ಚಿಕ್ಕಮಗಳೂರು ಪಟ್ಟಣ - 1375 ಲಕ್ಷ ರೂ.

2) ಬೇಲೂರು ಪಟ್ಟಣ - 165 ಲಕ್ಷ ರೂ.

ಇ. ಚಿಕ್ಕಮಗಳೂರು ನೀರು ಸರಬರಾಜು ಯೋಜನೆಗೆ ನಗರ ಸಭೆಯ ಈ ಯೋಜನೆಯ ವೆಚ್ಚದ 1/3 ಭಾಗಾಂಶವನ್ನು ಪಾವತಿ ಮಾಡಿದ ನಂತರ, ಹಾಗೂ ಹುಡ್ಕೋದವರು ಸಾಲವನ್ನು ನೀಡಲು ಒಪ್ಪಿದ ನಂತರ ಕೆಲಸವನ್ನು ಪ್ರಾರಂಭಿಸಲಾಗುವುದು.

ಬೇಲೂರು ಪಟ್ಟಣದ ಯೋಜನೆ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ.

**ವಿಷಯ : ಬೆಂಗಳೂರಿನ ಜಯಮಹಲ್ ಕ್ಷೇತ್ರದಲ್ಲಿನ ನೀರಿನ ಸಮಸ್ಯೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 800 (1090)

ಶ್ರೀ ಆರ್. ಕೃಷ್ಣಪ್ಪ (ಜಯಮಹಲ್) : ಮಾನ್ಯ ಮುಖ್ಯ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಬೆಂಗಳೂರಿನ ಜಯಮಹಲ್ ವಿಧಾನಸಭಾ ಕ್ಷೇತ್ರದಲ್ಲಿ ಕುಡಿಯುವ ನೀರಿನ ಅಭಾವ ಉಂಟಾಗಿರುವುದು ನಿಜವೇ ?

ಆ. ಹಾಗಿದ್ದಲ್ಲಿ, ಯಾವ ಯಾವ ಪ್ರದೇಶಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಗಂಭೀರವಾಗಿದೆ.

ಇ. ಕುಡಿಯುವ ನೀರಿನ ಸಮಸ್ಯೆ ಬಗೆಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು.

ಈ. ಪ್ರತಿದಿನ ಎಷ್ಟು ವಾಟರ್ ಟ್ಯಾಂಕರ್‌ಗಳನ್ನು ಈ ಕ್ಷೇತ್ರದಲ್ಲಿ ಒದಗಿಸಲಾಗಿದೆ.

ಉ. ಹೊಸದಾಗಿ ಬೋರ್‌ವೆಲ್‌ಗಳನ್ನು ಕೊರೆಯಲು ಕ್ರಮ ಕೈಗೊಳ್ಳಲಾಗಿದೆಯೇ.

ಊ. ಹಾಗಿದ್ದಲ್ಲಿ, ಪೂರ್ಣ ವಿವರ ನೀಡುವುದು.

ಶ್ರೀ ಹೆಚ್. ಡಿ. ದೇವೇಗೌಡ (ಮುಖ್ಯಮಂತ್ರಿಗಳು) :

ಅ. ಕಾವೇರಿ ಪಂಪಿಂಗ್ ವಲಯದಲ್ಲಿನ ವಿದ್ಯುಚ್ಛಕ್ತಿ ವಿಫಲತೆಯಿಂದ ಹಾಗೂ ಓಲ್ಟೇಜ್ ಪರಿಮಿತದಿಂದ ಜಯಮಹಲ್ ಕ್ಷೇತ್ರದ ಕೆಲ ಭಾಗಗಳಿಗೆ ನೀರಿನ ಬವಣೆ ಉಂಟಾಗಿತ್ತು. ದಿನಾಂಕ 1-4-95 ರಿಂದ ವಿದ್ಯುತ್ ಪೂರೈಕೆಯಲ್ಲಿ ಸುಧಾರಿಸಿರುವುದರಿಂದ ಹಿಂದೆ ಇದ್ದ ನೀರಿನ ಬವಣೆಯು ಈಗಿರುವುದಿಲ್ಲ.

ಆ. ಜಯಮಹಲ್ ಕ್ಷೇತ್ರದ ಕೆಲ ಪ್ರದೇಶಗಳಾದ ಸೊನ್ನಪ್ಪ ಬ್ಲಾಕ್ ನಾರಾಯಣಪ್ಪ ಬ್ಲಾಕ್ ನಂದಿದುರ್ಗ ಬಡಾವಣೆ ರಹಮತ್‌ನಗರ, ಗಂಗೇನಹಳ್ಳಿ, ಹೆಚ್‌ಎಂಟಿ ಲೇಔಟ್, ಆರ್.ಟಿ. ನಗರ ಸುಲ್ತಾನ್‌ಪಾಳ್ಯ ಪ್ರದೇಶಗಳಲ್ಲಿ ಕುಡಿಯುವ ನೀರಿಗೆ ತೊಂದರೆ ಇತ್ತು.

ಇ. ಈ ಸಮಸ್ಯೆಯನ್ನು ನೀಗಿಸಲು ಬೆಂಗಳೂರು ಜಲಮಂಡಳಿ ಟ್ಯಾಂಕರ್‌ಗಳೊಂದಿಗೆ, ಲೋಕೋಪಯೋಗಿ ಇಲಾಖೆ ಮತ್ತು ನಗರಪಾಲಿಕೆಯಿಂದ ಟ್ಯಾಂಕರ್‌ಗಳನ್ನು ಪಡೆದು ನೀರನ್ನು ಬವಣೆ ಇರುವ ಪ್ರದೇಶಗಳಿಗೆ ಒದಗಿಸಲಾಯಿತು. ಇದರೊಂದಿಗೆ ಸರಬರಾಜಿಗೆ ಪೂರಕವಾಗುವಂತೆ ಕೆಟ್ಟಿದ್ದ ಕೆಲ ಕೊಳವೆ ಬಾವಿಗಳನ್ನು ದುರಸ್ತಿ ಪಡಿಸಲಾಯಿತು.

ಈ. ನಾಲ್ಕು ಟ್ಯಾಂಕರ್‌ಗಳನ್ನು ವಿಶೇಷವಾಗಿ ನೀರಿನ ಬವಣೆಯಿದ್ದ ಪ್ರದೇಶಗಳಿಗೆ ಒದಗಿಸಲಾಗಿದೆ.

ಉ. ಹೊಸ ಕೊಳವೆ ಬಾವಿಗಳನ್ನು ಕೊರೆಯಲು ಟೆಂಡರ್ ಪ್ರಕ್ರಿಯೆಯು ಪೂರ್ಣಗೊಂಡಿದೆ. ಕೊಳವೆ ಬಾವಿಗಳನ್ನು ಕೊರೆಯುವ ಕೆಲಸವನ್ನು ಶೀಘ್ರದಲ್ಲಿಯೇ ಪ್ರಾರಂಭಿಸಲಾಗುವುದು.

ಊ. ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಸರ್ವೆ ಕಾರ್ಯ ಸಾಧ್ಯ ವಿರದಿ ಬಂದ ಮೇಲೆ ಕೊಳವೆ ಬಾವಿಗಳನ್ನು ಕೊರೆಯುವ ನಿಖರವಾದ ಸ್ಥಳಗಳನ್ನು ಗುರುತಿಸಿ ಕೆಲಸವನ್ನು ಕೆಲವು ದಿನಗಳಲ್ಲಿಯೇ ಪ್ರಾರಂಭಿಸಲಾಗುವುದು.

**ವಿಷಯ : ಯಕ್ಷಗಾನ ಕಲಾವಿದರಿಗೆ ಕೊಡುವ ಗೌರವ ಧನ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 801 (1025)

ಶ್ರೀ ಕುಂಬ್ಳೆ ಸುಂದರರಾವ್ (ಸುರತ್ಕಲ್) : ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಇದುವರೆವಿಗೂ ಎಷ್ಟು ಜನ ಯಕ್ಷಗಾನ ಕಲಾವಿದರಿಗೆ ಗೌರವಧನ ಕೊಡಲಾಗಿದೆ. ಅರ್ಜಿಗಳನ್ನು ಸಲ್ಲಿಸಿದ ಎಲ್ಲಾ ಕಲಾವಿದರುಗಳಿಗೆ ಗೌರವಧನ ಮಂಜೂರಾತಿಯಾಗಿದೆಯೇ ?

ಆ. ಯಕ್ಷಗಾನ ಕಲಾವಿದರಿಗೆ ಗೌರವಧನ ನೀಡಲು ಆಯ್ಕೆ ಮಾಡುವಾಗ ಅನುಸರಿಸಲಾಗುವ ನಿಯಮಗಳು ಯಾವುವು ?

ಇ. ಅನರ್ಹ ಕಲಾವಿದರಿಗೆ ಗೌರವಧನ ಮಂಜೂರಾಗಿ ಅರ್ಹ ಕಲಾವಿದರುಗಳಿಗೆ ಮಂಜೂರಾಗದೆ ಇರುವ ಬಗ್ಗೆ ಸರ್ಕಾರಕ್ಕೆ ದೂರುಗಳೇನಾದರೂ ಬಂದಿದೆಯೇ ? ಬಂದಿದ್ದಲ್ಲಿ ಅ ಕುರಿತು ಜರುಗಿಸಲಾದ ಕ್ರಮಗಳೇನು ?

ಶ್ರೀಮತಿ ಬಿ.ಟಿ. ಲಲಿತಾನಾಯಕ್ (ಕನ್ನಡ ಮತ್ತು ಸಂಸ್ಕೃತಿ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವರು):

ಅ. ರೂ. 250-00ರಂತೆ 124 ಕಲಾವಿದರಿಗೆ ಮತ್ತು ರು. 500-00 ರಂತೆ 20 ಕಲಾವಿದರಿಗೆ ಗೌರವಧನ ನೀಡಲಾಗಿದೆ. ಗೌರವಧನ ಮಂಜೂರಾತಿಗೆ ಅರ್ಜಿಗಳನ್ನು ಕರೆದಿಲ್ಲ

ಆ.
1. ಕನಿಷ್ಠ 55 ವರ್ಷಗಳಾಗಿರಬೇಕು. ಯಕ್ಷಗಾನ ಕ್ಷೇತ್ರದಲ್ಲಿ 25 ವರ್ಷಗಳಿಗಿಂತ ಹೆಚ್ಚು ಸೇವೆ ಸಲ್ಲಿಸಿರಬೇಕು.
2. ಕಲಾವಿದರು ಸಾರ್ವಜನಿಕವಾಗಿ ನೀಡಿರುವ ಕಾರ್ಯಕ್ರಮಗಳು.
3. ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ನೀಡಿರುವ ಪ್ರಶಸ್ತಿ, ಪುರಸ್ಕಾರಗಳು .
4. ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದ ಸಭೆ ಸಮ್ಮೇಳನ ಮತ್ತು ಪ್ರದರ್ಶನಗಳಲ್ಲಿ ಪಾಲ್ಗೊಳ್ಳುವಿಕೆ.
5. ರಾಜ್ಯ ಕೇಂದ್ರ ಅಕಾಡೆಮಿಗಳು ನೀಡಿರುವ ಪ್ರಶಸ್ತಿಗಳು, ಬಹುಮಾನಗಳು.
6. ರೂ. 8000 ಗಳಿಂದ 10,000-00 ಗಳ ವಾರ್ಷಿಕ ಆದಾಯದ ಮಿತಿಯಿದೆ.

7. ಆರ್ಥಿಕ ಪರಿಸ್ಥಿತಿ ಹಾಗೂ ಅರ್ಹತೆಗೆ ಆಯ್ಕೆ ಪ್ರಾಧಾನ್ಯತೆಯನ್ನು ಕೊಡಲಾಗುತ್ತದೆ. ಸಮಾನ ಅರ್ಹತೆಯುಳ್ಳವರಿಗೆ ಗೌರವಧನ ನೀಡಬೇಕಾದ ಸಂದರ್ಭದಲ್ಲಿ ಆರ್ಥಿಕವಾಗಿ ದುರ್ಬಲರಾಗಿರುವವರನ್ನು ಮೊದಲು ಪರಿಗಣಿಸಲಾಗುತ್ತದೆ.

ಇ. ದೂರುಗಳು ಬಂದಿರುವುದಿಲ್ಲ.

**ವಿಷಯ : ಉತ್ತರಹಳ್ಳಿ ಕ್ಷೇತ್ರದಲ್ಲಿ ಕೆರೆ ಅಂಗಳಗಳ ಒತ್ತುವರಿ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ :179(968)

ಶ್ರೀ ಎಂ. ಶ್ರೀನಿವಾಸ (ಉತ್ತರಹಳ್ಳಿ): ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಉತ್ತರಹಳ್ಳಿ ಕ್ಷೇತ್ರದ, ಉತ್ತರಹಳ್ಳಿ ಹೋಬಳಿ, ಚಿಕ್ಕಕಲ್ಲಸಂದ್ರದ ಕೆರೆ ಸಾರಕ್ಕಿ ಕೆರೆ, ದೊರೆಸಾನಿಪಾಳ್ಯದ ಹಲಗೆ ವಡೇರಳ್ಳಿ ಕೆರೆ ಅಂಗಳದ ಜಮೀನುಗಳನ್ನು ಖಾಸಗಿಯವರು ಅಕ್ರಮವಾಗಿ ಒತ್ತುವರಿ ಮಾಡಿ ಮನೆಗಳನ್ನು ನಿರ್ಮಿಸಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ;

ಆ. ಈ ಕೆರೆ ಅಂಗಳದಲ್ಲಿ ಅಕ್ರಮವಾಗಿ ಮನೆ ನಿರ್ಮಿಸಲು ಅನುಮತಿ ನೀಡಿದವರು ಯಾರು;

ಇ. ಈ ಕೆರೆ ಅಂಗಳವನ್ನು ಉಳಿಸಲು ಸರ್ಕಾರದವರು ತೆಗೆದುಕೊಂಡಿರುವ ಕ್ರಮಗಳೇನು?

ಶ್ರೀ ಆರ್.ಎಲ್.ಜಾಲಪ್ಪ (ಕಂದಾಯ ಸಚಿವರು) :

ಅ. ಹೌದು, ಬೆಂಗಳೂರು ದಕ್ಷಿಣ ತಾಲ್ಲೂಕು, ಚಿಕ್ಕಕಲ್ಲಸಂದ್ರ ಸರ್ವೆನಂ.76ರ ವಿಸ್ತೀರ್ಣ 12-26 ಎಕರೆ ಸಾರಕ್ಕಿ 73ರ 11-04 ಎಕರೆ, ದೊರೆಸಾನಿಪಾಳ್ಯ ಸರ್ವೆ ನಂ. 154 : 11 ರ 7-32 ಎಕರೆ ಹಲಗೆವಡೇರ ಹಳ್ಳಿ ಸರ್ವೆ ನಂ. 1 ರಲ್ಲಿ 17-10 ಎಕರೆ ಮತ್ತು ಸರ್ವೆ ನಂ. 124ರಲ್ಲಿ 22-34 ಎಕರೆ ವಿಸ್ತೀರ್ಣದ ಜಮೀನುಗಳು ಸರ್ಕಾರಿ ಕೆರೆ ಅಂಗಳವಾಗಿರುತ್ತದೆ. ಈ ಜಮೀನುಗಳಲ್ಲಿ ಅನಧಿಕೃತ ಕಟ್ಟಡಗಳು ಬಂದಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಆ. ಈ ಜಮೀನುಗಳಲ್ಲಿ ಅಕ್ರಮವಾಗಿ ಮನೆಗಳನ್ನು ಕಟ್ಟಲು ಅನುಮತಿ ನೀಡಿರುವುದಿಲ್ಲ.

ಇ. ಚಿಕ್ಕಕಲ್ಲಸಂದ್ರ ಕೆರೆ:

ಈ ಜಮೀನಿನಲ್ಲಿ ಅನಧಿಕೃತ ಕಟ್ಟಡಗಳನ್ನು ನಿರ್ಮಾಣ ಮಾಡುತ್ತಿರುವ ಹಂತದಲ್ಲಿ ಕೆಡವಲು ಕ್ರಮ ವಹಿಸಿದ್ದರ ವಿರುದ್ಧ ಘನ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 27033:93 ಮತ್ತು ರಿ.ಪಿ. ನಂ. 27048-27049:93, ದಿನಾಂಕ 30-7-93ರಂದು ತಡೆಯಾಜ್ಞೆ ನೀಡಿದ್ದು, ವಿವಾದಿತ ಸ್ವತ್ತಿನಲ್ಲಿ ಇರಬಹುದಾದ ಕಟ್ಟಡಗಳನ್ನು ನಾಶಪಡಿಸದಂತೆ ಮತ್ತು ಅರ್ಜಿದಾರರನ್ನು ಸ್ಥಳಾಂತರಿಸದಂತೆ ತಡೆಯಾಜ್ಞೆ ಇರುತ್ತದೆ. ಹಾಲಿ ಈ ಪ್ರಕರಣಗಳು ನ್ಯಾಯಾಲಯದಲ್ಲಿ ಬಾಕಿ ಇರುತ್ತವೆ ಅನಧಿಕೃತ

ಕಟ್ಟಡ ನಿರ್ಮಾಣ ಮಾಡಿದವರಿಗೆ ಕಾರಣ ಕೇಳುವ ನೋಟೀಸನ್ನು ನೀಡಿರುತ್ತದೆ. ಹಾಗೂ ಆರಕ್ಷಕ ಠಾಣೆಗೆ ಪತ್ರ ಬರೆಯಾಲಾಗಿದೆ. ಸರ್ಕಾರದ ಆದೇಶ ಸಂಖ್ಯೆ : ಪಿಡಬ್ಲುಡಿ 82 ಎಂಎ 85, ದಿನಾಂಕ 11-2-88 ರಂತೆ ಸಂರಕ್ಷಣೆಗೆ ಅರಣ್ಯ. ಇಲಾಖೆಗೆ ವರ್ಗಾಯಿಸಲು ಆದೇಶವಿರುತ್ತದೆ.

ಬೆಂಗಳೂರು ದಕ್ಷಿಣ ತಾಲ್ಲೂಕು, ಭೂ ನ್ಯಾಯ ಮಂಡಳಿಯು ಈ ಕೆಳಕಂಡವರಿಗೆ ಹಕ್ಕು ಮಂಜೂರು ಮಾಡಿರುತ್ತದೆ.

| | | |
|---|---|---|
| 1. | ಶ್ರೀಮತಿ ಶಾರದಮ್ಮ ಜೋಡಿದಾರ | 1-28 ಎಕರೆ |
| 2. | ಶ್ರೀ ಜಿ.ರಾಮಚಂದ್ರ | 1-28 ಎಕರೆ |
| 3. | ಶ್ರೀ ಎಂ.ಸಿ. ನಾಗಪ್ಪ | 0-34 ಎಕರೆ |
| 4. | ಶ್ರೀಮತಿ ಲಕ್ಷಮ್ಮ | 1-20 ಎಕರೆ |
| 5. | ಶ್ರೀ ನಂಜುಂಡಪ್ಪ | 1-26 ಎಕರೆ |

ಸದರಿ ಭೂ ನ್ಯಾಯ ಮಂಡಳಿ ಆದೇಶ ಕಾನೂನು ಬಾಹಿರವಾದುದರಿಂದ ಈ ಆದೇಶಗಳ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ದಾಖಾಲಾಗಿದ್ದು, ವಿಚಾರಣಾ ಹಂತದಲ್ಲಿ ಬಾಕಿ ಇರುತ್ತದೆ.

ಮೇಲ್ಕಂಡ ಪ್ರಕರಣಗಳು ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇದ್ದು ಈ ಪ್ರಕರಣಗಳಲ್ಲಿ ಅಗತ್ಯ ಮಾಹಿತಿನ್ನು ಸರ್ಕಾರಿ ವಕೀಲರಿಗೆ ಒದಗಿಸಲಾಗಿದ್ದು, ಜರೂರಾಗಿ ಕ್ರಮ ವಹಿಸಲಾಗಿರುತ್ತದೆ.

**ದೊರೆಸಾನಿಪಾಳ್ಯ ಕೆರೆ:**

ಶ್ರೀ ಎಸ್.ಕೃಷ್ಣಪ್ಪರಾಜು ಎಂಬುವವರು ಭೂ ಪರಿವರ್ತನೆ ಆದೇಶ ಮತ್ತು ಖಾತೆ ದಾಖಲಾಗಿರುವ ವಿಷಯದಲ್ಲಿ ಸುಳ್ಳು ದಾಖಲೆ ಸೃಷ್ಟಿಸಿದ್ದರ ಬಗ್ಗೆ ಅಗತ್ಯ ವಿಚಾರಣೆ ಮಾಡಿ ಸದರಿ ದಾಖಲೆಗಳು ಖೋಟಾ ದಾಖಲೆಗಳೆಂದು ಪರಿಗಣಿಸಿ ಅನಧಿಕೃತವಾಗಿ ಮೂರು - ನಾಲ್ಕು ಅಂತಸ್ತಿನ ಕಟ್ಟಡಗಳನ್ನು ಕಟ್ಟುತ್ತಿದ್ದುದನ್ನು ತಡೆಹಿಡಿಯಲು ನೋಟೀಸ್ ನೀಡಿ ಕ್ರಮ ಕೈಗೊಳ್ಳಲಾಗಿದೆ. ಅಲ್ಲದೆ ಈ ಜಮೀನಿನಲ್ಲಿ 30ಕ್ಕೂ ಹೆಚ್ಚು ಜನರು 10 10ರ ವಿಸ್ತೀರ್ಣದಲ್ಲಿ ಅನಧಿಕೃತ ಗುಡಿಸಲುಗಳನ್ನು ನಿರ್ಮಾಣ ಮಾಡಿರುತ್ತಾರೆ.

**ಸಾರಕ್ಕಿ ಕೆರೆ:**

ಈ ಜಮೀನಿನ ಸಂರಕ್ಷಣೆಗಾಗಿ ಅರಣ್ಯ ಇಲಾಖೆಯ ವಶಕ್ಕೆ ವಹಿಸಿಕೊಡಲಾಗಿ, ಖಾಸಗಿಯವರು ಒತ್ತುವರಿ ಮಾಡಿ ಅನಧಿಕೃತ ಮನೆಗಳನ್ನು ಕಟ್ಟಿರುತ್ತಾರೆ .

**ಹಲಗೇವಡೇರಹಳ್ಳಿ ಕೆರೆ:**

ಹಲಗೇವಡೇರಹಳ್ಳಿ ಸರ್ವೆ ನಂ.1 ರಲ್ಲಿ ಒಟ್ಟು ವಿಸ್ತೀರ್ಣದ ಜಮೀನನ್ನು ಸಂರಕ್ಷಣೆಗಾಗಿ ಅರಣ್ಯ ಇಲಾಖೆಗೆ ವಹಿಸಿಕೊಡಲಾಗಿದೆ. ಹಲಗೇವಡೇರಹಳ್ಳಿ ಸರ್ವೆ ನಂ. 124ರಲ್ಲಿ ಖಾಸಗಿ ವ್ಯಕ್ತಿಗಳಿಗೆ ಕಾನೂನು ಬಾಹಿರವಾಗಿ ಹಕ್ಕು ದಾಖಲೆ ಆದೇಶ ಮಾಡಿದ ಬಗ್ಗೆ ತಹಸೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ವಿರುದ್ಧ ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 85 ಎಡಿಇ 93, ದಿನಾಂಕ 9-2-94 ರಂತೆ ಬೆಂಗಳೂರು ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿದೆ. ವಿಚಾರಣಾ ವರದಿಯನ್ನು ನಿರೀಕ್ಷಿಸಲಾಗಿದೆ.

**ವಿಷಯ : ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದಲ್ಲಿರುವ ಎರಡನೇ ದರ್ಜೆ ನೌಕರರುಗಳ ಸಂಖ್ಯೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 180(1258)

ಶ್ರೀ ಬಿ.ಸೋಮಶೇಖರ್ (ಮಳವಳ್ಳಿ) : ಮಾನ್ಯ ಕಾರ್ಮಿಕ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದ ಉದ್ಯೋಗ ವಿಭಾಗ ದಲ್ಲಿರುವ ಎರಡನೇ ದರ್ಜೆ ಸಹಾಯಕರುಗಳ ಸಂಖ್ಯೆ ಎಷ್ಟು? ಅವರಲ್ಲಿ ಪರಿಶಿಷ್ಟ ಜಾತಿ : ಪಂಗಡದವರ ಸಂಖ್ಯೆ ಎಷ್ಟು;

ಆ. ಪರಿಶಿಷ್ಟ ಜಾತಿ : ಪಂಗಡದ ಎರಡನೇ ದರ್ಜೆ ಸಹಾಯಕರುಗಳಿಗೆ ಕಳೆದ 20 ವರ್ಷಗಳಿಂದಲೂ ಬಡ್ತಿ ನಿಗದಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

ಇ. ಹಾಗಿದ್ದಲ್ಲಿ ಇದಕ್ಕೆ ಕಾರಣಗಳೇನು?

ಶ್ರೀ ಸಿ. ಗುರುನಾಥ್ (ಕಾರ್ಮಿಕ ಸಚಿವರು):

| ಅ. ಒಟ್ಟು ಸಂಖ್ಯೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|
| 142 | 33 | 3 |

ಆ. ಬಂದಿದೆ.

ಇ. ಇಲಾಖೆಯ ಉದ್ಯೋಗ ವಿಭಾಗಕ್ಕೆ ಮಂಜೂರಾಗಿರುವ ಒಟ್ಟು ಎರಡನೇ ದರ್ಜೆ ಸಹಾಯಕರ ಹುದ್ದೆಗಳು 151 ಮತ್ತು ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು 58 ಇರುವುದರಿಂದ ಎರಡನೇ ದರ್ಜೆ ಸಹಾಯಕರ ಹುದ್ದೆಯಿಂದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಬಡ್ತಿ ನೀಡುವ ಅನುಪಾತ ಕೇವಲ 5:1 ಆಗಿರುವುದರಿಂದ, ಎರಡನೇ ದರ್ಜೆ ಸಹಾಯಕರ ಬಡ್ತಿಯಲ್ಲಿ ವಿಳಂಬವಾಗುತ್ತಿದೆ.

**ವಿಷಯ: ಖಾಸಗಿ ಐ.ಟಿ.ಐ. ಗಳನ್ನು ಅನುದಾನಕ್ಕೆ ಒಳಪಡಿಸುವ ಬಗ್ಗೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 181(996)

ಶ್ರೀ ಎಂ.ವೀರಪ್ಪ ಮೊಯಿಲಿ (ಕಾರ್ಕಳ): ಮಾನ್ಯ ಕಾರ್ಮಿಕ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಎಷ್ಟು ವರ್ಷ ಪೂರೈಸಿರುವ ಸುಮಾರು 56 ಖಾಸಗಿ ಐ.ಟಿ.ಐ ಗಳನ್ನು ಅನುದಾನಕ್ಕೆ ಒಳಪಡಿಸಿ ಸಚಿವ ಸಂಪುಟ ನಿರ್ಣಯ ತೆಗೆದುಕೊಂಡ ಬಗ್ಗೆ ;

ಸಿ. ಗುರುನಾಥ್ (ಕಾರ್ಮಿಕ ಸಚಿವರು):

ಅ. 7 ವರ್ಷಗಳು.

## Sub : Availability of land for grave yards in Harihara Taluk

Starred L.A. Question No. 183(785)

Sri. H. Shivappa (Harihara) : Will the Minister for Revenue be pleased to state

a. The availability of land for grave yards for different communities in Harihara taluk;

b. If not available for all communities the steps that taken by the Government to provide land for grave yards.

Sri. R.L. Jalappa (Minister for Revenue):

a. 17 Acres, 11 guntas of land is available for grave yards for different communities in Harihar Taluk. Details are as follows:

| | | | A-G |
|---|---|---|---|
| 1. | Ganganarasi | - | 1-02 |
| 2. | Gutnur | - | 0-20 |
| 3. | Byaladahalli | - | 3-18 |
| 4. | Banuvalli | - | 1-29 |
| 5. | Yakkegundi | - | 2-07 |
| 6. | Yalavatti | - | 0-15 |
| 7. | Salakatti | - | 8-00 |
| | Total | | 17-11 |

b. In the following villages, the proposals to reserve/acquire lands for the purpose of grave yards are under consideration.

1. Kambathanahalli
2. Halivana
3. Srinivasanagara
4. Ukkadagathi
5. Konibelagere
6. Kalebennur

**ವಿಷಯ: ಎ.ಪಿ.ಎಂ.ಸಿ ಗಳು ದಲ್ಲಾಲಿ ವಸೂಲಿ ಮಾಡುತ್ತಿರುವ ಬಗ್ಗೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 185(1081)

ಶ್ರೀ ಡಿ.ಆರ್. ಪಾಟೀಲ್(ಗದಗ್): ಮಾನ್ಯ ಕೃಷಿ ಮಾರುಕಟ್ಟೆ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದ ಬಹುತೇಕ ಕೃಷಿ ಹುಟ್ಟುವಳಿ ಮಾರುಕಟ್ಟೆ ಸಮಿತಿಗಳು ರೈತರಿಂದ ಅಕ್ರಮ ದಲ್ಲಾಲಿ ವಸೂಲಿ ಮಾಡುತ್ತಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ;

ಆ. ಅಕ್ರಮ ದಲ್ಲಾಲಿ ವಸೂಲಿ ತಡೆಗಟ್ಟಲು ರೈತರಿಗೆ ದಲ್ಲಾಲರು ಎ.ಪಿ.ಎಂ.ಸಿ. ಮುಖಾಂತರ ಹಣ ಪಾವತಿ ಮಾಡುವ ವಿಧಾನ ಜಾರಿಗೊಳಿಸಲಾಗುವುದು;

ಇ. ಇದೇ ರೀತಿ ದಲ್ಲಾಲರಿಗೆ ಖರೀದಿದಾರರು ಎಪಿಎಂಸಿ ಮುಖಾಂತರ ಹಣ ಸಂದಾಯ ಮಾಡುವಂತೆ ಕ್ರಮ ಕೈಗೊಳ್ಳಲಾಗುವುದೇ

ಶ್ರೀ ಬಿ.ಬಿ. ಸಿಂಗಯ್ಯ (ಕೃಷಿ ಮಾರುಕಟ್ಟೆ ರಾಜ್ಯ ಸಚಿವರು):

ಅ. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ರೈತರಿಂದ ಯಾವುದೇ ದಲ್ಲಾಲಿಯನ್ನು ವಸೂಲಿ ಮಾಡುವುದಿಲ್ಲ. ಆದರೆ, ದಲ್ಲಾಲರು ರೈತರಿಂದ ಕಾಯ್ದೆ ಬಾಹಿರವಾಗಿ ದಲ್ಲಾಲಿ ವಸೂಲಿ ಮಾಡಿದ ಕೆಲವು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಅಂತಹ ಪ್ರಕರಣಗಳಲ್ಲಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗಿದೆ.

ಆ. ಸರ್ಕಾರದ ಪರಿಶೀಲನೆಯಲ್ಲಿದೆ.

ಇ. ಇಲ್ಲ.

**ವಿಷಯ: ಕಬ್ಬಿನ ಬೆಳೆಗೆ ಆದ ನಷ್ಟಕ್ಕೆ ಪರಿಹಾರ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 186(934)

ಶ್ರೀ ಹೆಚ್.ಕೆ. ಕುಮಾರಸ್ವಾಮಿ (ಬೇಲೂರು): ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸುವರೆ

ಅ. 1-3-95ರಂದು ಹಳೇಬೀಡಿನಲ್ಲಿ ವಿದ್ಯುತ್ ತಂತಿ ಬಿದ್ದು 26 ಎಕರೆ ಜಮೀನಿನಲ್ಲಿ ಬೆಳೆದು ಕಟಾವಿಗೆ ಬಂದಿದ್ದ ಕಬ್ಬಿನ ಬೆಳೆ ಪೂರ್ಣ ಸುಟ್ಟು ರೈತರಿಗೆ ನಷ್ಟ ಉಂಟಾಗಿರುವ ವಿಷಯ ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ. ಹಾಗಿದ್ದಲ್ಲಿ ರೈತರಿಗೆ ಕೊಟ್ಟ ಪರಿಹಾರವೇನು?

ಶ್ರೀ ಆರ್.ಎಲ್.ಜಾಲಪ್ಪ(ಕಂದಾಯ ಸಚಿವರು):

ಅ. ಹೌದು.

ಆ. 25 ರೈತರ ಸುಮಾರು 20 ಎಕರೆ 3 ಗುಂಟೆ ಜಮೀನಿನಲ್ಲಿ ಬೆಳೆದು ನಿಂತಿದ್ದ ಕಬ್ಬು ಪೂರ್ಣವಾಗಿ ನಾಶವಾಗಿದ್ದು, ರೂ. 5,90,750-00 ಗಳ ನಷ್ಟ ಉಂಟಾಗಿದೆಯೆಂದು ಅಂದಾಜಿಸಲಾಗಿದೆ. ನೈಸರ್ಗಿಕ ವಿಕೋಪ ಪರಿಹಾರ ನಿಯಮಾವಳಿಯ ಅನ್ವಯ, ಪ್ರತಿ ಹೆಕ್ಟೇರ್‌ಗೆ ರೂ. 500-00 ರಂತೆ ಒಟ್ಟು ರೂ. 4040-00ಗಳನ್ನು ಪರಿಹಾರವಾಗಿ ನೀಡಲಾಗದೆ.

53

E S I Hospital Doctors No's

**ವಿಷಯ: ಇ.ಎಸ್.ಐ. ಆಸ್ಪತ್ರೆಗಳಲ್ಲಿರುವ ವೈದ್ಯರುಗಳ ಸಂಖ್ಯೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 187(273)

ಶ್ರೀ ಎಸ್.ಎಂ.ನಾಗರಾಜ್ (ತರೀಕೆರೆ): ಮಾನ್ಯ ಕಾರ್ಮಿಕ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದ ಇ.ಎಸ್.ಐ. ಆಸ್ಪತ್ರೆಗಳಲ್ಲಿ ಎಷ್ಟು ಜನ ವೈದ್ಯರು ಕೆಲಸ ಮಾಡುತ್ತಿದ್ದಾರೆ;

ಆ. ಇ.ಎಸ್.ಐ. ಆಸ್ಪತ್ರೆಗಳಲ್ಲಿ ಖಾಲಿ ಇರುವ ವೈದ್ಯರ ಸಂಖ್ಯೆ ಎಷ್ಟು?

ಶ್ರೀ ಸಿ. ಗುರುನಾಥ್ (ಕಾರ್ಮಿಕ ಸಚಿವರು):

ಅ. 137

ಆ. 51

**ವಿಷಯ: ಅಡಿಕೆ ತೋಟಗಳಲ್ಲಿನ ಹಳದಿ ಎಲೆಯ ರೋಗ ಬಾಧೆಯನ್ನು ತಡೆಗಟ್ಟುವ ಬಗ್ಗೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 189(805)

ಶ್ರೀ ಅರಗಜ್ಞಾನೇಂದ್ರ (ತೀರ್ಥಹಳ್ಳಿ): ಮಾನ್ಯ ತೋಟಗಾರಿಕೆ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಯ ಮಲೆನಾಡು ಭಾಗದ ಕೆಲವು ತಾಲ್ಲೂಕುಗಳ ರೈತರ ಅಡಿಕೆ ತೋಟಗಳಲ್ಲಿ ಹಳದಿ ಎಲೆಯ ರೋಗ ಬಾಧೆ ಇರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಇದನ್ನು ತಡೆಗಟ್ಟಲು ಸರ್ಕಾರ ಏನು ಕ್ರಮ ಕೈಗೊಂಡಿದೆ?

ಇ. ಇದುವರೆಗೆ ಈ ರೋಗಭಾದೆ ಎಷ್ಟು ಎಕರೆಗೆ ತಗುಲಿದೆ ಸಂಬಂಧಿಸಿದ ರೈತರಿಗೆ ಪರಿಹಾರ ಕೊಡುವ ಯೋಜನೆ ಸರ್ಕಾರದ ಪರಿಶೀಲನೆಯಲ್ಲಿದೆಯೇ?

ಶ್ರೀ ಡಿ.ಟಿ. ಜಯಕುಮಾರ್( ತೋಟಗಾರಿಕೆ ರಾಜ್ಯ ಸಚಿವರು ):

ಅ. ಹೌದು.

ಆ. ಈ ರೋಗ ನಿಯಂತ್ರಣಕ್ಕೆ ಯಾವುದೇ ಪರಿಹಾರ ಇಲ್ಲದ್ದರಿಂದ ಹಳದಿ ಎಲೆ ರೋಗ ಬಾಧಿತ ಗಿಡಗಳನ್ನು ಕಿತ್ತು ನಾಶಪಡಿಸಲು ಪ್ರತಿ ಗಿಡಕ್ಕೆ ರೂ. 100.00 ಗಳ ಪರಿಹಾರ ಧನವನ್ನು ನೀಡಲಾಗುತ್ತದೆ.

ಇ. ಚಿಕ್ಕಮಗಳೂರು ಜಿಲ್ಲೆಯಲ್ಲಿ 313 ಎಕರೆಯಲ್ಲಿ ಮತ್ತು ಶಿವಮೊಗ್ಗ ಜಿಲ್ಲೆಯಲ್ಲಿ 400 ಎಕರೆಯಲ್ಲಿ ಈ ರೋಗ ಬಾಧೆ ಕಂಡು ಬಂದಿದೆ; ರೈತರಿಗೆ ರೋಗ ಬಾಧಿತ ಗಿಡಗಳನ್ನು ಕಿತ್ತು ನಾಶ ಪಡಿಸಲು ಪ್ರತಿ ಗಿಡಕ್ಕೆ ಒಂದು ನೂರು ರೂಪಾಯಿಯಂತೆ ಸಹಾಯ ಧನ ಈಗಾಗಲೇ ಕೇಂದ್ರ ವಲಯ ಅಡಿಕೆ ಅಭಿವೃದ್ಧಿ ಯೋಜನೆಯಡಿಯಲ್ಲಿ ನೀಡಲಾಗುತ್ತಿದೆ.

## Sub: Sanction of Financial Assitance to B.S.S.K Ltd., Hallikhed, Bidar District

Starred L.A. Question No. : 190(1008)

Sri Basavaraja Patil Attur(Basava Kalyana) : Will the Minister for co-operation be pleased to state

a. Whether it is a fact, that Bidar Sahakari Sakkare Karkhane Ltd., Jallikhed is facing with financial crisis ;

b. If so, the amount required to run the aforesaid factory to the full capacity;

c. Whether it has come to the notice of the government that the aforesaid factory has not paid Sales Tax arrears for the past three years;

d. If so, whether the Government is aware that the Sales Tax department authorities have locked the factory;

e. The steps proposed to be taken to provide financial assistence to the aforesaid factory?

Sri. P.C.Siddanagowda (Minister of State for Sugar, Textiles, Science & Technology Ecology and Environment):

a. Yes.

b. The factory is facing financial crisis with regard to payment of :

Purchase Tax arrears and payment of over due an instalments to N.C.D.C on the term loan availed for the expansion project presently of the factory does not require any money to run the factory to the full capacity.

c. It has come to the notice of the Government that the Bidar Sahakari Sakkare Karkhane Ltd., Hallikhed has not paid purchase Tax Arrears for the year 1993-94 and also not paying for the current season (1994-95).

d. The Sales Tax Department authority have not locked the factory. But, they have attached the Karkhanes bank Account for not clearing the purchase tax arrears

of Rs. 115/- lakhs for the year 1993-94. However, by subsequent orders, the concerned Slaes-Tax Authorities have kept the above said atttachment order in abeyance.

e. At present, there is no proposal before the Government to provide financial assistance to this factory.

**ವಿಷಯ: ಮೈಸೂರು ಜಿಲ್ಲೆಯಲ್ಲಿ ಹತ್ತಿ ಬೀಜದ ಸರಬರಾಜು**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 192(1238)

ಶ್ರೀ ಬಿ.ಬಿ.ಶಿವಪ್ಪ(ಸಕಲೇಶಪುರ) : ಮಾನ್ಯ ಕೃಷಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಮೈಸೂರು ಜಿಲ್ಲೆಗೆ ಹತ್ತಿ ಬೀಜವನ್ನು ಸರಬರಾಜು ಮಾಡಲಾಗಿದೆಯೇ?

ಆ. ಹಾಗಿದ್ದಲ್ಲಿ ಯಾವಾಗ ಸರಬರಾಜು ಮಾಡಲಾಗಿದೆ.

ಇ. ಹಾಗಿದ್ದಲ್ಲಿ ಎಷ್ಟು ಪ್ರಮಾಣದಲ್ಲಿ ಸರಬರಾಜು ಮಾಡಿದೆ

ಶ್ರೀ ಸಿ. ಭೈರೇಗೌಡ(ಕೃಷಿ ಸಚಿವರು):

ಅ. ಮುಂಗಾರು ಹಂಗಾಮು ಇನ್ನೂ ಪ್ರಾರಂಭವಾಗಬೇಕಾಗಿರುವುದರಿಂದ ಮೈಸೂರು ಜಿಲ್ಲೆಗೆ 1995-96ನೇ ಸಾಲಿನಲ್ಲಿ ಇನ್ನು ಹತ್ತಿ ಬೀಜಗಳನ್ನು ಸರಬರಾಜು ಮಾಡಿರುವುದಿಲ್ಲ.

ಆ. ಉದ್ಭವಿಸುವುದಿಲ್ಲ.

ಇ. ಉದ್ಭವಿಸುವುದಿಲ್ಲ.

**ಚುಕ್ಕೆ ಗುರುತಿಲ್ಲದ ಪ್ರಶ್ನೋತ್ತರಗಳು**

**ವಿಷಯ : ಗ್ರಾಮಾಂತರ ಪ್ರದೇಶಗಳಲ್ಲಿ ಸಾರಿಗೆ ವ್ಯವಸ್ಥೆ ಸುಧಾರಣೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :621(1248)

ಶ್ರೀ ಶಿವಾನಂದ (ಚಿಕ್ಕಬಳ್ಳಾಪುರ): ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಗ್ರಾಮಾಂತರ ಪ್ರದೇಶಗಳಲ್ಲಿ ಸಾರಿಗೆ ವ್ಯವಸ್ಥೆ ಸುಧಾರಿಸದೆ ಜನರಿಗೆ ಅಪಾರ ತೊಂದರೆಯಾಗಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ.

ಆ. ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಕೆ.ಎಸ್.ಬಿಳಗಿ (ಸಾರಿಗೆ ಸಚಿವರು) :

ಅ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಗ್ರಾಮೀಣ ಪ್ರದೇಶದಲ್ಲಿ ಸಾಕಷ್ಟು ಬಸ್ಸುಗಳನ್ನು ಓಡಿಸುತ್ತಿದೆ. ಆದಾಗ್ಯೂ, ಕೆಲವು ಮಾರ್ಗಗಳಲ್ಲಿ ಕೆಲವು ಬಸ್ಸುಗಳು ಪ್ರಯಾಣಿಕರ ಹೆಚ್ಚಿನ ಒತ್ತಡದ ವೇಳೆಗಳಲ್ಲಿ ತುಂಬಿ ಸಂಚರಿಸುತ್ತಿವೆ.

ಆ. ಇರುವ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಪ್ರಯಾಣಿಕರ ಬೇಡಿಕೆಯನ್ನು ಪರಿಗಣಿಸಿ ಬಸ್ಸುಗಳನ್ನು ಹೆಚ್ಚಿಸಲು ಸಂಸ್ಥೆಯು ಪ್ರಯತ್ನ ಮಾಡುತ್ತಿದೆ.

**ವಿಷಯ : ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 622(1040)

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ (ಗುರುವಿತಕಲ್): ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. 1994ರ ಡಿಸೆಂಬರ್‌ನಿಂದ 1995ರ ಫೆಬ್ರವರಿವರೆಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರಾಜ್ಯದಲ್ಲಿ ಬಿಡುಗಡೆ ಮಾಡಿದ ಹಣ (ಜಿಲ್ಲಾವಾರು ವಿವರಗಳನ್ನು ನೀಡುವುದು)

ಆ. ಸರ್ಕಾರವು ಗುಲ್ಬರ್ಗಾ ಜಿಲ್ಲೆಯಲ್ಲಿ ನೈಸರ್ಗಿಕ ವಿಕೋಪಗಳಡಿಯಲ್ಲಿನ ಕಾಮಗಾರಿಗಳನ್ನು ಪೂರ್ತಿಗೊಳಿಸಿದೆಯೇ? (ತಾಲ್ಲೂಕುವಾರು ವಿವರ ನೀಡುವುದು)

ಇ. ಇಲ್ಲದಿದ್ದಲ್ಲಿ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗಿದೆಯೇ?

ಶ್ರೀ ಆರ್.ಎಲ್. (ಕಂದಾಯ ಸಚಿವರು):

ಅ. ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ರಾಜ್ಯಲ್ಲಿ ಡಿಸೆಂಬರ್ 94 ರಿಂದ ಫೆಬ್ರವರಿ 94ರ ಅವಧಿಯಲ್ಲಿ ಬಿಡುಗಡೆಯಾದ ಜಿಲ್ಲಾವಾರು ಹಣದ ವಿವರ

| ಕ್ರ. ಸಂ. | ಜಿಲ್ಲೆಯ ಹೆಸರು | ಮೊಬಲಗು (ರೂ. ಲಕ್ಷಗಳಲ್ಲಿ) |
|---|---|---|
| 1. | ಕೋಲಾರ | 1.00 |
| 2. | ತುಮಕೂರು | 15.00 |
| 3. | ಚಿತ್ರದುರ್ಗ | 7.00 |
| 4. | ಚಿಕ್ಕಮಗಳೂರು | 2.00 |
| 5. | ಗುಲ್ಬರ್ಗಾ | 10.00 |
| 6. | ಬೆಳಗಾವಿ | 10.00 |
| | ಒಟ್ಟು | 45.00 |

ಆ. ಪೂರ್ತಿಗೊಳಿಸಲಾಗದ ಕಾಮಗಾರಿಗಳ ತಾಲ್ಲೂಕುವಾರು ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ.

ಇ. ಪೂರ್ಣಗೊಳಿಸದೇ ಇರುವ ಕಾಮಗಾರಿಗಳನ್ನು ಪೂರ್ತಿಗೊಳಿಸಲು ಸಂಬಂಧಪಟ್ಟ ಕಾರ್ಯ ನಿರ್ವಹಣಾ ಅಧಿಕಾರಿಗಳಿಗೆ ಅವರವರ ಇಲಾಖಾ ಅನುದಾನದಿಂದ ವೆಚ್ಚ ಬರಿಸಿಕೊಂಡು ಪೂರ್ತಿಗೊಳಿಸಲು ಸೂಚಿಸಲಾಗಿದೆ.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1040ಕ್ಕೆ ಅನುಬಂಧ-1

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ವಿವರ | ಅಂದಾಜು ಪತ್ರಿಕೆ | ವೆಚ್ಚ |
|---|---|---|---|
| 1 | 2 | 3 | 4 |
| | **ಯಾದಗೀರ್ ತಾಲ್ಲೂಕು:** | | |
| 1. | ಅಜಲಾಪುರ - ನಂದೇಪಲ್ಲಿ ಕೂಡುರಸ್ತೆ ಮೇಲೆ ಕಾಮಗಾರಿ ದುರಸ್ಥಿ | 0.25 | 0.25 |
| 2. | ಜಿಲೇಲಾ ಕೂಡು ರಸ್ತೆ ದುರಸ್ಥಿ | 0.50 | 0.50 |
| 3. | ಕಂದಪೂರ-ಮಾದಾವಾರ ಕೊಡು ರಸ್ತೆ ದುರಸ್ಥಿ 8.50 ಕಿ.ಮೀ. | 0.25 | 0.25 |
| 4. | ಕಂದಪೂರ-ಮಾದಾವಾರ ಕೂಡುರಸ್ತೆ ಕಾಸ್‌ವೇ ದುರಸ್ಥಿ | 0.25 | 0.25 |
| 5. | ವಡವಟ ರಸ್ತೆ ಮೇಲಿನ ಸಿಡಿ ಕಾಮಾಗಾರಿ ದುರಸ್ಥಿ | 0.25 | 0.25 |
| 6. | ಹೊಸಳ್ಳಿ-ಆರ್.ಹೊಸಳ್ಳಿ, ಕಾಂಡರಸ್ತೆ ದುರಸ್ಥಿ | 0.30 | 0.30 |
| 7. | ಯಾದ್‌ಗೀರ್ ಕೋಣಹೊಳರಸ್ತೆ ದುರಸ್ಥಿ ವಯಾ ವರ್ಕನಳ್ಳಿ | 0.50 | 0.50 |
| 8. | ಬದೇಪಳ್ಳಿ-ದುಪ್ಪಳ್ಳಿ ರಸ್ತೆ ಸುಧಾರಣೆ | 0.50 | 0.50 |
| 9. | ಪಸಮಾಳ-ರಸ್ತೆ ಡೈವರ್ಸನ್ ದುರಸ್ಥಿ | 2.00 | 2.00 |
| 10. | ಸುತಾರ ಹೊಸಳ್ಳಿ-ಕೊಟಗೇರ ರಸ್ತೆ ದುರಸ್ಥಿ | 1.00 | 1.00 |
| 11. | ಮೈಲಾಪುರ ಟ್ಯಾಂಕ್-ಮೈಲಾಪುರವರೆಗೆ ರಸ್ತೆ | 0.20 | 0.20 |
| 12. | ಅಶನಾಳ್ ಕೆರೆ ಪೀಡ ರಜಾನಳ | 0.10 | 0.10 |
| 13. | ಕಂಜಗಾರಹಳ್ಳಿ ಕೆರೆ ದುರಸ್ಥಿ | 8.50 | 8.50 |
| 14. | ಆರ್.ಹೊಳಳ್ಳಿ ಅಣೆಕಟ್ಟು ದುರಸ್ಥಿ | 0.50 | 0.50 |
| 15. | ಕರಣಗಿ ಕೆರೆ ದುರಸ್ಥಿ | 5.10 | 5.10 |
| 16. | ಬಾಲ್‌ಶೇಡಾ ನಾಗಲಾಕುಂಟ ಕೆರೆ ದುರಸ್ಥಿ | 9.55 | 9.55 |
| 17. | ಗುರ್ ಮಿಠ್ಕಲ್ ಪುಟಪಾಕ ರಸ್ತೆ ದುರಸ್ಥಿ | 4.45 | 4.45 |
| 18. | ಚಂದ್ರಗಿ ಗುಂಡಕಲ್ಲು ಕೊರಕಲ ತಡೆ ರಸ್ತೆ | 0.30 | 0.30 |
| 19. | ಸೈದಾಪುರ ಅಜಲಾಪುರ ರಸ್ತೆ | 0.50 | 0.50 |
| 20. | ಯಾದ್‌ಗೀರ್ ಸೈದಾಪುರ ರಸ್ತೆ | 1.00 | 1.00 |
| | **ಷಹಾಪುರ ತಾಲ್ಲುಕು:** | | |
| 1. | ಹಾಲ್‌ಗೇರಾ-ಕುಮನೂರ ರಸ್ತೆ ಸುಧಾರಣೆ | 1.50 | 1.50 |
| 2. | ತುಮಕೂರ-ಗುಂಡಲೂರ ರಸ್ತೆ ಸುಧಾರಣೆ | 2.00 | 2.00 |
| 3. | ವಡಗೇರಾ ಪುರ ರಸ್ತೆ ಸೇತುವೆ ದುರಸ್ಥಿ | 0.50 | 0.50 |

| 1 | 2 | 3 | 4 |
|---|---|---|---|
| 4. | ಕುರಿಹಾಳ-ತುಮಕೂರ ರಸ್ತೆ ದುರಸ್ತಿ | 0.50 | 0.50 |
| 5. | ತಂಗಡಗಿ-ಗುಂಡಹಳ್ಳಿ ತಾಂಡಾ ರಸ್ತೆ ದುರಸ್ಥಿ | 1.00 | 1.00 |
| 6. | ಸಿಂಧಗಿ-ಶಹಾಪುರ ರಸ್ತೆ ಸುಧಾರಣೆ | 0.20 | 0.20 |
| 8. | ಸರ್ವಾಳ್ ಅಣಬಿ ರಸ್ತೆ ಸುಧಾರಣೆ | 0.80 | 0.80 |
| 8. | ಶ್ರೀರಂಗಪಟ್ಟಣ-ಬೀದರ್ ರಸ್ತೆ ಅಡಿಗಾಲುವ ದುರಸ್ತಿ | 0.20 | 0.20 |
| 9. | ಸೂಲಗೊರ ಜೆ. ಚೆಕ್‌ಡ್ಯಾಂ | 0.60 | 0.60 |
| | ಶೋರಾಪುರ ತಾಲ್ಲೂಕು: | | |
| 1. | ಅಮರಿಹಾಳ-ಓರಾಪುರ ಕಿ.ಮೀ. 3.50 ದುರಸ್ತಿ | 0.35 | 0.35 |
| 2. | ಹೂವಿನಹಳ್ಳಿ ಕೂಡುರಸ್ತೆ ದುರಸ್ಥಿ | 3.50 | 3.50 |
| 3. | ಹೂವಿನ ಹಳ್ಳಿ ಅಂದ್ರಾಳ ಜೆ.ರಸ್ತೆ ದುರಸ್ತಿ | 0.30 | 0.30 |
| 4. | ಮೊಲ್ಲಾದಹಳ್ಳಿ-ಕೆಂಬಾವಿ ರಸ್ತೆ | 1.00 | 1.00 |
| 5. | ಮಲ್ಲಾವಿ-ಮಲ್ಲಾಕೆ ರಸ್ತೆ | 0.25 | 0.25 |
| 6. | ಯಾಳಗಿ-ಮಲ್ಲಿಹಾಳ ಪ್ಯಾಸೇಜ | 0.60 | 0.60 |
| 7. | ಗುಂಡಲಿಗೇಳ-ಬಂದಹೆಗ್ಗನೂರ | 0.60 | 0.60 |
| 8. | ಮಳ್ಳಿ-ಕೆಂಬಾವಿ ರಸ್ತೆ ದುರಸ್ಥಿ | 0.50 | 0.50 |
| 9. | ಕುಂಬಾರತಾಂಡಾ ಕೂಡು ರಸ್ತೆ ಸಿಡಿ ಕಾಮಗಾರಿ ದುರಸ್ತಿ | 0.40 | 0.40 |
| 10. | ದೇವರಗುರಾಲ್-ಬೈರಮಡಿ ರಸ್ತೆ | 2.00 | 2.00 |
| 11. | ನಗಮೂರ-ಕೆಂಬಾವಿ ರಸ್ತೆ | 0.50 | 0.50 |
| 12. | ಗುಂಡಲಗೇರ-ಕಿರನಹಳ್ಳಿ | 0.25 | 0.25 |
| 13. | ನಗನೂರ ರಸ್ತೆ ಹತ್ತಿರ ಹರಿಜನವಾಡ ಕೆಂಬಾವಿ ರಸ್ತೆ ದುರಸ್ಥಿ | 0.25 | 0.25 |
| 14. | ಬೂದನೂರ-ನಗರವಾಳ ರಸ್ತೆ ದುರಸ್ಥಿ | 2.50 | 2.50 |
| 15. | ಗೆದ್ದನಮಲಿ ಹರಿಜನವಾಡ ಪ್ರವಾಹ ನಿಯಂತ್ರಣ ಗೋಡೆ ನಿರ್ಮಾಣ | 0.50 | 0.50 |
| 16. | ಹುಣಸಗಿ ಹರಿಜನವಾಡ ರಸ್ತೆ ದುರಸ್ಥಿ | 1.00 | 1.00 |
| 17. | ಹುಣಕೇರಿ-ಅಮ್ಮಾಪುರ ರಸ್ತೆ ದುರಸ್ಥಿ | 1.00 | 1.00 |
| 18. | ಹುಣಸಗಿಯಲ್ಲಿ ಒಳಚರಂಡಿ ನಿರ್ಮಾಣ | 1.00 | 1.00 |
| 19. | ನೀಲಕಂಠರಾಯನ ಗುಡಿ ದುರಸ್ತಿ | 0.25 | 0.25 |
| 20. | ಲಾಲಸಾಚಿ-ಬೈಲಪ್ಪ ದರ್ಗಾ ದುರಸ್ಥಿ ಗೊಡ್ರಿಹಾಳ | 0.25 | 0.25 |
| 21. | ಬೂದಿಹಾಳ ಉಪ್ಪಲದಿನ್ನ ರಸ್ತೆ ದುರಸ್ಥಿ | 0.50 | 0.50 |
| 22. | ಅಗ್ನಿ ಹರಿಜನವಾಡ ಕೂಡು ರಸ್ತೆ ಸಿಡಿ ಕಾಮಗಾರಿ | 0.25 | 0.25 |
| 23. | ಶೋರಾಪೂರ ಕೆಂಬಾವಿ ರಸ್ತೆ ದುರಸ್ಥಿ | 1.50 | 1.50 |

| 1 | 2 | 3 | 4 |
|---|---|---|---|
| 24. | ತಿಂಥಣಿಪಿ-ಬರಶೆಟ್ಟಿಕಾಕಾ ರಸ್ತೆ ದುರಸ್ಥಿ | 0.50 | 0.50 |
| 25. | ದೇವಾಪುರ-ಮಾಳನಾರ ರಸ್ತೆ ದುರಸ್ಥಿ | 4.00 | 4.00 |
| 26. | ರಾಯಗಾರ ಕೆರೆ ದುರಸ್ಥಿ | 0.45 | 0.45 |
| 27. | ಮಾದಗುಂಡಾಳ ಕೆರೆ ದುರಸ್ಥಿ | 0.70 | 0.70 |
| | ಜೇವರ್ಗಿ ತಾಲ್ಲೂಕು | | |
| 1. | ಜೇವರ್ಗಿ ಜರಟಗಿಯಿಂದ ಕೂಡು ರಸ್ತೆ ದುರಸ್ಥಿ | 0.50 | 0.50 |
| 2. | ಕುಳಗೇರ ಬಿತ್ತಿಬಸವಣ್ಣ ರಸ್ತೆ ದುರಸ್ಥಿ | 1.00 | 1.00 |
| 3. | ಕುಳಗೇರ-ಹೊನ್ನಳ್ಳಿ ರಸ್ತೆ ದುರಸ್ಥಿ | 1.00 | 1.00 |
| 4. | ದುಮ್ಮದ್ರಿ ಸಿಗರತಹಳ್ಳಿ ರಸ್ತೆ ದುರಸ್ಥಿ | 1.00 | 1.00 |
| 5. | ಚಿಗಲಹಳ್ಳಿ-ಮಳ್ಳಿರಸ್ತೆ ದುರಸ್ಥಿ | 5.50 | 5.50 |
| 6. | ಕೂಡಹಿಪ್ಪರಗ ಕೂಡು ರಸ್ತೆ ದುರಸ್ಥಿ | 1.60 | 1.60 |
| 7. | ಕಟ್ಟಿಸಂಗಾವಿ-ಯನಗುಂಟಿ ರಸ್ತೆ ದುರಸ್ಥಿ | 1.60 | 1.60 |
| 8. | ದದ್ದೇವಾಡಿ-ಕೂಡಿ ರಸ್ತೆ ದುರಸ್ಥಿ | 4.50 | 4.50 |
| 9. | ಚಿಕ್ಕಮೂಡಬಾಳ-ಬಳಬಟ್ಟಿ ರಸ್ತೆ ದುರಸ್ಥಿ | 7.75 | 7.75 |
| 10. | ನಾಗರಾಣಿ ಏತನೀರಾವರಿ ಯೋಜನೆ ಕಾಲುವೆ | 2.00 | 2.00 |
| | ಅಫಜಲ್‌ಪುರ ತಾಲ್ಲೂಕು : | | |
| 1. | ತೆಲ್ಲೂರ ಸೇತುವೆ ರಸ್ತೆ ದುರಸ್ಥಿ | 2.50 | 2.50 |
| 2. | ದೇವಗಾಪೂರ ರಸ್ತೆ ತೆಲ್ಲೂರ, ಸೇತುವೆ ದುರಸ್ಥಿ | 0.50 | 0.50 |
| 3. | ಗುದ್ದಣಗಿ ಕೂಡು ರಸ್ತೆ ಸುಧಾರಣೆ | 0.50 | 0.50 |
| 4. | ಗೌಡಗುಂವ ಗ್ರಾಮದ ಸೇತುವೆ ದುರಸ್ಥಿ | 0.50 | 0.50 |
| 5. | ಸಿದನೂರ ಗ್ರಾಮಕ್ಕೆ ಕ್ರಾಸ್‌ವೇ ನಿರ್ಮಾಣ | 0.50 | 0.50 |
| 6. | ತೆಲ್ಲೂರ-ಕರಕನಹಳ್ಳಿ ರಸ್ತೆ ಮೇಲೆ ಸೇತುವೆ ನಿರ್ಮಾಣ | 0.50 | 0.50 |
| 7. | ಕಲ್ಲೂರ-ಕೂಡುರಸ್ತೆ ದುರಸ್ಥಿ | 0.50 | 0.50 |
| 8. | ಗುಡ್ಡೇವಾಡಿ ಕ್ರಾಸ್‌ವೇ ನಿರ್ಮಾಣ | 0.50 | 0.50 |
| | ಸೇಡಂ ತಾಲ್ಲೂಕು: | | |
| 1. | ಹಂಡದಕಿ ಕೆರೆ ದುರಸ್ಥಿ | 1.20 | 1.20 |
| 2. | ಇಟಕಾಲ ಕೆರೆ ದುರಸ್ಥಿ | 1.50 | 1.50 |
| 3. | ತದಲಾಪೂರ ಕೂಡುರಸ್ತೆ ದುರಸ್ಥಿ | 0.20 | 0.20 |
| 4. | ಬಟಗೇರಾ-ಮೋತಕಪಲ್ಲಿ ರಸ್ತೆ ಸೇತುವೆ ದುರಸ್ಥಿ | 1.25 | 1.25 |
| 5. | ಇಟಕಾಲ ತಾಂಡಾ ರಸ್ತೆ ದುರಸ್ಥಿ | 2.95 | 2.95 |
| 6. | ಅನಂತಪುರ ಕೂಡು ರಸ್ತೆ ದುರಸ್ಥಿ | 0.20 | 0.20 |
| 7. | ಕಲರಂ ಕೂಡುರಸ್ತೆ ದುರಸ್ಥಿ | 0.20 | 0.20 |

| 1 | 2 | 3 | 4 |
|---|---|---|---|
| 8. | ಕೊಲಕುಂದಾದಿಂದ ಸಂಗಾವಿ ರಸ್ತೆ ದುರಸ್ಥಿ | 1.25 | 1.25 |
| 9. | ತರನಹಳ್ಳಿ ಕೂಡು ರಸ್ತೆ ದುರಸ್ಥಿ | 0.45 | 0.45 |
| 10. | ಕಾಚೂರ ಕೂಡು ರಸ್ತೆ ದುರಸ್ಥಿ | 0.25 | 0.25 |
| 11. | ಹೆಳವನೂರ ಕೂಡು ರಸ್ತೆ ದುರಸ್ಥಿ | 0.25 | 0.25 |
| 12. | ಜೇವನೂರ ಕೂಡು ರಸ್ತೆ | 0.25 | 0.25 |
| 13. | ಕಬ್ಬನವಲ್ಲಿ ಚೆಕ್ ಡ್ಯಾಂ | 0.65 | 0.65 |
| | **ಚಿತ್ತಾಪೂರ ತಾಲ್ಲೂಕು:** | | |
| 1. | ಇವಣಿ ಬೆಳಗುಂಪಾ ರಸ್ತೆ ದುರಸ್ಥಿ | 0.50 | 0.50 |
| 2. | ಬಂಚಲಗಾ ದೋಣಗಾಂವ ರಸ್ತೆ ದುರಸ್ಥಿ | 0.50 | 0.50 |
| 3. | ಯರಗಲ ಜೇವಣಗಿ ರಸ್ತೆ ದುರಸ್ಥಿ | 0.50 | 0.50 |
| 4. | ಯರಗಲ ಚಿತ್ತಾಪೂರ ರಸ್ತೆ ದುರಸ್ಥಿ | 0.70 | 0.70 |
| 5. | ಯರಗೋಳ ಸಿಡಿ ಕಾಮಗಾರಿಗಳು | 0.20 | 0.20 |
| 6. | ಬೆಣ್ಣೂರ ಕೆ ಕೂಡು ರಸ್ತೆ ಸಿ.ಡಿ. ಕಾಮಗಾರಿ | 0.20 | 0.20 |
| 7. | ಚಿತ್ತಾಪೂರ ಮಳಖೇಡ ದರ್ಗಾ | 1.00 | 1.00 |
| | **ಚಿಂಚೋಳಿ ತಾಲ್ಲೂಕು:** | | |
| 1. | ಕಲ್ಲೂರ ಸುಲೇಪೇಟ ರಸ್ತೆ ಸುಧಾರಣೆ | 1.00 | 1.00 |
| 2. | ಕೊಡ್ಲಿ ಗುಬ್ಬುನಗೂಡ ರಸ್ತೆ ಸಿ.ಡಿ. ಕಾಮಗಾರಿ | 1.00 | 1.00 |
| 3. | ಒಮ್ಮನಗೋಡ ದಾವಲದಪೂರ ರಸ್ತೆ ಸುಧಾರಣೆ | 1.00 | 1.00 |
| 4. | ಯಲಮಾಮಡಿ ಚೆಕ್ ಡ್ಯಾಮ್ | 0.70 | 0.70 |
| | ಗುಲ್ಬರ್ಗಾ ತಾಲ್ಲೂಕು: | | |
| 1. | ಮೆಳಗುಂದಾ ಕೆ-ಮೆಳಕುಂದಾ ಬಳಿ ರಸ್ತೆ ಕಾಮಗಾರಿ | 0.50 | 0.50 |
| 2. | ಕಮಲಾಪೂರ ರೆವಗಿ ಕೂಡು ರಸ್ತೆ ಜೇವಣಗಿ | | |
| 3. | ಬಬಲಾದ ಸಿರಗಾಪೂರ ಕೊಡು ರಸ್ತೆ ಸಮೀಪ ದುರಸ್ಥಿ | 0.50 | 0.50 |
| 4. | ಗುಲ್ಬರ್ಗಾ ಹೊಸೂರ ರಸ್ತೆ | 1.75 | 1.75 |
| 5. | ಶ್ರೀರಂಗಪಟ್ಟಣ ಬೀದರ್ ರಸ್ತೆ | 1.95 | 1.95 |
| 6. | ನಿಂಬರ್ಗಾ ಮಾಡಿಯಾಳ ರಸ್ತೆ | 1.75 | 1.75 |
| 7. | ಕಿಣ್ಣಿಸರಫೋಸ ಗುಂಡಕಲ್ಲು ಕೊರಕಲ | 0.15 | 0.15 |
| 8. | ಮಹಾನಗರಸಭೆ ಗುಲ್ಬರ್ಗಾ ವ್ಯಾಪ್ತಿಗೆ ಒಳಪಟ್ಟ ಕಾಮಗಾರಿಗಳ ದುರಸ್ಥಿ - 16 | 4.125 | 4.125 |

| 1 | 2 | 3 | 4 |
| --- | --- | --- | --- |
| | ಆಳಂದ ತಾಲ್ಲೂಕು: | | |
| 1. | ಸರಸಂಬಾ ಸೇತುವೆ ದುರಸ್ಥಿ | 1.50 | 1.50 |
| 2. | ತಂಬಾಕವಾಡಿ ರಸ್ತೆ ದುರಸ್ಥಿ | 1.00 | 1.00 |
| 3. | ಶಾಖಾಪೂರ ಜಿರಳ್ಳಿ ರಸ್ತೆ ಸುಧಾರಣೆ | 0.75 | 0.75 |
| 4. | ಹೆಬಳಿ ನಿರಗುಡಿ ರಸ್ತೆ ಸುಧಾರಣೆ | 0.50 | 0.50 |
| 5. | ಅಳಂದ ನಿರಗುಡು ರಸ್ತೆ ಸುಧಾರಣೆ | 0.50 | 0.50 |
| 6. | ಮಾಡಿಯಾಳ ನಿಂಬರ್ಗಾ ರಸ್ತೆ ಸುಧಾರಣೆ | 0.50 | 0.50 |
| 7. | ಖಜೂರಿ ಸೀಮೆಯಿಂದ ವಾಡನಾವಳಿ ರಸ್ತೆ ಸುಧಾರಣೆ | 0.50 | 0.50 |
| 8. | ತುಗಾಂವ ಚಿಕ್ಕಚೋರಾ ಸಂಗಮ ರಸ್ತೆ ದುರಸ್ಥಿ | 0.50 | 0.50 |
| 9. | ಅಳಂಗಾ ಗಡ್ಡೆಗಾಂವ ರಸ್ತೆ ಸುಧಾರಣೆ | 0.50 | 0.50 |
| 10. | ಕವಲಾಗಾ ಕೆ ಚೆಕ್ ಡ್ಯಾಮ್ | 0.50 | 0.50 |

## ವಿಷಯ: ರಸ್ತೆ ಸಾರಿಗೆ ಸಂಸ್ಥೆಯಲ್ಲಿ ವಿಭಾಗ ಮಟ್ಟದ ಬಡ್ತಿ ಹುದ್ದೆ ಕುರಿತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 623(1204)

ಶ್ರೀ ಟಿ.ಬಿ. ಜಯಚಂದ್ರ (ಕಳ್ಳಂಬೆಳ್ಳ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ವಿಭಾಗ ಮಟ್ಟದಲ್ಲೇ ಬಡ್ತಿ ನೀಡಿ ತುಂಬಬೇಕಾದ ಅಂಕಿ-ಅಂಶ ಸಹಾಯಕರುಗಳ ಹುದ್ದೆ ಎಷ್ಟು; ಇವುಗಳನ್ನು ತುಂಬಲು ಏನು ಶಿಷ್ಟಾಚಾರವನ್ನು ಅನುಸರಿಸಿದೆ; (ಹೆಸರು ಸ್ಥಳದ ಮಾಹಿತಿಯೊಡನೆ)

ಆ. 1991ನೇ ಸಾಲಿನಿಂದ ಈ ಹುದ್ದೆಗಳಲ್ಲಿ ಶಿಷ್ಟಾಚಾರವನ್ನು ಅನುಸರಿಸಿ ಹಾಗೂ ಉಲ್ಲಂಘಿಸಿ ವರ್ಗಾವಣೆ ಮಾಡಲಾದ ನೌಕರರೆಷ್ಟು? (ಪಟ್ಟಿ ನೀಡುವುದು)

ಶ್ರೀ ಕೆ.ಎಸ್.ಬಿಳಗಿ (ಸಾರಿಗೆ ಸಚಿವರು):

ಅ. ಸರ್ಕಾರದಿಂದ ಅನುಮೋದಿಸಲ್ಪಟ್ಟಿರುವ 1982ರ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಪದವೃಂದ ಮತ್ತು ನೇಮಕ ನಿಯಮಾವಳಿಗಳಂತೆ ಅಂಕಿ-ಅಂಶ ಸಹಾಯಕರ ಹುದ್ದೆಯನ್ನು ಪ್ರತಿ 3 ಖಾಲಿ ಹುದ್ದೆಗಳ ಪೈಕಿ ಮೊದಲೆರಡನ್ನು ಬಡ್ತಿಯಿಂದಲೂ ಮತ್ತೊಂದನ್ನು ನೇರ ನೇಮಕಾತಿಯಿಂದಲೂ ತುಂಬಬೇಕಾಗಿರುವುದು ಹಾಗೂ ಬಡ್ತಿ ಹುದ್ದೆಗಳನ್ನು ಜೇಷ್ಠತೆ: ಅರ್ಹತೆ ಆಧಾರದ ಮೇಲೆ ತುಂಬಲಾಗುವುದು. ಸದರಿ ಹುದ್ದೆಯು ವಿಭಾಗ ಮಟ್ಟದ ಹುದ್ದೆಯಾಗಿದ್ದು ಸುತ್ತೋಲೆ ಸಂಖ್ಯೆ: 844. ದಿನಾಂಕ : 16-11-91 ರಂತೆ ಆಯಾ ವಿಭಾಗ ಮುಖ್ಯಸ್ಥರು ಬಡ್ತಿ : ನೇರ

ನೇಮಕಾತಿ ಮಾಡಲು ಸೂಕ್ತ ಅಧಿಕಾರಿಗಳಾಗಿರುವರು. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ 19 ಸಂಚಾರ ವಿಭಾಗಗಳು ಎರಡು ಪ್ರಾದೇಶಿಕ ಕಾರ್ಯಾಗಾರಗಳು ಮತ್ತು ಕೇಂದ್ರ ಕಛೇರಿಗೆ ಅಂಕಿ ಅಂಶ ಸಹಾಯಕರ ಹುದ್ದೆಗಳ ಮಂಜೂರಾತಿ ಇದ್ದು, ಬಡ್ತಿಯ ಮೂಲಕ ತುಂಬಬೇಕಾದ ಅಂಕಿ ಅಂಶ ಸಹಾಯಕರ ಹುದ್ದೆಯು ಆಯಾ ವಿಭಾಗದ ಖಾಲಿ ಹುದ್ದೆಗಳಿಗನುಗುಣವಾಗಿರುವ ಕಾರಣ ಇಷ್ಟೇ ಎಂದು ನಿಗದಿಪಡಿಸಲು ಸಾಧ್ಯವಿರುವುದಿಲ್ಲ.

ಆ. ಒಟ್ಟು 9 ಕಾನೂನು ವಿರುದ್ಧವಾಗಿ ಅಂಕಿ-ಅಂಶ ಸಹಾಯಕರ ವರ್ಗಾವಣೆಯನ್ನು ಮಾಡಿರುವುದಿಲ್ಲ.

| | | | |
|---|---|---|---|
| 1. | ಎ.ಶ್ರೀನಿವಾಸ | ಗುಲ್ಬರ್ಗ | ಮೈಸೂರು |
| 2. | ಕೆಎಸ್.ಪ್ರಕಾಶ್ | ಹಾಸನ | ಬೆಂ.(ಗ್ರಾಮ) |
| 3. | ಮಲ್ಲಿಕಾರ್ಜುನ | ರಾಯಚೂರು | ಗುಲ್ಬರ್ಗ |
| 4. | ಮಾಥ್ಯೂಪಿ.ಸಾಮ್ಯಲ್ | ಬೆಂ.ನ.ಸಾ. | ಮಂಗಳೂರು |
| 5. | ಆರ್.ಲಕ್ಷ್ಮೀಗೌಡ | ಮಂಗಳೂರು | ಹಾಸನ |
| 6. | ಅಬ್ದುಲ್ ಸಮದ್ | ಬೆಳಗಾವಿ | ಬೆಂ.ನ.ಸಾ. |
| 7. | ಎ.ಸುಧೀಂದ್ರ | ಕೋಲಾರ | ಬೆಂ.ನ.ಸಾ.(ಉತ್ತರ) |
| 8. | ಪಿ.ವಿ. ಶ್ರೀನಾಥ್ | ಕೇಂದ್ರ ಕಛೇರಿ | ಬೆಂ.ನ.ಸಾ(ದಕ್ಷಿಣ) |
| 9. | ಕೆ.ಎಸ್. ಪ್ರಕಾಶ | ಬೆಂ(ಗ್ರಾಂ) | ಪ್ರಾ.ಕಾ. ಬೆಂಗಳೂರು. |

ಇ. ಉದ್ಭವಿಸುವುದಿಲ್ಲ.

**ವಿಷಯ : ಸಾರಿಗೆ ಇಲಾಖೆಯಲ್ಲಿನ ಖಾಲಿ ಇರುವ ಹುದ್ದೆಗಳು ಭರ್ತಿ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 625(1147)

ಶ್ರೀ ಹೆಚ್.ಎಸ್. ಶಂಕರಲಿಂಗೇಗೌಡ (ಚಾಮರಾಜ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ

ಅ. ಸಾರಿಗೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು;

ಆ. ಈ ಹುದ್ದೆಗಳನ್ನು ಸರ್ಕಾರ ತುಂಬುವುದು ಯಾವಾಗ;

ಇ. ರಾಜ್ಯದಲ್ಲಿ ಸಾರಿಗೆ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಸರ್ಕಾರ ಯಾವ ಯಾವ ಯೋಜನೆಯನ್ನು ಹಮ್ಮಿಕೊಂಡಿದೆ;

ಈ. ಇವುಗಳನ್ನು ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದೇ?

ಶ್ರೀ ಕೆ.ಎಸ್. ಬಿಳಗಿ (ಸಾರಿಗೆ ಸಚಿವರು):

ಅ. 378

ಆ. ಆರ್ಥಿಕ ಮಿತವ್ಯಯದ ಆದೇಶವನ್ನು ಸಡಿಲಿಸಿದ ನಂತರ ಅತ್ಯಾವಶ್ಯಕವೆನಿಸಿದ ಹುದ್ದೆಗಳನ್ನು ತುಂಬಲು ಕ್ರಮ ಕೈಗೊಳ್ಳಲಾಗುವುದು.

ಇ. ಸುವ್ಯವಸ್ಥಿತ ಸಾರಿಗೆ ವ್ಯವಸ್ಥೆಯನ್ನು ಬಹುಭಾಗ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ನಿರ್ವಹಿಸುತ್ತಿರುತ್ತವೆ. ರಾಜ್ಯದ ಸುಮಾರು ಶೇಕಡ 71 ಮಾರ್ಗಗಳು ರಾಷ್ಟ್ರೀಕರಣಗೊಂಡಿದ್ದು ಆ ಮಾರ್ಗಗಳಲ್ಲಿ ಖಾಲಿ ಇರುವ ಸಾರಿಗೆ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದರೊಂದಿಗೆ ಹೊಸ ಮಾರ್ಗಗಳಲ್ಲಿ ಪ್ರಯಾಣಿಕರ ಸಾರ್ವಜನಿಕರ ಬೇಡಿಕೆಗಳ ಮೇರೆಗೆ ಸಾರಿಗೆ ವ್ಯವಸ್ಥೆಯನ್ನು ಪ್ರಾರಂಭಿಸಲು ವಾರ್ಷಿಕ ಯೋಜನೆಯನ್ನು ಹಮ್ಮಿಕೊಂಡಿದೆ. 1995-96ರ ಆರ್ಥಿಕ ವರ್ಷದಲ್ಲಿ ಪ್ರಯಾಣಿಕರ ಹೆಚ್ಚಿನ ಬೇಡಿಕೆ ಪೂರೈಸಲು ಸಾರಿಗೆ ಸಂಸ್ಥೆಯು ಹೊಸದಾಗಿ 450 ಮಾರ್ಗ ಸೂಚಿಗಳಲ್ಲಿ ವಾಹನಗಳನ್ನು ಓಡಿಸಲು ಯೋಜನೆ ಹಾಕಿಕೊಂಡಿದೆ. ಇದಲ್ಲದೆ ಪ್ರಯಾಣಿಕರಿಗೆ ಅಡಚಣೆ ಇಲ್ಲದ ಸುವ್ಯವಸ್ಥಿತ ಸಾರಿಗೆ ವ್ಯವಸ್ಥೆ ಕಲ್ಪಿಸಲು ಹಳೆಯ ವಾಹನಗಳನ್ನು ಬದಲಿಸಲಾಗುತ್ತಿದೆ.

ಈ. ಅನ್ವಯಿಸುವುದಿಲ್ಲ.

**ವಿಷಯ: 1995-96ನೇ ಸಾಲಿನಲ್ಲಿ ಪ್ರಾರಂಭವಾಗುವ ತರಬೇತಿ ಕೇಂದ್ರಗಳು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 626(684)

ಶ್ರೀ ಶೈಲಪ್ಪ ವಿ.ಬಿದರೂರು (ರೋಣ): ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. 1995-96ನೇ ಸಾಲಿನಲ್ಲಿ ಎಷ್ಟು ಸರ್ಕಾರಿ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ಸರ್ಕಾರದವರು ಪ್ರಾರಂಭ ಮಾಡಲು ಉದ್ದೇಶಿಸಿರುತ್ತಾರೆ;

ಆ. ಹಾಗಿದ್ದಲ್ಲಿ, ಖಾಸಗಿ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ತೆರೆಯಲು ಸರ್ಕಾರದವರು ಅನುಮತಿಸುವರೇ? (ಟ್ರೇಡ್ ಪಟ್ಟಿಯನ್ನು ಸಹ ತಿಳಿಸುವುದು)

ಶ್ರೀ ಸಿ.ಗುರುನಾಥ್ (ಕಾರ್ಮಿಕ ಸಚಿವರು):

ಅ. ಇಲ್ಲ

ಆ. ರಾಷ್ಟ್ರೀಯ ವೃತ್ತಿ ತರಬೇತಿ ಪರಿಷತ್ ನಿಗಧಿ ಪಡಿಸಿರುವ ನಾರಮ್ಸ್ ಹಾಗೂ ವಿಧಾನಗಳ ಪ್ರಕಾರ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ತೆರೆಯುವ ಮುಕ್ತ ಅವಕಾಶವನ್ನು ಸರ್ಕಾರವು ನೀಡಿದೆ. (ವೃತ್ತಿ ಪಟ್ಟಿ ಲಗತ್ತಿಸಿದೆ)

**Trades Implemented Industrial Trainig Institutes**

| 2 Years Course | | One Year Course | |
|---|---|---|---|
| 1. | Fitter | 1. | Welder |
| 2. | Turner | 2. | Sheet metal worker |
| 3. | Machinist | 3. | Machanic (Tractor) |
| 4. | Machinist Grinder | 4. | Machanic (Disel) |
| 5. | Machanic Motor Vehicle | 5. | Plumber |
| 6. | Electrician | 6. | Data preparation and computer soft ware |
| 7. | Electrician | 7. | Foto setter & Desk Tap operator |
| 8. | Electronic Mechanic | 8. | Cutting and Tailoring |
| 9. | Instrument Mechanic | 9. | Secretarial Practice |
| 10. | Mechanic (Ref. and Air condition) | 10. | Stenography (English) |
| 11. | Tool and Die maker (3 years) | 11. | Embroidary and needle work |
| 12. | Mechanic Radio and T.V. | 12. | Moulder |
| 13. | Wiremen | 13. | Dress making |
| 14. | Pattern Maker | | |
| 15. | Electroplator | | |
| 16. | Dsman Civil | | |

ವಿಷಯ: ಬೆಂಗಳೂರಿನ ಜಯನಗರ ಬಸ್ ನಿಲ್ದಾಣದ ವಿಸ್ತರಣೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 627(188)

ಶ್ರೀ ರಾಮಲಿಂಗ ರೆಡ್ಡಿ (ಜಯನಗರ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರಿ

ಅ. ಬೆಂಗಳೂರಿನ ಜಯನಗರ ಬಸ್ ನಿಲ್ದಾಣವನ್ನು ವಿಸ್ತರಿಸುವ ಯೋಜನೆ ಸರ್ಕಾರದ ಪರಿಶೀಲನಯಲ್ಲಿದೆಯೆ;

ಆ. ಇಲ್ಲದಿದ್ದಲ್ಲಿ ಈಗಿರತಕ್ಕ ಬಸ್ ನಿಲ್ದಾಣದಿಂದ ಎಷ್ಟು ಬಸ್ಸುಗಳು ಹೊರಡುತ್ತವೆ ಹಾಗೂ ಎಷ್ಟು ಬಸ್ಸುಗಳು ಪ್ರತಿ ದಿನ ಇದರ ಮೂಲಕ ಹಾದು ಹೋಗುತ್ತದೆ.

ಇ. ಈಗಿರತಕ್ಕ ಬಸ್ ನಿಲ್ದಾಣದ ಜೊತೆಗೆ ಮತ್ತೊಂದು ಬಸ್ ನಿಲ್ದಾಣವನ್ನು ಪ್ರಾರಂಭಿಸಲು ಸರ್ಕಾರ ಉದ್ದೇಶಿಸಿದೆಯೇ?

ಶ್ರೀ ಕೆ.ಎಸ್.ಬಿಳಗಿ (ಸಾರಿಗೆ ಸಚಿವರು) :

ಅ. ಹೌದು.

ಆ. 16 ಬಸ್ಸುಗಳು ಈ ನಿಲ್ದಾಣದಿಂದ ಹೊರಡುತ್ತವೆ. 135 ಬಸ್ಸುಗಳು ಈ ನಿಲ್ದಾಣದ ಮೂಲಕ ಹಾದು ಹೋಗುತ್ತದೆ.

ಇ. ಇಲ್ಲ.

**ವಿಷಯ : ಮಳೆ ಆಧಾರಿತ ಕೃಷಿಗೊಳ ಪಟ್ಟಿರುವ ಜಮೀನಿನ ವಿಸ್ತೀರ್ಣ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 628(1125)

ಶ್ರೀ ಡಿ.ಆರ್.ಪಾಟೀಲ್ (ಗದಗ್): ಮಾನ್ಯ ಕೃಷಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ಮಳೆ ಆಧಾರಿತ ಕೃಷಿಗೊಳಪಟ್ಟಿರುವ ಜಮೀನು ಎಷ್ಟು?

ಆ. ಆ ಪ್ರದೇಶದಲ್ಲಿ ಆಗುವ ಮಳೆ ನೀರು ಹರಿದು ಹೋಗದಂತೆ ತಡೆದು ಜಲ ಸಂಗ್ರಹ ಹಾಗೂ ಭೂಸಾರ ಸಂರಕ್ಷಣೆ ಮಾಡಲು ಕೈಗೊಂಡಿರುವ ಕಾರ್ಯಕ್ರಮಗಳಾವುವು?

ಇ. ಇದಕ್ಕಾಗಿ 1995-96ನೇ ಸಾಲಿನ ಆಯವ್ಯಯದಲ್ಲಿ ಎಷ್ಟು ಹಣ ಒದಗಿಸಲಾಗಿದೆ. ಈ ಹಣ ಎಲ್ಲಾ ನೀರಾವರಿ ಕಾಮಗಾರಿಗಳಿಗೆ ಒದಗಿಸಿದ ಹಣದ ಪ್ರತಿಶತ ಎಷ್ಟಾಗುವುದು?

ಶ್ರೀ ಸಿ.ಬೈರೇಗೌಡ (ಕೃಷಿ ಸಚಿವರು):

ಅ. ರಾಜ್ಯದಲ್ಲಿ ಮಳೆ ಆಧಾರಿತ ಕೃಷಿಗೊಳಪಟ್ಟಿರುವ ಜಮೀನು ಸುಮಾರು 85.60 ಲಕ್ಷ ಹೆಕ್ಟೇರ್ ಪ್ರದೇಶವಿದೆ.

ಆ. ಮಳೆಯಾಶ್ರಿತ ಪ್ರದೇಶಗಳಲ್ಲಿ ಬೀಳುವ ಮಳೆಯನ್ನು ಸಮರ್ಪಕವಾಗಿ ಬಳಸಿಕೊಳ್ಳಲು ಮತ್ತು ಹರಿದು ಹೋಗುವ ಹೆಚ್ಚುವರಿ ಮಳೆ ನೀರನ್ನು ತಡೆದು ಸಂಗ್ರಹಿಸಲು ಮತ್ತು ಮಣ್ಣು ಸವಕಳಿ ತಡೆಗಟ್ಟಲು ರಾಜ್ಯದಲ್ಲಿ ಜಲಾನಯನ ಆಧಾರದ ಮೇಲೆ ವಿವಿಧ ಭೂ ಸಾರ ಸಂರಕ್ಷಣಾ ಕಾರ್ಯಕ್ರಮಗಳಾದ ಸ್ಥಳದಲ್ಲಿ ನೀರು ಇಂಗುವಂತೆ ಮಾಡಲು ಅಂತರ ಬದು ನಿರ್ವಹಣೆ, ಬದು ನಿರ್ಮಾಣ, ಕೃಷಿ ಹೊಂಡ, ಕೃಷಿ ಅರಣ್ಯ, ಅರಣ್ಯೀಕರ ತೋಟಗಾರಿಕೆ, ನಾಲಾ ಕೊರಕಲು ಮತ್ತು ಹೆಚ್ಚುವರಿ ನೀರು ಸಂಗ್ರಹಣಾ ವಿನ್ಯಾಸಗಳನ್ನು ಇತ್ಯಾದಿ ಕಾರ್ಯಕ್ರಮಗಳನ್ನು ರಾಜ್ಯ : ಕೇಂದ್ರ ವಲಯ ಯೋಜನೆಯಡಿಯಲ್ಲಿ ಕೈಗೊಳ್ಳಲಾಗುತ್ತಿದೆ.

ಇ. ಈ ಕೆಲಸಕ್ಕಾಗಿ 1995-96ನೇ ಸಾಲಿನ ಆಯವ್ಯಯದಲ್ಲಿ 5,102.09 ಲಕ್ಷ ರೂ.ಗಳನ್ನು ಒದಗಿಸಲಾಗಿದೆ. ನೀರಾವರಿ ಇಲಾಖೆಗಾಗಿ 1995-96ನೇ ಸಾಲಿನ

ಆಯವ್ಯಯದಲ್ಲಿ ರೂ. 839 ಕೋಟಿಗಳ ಅನುದಾನ ಒದಗಿಸಲಾಗಿದ್ದು, ಇದು ಸದರಿ ಯೋಜನೆಗೆ ಒದಗಿಸಿದ ಹಣದ ಶೇ. 6.1 ರಷ್ಟು ಇರುತ್ತದೆ.

**ವಿಷಯ: ಉಡುಪಿಗೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣ ಪ್ರಾರಂಭ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 629(596)

ಶ್ರೀ ಯು.ಆರ್.ಸಭಾಪತಿ (ಉಡುಪಿ): ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಉಡುಪಿಯಲ್ಲಿ ಸಾರಿಗೆ ಸಂಸ್ಥೆಯು ಬಸ್ ನಿಲ್ದಾಣವನ್ನು ನಿರ್ಮಾಣವನ್ನು ನಿರ್ಮಾಣ ಮಾಡಲು ಯೋಚಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು;

ಆ. ಪ್ರವಾಸಿಗರ ಒತ್ತಡ ಹಾಗೂ ಜಿಲ್ಲೆಯಲ್ಲಿನ ಬಸ್ ಸಂಚಾರಗಳ ಒತ್ತಡ ಇತ್ಯಾದಿಗಳನ್ನು ಗಮನದಲ್ಲಿಟ್ಟುಕೊಂಡು ಅತೀ ತ್ವರಿತವಾಗಿ ಬಸ್ ನಿಲ್ದಾಣವನ್ನು ನಿರ್ಮಿಸಲಾಗುವುದೇ;

ಇ. ಬಸ್ ನಿಲ್ದಾಣಕ್ಕಾಗಿ ಯಾವ ಪ್ರದೇಶವನ್ನು ಆಯ್ಕೆ ಮಾಡಲಾಗಿದೆ. ಮತ್ತು ಭೂಸ್ವಾದೀನ ಇತ್ಯಾದಿ ಕ್ರಮಗಳನ್ನು ಪೂರ್ತಿಗೊಳಿಸಲಾಗಿದೆಯೇ; ಪೂರ್ಣಗೊಳಿಸಿದ್ದಲ್ಲಿ ಇನ್ನು ಎಷ್ಟು ಸಮಯದಲ್ಲಿ ನಿಲ್ದಾಣ ನಿರ್ಮಾಣ ಕಾರ್ಯವನ್ನು ಮುಗಿಸಲಾಗುವುದು?

ಶ್ರೀ ಕೆ.ಎಸ್.ಬಳಗಿ(ಸಾರಿಗೆ ಸಚಿವರು):

ಅ. ಹೌದು. ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಯವರನ್ನು ಸೂಕ್ತವಾದ ಸರ್ಕಾರಿ ನಿವೇಶನವನ್ನು ಸದರಿ ಉದ್ದೇಶಕ್ಕಾಗಿ ಮಂಜೂರು ಮಾಡಲು ಕೋರಿದೆ.

ಆ. ಉಡುಪಿಯು ರಾಷ್ಟ್ರೀಕೃತವಾಗದ ವಲಯದಲ್ಲಿದೆ. ಹೆಚ್ಚು ಖಾಸಗಿ ವಾಹನಗಳು, ಬಸ್ ನಿಲ್ದಾಣದ ಮೂಲಕ ಹಾದು ಹೋಗುವುದರಿಂದ ನಗರ ಸಭೆಯವರು ಸೌಲಭ್ಯವನ್ನು ಒದಗಿಸಬೇಕಾಗಿದೆ.

ಇ. ಸರ್ವೆ ಸಂಖ್ಯೆ: 70:329 ರಲ್ಲಿನ ನಿವೇಶನವನ್ನು ಭೂಸ್ವಾಧೀನಕ್ಕಾಗಿ ಆಯ್ಕೆ ಮಾಡಿದ್ದು, ದುಬಾರಿ ಮೌಲ್ಯದ ಕಾರಣ ಕೈಬಿಡಲಾಯಿತು. ಸೂಕ್ತ ನಿವೇಶನ ದೊರೆತ ತಕ್ಷಣ ನಿರ್ಮಾಣ ಕಾರ್ಯಕೈಗೊಳ್ಳಲಾಗುವುದು.

**ವಿಷಯ: ಧಾರವಾಡ ಕೃಷಿ ವಿಶ್ವವಿದ್ಯಾಲಯಕ್ಕೆ ನೀಡಿರುವ ಹಣ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 630(964)

ಶ್ರೀ ಚಂದ್ರಕಾಂತ ಬೆಲ್ಲದ್ (ಧಾರವಾಡ): ಮಾನ್ಯ ಕೃಷಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಧಾರವಾಡದ ಕೃಷಿ ವಿಶ್ವವಿದ್ಯಾನಿಲಯ ಹಾಗೂ ಬೆಂಗಳೂರಿನ ಹೆಬ್ಬಾಳ ಕೃಷಿ ವಿಶ್ವವಿದ್ಯಾನಿಲಯ ಇವುಗಳಿಗೆ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರ 1983 ರಿಂದ 1994-95 ರವರೆಗೆ ಎಷ್ಟು ಹಣ ನೀಡಿರುವುದು (ಪೂರ್ತಿ ವಿವರಗಳನ್ನು ಒದಗಿಸುವುದು)

ಶ್ರೀ ಸಿ.ಬೈರೇಗೌಡ (ಕೃಷಿ ಸಚಿವರು):

ಅ. ಧಾರವಾಡ ಮತ್ತು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯಗಳಿಗೆ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ನೀಡಿದ ಹಣದ ವಿವರ ಅನುಬಂಧ-''ಅ'' ಮತ್ತು ಅನುಭಂದ-''ಭ'' ದಲ್ಲಿ ನೀಡಲಾಗಿದೆ.

ಅನು

ಧಾರವಾಡ ಕೃಷಿ ವಿಶ್ವವಿದ್ಯಾನಿಲಯಕ್ಕ ರಾಜ್ಯ

| ಅನುಧಾನ | 1986-87 | 1987-88 | 1988-89 | 1989-90 |
|---|---|---|---|---|
| ಬ್ಲಾಕ್ ಅನುಧಾನ | 142.00 | 257.00 | 418.00 | 375.62 |
| ಅಭಿವೃದ್ಧಿ ಅನುಧಾನ | 54.92 | 95.00 | 143.00 | 195.00 |
| ಒಟ್ಟು | 196.92 | 352.00 | 561.00 | 570.62 |

ಕೇಂದ್ರ ಸರ್ಕಾರದಿಂದ ಧಾರವಾಡ ಕೃಷಿ ವಿಶ್ವವಿದ್ಯಾ

| ಅನುಧಾನ | 1986-87 | 1987-88 | 1988-89 | 1989-90 |
|---|---|---|---|---|
| 1. ಕೇಂದ್ರ ಸರ್ಕಾರದ ಯೋಜನೆ ಅನುಧಾನ | - | 4.09 | 4.84 | 2.81 |
| 2. ರಾಷ್ಟ್ರೀಯ ಕೃಷಿ ಸಂಶೋಧನಾ ಯೋಜನೆ-2 | - | - | 2.37 | 63.96 |
| 3. ರಾಷ್ಟ್ರೀಯ ಕೃಷಿ ವಿಸ್ತರಣಾ ಯೋಜನೆ-2 | - | 20.00 | 20.00 | 51.00 |
| 4. ಭಾರತೀಯ ಕೃಷಿ ಅನುಸಂದಾನ ಸಮನ್ವಯ ಸಂಶೋಧನಾ ಯೋಜನೆ | 61.28 | 125.49 | 131.24 | 344.87 |
| 5. ಭಾರತೀಯ ಕೃಷಿ ಅನುಸಂಧಾನ ಸಮನ್ವಯ ಅಡಾಕ್ ಆ ಯೋಜನೆಗಳು | - | - | - | - |
| 6. ಇತರ ಅನುಧಾನಿತ ಯೋಜನೆಗಳು | - | - | - | - |
| 7. ಕೃಷಿ ಅನುಸಂಧಾನ ಅಭಿವೃದ್ಧಿ ಯೋಜನೆಗಳ (ಕೇಂದ್ರಿಯ ಅನುಧಾನಿತ ಯೋಜನೆಗಳು) | - | - | - | 130.00 |
| 8. ರಾಷ್ಟ್ರೀಯ ಯೋಜನೆಗಳು | - | - | - | - |
| ಒಟ್ಟು | 61.28 | 149.58 | 168.51 | 592.64 |

ಬಂಧ-ಅ

ಸರ್ಕಾರ ನೀಡಿದ ಅನುದಾನದ ಹಣದ ವಿವರ

(ರೂ. ಲಕ್ಷಗಳಲ್ಲಿ)

| 1990-91 | 1991-92 | 1992-93 | 1993-94 | 1995-95 (ಫೆಬ್ರವರಿ 1995ರವರೆಗೆ) |
|---|---|---|---|---|
| 331.35 | 375.70 | 418.00 | 567.66 | 467.27 |
| 250.00 | 455.00 | 410.00 | 320.00 | 805.75 |
| 581.35 | 830.70 | 832.00 | 1387.66 | 1273.02 |

ನಿಲಯಕ್ಕೆ ನೀಡಿದ ಅನುಧಾನದ ಹಣದ ವಿವರ

| 1990-91 | 1991-92 | 1992-93 | 1993-94 | 1994-95 |
|---|---|---|---|---|
| 3.12 | 1.84 | 4.039 | 3.29 | 29.302 |
| 27.17 | 137.07 | 26.20 | 64.56 | - |
| 50.00 | 38.55 | 15.00 | - | 0.544 |
| 143.25 | 211.00 | 210.712 | 157.40 | 150.543 |
| - | 27.16 | 45.565 | - | 26.866 |
| - | 3.99 | 7.764 | - | 9.482 |
| 35.00 | 29.88 | 45.00 | - | - |
| - | - | - | 8.87 | 22.186 |
| 263.54 | 449.49 | 854.280 | 234.12 | 238.923 |

## ಅನುಬಂಧ -ಬಿ

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ ಅವಧಿ 1983-84 ರಿಂದ 1995-95 ರವರೆಗೆ ರಾಜ್ಯ ಸರ್ಕಾರದದಿಂದ ಪಡೆದ ಅನುದಾನಗಳ ವಿವರ

### ಪಟ್ಟಿ - 1

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಅವಧಿ | ಯೋಜನೇತರ | ಯೋಜನೆ ಕೃಷಿ ಶಿಕ್ಷಣ | ಯೋಜನೆ ಕೃಷಿ ಸಂಶೋಧನೆ | ಯೋಜನೆ ಗಳು | ಮೊತ್ತ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | 1983-84 | 480.00 | 120.00 | 30.00 | 16.29 | 646.29 |
| 2. | 1984-85 | 580.00 | 199.00 | 40.00 | 9.88 | 828.88 |
| 3. | 1985-86 | 676.54 | 116.74 | 40.00 | 67.41 | 900.69 |
| 4. | 1986-87 | 651.00 | 99.08 | 38.00 | 91.29 | 879.37 |
| 5. | 1987-88 | 712.00 | 115.00 | 30.00 | 32.49 | 972.49 |
| 6. | 1988-89 | 925.00 | 112.50 | 35.50 | 50.44 | 1,123.44 |
| 7. | 1989-90 | 934.00 | 129.00 | 37.00 | 45.62 | 1,145.62 |
| 8. | 1990-91 | 1024.62 | 180.00 | 40.00 | 37.98 | 1,282.60 |
| 9. | 1991-92 | 1092.61 | 393.00 | 63.00 | 29.67 | 1,578.28 |
| 10. | 1992-93 | 1268.33 | 550.00 | 45.00 | 70.85 | 1,934.18 |
| 11. | 1993-94 | 1354.80 | 650.00 | 350.00 | 103.12 | 2,457.92 |
| 12. | 1994-95 | 1538.25 | 687.00 | 375.00 | 3.17 | 2,603.42 |

## ಅನುಬಂಧ - ಬಿ

ಬೆಂಗಳೂರು ವಿಶ್ವವಿದ್ಯಾನಿಲಯ ಅವಧಿ 1983-84 ರಿಂದ 1994-95ರ ವರೆಗೆ ಕೇಂದ್ರ ಸರ್ಕಾರದಿಂದ ಪಡೆದ ಅನುಧಾನಗಳ ವಿವರ

**ಪಟ್ಟಿ-2**

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಅವಧಿ | ಕೇಂದ್ರ ಸರ್ಕಾರ | ಭಾರತೀಯ ಕೃಷಿ ಅನುಸಂಧಾನ ಪರಿಷತ್ತು | ಮೊತ್ತ |
|---|---|---|---|---|
| 1 | 2 | 3 | 4 | 5 |
| 1. | 1983-84 | 13.99 | 227.84 | 241.83 |
| 2. | 1984-85 | 11.41 | 266.23 | 277.64 |
| 3. | 1985-86 | 18.35 | 528.06 | 546.41 |
| 4. | 1986-87 | 18.37 | 231.76 | 250.13 |
| 5. | 1987-88 | 21.75 | 165.38 | 187.13 |
| 6. | 1988-89 | 32.25 | 278.33 | 310.58 |
| 7. | 1989-90 | 39.22 | 292.61 | 331.83 |
| 8. | 1990-91 | 42.58 | 443.96 | 486.54 |
| 9. | 1991-92 | 46.21 | 399.39 | 445.60 |
| 10. | 1992-93 | 65.83 | 485.01 | 550.84 |
| 11. | 1993-94 | 115.70 | 332.43 | 448.13 |
| 12. | 1994-95 (ಫೆಬ್ರವರಿ 95ರ ವರೆಗೆ) | 96.10 | 387.93 | 484.03 |

**ವಿಷಯ: ಹುನಗೂಂದ ತಾಲ್ಲೂಕಿನ ಕಳಪೆ ದರ್ಜೆಯ ದಾಳಿಂಬೆ ಸಸಿಗಳ ಸರಬರಾಜು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 633(1044)

ಶ್ರೀ ಕೆ. ಶರಣಪ್ಪ(ಕುಷ್ಟಗಿ) : ಮಾನ್ಯ ತೋಟಗಾರಿಕೆ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಹುನಗುಂದ ತಾಲ್ಲೂಕಿನ ಕೇಸರಬಾವಿ ಗ್ರಾಮದ ಬಡ ರೈತನಿಗೆ ಕಳಪೆ ದರ್ಜೆಯ ದಾಳಿಂಬೆ ಸಸಿಗಳನ್ನು ಅಧಿಕಾರಿಗಳು ಮಾರಾಟ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಹಾಗಿದ್ದಲ್ಲಿ ಈ ಬಗ್ಗೆ ರೈತನಿಗೆ ಅನ್ಯಾಯವಾಗಿದ್ದು, ಅದನ್ನು ಸರಿಪಡಿಸಲು ಸರ್ಕಾರದವರು ಕೈಗೊಂಡ ಪರಿಹಾರ ಕ್ರಮವೇನು?

ಇ. ಇದಕ್ಕೆ ಕಾರಣರಾದ ಸಿಬ್ಬಂದಿಯವರ ಮೇಲೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಡಿ.ಟಿ. ಜಯಕುಮಾರ್ (ತೋಟಗಾರಿಕೆ ರಾಜ್ಯ ಸಚಿವರು):

ಅ. ಇಲ್ಲ.
ಆ. ಉದ್ಭವಿಸುವುದಿಲ್ಲ.
ಇ. ಉದ್ಭವಿಸುವುದಿಲ್ಲ.

**ವಿಷಯ : ಸಂಚಾರಿ ವಾಹನಗಳ ತಪಾಸಣೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 634(727)

ಶ್ರೀ ಕುಂಜ್ಞೆ ಸುಂದರರಾವ್ (ಸೂರತ್ಕಲ್) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಸ್ತೆಗಳಲ್ಲಿ ಸಂಚರಿಸುವ ವಾಹನಗಳ ತಪಾಸಣೆಯ ಅಧಿಕಾರವನ್ನು ಯಾವ ದರ್ಜೆಯ ಅಧಿಕಾರಿಗಳಿಗೆ ನೀಡಲಾಗಿದೆ;

ಆ. ಕೆಲವೊಮ್ಮೆ ನಿಗಧಿತ ದರ್ಜೆಯ ಅಧಿಕಾರಿಗಳಲ್ಲದೆ ಕೆಳದರ್ಜೆಯ ಸಿಬ್ಬಂದಿ ವರ್ಗದವರು ಈ ಕೆಲಸವನ್ನು ಮಾಡಿ ವಾಹನ ಚಾಲಕರುಗಳಿಗೆ ಕಿರುಕುಳ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಆ ಬಗ್ಗೆ ಸೂಕ್ತ ಆದೇಶವನ್ನು ನೀಡಲು ಕ್ರಮ ಜರುಗಿಸುವರೇ?

ಶ್ರೀ ಕೆ.ಎಸ್.ಬಿಳಗಿ (ಸಾರಿಗೆ ಸಚಿವರು) :

ಅ. ಸಾರಿಗೆ ಇಲಾಖೆಯ ಮೋಟಾರು ವಾಹನ ನಿರೀಕ್ಷಕರು ಮತ್ತು ಅದಕ್ಕಿಂತ ಮೇಲ್ಪಟ್ಟ ಅಧಿಕಾರಿಗಳು ವಾಹನಗಳನ್ನು ತಪಾಸಣೆ ಮಾಡುವ ಅಧಿಕಾರ ಹೊಂದಿದವರಾಗಿರುತ್ತಾರೆ.

ಆ. ಇಲ್ಲ. ಇಂತಹ ಪ್ರಕರಣಗಳೇನಾದರೂ ಸರ್ಕಾರದ ಗಮನಕ್ಕೆ ಬಂದಲ್ಲಿ, ಸಂಬಂಧಿಸಿದವರ ವಿರುದ್ಧ ನಿಯಮಾನುಸಾರ ಸೂಕ್ತ ಕ್ರಮ ಜರಗಿಸಲಾಗುವುದು.

**ವಿಷಯ: ಸಿಂದನೂರು ನಗರದಲ್ಲಿ ಅನಧಿಕೃತ ಕಟ್ಟಡ ನಿರ್ಮಾಣದ ಬಗ್ಗೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 636(1096)

ಶ್ರೀ ಕೆ. ವಿರೂಪಾಕ್ಷ(ಸಿಂಧನೂರು) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಸಿಂಧನೂರು ನಗರದಲ್ಲಿ ಸರ್ಕಾರಿ ಸರ್ವೆ ನಂ. 768-1 ರಲ್ಲಿ ಅನಧಿಕೃತವಾಗಿ ಕಟ್ಟಡ ನಿರ್ಮಾಣಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ. ಈ ಬಗ್ಗೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಆರ್.ಎಲ್.ಜಾಲಪ್ಪ (ಕಂದಾಯ ಸಚಿವರು):

ಅ. ಬಂದಿದೆ.

ಆ. ನ್ಯಾಯಾಲಯದಲ್ಲಿ ಈ ಪ್ರಕರಣವನ್ನು ದಾಖಲು ಮಾಡಲಾಗಿದೆ ಅಂತಿಮ ತೀರ್ಮಾನವಾಗುವವರೆವಿಗೆ ಕಟ್ಟಡ ಕಟ್ಟದಿರಲು ತಡೆಯಾಜ್ಞೆಯನ್ನು ಜಿಲ್ಲಾಧಿಕಾರಿಯವರಿಂದ ಜಾರಿ ಮಾಡಲಾಗಿದೆ. ಈಗ ಕಟ್ಟಡದ ಕೆಲಸ ಸ್ಥಗಿತಗೊಂಡಿದೆ.

**ವಿಷಯ: ಸಿಂಧನೂರು ಬಸ್ ನಿಲ್ದಾಣದಲ್ಲಿ ಅನಧಿಕೃತ ಕಟ್ಟಡಗಳು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 637(1093)

ಶ್ರೀ ಕೆ. ವಿರೂಪಾಕ್ಷ(ಸಿಂದನೂರ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಸಿಂಧನೂರು ಬಸ್ ನಿಲ್ದಾಣದಲ್ಲಿ ಅನಧಿಕೃತವಾಗಿ ಜೋಪಡಿ ಹಾಗೂ ಕಟ್ಟಡಗಳು ನಿರ್ಮಾಣಗೊಂಡಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ;

ಆ. ಈ ಬಗ್ಗೆ ಸರಕಾರದವರು ಕೈಗೊಂಡಿರುವ ಕ್ರಮಗಳೇನು?

ಇ. ಸಿಂಧನೂರು ಬಸ್ ನಿಲ್ದಾಣ ಕೊಳಚೆ ಪ್ರದೇಶವಾಗಿದ್ದಲ್ಲಿ ಇದನ್ನು ನಿರ್ಮೂಲನ ಮಾಡಲು ಸರ್ಕಾರದವರು ಪರಿಶೀಲಿಸುವರೇ?

ಶ್ರೀ ಕೆ. ಬಿಳಗಿ (ಸಾರಿಗೆ ಸಚಿವರು):

ಅ. ಹೌದು.

ಆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಈ ಅನಧಿಕೃತ ಕಟ್ಟಗಳನ್ನು ತೆರವು ಪಡಿಸಲು, ಕರ್ನಾಟಕ ಅನಧಿಕೃತ (ಸಾರ್ವಜನಿಕ ಪ್ರದೇಶ) ಕಟ್ಟಡಗಳು ಕಾನೂನು ಅನ್ವಯ ಕ್ರಮ ಕೈಗೊಂಡಿರುತ್ತದೆ.

ಇ. ಬಸ್ ನಿಲ್ದಾಣದ ಒಂದು ಜಾಗವು ತಗ್ಗು ಪ್ರದೇಶವಾಗಿದ್ದು, ಇದನ್ನು 1995-96ನೇ ಸಾಲಿನಲ್ಲಿ ಉತ್ತಮ ಪಡಿಸಲು ಕ್ರಮ ಕೈಗೊಳ್ಳಲಾಗುವುದು.

**ವಿಷಯ : ಗ್ರಾಮಾಂತರ ಪ್ರದೇಶಗಳಿಗೆ ಹೆಚ್ಚಿನ ಸಾರಿಗೆ ಸೌಲಭ್ಯ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 638 (936)

ಶ್ರೀ . ಜಿ.ವಿ. ಶಿವಕುಮಾರ್ (ಕೆರೆಗೋಡು) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯದಲ್ಲಿ ನಗರ ಪಟ್ಟಣ ಪ್ರದೇಶಗಳಲ್ಲಿ ಸಂಚಾರ ಮಾಡುತ್ತಿರುವ ಬಸ್‌ಗಳ ಸಂಖ್ಯೆ ಎಷ್ಟು ; ಗ್ರಾಮೀಣ ಪ್ರದೇಶಗಳಲ್ಲಿ ಸಂಚಾರ ಮಾಡುತ್ತಿರುವ ಸಂಖ್ಯೆ ಎಷ್ಟು

ಆ. ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆ ವ್ಯವಸ್ಥೆ ಸಾಕಷ್ಟು ಸಮರ್ಪಕವಾಗಿ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ

ಇ. ಅಧಿಕಾರ ವಿಕೇಂದ್ರೀಕರಣ ಆಗಿರುವ ಈ ಸಮಯದಲ್ಲಿ ಹೋಬಳಿ : ಪಂಚಾಯಿತಿ ಕೇಂದ್ರಗಳಿಗೆ ಸಾಕಷ್ಟು ಸಾರಿಗೆ ವ್ಯವಸ್ಥೆ ಮಾಡಲು ಸರ್ಕಾರ ಏನು ಕಾರ್ಯಕ್ರಮ ಹಾಕಿಕೊಂಡಿದೆ ?

ಶ್ರೀ. ಕೆ.ಎಸ್. ಬಿಳಗಿ (ಸಾರಿಗೆ ಸಚಿವರು) :

ಅ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಆಗ 9045 ಅನುಸೂಚಿಗಳನ್ನು ಓಡಿಸುತ್ತಿದೆ. ಈ ಪೈಕಿ 2260 ಅನುಸೂಚಿಗಳನ್ನು ನಗರ ಮತ್ತು ನಗರದ ಹೊರ ವಲಯದಲ್ಲಿ ಮತ್ತು 6785 ಅನುಸೂಚಿಗಳನ್ನು ಗ್ರಾಮಾಂತರ ಮಾರ್ಗಗಳಲ್ಲಿ ಓಡಿಸಲಾಗುತ್ತಿದೆ.

ಆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ರಾಷ್ಟ್ರೀಕರಣವಾಗಿರುವ ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಬಸ್ಸುಗಳನ್ನು ಓಡಿಸುತ್ತಿದೆ. ಅದಾಗ್ಯೂ ಕೆಲವು ಮಾರ್ಗಗಳಲ್ಲಿ ಕೆಲವು ಬಸ್ಸುಗಳು ಪ್ರಯಾಣಿಕರ ಹೆಚ್ಚಿನ ಒತ್ತಡ ಇರುವ ವೇಳೆಯಲ್ಲಿ ತುಂಬಿ ಓಡುತ್ತಿವೆ.

ಇ. ಇರುವ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಪ್ರಯಾಣಿಕರ ಬೇಡಿಕೆಯನ್ನು ಪರಿಗಣಿಸಿ ಸಂಸ್ಥೆಯು ಬಸ್ಸುಗಳನ್ನು ಹೆಚ್ಚಿಸುತ್ತಿದೆ.

**ವಿಷಯ : ಜಯನಗರ ಬಸ್ ನಿಲ್ದಾಣದಿಂದ ಗಂಗಾನಗರಕ್ಕೆ ಬಸ್ ವ್ಯವಸ್ಥೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 639 (1088)

ಶ್ರೀ. ಆರ್ ಕೃಷ್ಣಪ್ಪ (ಜಯಮಹಲ್) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಬೆಂಗಳೂರಿನ ವಿವಿಧ ಭಾಗಗಳಿಂದ ಗಂಗಾನಗರಕ್ಕೆ ಎಷ್ಟು ನಗರ ಸಾರಿಗೆ ಬಸ್ ಸಾಲಭ್ಯ ಒದಗಿಸಲಾಗಿದೆ.

ಆ. ಗಂಗಾನಗರದಿಂದ ಬೆಂಗಳೂರು ಬಸ್ ನಿಲ್ದಾಣ, ಶಿವಾಜಿನಗರ ಹಾಗೂ ಜಯನಗರ ಬಸ್ ನಿಲ್ದಾಣಗಳಿಗೆ ನೇರ ಬಸ್ ಸೌಕರ್ಯವಿದೆಯೇ.

ಇ. ಗಂಗಾನಗರದಿಂದ ಜಯನಗರ ಬಸ್ ನಿಲ್ದಾಣಕ್ಕೆ ಎಷ್ಟು ಬಸ್‌ಗಳನ್ನು ಓಡಿಸಲಾಗುತ್ತಿದೆ.

ಈ. ಗಂಗಾನಗರಕ್ಕೆ ಜಯನಗರ ಬಸ್ ನಿಲ್ದಾಣದಿಂದ ಎಸ್, ಆರ್, ಕಾಲೋನಿ ಹಾಗೂ ಗಾಂಧಿಬಜಾರ್‌ನಿಂದ ಬಸ್ ವ್ಯವಸ್ಥೆ ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ?

ಶ್ರೀ. ಕೆ. ಎಸ್. ಬಿಳಗಿ (ಸಾರಿಗೆ ಸಚಿವರು):

ಅ. ಗಂಗಾನಗರದಿಂದ ಬೆಂಗಳೂರು ನಗರದ ವಿವಿಧ ಭಾಗಗಳಿಗೆ ಹಾಲಿ 271 ಸುತ್ತು ವಳಿಗಳನ್ನೊಳಗೊಂಡ 15 ಅನುಸೂಚಿಗಳಲ್ಲಿ ಸಾರಿಗೆ ಸೌಕರ್ಯ ಕಲ್ಪಿಸಲಾಗಿದೆ. ಅಲ್ಲದೆ 638 ಸುತ್ತುವಳಿಗಳನ್ನೊಳಗೊಂಡ 46 ಅನುಸೂಚಿಗಳು ಗಂಗಾನಗರದ ಮೂಲಕ ಹಾದು ಹೋಗುತ್ತವೆ.

ಆ. ಗಂಗಾನಗರದಿಂದ ಬೆಂಗಳೂರು ಬಸ್ ನಿಲ್ದಾಣ ಮತ್ತು ಶಿವಾಜಿನಗರ ಬಸ್ ನಿಲ್ದಾಣಗಳಿಗೆ ನೇರ ಸಾರಿಗೆ ಸೌಕರ್ಯ ಕಲ್ಪಿಸಲಾಗಿದೆ. ಆದರೆ ಗಂಗಾನಗರದಿಂದ ಜಯನಗರ ಬಸ್ ನಿಲ್ದಾಣಕ್ಕೆ ನೇರ ಸಾರಿಗೆ ಸಂಪರ್ಕವಿರುವುದಿಲ್ಲ.

ಇ. ನೇರ ಸಾರಿಗೆ ಸಂಪರ್ಕವಿರುವುದಿಲ್ಲ.

ಈ. ಗಂಗಾನಗರದಿಂದ ವಿಧಾನಸೌಧ, ಗಾಂಧಿಬಜಾರ್ ಮುಖಾಂತರ ನರಸಿಂಹರಾಜ ಕಾಲೋನಿಗೆ 24 ಸುತ್ತುಗಳನ್ನೊಳಗೊಂಡ 2 ಅನುಸೂಚಿಗಳಲ್ಲಿ ಸಾರಿಗೆ ಸೌಕರ್ಯ ಕಲ್ಪಿಸಲಾಗಿದೆ. ಸಧ್ಯಕ್ಕೆ ಗಂಗಾನಗರಕ್ಕೆ ಪ್ರತ್ಯೇಕ ಸಾರಿಗೆ ಸೌಕರ್ಯ ಕಲ್ಪಿಸುವ ಅವಶ್ಯಕತೆಯಿರುವುದಿಲ್ಲ.

**ವಿಷಯ : ದುದ್ದ ಹಾಗೂ ದೇವಿಹಳ್ಳಿಯಲ್ಲಿ 1000 ಮೆ. ವಾ. ಸ್ಟೇಷನ್ ಪ್ರಾರಂಭಿಸಲು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 640 (1069)

ಶ್ರೀ ಬಿ. ಶಿವರಾಮು (ಗಂಡಸಿ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ವಿದ್ಯುಚ್ಛಕ್ತಿ ಇಲಾಖೆಯಿಂದ ಕೋ ಜೆಂಟಬ್ರಿಕ್ಸ್‌ನವರ ಮೂಲಕ ತೆಗೆದುಕೊಂಡಿರುವ 1000 ಮೆ.ವಾ. ಸ್ಟೇಷನ್ ಅನ್ನು ಪ್ರಾರಂಭಿಸಲು ದುದ್ದ ಮತ್ತು ದೇವಿಹಳ್ಳಿ ಗ್ರಾಮ ದುದ್ದ ಹೋಬಳಿ ಹಾಸನ ತಾಲ್ಲೂಕಿನಲ್ಲಿ 119 ಎಕರೆ ಪ್ರದೇಶವನ್ನು ಸರ್ಕಾರ ಕಂದಾಯ ಇಲಾಖೆಯಿಂದ ವಿದ್ಯುಚ್ಛಕ್ತಿ ಇಲಾಖೆಗೆ ಮಂಜೂರು ಮಾಡಿದೆಯೇ;

ಆ. ಮಂಜೂರಾತಿ ಮಾಡಿದ್ದರೆ, ಜಿಲ್ಲಾಧಿಕಾರಿಗಳು ಹಣ ಪಡೆದು ಕೆ.ಇ.ಬಿ.ಗೆ ಸ್ಥಳವನ್ನು ಹಸ್ತಾಂತರ ಮಾಡಿದ್ದಾರೆಯೇ

ಇ. ಇಲ್ಲದಿದ್ದರೆ, ಯಾವ ಕಾರಣಕ್ಕಾಗಿ ಮಾಡಿರುವುದಿಲ್ಲ ?

ಶ್ರೀ. ಆರ್. ಎಲ್. ಜಾಲಪ್ಪ (ಕಂದಾಯ ಸಚಿವರು) :

ಅ. ಹೌದು.

ಆ. ಕೆ.ಇ.ಬಿ.ಯವರು ಇದುವರೆಗೆ ಕಿಮ್ಮತ್ತನ್ನು ಪಾವತಿಸಿರುವುದಿಲ್ಲದಿರುವುದರಿಂದ ಇನ್ನೂ ಕೆ.ಇ.ಬಿ.ಗೆ ಜಮೀನನ್ನು ಹಸ್ತಾಂತರಿಸಿರುವುದಿಲ್ಲ.

ಇ. ಉಚ್ಚ ನ್ಯಾಯಾಲಯದ ರಿಟ್ ಅದೇಶ ಸಂಖ್ಯೆ : 40928 ರಿಂದ 40972 ದಿನಾಂಕ 15-9-94 ರ ಮೇರೆ ಅನಧಿಕೃತ ಸ್ವಾಧೀನದಲ್ಲಿದ್ದವರ ಟಿ.ಟಿ. ಮೇರೆ ಜಮೀನು ಖಾಯಂ ಕೋರಿ ಕೊಟ್ಟ ಅರ್ಜಿಗಳ ಪುನರ್ ಪರಿಶೀಲನೆಯಾಗಬೇಕಿದ್ದು, ತಾಲ್ಲೂಕು ಮಟ್ಟದ ಸಕ್ರಮೀಕರಣ ಸಮಿತಿಗಳ ಕಾರ್ಯವನ್ನು ಈಗ ಸಧ್ಯಕ್ಕೆ ಸ್ಥಗಿತಗೊಳಿಸಲಾಗಿರುವುದರಿಂದ ಮುಂದಿನ ಕ್ರಮ ಕೈ ಗೊಂಡಿರುವುದಿಲ್ಲ.

**ವಿಷಯ : ಹೊಸ ಜಿಲ್ಲೆಗಳನ್ನು ರಚಿಸುವಲ್ಲಿ ವಿಳಂಬ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 642 (930)

ಶ್ರೀ ಶಾಮನೂರು ಶಿವಶಂಕರಪ್ಪ (ದಾವಣಗೆರೆ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ಹೊಸ ಜಿಲ್ಲೆಗಳನ್ನು ರಚಿಸಲು ಅತಿ ವಿಳಂಬ ಮಾಡುತ್ತಿರುವುದು ನಿಜ ಸಂಗತಿಯಲ್ಲವೇ.

ಆ. ಅವುಗಳನ್ನು ಯಾವಾಗ ರಚಿಸಲಾಗುವುದು.

ಶ್ರೀ. ಆರ್. ಎಲ್. ಜಾಲಪ್ಪ (ಕಂದಾಯ ಸಚಿವರು) :

ಅ. ಇಲ್ಲ.

ಆ. ಪರಿಶೀಲನೆಯ ನಂತರ.

**ವಿಷಯ : ಸಾಗುವಳಿ ಮಾಡುವತ್ತಿದ್ದ ಸರ್ಕಾರಿ ಸ್ವಾಮ್ಯದ ಜಮೀನನ್ನು ಸಕ್ರಮ ಹೊಳಿಸುವುದರ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆಯು ಸಂಖ್ಯೆ 644 (1277)

ಶ್ರೀ ಹೆಚ್.ಡಿ. ಬಸವರಾಜು (ವಿರಾಜಪೇಟೆ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಇತ್ತೀಚಿಗೆ ಕೊಡಗು ಜಿಲ್ಲೆಯಲ್ಲಿ ಅಕ್ರಮವಾಗಿ ಸಾಗುವಳಿ ಮಾಡುತ್ತಿದ್ದ ಸರ್ಕಾರಿ ಸ್ವಾಮ್ಯದ ಜಮೀನನ್ನು ಸಕ್ರಮಗೊಳಿಸಿದ್ದು ಈ ರೀತಿ ಸಕ್ರಮಗೊಳಿಸಲು ಸರ್ಕಾರ ಯಾವ ನೀತಿಯು ಅರ್ಹತೆ ಆಧಾರದ ಮೇಲೆ ನಿರ್ಧಾರ ಕೈ ಗೊಂಡಿದ್ದಾರೆ.

ಆ. ಕೊಡಗು ಜಿಲ್ಲೆಯಲ್ಲಿ ಎಷ್ಟು ಮಂದಿಗೆ ಈ ಸಕ್ರಮಗೊಳಿಸುವ ಕ್ರಮದಿಂದ ಪ್ರಯೋಜನ ಸಿಕ್ಕಿರುತ್ತದೆ. ಹಾಗೂ ಎಷ್ಟು ಎಕರೆ ಜಮೀನನ್ನು ಸಕ್ರಮಗೊಳಿಸಿದ್ದಾರೆ ಇವುಗಳ ಸಂಪೂರ್ಣ ವಿವರ ಅಂದರೆ ಫಲಾನುಭವಿಗಳ ವಿಳಾಸ ಸಕ್ರಮಗೊಳಿಸಿದ ಜಮೀನು ವಿವರ ನೀಡುವುದು.

ಇ. ಕೊಡಗು ಜಿಲ್ಲೆಯಲ್ಲಿ ಅಕ್ರಮ ಸಾಗುವಳಿ ಸಕ್ರಮಗೊಳಿಸಿದ್ದರಿಂದ ಸರ್ಕಾರಕ್ಕೆ ಎಷ್ಟು ಹಣ ಬಂದಿದೆ ಇದರಿಂದ ಸರ್ಕಾರಕ್ಕೆ ಯಾವುದೇ ರೀತಿಯಲ್ಲಾದರೂ ನಷ್ಟವಾಗಿದೆಯೇ ಹಾಗಿದ್ದರೆ, ನಷ್ಟದ ಅಂದಾಜು ಮೊತ್ತ.

ಈ. ಕೊಡಗು ಜಿಲ್ಲೆಯಲ್ಲಿ ಇನ್ನೂ ಎಷ್ಟು ಅರ್ಜಿಗಳು ಸಕ್ರಮಗೊಳಿಸುವ ಸಲುವಾಗಿ ಬಾಕಿ ಇದೆ ಹಾಗೂ ಅವುಗಳನ್ನು ಇತ್ಯರ್ಥಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮದ ಕೆಲಸ ಏನು ?

ಶ್ರೀ. ಆರ್. ಎಲ್. ಜಾಲಪ್ಪ (ಕಂದಾಯ ಸಚಿವರು) :

ಅ. ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 94-ಎ ರನ್ವಯ ಅನಧಿಕೃತ ಸಾಗುವಳಿ ಜಮೀನುಗಳನ್ನು ಸಕ್ರಮಗೊಳಿಸಲಾಗುತ್ತಿದೆ.

ಆ. 3830 ಎಕರೆ ಜಮಿನನ್ನು 2052 ಜನರಿಗೆ ಸಕ್ರಮಗೊಳಿಸಲಾಗಿದೆ.

ಇ. ನಿಯಮಾವಳಿಗಳಲ್ಲಿ ವಿಧಿಸಿದ ಕಿಮ್ಮತ್ತಿನ ರೂಪದಲ್ಲೆ 6,36,667 ರೂ.ಗಳು ಸರ್ಕಾರಕ್ಕೆ ಸಂದಾಯವಾಗಿರುತ್ತದೆ. ಆದ್ದರಿಂದ ಸರ್ಕಾರಕ್ಕೆ ಯಾವುದೇ ರೀತಿಯಲ್ಲೂ, ನಷ್ಟವಾಗುವ ಪ್ರಶ್ನೆ ಉದ್ಭವಿಸುವುದಿಲ್ಲ.

ಈ. 11,121 ಅರ್ಜಿಗಳು ಬಾಕಿ ಇರುತ್ತವೆ, ಬಾಕಿ ಇರುವ ಪ್ರಕರಣಗಳನ್ನು ಶೀಘ್ರ ಇತ್ಯರ್ಥಪಡಿಸಲು ಕ್ರಮ ತೆಗೆದುಕೊಳ್ಳಲಾಗುತ್ತಿದೆ.

**ವಿಷಯ : ರೈತರು ಪಡೆದುಕೊಳ್ಳುವ ಸಾಲಕ್ಕೆ ನೊಂದಣಿ ಶುಲ್ಕ ವಿನಾಯತಿ ನೀಡುವ ಬಗ್ಗೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 645 (861)

ಶ್ರೀ. ಎ.ಟಿ. ರಾಮಸ್ವಾಮಿ (ಅರಕಲಗೂಡು) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ರೈತರು ಪಡೆದುಕೊಳ್ಳುತ್ತಿರುವ ಸಾಲದ ಎಷ್ಟರ ಮೊತ್ತಕ್ಕೆ ನೋಂದಣೆ ಶುಲ್ಕದ ವಿನಾಯತಿ ದೊರಕುತ್ತಿದೆ.

ಆ. ಉಳಿದ ಸಾಲದ ಮೊತ್ತಕ್ಕೂ ನೋಂದಣಿ ಶುಲ್ಕ ವಿನಾಯಿತಿ ಕೊಡಲು ಸರ್ಕಾರ ಆದೇಶಿಸಿದೆಯೆ

ಇ. ಹಾಗಿದ್ದಲ್ಲಿ, ಎಂದಿನಿಂದ ವಿನಾಯ್ತಿ ನೀಡಲಾಗುವುದು ?

ಶ್ರೀ ಆರ್. ಎಲ್. ಜಾಲಪ್ಪ (ಕಂದಾಯ ಸಚಿವರು):

ಅ. ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್‌ಗಳು ನೀಡುವ ರೂ. 10,000-00 ಗಳ ವರೆಗಿನ ಸಾಲಕ್ಕೆ ಬರೆದುಕೊಡುವ ದಸ್ತಾವೇಜುಗಳಿಗೆ ಪೂರ್ಣವಾಗಿ ಮತ್ತು ರೂ. 10,000-00 ಮೇಲ್ಪಟ್ಟಲ್ಲಿ ಶೇಕಡಾ - 50 ರಷ್ಟು ನೋಂದಣಿ ಶುಲ್ಕ (ರಿಜಿಸ್ಟ್ರೇಷನ್) ವಿನಾಯ್ತಿ ಇರುತ್ತದೆ.

ಆ. ಇಲ್ಲ.

ಇ. ಉದ್ಭವಿಸುವುದಿಲ್ಲ.

**ವಿಷಯ : ಪ್ರಕೃತಿ ವಿಕೋಪಕ್ಕೆ ಪರಿಹಾರ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 646 (912)

ಶ್ರೀ ಬಿ.ಆರ್. ಯಾವಗಲ್ (ನರಗುಂದ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. 1992-93 ಹಾಗೂ 93-94ನೇ ಸಾಲುಗಳಲ್ಲಿ ನರಗುಂದ ರೋಣ ಹಾಗೂ ನವಲಗುಂದ ತಾಲ್ಲೂಕುಗಳಲ್ಲಿ ಅತಿವೃಷ್ಟಿಯಿಂದ ಮನೆ ಹಾಗೂ ಬೆಳೆ ನಾಶವಾದವರ ಸಂಖ್ಯೆ

ಆ. ಒಟ್ಟು ಎಷ್ಟು ಹಣವನ್ನು ಪರಿಹಾರವಾಗಿ ನೀಡಲಾಗಿದೆ ?

ಇ. ಪದೇ ಪದೇ ಮಹಾಪೂರದಿಂದ ನೀರಿನಲ್ಲಿ ಕೊಚ್ಚಿ ಹೋಗುತ್ತಿರುವ ಹಳ್ಳಿಗಳನ್ನು ಸ್ಥಳಾಂತರಿಸುವ ವಿಷಯದ ಬಗ್ಗೆ ಸರ್ಕಾರದವರು ಕೈಗೊಂಡ ಕ್ರಮಗಳೇನು?

ಈ. ಮನೆ ಕಳೆದುಕೊಂಡವರಿಗೆ ಮನೆಗಳನ್ನು ಕಟ್ಟಿಸಿಕೊಡಲಾಗಿದೆಯೇ ?

ಶ್ರೀ ಆರ್. ಎಲ್. ಜಾಲಪ್ಪ (ಕಂದಾಯ ಸಚಿವರು) :

| ಅ. | ಬಿದ್ದ ಮನೆಗಳು ಪೂರ್ಣ | ಭಾಗಶ: | ಒಟ್ಟು | ಬೆಳೆ ನಾಶವಾದವರ ಸಂಖ್ಯೆ |
|---|---|---|---|---|
| | | 1992-93 | | |
| ರೋಣ | 225 | 7114 | 7339 | 1950 |
| ನವಲಗುಂದ | 3 | 932 | 935 | 466 |
| ನವಲಗುಂದ | 32 | 2111 | 2143 | 1403 |
| | | 1993-94 | | |
| ರೋಣ | 230 | 6484 | 6714 | 2173 |
| ನರಗುಂದ | 185 | 3449 | 3634 | 344 |
| ನವಲಗುಂದ | 34 | 2105 | 2139 | 386 |

ರೂ. 204.83 ಲಕ್ಷಗಳನ್ನು ಪರಿಹಾರವಾಗಿ ವಿತರಿಸಿದೆ.

ಆ. ಧಾರವಾಡ ಜಿಲ್ಲೆಯ 18 ಗ್ರಾಮಗಳ ಸ್ಥಳಾಂತರ ಕೋರಿ ಪ್ರಸ್ತಾವನೆ ಬಂದಿರುತ್ತದೆ. ಈ ಬಗ್ಗೆ ಪರಿಶೀಲಿಸಲಾಗುತ್ತಿದೆ. ಆದಾಗ್ಯೂ ಸದರಿ ಗ್ರಾಮಗಳ ಸ್ಥಳಾಂತರಕ್ಕಾಗಿ ರೂ. 3.47 ಕೋಟಿಗಳ ವೆಚ್ಚದ ಯೋಜನೆಯೊಂದನ್ನು ತಯಾರಿಸಿ, ಭಾರತ ಸರ್ಕಾರದ ಆರ್ಥಿಕ ನೆರವು ಕೋರಲಾಗಿದೆ.

ಇ. ಹಾನಿಗೊಂಡ ಮನೆಗಳ ಸಂತ್ರಸ್ಥರಿಗೆ ನಗದು ಪರಿಹಾರ ಮತ್ತು ಕಟ್ಟಡ ಸಾಮಗ್ರಿಗಳನ್ನು ಪೂರೈಸಲಾಗಿದೆ. 1992-93ರಲ್ಲಿ ಪೂರ್ಣ ಬಿದ್ದ ಮನೆಗಳ ಸಂತ್ರಸ್ಥರಿಗೆ ಆಶ್ರಯ ಮಾದರಿ ಮನೆಗಳನ್ನು ಹುಡ್ಕೋ ಸಂಸ್ಥೆಯಿಂದ ಆರ್ಥಿಕ ನೆರವು ಪಡೆದು ಕರ್ನಾಟಕ ಗೃಹ ನಿರ್ಮಾಣ ಮಂಡಳಿ ವತಿಯಿಂದ ಮನೆ ಕಟ್ಟಿಸಲಾಗುತ್ತಿದೆ. ಈಗಾಗಲೇ ರೂ. 60.00 ಲಕ್ಷಗಳನ್ನು ಗೃಹ ಮಂಡಳಿಯಿಂದ ಬಿಡುಗಡೆ ಮಾಡಲಾಗಿದೆ. ಸಂತ್ರಸ್ಥರಿಗೆ ಮನೆ ಕಟ್ಟಿಸಲು ಕ್ರಮ ಜರುಗಿಸಲಾಗುತ್ತಿದೆ.

**ವಿಷಯ : ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಸ್ಥಿತಿಗತಿ ಕುರಿತು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 647 (910)

ಶ್ರೀ. ಬಿ. ಆರ್ ಯಾವಗಲ್ (ನರಗುಂದ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯವರು ಹೊಂದಿರು ಬಸ್ಸುಗಳ ಸಂಖ್ಯೆ ಎಷ್ಟು.

ಆ. ಪ್ರತಿವರ್ಷ ಎಷ್ಟು ಹೊಸ ಬಸ್ಸುಗಳನ್ನು ಕೊಳ್ಳಲಾಗುತ್ತಿದೆ ?

ಶ್ರೀ. ಕೆ. ಎಸ್. ಬಿಳಗಿ : (ಸಾರಿಗೆ ಸಚಿವರು)

ಅ. ಬಸ್ಸುಗಳ ಒಟ್ಟು ಸಂಖ್ಯೆ 9792.

ಆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಖ್ಯೆಯು ಕಳೆದ 4 ವರ್ಷಗಳಲ್ಲಿ ಖರೀದಿಸಿರುವ ಹೊಸ ಬಸ್ಸುಗಳು ಈ ಕೆಳಕಂಡಂತಿವೆ.

1. 1991-92 ರಲ್ಲಿ 1060
2. 1992-93 ರಲ್ಲಿ 1250
3. 1993-94 ರಲ್ಲಿ 1413
4. 1994-95 ರಲ್ಲಿ 1000

**ವಿಷಯ : ಗುಂಡ್ಲುಪೇಟೆ ತಾಲ್ಲೂಕಿನಲ್ಲಿನ ಬಸ್ಸುಗಳ ಸಂಚಾರ ಕುರಿತು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 648 (198)

ಶ್ರೀ. ಹೆಚ್. ಎಸ್. ಮಹದೇವ ಪ್ರಸಾದ್ (ಗುಂಡ್ಲುಪೇಟೆ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ .ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಗುಂಡ್ಲುಪೇಟೆಯಲ್ಲಿರುವ ಬಸ್ ಡಿಪೋದಿಂದ ಎಷ್ಟು ಮಾರ್ಗಗಳಲ್ಲಿ ಕ.ರಾ.ರ.ಸಾ. ಸಂಸ್ಥೆಯ ಬಸ್ಸುಗಳನ್ನು ಓಡಿಸಲಾಗುತ್ತಿದೆ.

ಆ. ಡಿಪೋ ಪ್ರಾರಂಭವಾದಗಾಲಿಂದ ಎಷ್ಟು ಹೊಸ ಬಸ್ಸುಗಳನ್ನು ಕೊಡಲಾಗಿದೆ.

ಇ. ನಿಗದಿತ ಕಿ.ಮೀ. ಕ್ರಮಿಸಿದ್ದರೂ ಬದಲಾಯಿಸದಿರುವ ಬಸ್ಸುಗಳೆಷ್ಟು ಅವುಗಳನ್ನು ಬದಲಾಯಿಸಲು ಕ್ರಮ ಕೈಗೊಳ್ಳಲಾಗಿದೆಯೇ

ಈ. ಗುಂಡ್ಲುಪೇಟೆ ತಾಲ್ಲೂಕಿನ ಎಲ್ಲಾ ಗ್ರಾಮಗಳಿಗೂ ಬಸ್ ಸೌಲಭ್ಯ ಒದಗಿಸಲಾಗಿದೆಯೇ ?

ಶ್ರೀ ಕೆ. ಎಸ್ ಬಿಳಗಿ (ಸಾರಿಗೆ ಸಚಿವರು):

ಅ. ಗುಂಡ್ಲುಪೇಟೆ ಘಟಕವು 61 ಮಾರ್ಗಗಳಲ್ಲಿ ಬಸ್ಸುಗಳನ್ನು ಕಾರ್ಯಾಚರಣೆಗೆ ಒಳಪಡಿಸುತ್ತಿದೆ.

ಆ. ಘಟಕವು 1986ರ ಮೇ 5 ರಂದು 36 ವಾಹನಗಳ ಪಡೆಯೊಂದಿಗೆ ಪ್ರಾರಂಭವಾಯಿತು. ನಂತರ 75 ಹೊಸ ವಾಹನಗಳನ್ನು ಘಟಕಕ್ಕೆ ನೀಡಲಾಗಿದೆ. ಪ್ರತಿ ವರ್ಷ ಈ ಘಟಕಕ್ಕೆ ನೀಡಲಾದ ಹೊಸ ಬಸ್ಸುಗಳು ಕೆಳಗಿನಂತೆ ಇದೆ.

| | |
|---|---|
| 1986-87 | 18 |
| 1887-88 | 10 |
| 1988-89 | 02 |
| 1989-90 | 01 |
| 1990-91 | 09 |
| 1991-92 | 04 |
| 1992-93 | 10 |
| 1993-94 | 13 |
| 1994-95 | 08 |
| ಒಟ್ಟು | 75 |

7 ವಾಹನಗಳು ನಿಗಧಿತ 7.5 ಲಕ್ಷ ಕಿ.ಮೀ.ಗಳನ್ನು ಪೂರ್ಣಗೊಳಿಸಿವೆ. ಹೊಸ ಬಸ್ಸುಗಳು ಸರಬರಾಜಾದಂತೆ ಅವುಗಳನ್ನು ಬದಲಾಯಿಸಲು ಕ್ರಮ ಕೈಗೊಳ್ಳಲಾಗುವುದು.

ಈ. ಕ.ರಾ.ರ.ಸಾ. ಸಂಸ್ಥೆಯು 4 ರಸ್ತೆ ಭಾಗಗಳನ್ನು ಮಾತ್ರ ರಾಷ್ಟ್ರೀಕರಣಗೊಳಿಸಿದೆ. ಉಳಿದ ಮಾರ್ಗಗಳನ್ನು ಖಾಸಗಿ ಬಸ್ ಮಾಲೀಕರು ಕಾರ್ಯಾಚರಣೆ ಮಾಡುತ್ತಿದ್ದಾರೆ. ಆದ್ದರಿಂದ ಈ ತಾಲ್ಲೂಕಿನಲ್ಲಿ ಎಲ್ಲಾ ಗ್ರಾಮಗಳಿಗೆ ಸಾರಿಗೆ ಸೌಲಭ್ಯಗಳನ್ನು ಒದಗಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದಾಗ್ಯೂ ಕ.ರಾ.ರ.ಸಾ. ಸಂಸ್ಥೆಯು 62 ಗ್ರಾಮಗಳಿಗೆ ಸಾರಿಗೆ ಸೌಲಭ್ಯವನ್ನು ಒದಗಿಸಿದೆ.

**ವಿಷಯ : ಮೈಸೂರು ಜಿಲ್ಲೆಗೆ ಶಕ್ತಿಮಾನ್ ಹತ್ತಿ ಬೀಜ ಪೂರೈಕೆ.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 649 (1220)

ಶ್ರೀ. ಹೆಚ್. ಎಸ್. ಮಹದೇವ ಪ್ರಸಾದ್ (ಗುಂಡ್ಲಪೇಟೆ) : ಮಾನ್ಯ ಕೃಷಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. 1995-96ನೇ ಸಾಲಿನ ಮುಂಗಾರು ವ್ಯವಸಾಯಕ್ಕೆ ಮೈಸೂರು ಜಿಲ್ಲೆಯಲ್ಲಿ ಶಕ್ತಿಮಾನ ಹತ್ತಿ ಬಿತ್ತನೆ ಬೀಜವನ್ನು ಒದಗಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ ?

ಆ. ಈ ಸಾಲಿನಲ್ಲಿ ಜಿಲ್ಲೆಯಲ್ಲಿ ಎಷ್ಟು ಹೆಕ್ಟೇರು ಪ್ರದೇಶದಲ್ಲಿ ಹತ್ತಿಬಿತ್ತನೆ ಮಾಡುವ ಸಾಧ್ಯತೆ ಇದೆ ?

ಇ. ಅಗತ್ಯವಿರುವಷ್ಟು ಡಿಸಿಹೆಚ್ -32 ಹತ್ತಿ ಬಿತ್ತನೆ ಬೀಜವನ್ನು ಒದಗಿಸಲಾಗುವುದೇ ?

ಶ್ರೀ. ಸಿ. ಬೈರೇಗೌಡ (ಕೃಷಿ ಸಚಿವರು) :

ಅ. 1995-96ನೇ ಸಾಲಿನ ಮುಂಗಾರಿಗೆ ಮೈಸೂರು ಜಿಲ್ಲೆಗೆ ಶಕ್ತಿಮಾನ್ ಹತ್ತಿ ಬೀಜ ಒದಗಿಸಲು ಸರ್ಕಾರ ಕ್ರಮ ಕೈಗೊಂಡಿದೆ.

ಆ. ಈ ಸಾಲಿನಲ್ಲಿ, ಮೈಸೂರು ಜಿಲ್ಲೆಯಲ್ಲಿ 40,000 ಹೆಕ್ಟೇರ್ ಪ್ರದೇಶದಲ್ಲಿ ಡಿಸಿಹೆಚ್-32 ಹತ್ತಿ ಬಿತ್ತನೆ ಮಾಡುವ ಕಾರ್ಯಕ್ರಮ ಹೊಂದಲಾಗಿದೆ.

ಇ. ಹೌದು, 979 ಕ್ವಿಂಟಾಲ್ ನಷ್ಟು ಹತ್ತಿ ಬೀಜಗಳನ್ನು ಸರಬರಾಜು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.

**ವಿಷಯ : ಮದೂರು ತಾಲ್ಲೂಕಿನಲ್ಲಿ ರೈತರಿಗೆ ಆರ್. ಟಿ. ಸಿ.**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 650 (628)

ಶ್ರೀ ಕೆ.ಎಸ್.ನಾಗೇಗೌಡ (ಕಿರುಗಾವಲು): ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ.

ಅ. ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನಲ್ಲಿ ಕೆಲವು ಗ್ರಾಮದ ರೈತರ ಜಮೀನಿಗೆ ಇನ್ನೂ ಆರ್.ಟಿ.ಸಿ. ಕೊಡದೇ ಜಾಗೀರುದಾರರ ದಾಖಲೆಗಳಲ್ಲಿ ಮುಂದುವರಿಸುತ್ತಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ. ಈ ಬಗ್ಗೆ ಸರ್ಕಾರದವರು ಕೈಗೊಂಡಿರುವ ಕ್ರಮವೇನು?

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು):

ಅ. ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.

ಆ. ಮದ್ದೂರು ತಾಲ್ಲೂಕಿನ ಎಸ್.ಐ. ಹಾಗಲಹಳ್ಳಿ, ಮುಡೀನಹಳ್ಳಿ, ಹೊನ್ನಾಯಕನಹಳ್ಳಿ ಮತ್ತು ಅರುವನಹಳ್ಳಿ ಗ್ರಾಮಗಳಲ್ಲಿ ಅಳತೆ ಕೆಲಸ ಪೂರೈಸಲು ಕ್ರಮ ಕೈಗೊಳ್ಳಲಾಗುತ್ತಿದೆ.

**ಹೆಚ್ಚುವರಿ ಮಾಹಿತಿ:**

ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನಲ್ಲಿ ಎಸ್.ಐ. ಹಾಗಲಹಳ್ಳಿ ಹೊನ್ನಾಯಕನ ಹಳ್ಳಿ, ಮುಡೀನಹಳ್ಳಿ ಮತ್ತು ಅರುವನಹಳ್ಳಿಗಳು ಇನಾಂ ಗ್ರಾಮಗಳಾಗಿದ್ದು, ಇನಾಂ ರದ್ದಿಯಾತಿ ಕಾನೂನಿನ್ವಯ ಸರ್ಕಾರದ ವಶಕ್ಕೆ ಬಂದಿರುತ್ತದೆ. ಈ ಗ್ರಾಮಗಳ ಜಮೀನಿನ ಬಗ್ಗೆ ಪ್ರಿಲಿಮಿನರಿ ಸರ್ವೆ ಕೆಲಸ ನಡೆದಿದ್ದು ಗ್ರಾಮಗಳಲ್ಲಿ ಇರತಕ್ಕ ಗೋಮಾಳ, ಕೆರೆ, ಕಟ್ಟೆ, ತೋಪು ಮತ್ತು ಇತರೆ ಮೀಸಲಿಡಬಹುದಾದ ಪ್ರದೇಶಗಳನ್ನು ಗುರುತಿಸಿ, ಸರ್ವೆ ನಂಬರ್‌ಗಳನ್ನು ದಾಖಲು ಮಾಡಿ, ಕಚ್ಚಾ ನಕ್ಷೆಗಳನ್ನು ತಯಾರಿಸಲಾಗಿದೆ. ಅನುಭವದಂತೆ ರೈತರ ಹೆಸರಿಗೆ ಪಹಣಿಗಳನ್ನು ಬರೆಯಲಾಗಿದೆ. ಯಾವ ಪಹಣಿಯು ಜಾಗೀರುದಾರರ ಮತ್ತು ಇನಾಂದಾರರ ಹೆಸರಿಗೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಮುಡೀನಹಳ್ಳಿ ಗ್ರಾಮದಲ್ಲಿ ಅಳತೆ ಕೆಲಸ ಪೂರೈಸಿ ಹೊಸ ನಕ್ಷೆ ತಯಾರಿಸಿ ಆರ್.ಟಿ.ಸಿ. ಬರೆಯಲಾಗಿದೆ. ಹೊನ್ನಾಯಕನಹಳ್ಳಿ ಗ್ರಾಮದಲ್ಲಿ ಅಳತೆ ಕೆಲಸ ಪೂರೈಸಲಾಗಿದ್ದು ನಿಯಮಗಳ ಅನುಸಾರ ಗ್ರಾಮದಲ್ಲಿ ಪ್ರಚಾರಪಡಿಸಿ ಆಕ್ಷೇಪಣೆಗಳು ಇದ್ದಲ್ಲಿ ಪರಿಶೀಲಿಸಿ ಹೊಸ ನಕ್ಷೆ ತಯಾರಿಸಿ ಆರ್.ಟಿ.ಸಿ. ಬರೆಯಬೇಕಾಗಿದೆ. ಅಳತೆ ಮಾಡುವಾಗ 5 ಮೂಲ ಸರ್ವೆ ನಂಬರ್‌ಗಳಲ್ಲಿ ಮೋಜಣಿ ತಪ್ಪು ಪತ್ತೆ ಆಗಿದ್ದು, ಇದರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಪರಿಶೀಲಿಸಲಾಗುತ್ತದೆ. ಎಸ್.ಐ. ಹಾಗಲಹಳ್ಳಿ ಮತ್ತು ಆರೂರಹಳ್ಳಿ ಗ್ರಾಮಗಳ ಅಳತೆ ಕೆಲಸವನ್ನು ಪ್ರಾರಂಭ ಮಾಡಿದ್ದು ಇದರ ಪೈಕಿ ಹಾಗಲಹಳ್ಳಿ ಗ್ರಾಮದ 684 ಸರ್ವೆ ನಂಬರ್‌ಗಳ ಅಳತೆ ಪೂರೈಸಲಾಗಿದ್ದು, ಉಳಿಕೆ 208 ಸರ್ವೆ ನಂಬರ್‌ಗಳ ಅಳತೆ ಬಾಕಿ ಇರುತ್ತದೆ. ಆರೂರಹಳ್ಳಿಗೆ ಸಂಬಂಧಿಸಿದ ರೆಕಾರ್ಡುಗಳು ಗೆದ್ದಲು ಹುಳು ತಿಂದು ಹಾಳಾಗಿದ್ದು ಹೊಸದಾಗಿ ದಾಖಲಾತಿ ಮಾಡಲು ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ.

**ವಿಷಯ : ಸಾರಿಗೆ ಸಂಸ್ಥೆ ವತಿಯಿಂದ ಹೊಸ ಬಸ್ ನಿಲ್ದಾಣಗಳ ನಿರ್ಮಾಣ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 651(630)

ಶ್ರೀ ಕೆ.ಎನ್.ನಾಗೇಗೌಡ (ಕಿರುಗಾವಲು) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

ಅ. ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಮುಂದಿನ ಸಾಲಿನಲ್ಲಿ ಹೊಸದಾಗಿ ಎಷ್ಟು ಬಸ್ಸು ನಿಲ್ದಾಣ (ಬಸ್‌ಸ್ಟ್ಯಾಂಡ್)ಗಳನ್ನು ಮಾಡಲು ನಿರ್ಧರಿಸಿದೆ;

ಆ. ಮಳವಳ್ಳಿ ತಾಲ್ಲೂಕು ಕಿರುಗಾವಲು ಮದ್ದೂರು ತಾಲ್ಲೂಕು, ಭಾರತೀನಗರ ಸೇರಿದೆಯೇ; ಹಾಗೂ ಉಳಿದ ಸ್ಥಳಗಳ ಬಗ್ಗೆ ವಿವರ ನೀಡುವುದು;

| | | | |
|---|---|---|---|
| 92) | ಗೋಕಾಕ್ | 34,51,092-00 | 39,22,233-00 |
| 93) | ಕುಡಚಿ | 2,43,324-00 | 1,41,392-00 |
| 94) | ಬೆಳಗಾವಿ | 85,37,148-00 | 38,71,645-00 |
| 95) | ಬೈಲಾಹೊಂಗಲ | 93,60,774-00 | 32,33,937-00 |
| 96) | ನಿಪ್ಪಾಣಿ | 18,12,861-00 | 1,31,673-00 |
| 97) | ನಂದಗಡ | 3,21,845-00 | 1,27,962-00 |
| 98) | ರಾಮದುರ್ಗ | 15,52,452-00 | 10,69,757-00 |
| 99) | ಸವದತ್ತಿ | 80,20,372-00 | 28,40,735-00 |
| 100) | ಸಂಕೇಶ್ವರ | 6,17,896-00 | 2,83,702-00 |

**1993-94ನೇ ಸಾಲಿನಲ್ಲಿ ಬೆಳಗಾಂ ವಿಭಾಗದ ನಿಯಂತ್ರಿತ ಮಾರುಕಟ್ಟೆಗಳ ಆದಾಯ, ವ್ಯಯ ತೋರಿಸುವ ವಿವರಣಾ ಪಟ್ಟಿ**

| | | | |
|---|---|---|---|
| 101) | ಗೋಣಿಕೊಪ್ಪಲ್ | 40,33,105-00 | 11,02,453-00 |
| 102) | ಮಡಿಕೇರಿ | 15,99,654-00 | 7,36,591-00 |
| 103) | ಸೋಮವಾರಪೇಟೆ | 8,43,136-00 | 4,16,667-00 |
| 104) | ಕಡೂರು | 32,02,525-00 | 12,88,582-00 |
| 105) | ತರೀಕೆರೆ | 15,71,609-00 | 8,03,396-00 |
| 106) | ಉಡುಪಿ | 20,52,344-00 | 11,05,602-00 |
| 107) | ಪುತ್ತೂರು | 51,09,056-00 | 20,14,319-00 |
| 108) | ಮಂಗಳೂರು | 1,95,25,188-00 | 36,08,202-00 |
| 109) | ಕೊಳ್ಳೇಗಾಲ | 37,49,935-00 | 23,43,457-00 |
| 110) | ಚಾಮರಾಜನಗರ | 24,38,312-00 | 12,38,602-00 |
| 111) | ನಂಜನಗೂಡು | 30,57,096-00 | 11,41,908-00 |
| 112) | ಹುಣಸೂರು | 16,73,634-00 | 7,26,526-00 |
| 113) | ಮೈಸೂರು | 66,54,774-00 | 31,00,305-00 |
| 114) | ಪಿರಿಯಾಪಟ್ಟಣ | 3,39,118-00 | 4,44,009-00 |
| 115) | ಕೃಷ್ಣರಾಜಪೇಟೆ | 11,16,348-00 | 6,88,368-00 |
| 116) | ಮದ್ದೂರು | 14,52,996-00 | 7,83,174-00 |
| 117) | ಮಂಡ್ಯ | 83,57,953-00 | 39,01,393-00 |
| 118) | ಅರಸೀಕೆರೆ | 38,98,403-00 | 19,12,184-00 |
| 119) | ಚನ್ನರಾಯಪಟ್ಟಣ | 8,82,147-00 | 9,76,579-00 |
| 120) | ಸಕಲೇಶ್ವರ | 14,47,260-00 | 5,51,905-00 |
| 121) | ಹಾಸನ | 20,06,814-00 | 16,45,769-00 |
| 122) | ಹೊಳೆನರಸೀಪುರ | 9,61,300-00 | 3,51,168-00 |
| 123) | ಚಿಕ್ಕಮಗಳೂರು | ಮಾರ್ಚ್ 1994ರಲ್ಲಿ ಸ್ಥಾಪಿತವಾಗಿದೆ | |
| 124) | ಟಿ. .ನರಸೀಪುರ | ಜುಲೈ 1994ರಲ್ಲಿ ಸ್ಥಾಪಿತವಾಗಿದೆ. | |

## ಶಿವಮೊಗ್ಗ ಜಿಲ್ಲೆಯಲ್ಲಿಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಆದಾಯ ಮತ್ತು ವಿನಿಯೋಗ ತಃಖ್ತೆ

ಶಿವಮೊಗ್ಗ ಜಿಲ್ಲೆಯಲ್ಲಿರುವ ಆರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ 1993-94ನೇ ಸಾಲಿನ ಆದಾಯವನ್ನು ಪ್ರಮುಖವಾಗಿ ಈ ಮಾರುಕಟ್ಟೆ ಸಮಿತಿಗಳಿಗೆ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ 1966 ಮತ್ತು ನಿಯಮಗಳು 1968 ಹಾಗೂ ಮಾರುಕಟ್ಟೆ ಸಮಿತಿಗಳ ಉಪ ನಿಯಮಗಳಲ್ಲಿ ವಿಧಿಸಲಾಗಿರುವ ಕರ್ತವ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ನಿರ್ವಹಿಸಲು ವೆಚ್ಚ ಮಾಡಲಾಗಿದೆ. ಇವುಗಳಲ್ಲಿ ಪ್ರಮುಖವಾಗಿ ಮಾರುಕಟ್ಟೆ ಸಮಿತಿಗಳಲ್ಲಿ ಮತ್ತು ಇಲಾಖೆಯ ತಾಂತ್ರಿಕ ವಿಭಾಗ, ಕಾನೂನು ಜಾರಿ ಕೋಶದ ಅಧಿಕಾರಿಗಳು ಮತ್ತು ಸಿಬ್ಬಂದಿಯ ವೇತನ, ಭತ್ಯೆಗಳ ಪಾವತಿ ಮಾಡಲು ಮತ್ತು ಮಾರುಕಟ್ಟೆ ಸಮಿತಿಗಳ ಚುನಾವಣೆ ವೆಚ್ಚಕ್ಕಾಗಿ ರಾಜ್ಯ ಸಂಚಿತ ನಿಧಿಗೆ ಕಾಯ್ದೆ ಪ್ರಕರಣ 91ರ ಪ್ರಕಾರ ವಂತಿಗೆ ಸಲ್ಲಿಸುತ್ತವೆ. ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ,ಬೆಂಗಳೂರು, ಇದಕ್ಕೆ ಕಾಯ್ದೆ ಪ್ರಕರಣ 92ರ ಪ್ರಕಾರ ಸಮಿತಿಗಳ ಆದಾಯದ ಶೇಕಡಾ 5ರಷ್ಟು ವಂತಿಗೆಯನ್ನು ಸಮಿತಿಗಳು ತುಂಬುತ್ತವೆ. ಮಾರುಕಟ್ಟೆ ಸಮಿತಿಯ ಅಧ್ಯಕ್ಷರು ಸದಸ್ಯರ ಗೌರವ ಧನ ಪ್ರವಾಸ ಭತ್ಯೆ ಹಾಗೂ ಮಾರುಕಟ್ಟೆ ಸಮಿತಿಗಳ ಅಭಿವೃದ್ಧಿ ಕಾಮಗಾರಿಗಳು ಮತ್ತು ಸಮಿತಿಗಳ ಆಡಳಿತ ವೆಚ್ಚಕ್ಕಾಗಿ ವಿನಿಯೋಗಿಸಲಾಗುತ್ತಿದೆ. ಸಮಿತಿಗಳ ಉಳಿತಾಯದ ಹಣವನ್ನು ಕಾಯ್ದೆ ಪ್ರಕರಣ 90ರಲ್ಲಿ ನಿಬಂಧನೆಗಳ ಮೇರೆಗೆ ಸಹಕಾರಿ ಬ್ಯಾಂಕುಗಳು, ರಾಷ್ಟ್ರೀಯ ಉಳಿತಾಯ ಪತ್ರಗಳು ಶೆಡ್ಯೂಲ್‌ಬ್ಯಾಂಕ್‌ಗಳು ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಸೆಕ್ಯೂರಿಟಿಗಳಲ್ಲಿ ಠೇವಣಿಯನ್ನಾಗಿ ತೊಡಗಿಸಲಾಗುವುದು.

| ಸಮಿತಿಯ ಹೆಸರು | 1993-94ನೇ ಸಾಲಿನ ಆದಾಯ | 1993-94ನೇ ಸಾಲಿನ ಖರ್ಚು | ಉಳಿತಾಯ ಹಣ |
|---|---|---|---|
| 1) ಶಿವಮೊಗ್ಗ | 2,43,21,056.30 | 77,68,536.95 | 1,65,52,519.35 |
| 2) ಸಾಗರ | 80,94,474.66 | 23,22,669.17 | 57,71,805.49 |
| 3) ಶಿಕಾರಿಪುರ | 9,17,421.00 | 5,47,040.00 | 3,70,381.00 |
| 4) ಚೆನ್ನಗಿರಿ | 23,11,185.90 | 9,95069.00 | 13,16,116.90 |
| 5) ಹೊನ್ನಾಳಿ | 7,59,397.45 | 4,23,407.40 | 3,35,990.85 |
| 6) ಭದ್ರಾವತಿ | 33,02,483.23 | 12,82,212.85 | 20,20,260.38 |

**ವಿಷಯ : ಮಂಗಳೂರು ಕಾರ್ಮಿಕ ನ್ಯಾಯಾಲಯದ ವ್ಯಾಪ್ತಿ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 691(326)

ಶ್ರೀ ಆಯನೂರು ಮಂಜುನಾಥ(ಹೊಸನಗರ) : ಮಾನ್ಯ ಕಾರ್ಮಿಕ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಮಂಗಳೂರು ಕಾರ್ಮಿಕ ನ್ಯಾಯಾಲಯದ ವ್ಯಾಪ್ತಿಗೆ ಬರುವ ಜಿಲ್ಲೆಗಳು ಯಾವುದು?

ಆ. ಜಿಲ್ಲಾವಾರು ಬಾಕಿ ಉಳಿದಿರುವ ಕೇಸ್‌ಗಳು ಎಷ್ಟು ಎಷ್ಟು ವರ್ಷಗಳಿಂದ ಬಾಕಿ ಉಳಿದಿವೆ. 5 ವರ್ಷಕ್ಕೂ ಹೆಚ್ಚು ಸಮಯದಿಂದ ಬಾಕಿ ಉಳಿದಿರುವ ಕೇಸುಗಳು ಎಷ್ಟು?

ಇ. ಇವುಗಳ ವಿಚಾರಣೆಗೆ ಕಳೆದ 3 ವರ್ಷಗಳಲ್ಲಿ ನಡೆದ ಸೀಟಿಂಗ್ ಎಷ್ಟು (ವಾರ್ಷಿಕ ಎಷ್ಟು)

ಈ. ಇವುಗಳನ್ನು ಬೇಗ ಇತ್ಯಾರ್ಥಗೊಳಿಸಲು ಶಿವಮೊಗ್ಗದಲ್ಲಿ ಒಂದು ಕಾರ್ಮಿಕ ನ್ಯಾಯಾಲಯ ಸ್ಥಾಪಿಸಲು ಸರ್ಕಾರ ಪರಿಶೀಲಿಸುವುದೇ?

ಶ್ರೀ ಸಿ. ಗುರುನಾಥ್ (ಕಾರ್ಮಿಕ ಸಚಿವರು):

ಅ. ಮಂಗಳೂರು ಕಾರ್ಮಿಕ ನ್ಯಾಯಾಲಯದ ವ್ಯಾಪ್ತಿಗೆ ದಕ್ಷಿಣ ಕನ್ನಡ ಹಾಗೂ ಶಿವಮೊಗ್ಗ ಜಿಲ್ಲೆಗಳು ಬರುತ್ತವೆ.

ಆ. 1995ರ ಜನವರಿ ಅಂತ್ಯಕ್ಕೆ ಬಾಕಿ ಇರುವ ಕೇಸ್‌ಗಳು :

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ : 761

ಶಿವಮೊಗ್ಗ ಜಿಲ್ಲೆಯಲ್ಲಿ : 320

5 ವರ್ಷಕ್ಕೂ ಮೇಲ್ಪಟ್ಟು ಬಾಕಿ ಇರುವ ಕೇಸ್‌ಗಳು :

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ : 323

ಶಿವಮೊಗ್ಗ ಜಿಲ್ಲೆಯಲ್ಲಿ : 118

1992ರಲ್ಲಿ : 244

1993ರಲ್ಲಿ : 268

1994ರಲ್ಲಿ : 260

ಶಿವಮೊಗ್ಗದಲ್ಲಿ ಕಾರ್ಮಿಕ ನ್ಯಾಯಾಲಯವನ್ನು ಸ್ಥಾಪಿಸುವ ಬಗ್ಗೆ ಸರ್ಕಾರವು ಸೂಕ್ತ ಸಂದರ್ಭದಲ್ಲಿ ಪರಿಶೀಲಿಸುವುದು.

**ವಿಷಯ : ಶರಾವತಿ, ವರಾಹಿ, ಚಕ್ರಾ ಯೋಜನೆಯಲ್ಲಿ ಮುಳುಗಡೆಯಾದ ರೈತರಿಗೆ ಪುನರ್ವಸತಿ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 692 (822)

ಶ್ರೀ ಆಯನೂರು ಮಂಜುನಾಥ(ಹೊಸನಗರ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಶಿವಮೊಗ್ಗ ಜಿಲ್ಲೆಯಲ್ಲಿ ಶರಾವತಿ, ವರಾಹಿ, ಚಕ್ರಾ ಯೋಜನೆಗಳಿಂದ ಮುಳುಗಡೆಯಾದ ಪ್ರದೇಶದ ರೈತರನ್ನು ಮತ್ತು ಜನರನ್ನು ಶಿವಮೊಗ್ಗ ತಾಲ್ಲೂಕು ಮತ್ತು ಹೊಸನಗರ ತಾಲ್ಲೂಕಿನಲ್ಲಿರುವ ಯಾವ ಯಾವ ಗ್ರಾಮದಲ್ಲಿ ಸರ್ಕಾರ ನೆಲೆಗೊಳಿಸಿದೆ.

ಆ. ಈ ರೈತರು ವಾಸಿಸುತ್ತಿರುವ ಗ್ರಾಮಗಳಿಗೆ ಯಾವ ರೀತಿಯ ಸೌಲಭ್ಯವನ್ನು ನೀಡಿದೆ.

ಇ. ಈ ಜನರನ್ನು ಪುನರ್ವಸತಿಗೊಳಿಸಿದ ಗ್ರಾಮಗಳಿಗೆ ನಾಗರೀಕ ಸೌಲಭ್ಯಗಳಾದ ನೀರು, ವಸತಿ, ವೈದ್ಯಕೀಯ : ರಸ್ತೆ, ವಿದ್ಯುತ್, ಶಾಲೆ, ಮುಂತಾದವುಗಳನ್ನು ಒದಗಿಸಲಾಗಿದೆಯೇ?

ಶ್ರೀ ಆರ್.ಎಲ್.ಜಾಲಪ್ಪ(ಕಂದಾಯ ಸಚಿವರು) :

ಅ. ಚಕ್ರಾ ವರಾಹಿ ಯೋಜನೆ

ಚಕ್ರ ವರಾಹಿ ಯೋಜನೆಗಳಿಂದ ಮುಳುಗಡೆಯಾದ ಪ್ರದೇಶದ ರೈತರನ್ನು ಶಿವಮೊಗ್ಗ ತಾಲ್ಲೂಕು ಅಗಸವಳ್ಳಿ ಗ್ರಾಮ ಐಹೊಳೆ ಪುನರ್ ವಸತಿಕೇಂದ್ರದಲ್ಲಿ ಸರ್ಕಾರ ನೆಲೆಗೊಳಿಸಿದೆ.

ಶರಾವತಿ ಯೋಜನೆ :

**1) ಶಿವಮೊಗ್ಗ ತಾಲ್ಲೂಕು :**

1) ಅನುಪಿನ ಕಟ್ಟೆ, (2) ಶೆಟ್ಟಿಹಳ್ಳಿ
3) ಚಿತ್ರಶೆಟ್ಟಿಹಳ್ಳಿ 4) ತುಪ್ಪೂರು : ಜೋಡನಾಳ್
5) ಕುಣೆಹೊಸೂರು : ಜೋಡನಾಳ್
6) ಶಾಂತಿಕೆರೆ 7) ಶೆಟ್ಟಿಕೆರೆ 8) ಅಲ್ಕುಣೆ
9) ಹೊರಬೈಲು (10) ವಡೇರಕೊಪ್ಪ
11) ಪುರದಾಳು (12) ಹನುಮಂತರಪುರ
13) ಸೂಡೂರು (14) ರೇಚಿಕೊಪ್ಪ ಮಜರ್ ಮಡೆನೂರು ಕ್ಯಾಂಪ್
15) ದೊಡ್ಡಮತ್ತಲಿ (16) ಕೂಡಿ (17) ಬಸವಾಪುರ (18) ಮಲಿಶಂಕರ್
19) ಮಂಜರಿ ಕೊಪ್ಪ

**2) ಹೊಸನಗರ ತಾಲ್ಲೂಕು :**

1) ತಳಲ್ಲಿ 2) ಹಾರೋಹಿತ್ಲು 3) ಹರಿದ್ರಾವತಿ
ಗ್ರಾಮಗಳಲ್ಲಿ ಮುಳುಗಡೆ ರೈತರನ್ನು ಸರ್ಕಾರವು ನೆಲೆಗೊಳಿಸಿದೆ.

ಆ) 1) ಹಿರಿಯ ಪ್ರಾಥಮಿಕ ಶಾಲೆ
2) ವಿದ್ಯುದೀಕರಣ, ಬೀದಿ ದೀಪಗಳ ವ್ಯವಸ್ಥೆ,
3) ಸಮುದಾಯ ಭವನ

4) ದೇವಸ್ಥಾನ
5) ಕುಡಿಯುವ ನೀರು ಇತ್ಯಾದಿ
ಇ) ಹೌದು.

**ವಿಷಯ : ಹೊಸದುರ್ಗ ತಾಲ್ಲೂಕಿನಲ್ಲಿ ತೆಂಗಿನಬೆಳೆಗೆ ಬಂದಿರುವ ರೋಗದ ಬಗ್ಗೆ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 694(919)

ಶ್ರೀ ಟಿ.ಹೆಚ್.ಬಸವರಾಜ (ಹೊಸದುರ್ಗ) : ಮಾನ್ಯ ತೋಟಗಾರಿಕೆ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಹೊಸದುರ್ಗ ತಾಲ್ಲೂಕಿನಲ್ಲಿ ಮುಖ್ಯ ಬೆಳೆ ತೆಂಗಿನ ಗಿಡಕ್ಕೆ ಬಿದ್ದಿರುವ ರೋಗದ ಬಗ್ಗೆ ಸರ್ಕಾರದವರು ಕೈಗೊಂಡ ಕ್ರಮಗಳೇನು?

ಶ್ರೀ ಡಿ.ಟಿ.ಜಯಕುಮಾರ್ (ತೋಟಗಾರಿಕೆ ರಾಜ್ಯಸಚಿವರು) :

ಅ. ಈ ತಾಲ್ಲೂಕಿನ ತೆಂಗಿನ ಮರಗಳಿಗೆ ಯಾವುದೇ ಮಾರಕ ರೋಗ ಬಂದಿರುವುದಿಲ್ಲ. ಆದರ ಕಪ್ಪುತಲೆ ಹುಳುವಿನ ಭಾದೆ ತೀವ್ರವಾಗಿದೆ. ತೋಟಗಾರಿಕೆ ಇಲಾಖೆಯು ಈ ಕೀಟದ ಭಾದೆಯುನ್ನು ಜೈವಿಕವಾಗಿ ನಿಯಂತ್ರಿಸಲು ರೈತರಿಗೆ ಉಚಿತವಾಗಿ ಪರೋಪಜೀವಿಗಳನ್ನು ಮತ್ತು ಬೇರು ಚುಚ್ಚು ಮದ್ದು ನೀಡಲು ಮಾನೋ ಕ್ರೋಟೋಪಾಸ್ ಔಷಧಿಗಾಗಿ ಸಹಾಯಧನವನ್ನು ನೀಡಲಾಗುತ್ತಿದೆ. ತಾಲ್ಲೂಕಿನಲ್ಲಿ ಪರೋಪಜೀವಿಗಳ ಉತ್ಪಾದನೆಗಾಗಿ ಒಂದು ಪ್ರಯೋಗ ಶಾಲೆಯನ್ನು ತೆರೆಯಲಾಗಿದೆ.

**ವಿಷಯ : ಸಕಲೇಶಪುರ ಬಸ್ ನಿಲ್ದಾಣದ ನಿರ್ಮಾಣ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 695(810)

ಶ್ರೀ ಬಿ.ಬಿ.ಶಿವಪ್ಪ (ಸಕಲೇಶಪುರ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಸಕಲೇಶಪುರ ಬಸ್ ನಿಲ್ದಾಣ ನಿರ್ಮಾಣದ ಬಗ್ಗೆ ಸರ್ಕಾರ ಏನು ಕ್ರಮ ತೆಗೆದುಕೊಂಡಿದೆ,

ಆ. ಕ್ರಮ ತೆಗೆದುಕೊಂಡಿದ್ದಲ್ಲಿ ಯಾವಾಗ ಕೆಲಸ ಪ್ರಾರಂಭ ಮಾಡಲಾಗುವುದು?

ಶ್ರೀ ಕೆ.ಎಸ್. ಬಿಳಗಿ (ಸಾರಿಗೆ ಸಚಿವರು)

ಅ. ಲೋಕೋಪಯೋಗಿ ಇಲಾಖೆಯ ನಿರೀಕ್ಷಣಾ ಬಂಗಲೆ ಪ್ರದೇಶದಲ್ಲಿ ಬಸ್ ನಿಲ್ದಾಣ ನಿರ್ಮಿಸಲು ನಿರ್ಧರಿಸಲಾಯಿತು. ಆದರೆ ಲೋಕೋಪಯೋಗಿ ಇಲಾಖೆಯು ಪ್ರದೇಶವನ್ನು ಹಸ್ತಾಂತರಗೊಳಿಸಿರುವುದಿಲ್ಲ.

ಆ. ಲೋಕೋಪಯೋಗಿ ಇಲಾಖೆಯ ನಿರೀಕ್ಷಣಾ ಮಂದಿರವನ್ನು ಖಾಲಿ ನಿವೇಶನದೊಡನೆ ಸಂಸ್ಥೆಯ ವಶಕ್ಕೆ ತೆಗೆದುಕೊಂಡ ನಂತರ, ಮುಂದಿನ ಕ್ರಮಕೈಗೊಳ್ಳಲಾಗುವುದು.

**ವಿಷಯ : ಸರ್ಕಾರಿ ಜಮೀನಿನಲ್ಲಿ ಖಾಸಗಿ ಕ್ಲಬ್‌ನಿರ್ಮಿಸಿರುವುದರ ಬಗ್ಗೆ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 696(793)

ಶ್ರೀ ಎಂ. ಶ್ರೀನಿವಾಸ್ (ಉತ್ತರಹಳ್ಳಿ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಉತ್ತರಹಳ್ಳಿ ಕ್ಷೇತ್ರದ ಪಟ್ಟಣಗೆರೆ ಗ್ರಾಮ ಪಂಚಾಯಿತಿಗೆ ಸೇರಿರುವ ಸರ್ಕಾರಿ ಜಮೀನಿನಲ್ಲಿ ಇತ್ತೀಚೆಗೆ ಖಾಸಗಿಯವರು ಮೆ: ಬೆಸ್ಟ್‌ಕ್ಲಬ್ ನಿರ್ಮಿಸಿ ನಡೆಸುತ್ತಿರುತ್ತಾರೆ. ಇವರಿಗೆ ಸರ್ಕಾರ ಸರ್ಕಾರಿ ಜಮೀನನ್ನು ಮಂಜೂರು ಮಾಡಿದೆಯೇ?

ಆ. ಹಾಗಿದ್ದಲ್ಲಿ ಎಷ್ಟು ಎಕರೆ ಯಾವ ರೀತಿ ಮಾಡಿರುತ್ತಾರೆ?

ಇ. ಇಲ್ಲಿ ಕ್ಲಬ್ ನಡೆಸಲು ಸರ್ಕಾರದವರು ಅನುಮತಿ ನೀಡಿರುತ್ತಾರೆಯೇ?

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು) :

ಅ. ಉತ್ತರಹಳ್ಳಿ ಕ್ಷೇತ್ರದ ಪಟ್ಟಣಗೆರೆ ಗ್ರಾಮ ಪಂಚಾಯಿತಿಗೆ ಸೇರಿರುವ ಸರ್ಕಾರಿ ಜಮೀನಿನಲ್ಲಿ ಇತ್ತೀಚೆಗೆ ಖಾಸಗಿಯವರು ಬೆಸ್ಟ್‌ಕ್ಲಬ್ ನಿರ್ಮಿಸಿರುವುದಿಲ್ಲ. ಇವರಿಗೆ ಸರ್ಕಾರಿ ಜಮೀನು ಮಂಜೂರು ಮಾಡಿರುವುದಿಲ್ಲ.

ಆ. ಉದ್ಭವಿಸುವುದಿಲ್ಲ.

ಇ. ಸಾರ್ವಜನಿಕ ಮನರಂಜನಾ ಕಾಯ್ದೆ ಪರವಾನಗಿ ಮತ್ತು ನಿಯಂತ್ರಣ (ಬೆಂಗಳೂರು ನಗರ) ಆದೇಶ 1989ರ ಪ್ರಕಾರ ರಿಕ್ರಿಯೇಷನ್ ಚಟುವಟಿಕೆಗಳಿಗಾಗಿ ಬೆಸ್ಟ್ ಕ್ಲಬ್‌ಗೆ ದಿನಾಂಕ 31-12-95ರವರೆಗೆ ಜಾರಿಗೆ ಬರುವ ಹಾಗೆ ಪರವಾನಗಿಯನ್ನು ಬೆಂಗಳೂರು ನಗರದ ಪೋಲೀಸ್ ಆಯುಕ್ತರು ನೀಡಿದ್ದಾರೆ.

**ವಿಷಯ : ಶಿಗ್ಗಾಂವ ಮತ್ತು ಸವಣೂರ ತಾಲ್ಲೂಕುಗಳಲ್ಲಿ ಸರಿಯಾದ ಬಸ್ಸಿನ ವ್ಯವಸ್ಥೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 698(1197(ಎ))

ಶ್ರೀ ಮಂಜುನಾಥ ಸಿ.ಕುನೂರ್(ಶಿಗ್ಗಾಂವ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಶಿಗ್ಗಾಂವ ಮತ್ತು ಸವಣೂರ ತಾಲ್ಲುಕುಗಳಲ್ಲಿ ಬಸ್ಸಿನ ಸೌಕರ್ಯವಿಲ್ಲದೆ ಸಾರ್ವಜನಿಕರಿಗೆ ತೊಂದರೆ ಆಗಿರುವ ವಿಷಯ ಸರ್ಕಾದ ಗಮನಕ್ಕೆ ಬಂದಿದೆಯೇ.

ಆ. ಹಾವೇರಿ ಡಿಪೋ ಲಕ್ಷ್ಮೇಶ್ವರ ಡಿಪೋ ಹಾಗೂ ಹುಬ್ಬಳ್ಳಿ ಡಿಪೋಗಳಿಂದ ಎಷ್ಟು ಬಸ್ಸು ಶಿಗ್ಗಾಂವ ಸವಣೂರು ತಾಲ್ಲೂಕುಗಳಲ್ಲಿ ಸಂಚರಿಸುತ್ತವೆ ಕಳೆದ ಒಂದು ವರ್ಷದಿಂದ ಎಷ್ಟು ಬಸ್ಸುಗಳು ಯಾವ ಬಸ್ಸುಗಳು ರದ್ದಾಗಿವೆ ಇದಕ್ಕೆ ಕಾರಣಗಳೇನು?

ಶ್ರೀ. ಕೆ.ಎಸ್.ಬಿಳಗಿ (ಸಾರಿಗೆ ಸಚಿವರು) :

ಅ. ಇಲ್ಲ.

ಆ. 1) ಶಿಗ್ಗಾಂವೆ ಮತ್ತು ಸವಣೂರು ತಾಲ್ಲೂಕುಗಳಲ್ಲಿ ಪ್ರತಿದಿನ ಒಟ್ಟು 30 ಮಾರ್ಗಸೂಚಿಗಳನ್ನು ಕಾರ್ಯಾಚರಣೆಗೆ ಒಳಪಡಿಸಲಾಗುತ್ತಿದೆ. ಘಟಕವಾರು ವಿವರಗಳು ಈ ಕೆಳಗಿನಂತಿವೆ :-

| ಘಟಕ | ಕಾರ್ಯಾಚರಣೆಗೆ ಒಳಪಡಿಸಲಾಗುತ್ತಿರುವ ಅನುಸೂಚಿಗಳ ಸಂಖ್ಯೆ | |
|---|---|---|
| | ಶಿಗ್ಗಾಂವ್ ತಾಲ್ಲೂಕಿನಲ್ಲಿ | ಸವಣೂರು ತಾಲ್ಲೂಕಿನಲ್ಲಿ |
| ಹಾವೇರಿ | 5 | 6 |
| ಹುಬ್ಬಳ್ಳಿ (ಗ್ರಾ) | 4 | 3 |
| ಲಕ್ಷ್ಮೇಶ್ವರ | 5 | 7 |
| | 14 | 16 |

2) ಕಡಿಮೆ ಆದಾಯದ ಕಾರಣ ಶಿಗ್ಗಾಂವ್ ಮತ್ತು ಸವಣೂರು ತಾಲ್ಲೂಕುಗಳಲ್ಲಿ ತಲಾ ಒಂದು ಮಾರ್ಗಸೂಚಿಯನ್ನು ಕಳೆದ ವರ್ಷದಲ್ಲಿ ರದ್ದುಪಡಿಸಲಾಗಿದೆ. ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**Details of suspended schedules in shiggaon and Savanur Taluks.**

**Shiggaon Taluk :**

| Schedule No.HBL - 87 | | Kms | Timings Dept. Arr. | |
|---|---|---|---|---|
| 1. | Chowdal-Savanur | 15 | 1645-0715 | |
| 2. | Savanur-Shiggaon | 14 | 0720-0750 | |
| 3. | Shiggaon-Shabala | 14 | 0800-0830 | |
| 4. | Shabala-Shiggaon | 14 | 0840-0910 | |
| 5. | Shiggaon-Savanur | 14 | 0920-0940 | |
| 6. | Savanur-Shiggaon | 14 | 0950-1000 | |
| 7. | Shiggaon-Savanur | 23 | 1020-1100 | via Bankapur |
| 8. | Savanur-Shiggon | 14 | 1110-1130 | |
| 9. | Shiggaon-Savanur | 14 | 1200-1220 | |
| 10. | Savanur-Hubli | 58 | 1230-1400 C/C | via Shiggaon |
| 11. | Hubli-Savanur | 52 | 1600-1730 | via Hulga |
| 12. | Savanur-Shiggaon | 14 | 1740-1810 | |

| | | | |
|---|---|---|---|
| 13. | Shiggaon-Shabala | 14 | 1820-1850 |
| 14. | Shabala-Shiggaon | 14 | 1900-1930 |
| 15. | Shiggaon-Savanur | 14 | 1940-2000 |
| 16. | Savanur-Chowdal | 15 | 2100-2130 Night out at Chowdal. |

**Savanur Taluk :**
**Schedule No.93**

| | | | |
|---|---|---|---|
| 1. | Kurnalli- Hubli | 31 | 0650-0750 |
| 2. | Hubli-Bankapur | 81 | 0800-0915 |
| 3. | Bankapur-Savanur | 14 | 0930-0950 |
| 4. | Savanur -Shiggaon | 14 | 1000-1025 |
| 5. | Shiggaon-Savanur | 14 | 1035-1100 |
| 6. | Savanur-Hubli | 52 | 1130-1330 via Hulgur crew change |
| 7. | Hubli-Savanur | 58 | 1500-1630 via Shiggaon |
| 8. | Savanur-Hubli | 62 | 1645-1915 via Karadgi, Hulgur, Ingalagi, Yelwal, Aralikatti |
| 9. | Hubli-Kurnalli | 31 | 1930-2030 Night out at kurnalli. |

ವಿಷಯ : ಹುಬ್ಬಳ್ಳಿ ಧಾರವಾಡ ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿನ ಬಸ್ ಸಂಚಾರ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 699(1197)
ಶ್ರೀ ಮಂಜುನಾಥ ಸಿ.ಕುನ್ನೂರ (ಶಿಗ್ಗಾಂವ)
ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?
ಅ. ಧಾರವಾಡ ಜಿಲ್ಲೆಯಲ್ಲಿ ಎಷ್ಟು ಶೆಡ್ಯೂಲ್‌ಬಸ್ಸುಗಳಿವೆ
ಆ. ಹುಬ್ಬಳ್ಳಿ-ಧಾರವಾಡ ನಗರ ಪ್ರದೇಶಗಳಲ್ಲಿ ಎಷ್ಟು ಬಸ್ಸುಗಳು ಚಲಿಸುತ್ತವೆ.
ಇ. ಧಾರವಾಡ ಜಿಲ್ಲಾ ಗ್ರಾಮಾಂತರ ಪ್ರದೇಶಗಳಲ್ಲಿ ಎಷ್ಟು ಬಸ್ಸುಗಳು ಚಲಿಸುತ್ತವೆ.

ಶ್ರೀ.ಕೆ.ಎಸ್. ಬೀಳಗಿ (ಸಾರಿಗೆ ಸಚಿವರು) :

ಅ) 850 ಮಾರ್ಗಸೂಚಿಗಳು
ಆ) 204 ಮಾರ್ಗಸೂಚಿಗಳು
ಇ) 639 ಮಾರ್ಗಸೂಚಿಗಳು

**ವಿಷಯ : ಜಾನುವಾರುಗಳ ಸಂತೆ ನಡೆಯುವ ಸ್ಥಳಗಳು ಮತ್ತು ಅವುಗಳ ಅಭಿವೃದ್ಧಿ**

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ 700(1255)

ಶ್ರೀ ಬಿ.ಬಿ.ಚಿಮ್ಮನಕಟ್ಟಿ (ಬಾದಾಮಿ) : ಮಾನ್ಯ ಕೃಷಿ ಮಾರುಕಟ್ಟೆ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ರಾಜ್ಯದ ಯಾವ ಯಾವ ಸ್ಥಳಗಳಲ್ಲಿ ಜಾನುವಾರುಗಳ ಸಂತೆ ನಡೆಯುತ್ತಿದೆ. ಪ್ರತಿಯೊಂದು ಮಾರುಕಟ್ಟೆ ಅಂಗಣದಲ್ಲಿ ಕಲ್ಪಿಸಲಾಗುವ ಸೌಲಭ್ಯಗಳಾವುವು.

ಆ. ರಾಜ್ಯದ ಯಾವ ಯಾವ ಸ್ಥಳಗಳಲ್ಲಿ ಜಾತ್ರೆಗಳಲ್ಲಿ ಜಾನುವಾರುಗಳ ಸಂತೆ ಜರುಗುತ್ತಲಿದೆ ಕಳೆದ 5 ವರ್ಷಗಳಿಂದ ಈ ಸಂತೆಗಾಗಿ ಸರ್ಕಾರ ಖರ್ಚು ಮಾಡಲಾಗಿರುವ ಹಣದ ಮೊತ್ತವೆಷ್ಟು;

ಇ. ಮಾರುಕಟ್ಟೆಗಳ ಅಭಿವೃದ್ಧಿಗಾಗಿ ವಿಶ್ವ ಬ್ಯಾಂಕಿನ ನೆರವು ಸರ್ಕಾರ ಪಡೆದುಕೊಳ್ಳಲಾಗಿದೆಯೇ, ಹಾಗಿದ್ದಲ್ಲಿ ಯಾವ ಸ್ಥಳಗಳ ಮಾರುಕಟ್ಟೆಗಳ ಅಭಿವೃದ್ಧಿಗಾಗಿ ಈ ಹಣವನ್ನು ವ್ಯಯ ಮಾಡಲಾಗಿದೆ.

ಈ. ಪ್ರತಿಯೊಂದು ಮಾರುಕಟ್ಟೆ ಪ್ರದೇಶದಲ್ಲಿ ಆಯಾ ತಾಲ್ಲೂಕು ಮತ್ತು ಜಿಲ್ಲಾ ಕೃಷಿಕ ಸಮಾಜದ ಚಟುವಟಿಕೆಗಳಿಗಾಗಿ ಅಗತ್ಯ ನಿವೇಶನ ಒದಗಿಸಿಕೊಡಲು ಸರ್ಕಾರ ಸಂಬಂಧಿಸಿದ ಸಮಿತಿಗಳಿಗೆ ಸೂಚನೆ ನೀಡುವ ಅಗತ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಗುತ್ತಿದೆಯೇ, ದಯವಿಟ್ಟು ಸ್ಪಷ್ಟಪಡಿಸಬೇಕು ?

ಶ್ರೀ.ಬಿ.ಬಿ. ನಿಂಗಯ್ಯ (ಕೃಷಿ ಮಾರುಕಟ್ಟೆ ರಾಜ್ಯ ಸಚಿವರು) :

ಅ. ರಾಜ್ಯದ 99 ಮಾರುಕಟ್ಟೆ ಕ್ಷೇತ್ರದಲ್ಲಿ ಜಾನುವಾರು ಸಂತೆ ನಡೆಯುತ್ತಿದೆ. (ಪಟ್ಟಿ ಲಗತ್ತಿಸಿದೆ). ಜಾನುವಾರು ಮಾರುಕಟ್ಟೆಗಳಲ್ಲಿ ಮುಖ್ಯವಾಗಿ ಜಾನುವಾರು ತಂಗುವ ಸ್ಥಳ ನೀರಿನ ತೊಟ್ಟಿಗಳು, ಜಾನುವಾರುಗಳನ್ನು ತೊಳೆಯುವ ಸ್ಥಳ ನೆರಳಿನ ಗಿಡಗಳು ಪಶುವೈದ್ಯ ಶಾಲೆ, ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯ, ಜಾನುವಾರುಗಳನ್ನು ಕಟ್ಟುವ ಗೂಟಗಳು ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತಿದೆ.

ಆ. ವಿವರಗಳು ಸಧ್ಯಕ್ಕೆ ಲಭ್ಯವಿಲ್ಲ. ವಿವರಗಳನ್ನು ಎಲ್ಲಾ ಜಿಲ್ಲಾಪರಿಷತ್‌ಗಳಿಂದ ಪಡೆದು ಮಾನ್ಯ ಸದಸ್ಯರಿಗೆ ಒದಗಿಸಲಾಗುವುದು.

ಇ. ಹೌದು.

ರಾಜ್ಯದ 47 ಮಾರುಕಟ್ಟೆ ಪ್ರಾಂಗಣಗಳ ಅಭಿವೃದ್ಧಿಗಾಗಿ ರೂ.8,18,87,000-00 ಸಾಲವನ್ನು ವಿಶ್ವಬ್ಯಾಂಕಿನಿಂದ ಪಡೆಯಲಾಗಿದೆ. (ವಿವರಗಳನ್ನು ಅನುಬಂಧ 1 ಮತ್ತು 2 ರಲ್ಲಿ ಕೊಡಲಾಗಿದೆ.)

ಈ) ಇಲ್ಲ.

## LIVE STOCK MARKETS IN KARNATAKA

1. Doddaballapur
2. Chitradurga
3. Davanagere
4. Harihara
5. Hiriyur
6. Hosadurga
7. Bangarpet
8. Chikkaballapur
9. Chinthamani
10. Gowribidanur
11. Kolar
12. Malur
13. Mulbagal
14. Srinivasapur
15. Bhadravathi
16. Shikaripura
17. Shimoga
18. Chikkanayaka nahalli
19. Gubbi
20. Kunigal
21. Madhugiri
22. Pavagada
23. Sira
24. Tumkur
25. Turuvekere
26. Athani
27. Bylahongal
28. Gokak
29. Kudchi
30. Nandagad
31. Nippani
35. Bagalkot
36. Badami
37. Bijapur
38. Hungund
39. Jamakhandi
40. Mahalingapur
41. Talikote
42. Annigere
43. Dharwad
44. Gadag
45. Hangal
46. Hirekerur
47. Hubli
48. Lakshmeshwar
49. Nargund
50. Ron
51. Ranebennur
52. Savanur
53. Shiggaon
54. Haliyal
55. Siddapura
56. Sirsi
57. Yallapura
58. Bellary
59. Hegaribomma nahalli
60. Kottur
61. Aurad
62. Hospet
63. Basavakalyana
64. Bhalki
65. Bidar
69. Nalwara
70. Saidapura
71. Sedam
72. Shahabad
73. Shahapur
74. Yadgiri
75. Gangavathi
76. Koppal
77. Kustagi
78. Manvi
79. Raichur
80. Sindhanoor
81. Yelburga
82. Tarikere
83. Mangalore
84. Arasikere
85. Chharayapatna
86. Hassan
87. Holenarasipura
88. Gonikoppal
89. Mandya
90. Maddur
91. K.H.Pet
92. Puthur
93. Udupi
94. Chamarajanagar
95. Hunsur
96. K.R.Nagar
97. Kollegal
98. Mysore
99. Nanjangud

IV. F-15

32. Ramadurga
33. Sankeshwar
34. Soundatti
66. Humnabad
67. Chittapur
68. Gulbarga

ಅನುಬಂಧ - 1

ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಲಾದ **47** ಮಾರುಕಟ್ಟೆಗಳ ವಿವರಣಾ ಪಟ್ಟಿ :-

1. ಹಾವೇರಿ
2. ಸಂಕೇಶ್ವರ
3. ಜಮಖಂಡಿ
4. ಗುಲ್ಬರ್ಗಾ
5. ಬಳ್ಳಾರಿ
6. ಬೀದರ್
7. ಯಾದಗಿರಿ
8. ನರಗುಂದ
9. ಶಹಾಪುರ
10. ಮೈಸೂರು
11. ಕೊಳ್ಳೇಗಾಲ
12. ತುಮಕೂರು
13. ಚಿಕ್ಕಬಳ್ಳಾಪುರ
14. ಮಂಡ್ಯ
15. ಗಂಗಾವತಿ
16. ಸಿಂಧನೂರು
17. ಮಾನ್ವಿ
18. ಮಂಗಳೂರು
19. ಬೈಲಹೊಂಗಲ
20. ಗೋಕಾಕ್
21. ಗದಗ
22. ಸವದತ್ತಿ
23. ರಾಮದುರ್ಗ
24. ಹಗರಿಬೊಮ್ಮನಹಳ್ಳಿ
25. ಅಥಣಿ
26. ಬೆಂಗಳೂರು
27. ಶಿವಮೊಗ್ಗ
28. ಚಿಂತಾಮಣಿ
29. ಹಾಸನ
30. ಚನ್ನರಾಯಪಟ್ಟಣ
31. ಹೊಳೇನರಸೀಪುರ
32. ತರೀಕೆರೆ
33. ಕಡೂರು
34. ಬೆಳಗಾಂ
35. ಬ್ಯಾಡಗಿ
36. ಅಣ್ಣಿಗೇರೆ
37. ಸಿರಗುಪ್ಪ
38. ಚಳ್ಳಕೆರೆ
39. ಮುಳಬಾಗಿಲು
40. ಹೊಸಪೇಟೆ
41. ಕೊಪ್ಪಳ
42. ಸಾಗರ
43. ಶಿರಸಿ
44. ಧಾರವಾಡ
45. ಹುಬ್ಬಳ್ಳಿ
46. ಮಧುಗಿರಿ
47. ಕುಣಿಗಲ್

ಅನುಬಂಧ -2

ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ತೆಗೆದುಕೊಳ್ಳಲಾದ ಅಭಿವೃದ್ಧಿ ಕಾರ್ಯಗಳ ವಿವರಣಾ ಪಟ್ಟಿ :-

| ಕ್ರ.ಸಂ. | ಅಭಿವೃದ್ಧಿ ಕಾರ್ಯದ ಹೆಸರು | ಯೋಜನಾಅಂದಾಜು ರೂ. ಮಿಲಿಯನ್‌ಗಳಲ್ಲಿ | ಒಟ್ಟು ಅಭಿವೃದ್ಧಿ ಕಾರ್ಯಗಳು |
|---|---|---|---|
| 1. | ಚರಂಡಿಗಳು | 3.391 | 34 |
| 2. | ಅಂತರಿಕ ರಸ್ತೆಗಳು | 6.849 | 51 |
| 3. | ವಾಹನಗಳ ನಿಲ್ದಾಣ ಸ್ಥಳ | 0.433 | 13 |
| 4. | ಆವರಣ ಗೋಡೆಗಳು | 3.259 | 45 |
| 5. | ಆಡಳಿತ ಕಛೇರಿಗಳು | 4.678 | 32 |
| 6. | ಪ್ಲಾಟ್ ಫಾರಂಗಳು | 7.015 | 44 |
| 7. | ಚೆಕ್‌ಪೋಸ್ಟ್‌ಗಳು | 0.926 | 31 |
| 8. | ಉಪಹಾರ ಗೃಹಗಳು | 1.684 | 32 |
| 9. | ರೈತಭವನಗಳು | 5.152 | 36 |
| 10. | ಶೌಚಾಲಯಗಳು | 1.489 | 41 |
| 11. | ಸಣ್ಣ ಮಳಿಗೆಗಳು | 2.879 | 19 |
| 12. | ನೀರಿನ ತೊಟ್ಟಿಗಳು | 0.240 | 19 |
| 13. | ಕ್ಯಾಟಲ್ ಶೆಡ್ಡುಗಳು | 1.134 | 14 |
| 14. | ಜಾನುವಾರ ನೊಂದಣಿ ಕಛೇರಿ | 0.485 | 7 |
| 15. | ಮಾರಾಟ ಪ್ರಾಂಗಣ | 0.890 | 5 |
| 16. | ಬ್ಯಾಂಕ್ -ವ-ಅಂಚೆ ಕಛೇರಿ | 1.039 | 11 |
| 17. | ಗೋದಾಮುಗಳು | 2.675 | 23 |
| 18. | ಸಿಬ್ಬಂದಿ ವಸತಿ ಗೃಹ | 0.861 | 7 |
| 19. | ನೀರು ಸರಬರಾಜು | 4.948 | 51 |
| 20. | ವಿದ್ಯುತ್ತೀಕರಣ | 1.175 | 32 |
| 21. | ಇತರೇ | 4.815 | 106 |
| 22. | ಅಂಗಡಿ-ವ-ಗೋದಾಮು | 59.136 | 992 |
| | ಒಟ್ಟು | 115.153 | 1640 |

ವಿಷಯ : ಸಹಕಾರ ಸಂಘಗಳ ನಿಬಂಧಕರುಗಳ ಬಳಿ ಬಾಕಿ ಉಳಿದಿರುವ ವ್ಯಾಜ್ಯಗಳ ಸಂಖ್ಯೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 703 (784)

ಶ್ರೀ. ಹೆಚ್. ಶಿವಪ್ಪ(ಹರಿಹರ) : ಮಾನ್ಯ ಸಹಕಾರ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಅರೆ ನ್ಯಾಯಿಕ ಪ್ರಾಧಿಕಾರಿಗಳಾದ ಅಂದರೆ ಸಹಕಾರ ಸಂಘಗಳ ನಿಬಂಧಕರು ಸಹಕಾರ ಸಂಘಗಳ ಅಪರ ನಿಬಂಧಕರು, ಸಹಕಾರ ಸಂಘಗಳ ಜಂಟಿ ನಿಬಂಧಕರು, ಸಹಕಾರ ಸಂಘಗಳ ಉಪ ನಿಬಂಧಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಇವರ ಮುಂದೆ 1990 ರಿಂದ ಬಾಕಿ ಉಳಿದಿರುವ ಒಟ್ಟು ವ್ಯಾಜ್ಯಗಳ ಸಂಖ್ಯೆ ಎಷ್ಟು?

ಆ. ಇವುಗಳ ಶೀಘ್ರ ವಿಲೇವಾರಿಗೆ ಕೈಗೊಂಡಿರುವ ಕ್ರಮಗಳೇನು?

ಶ್ರೀ. ಎಸ್.ಎಸ್. ಪಾಟೀಲ್ (ಸಹಕಾರ ಸಚಿವರು):

| ಅ. ಅಧಿಕಾರಿಗಳ ಹುದ್ದೆ | ಬಾಕಿ ಉಳಿದಿರುವ ವ್ಯಾಜ್ಯಗಳ ಒಟ್ಟು ಸಂಖ್ಯೆ |
|---|---|
| ಸಹಕಾರ ಸಂಘಗಳ ನಿಬಂಧಕರಲ್ಲಿ | |
| ಸಹಕಾರ ಸಂಘಗಳ ಅಪರ ನಿಬಂಧಕರಲ್ಲಿ | 1,861 |
| ಸಹಕಾರ ಸಂಘಗಳಸಂಯುಕ್ತ ನಿಬಂಧಕರಲ್ಲಿ | 5,175 |
| ಸಹಕಾರ ಸಂಘಗಳ ಉಪ ನಿಬಂಧಕರಲ್ಲಿ | 12,262 |
| ಸಹಕಾರ ಸಂಘಗಳ ಸಹಾಯಕ ನಿಬಂಧಕರಲ್ಲಿ | 34,374 |
| ಒಟ್ಟು | 53,672 |

ಆ. 1. ತುರ್ತಾಗಿ ವಿಲೇವಾರಿ ಮಾಡುವಂತೆ ಎಲ್ಲಾ ಮಧ್ಯಸ್ಥದಾರರುಗಳಿಗೆ ಜ್ಞಾಪನಾಪತ್ರವನ್ನು ಹೊರಡಿಸಲಾಗಿದೆ.

2. ವಿಳಂಬ ಮಾಡಿದ ಗೌರವ ಮಧ್ಯಸ್ಥದಾರರುಗಳಿಂದ ದಾವಾ ಪ್ರಕರಣಗಳನ್ನು ಹಿಂದಕ್ಕೆ ಪಡೆಯಲಾಗಿದೆ.

3. ಇಂತಹ ಗೌರವ ಮಧ್ಯಸ್ಥದಾರರುಗಳನ್ನು ಗೌರವ ಮಧ್ಯಸ್ಥದಾರರ ಪಟ್ಟಿಯಿಂದ ವಜಾ ಮಾಡಲಾಗಿದೆ.

4. ಇಲಾಖೆಯಲ್ಲಿರುವ ದಾವಾ ಪ್ರಕರಣಗಳ ತುರ್ತು ವಿಲೇಮಾಡಲು ಪ್ರತ್ಯೇಕ: ನ್ಯಾಯಾಲಯಗಳನ್ನುಸ್ಥಾಪನೆ ಮಾಡುವ ಕುರಿತು ಪ್ರಸ್ತಾವನೆ ಪರಿಶೀಲನೆಯಲ್ಲಿದೆ.

**ವಿಷಯ : ಭೂಮಿತಿ ಕಾಯ್ದೆ ರದ್ದು ಮಾಡುತ್ತಿರುವ ಬಗ್ಗೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 707(516)

ಶ್ರೀ ಕೆ.ಎಸ್.ಪುಟ್ಟಣ್ಣಯ್ಯ (ಪಾಂಡವಪುರ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಭೂಮಿತಿ ಕಾಯಿದೆ ರದ್ದು ಮಾಡುವುದರಿಂದ ಕೃಷಿಯ ಭೂಮಿ ಕೈಗಾರಿಕೆಗಳಾದರೆ ಉತ್ಪಾದನೆ ಮಾಡುವ ಕೃಷಿಕನ ಪಾಡೇನು?

ಶ್ರೀ.ಆರ್.ಎನ್. ಜಾಲಪ್ಪ (ಕಂದಾಯ ಸಚಿವರು) :

ಅ. ಸರ್ಕಾರದ ಪರಿಶೀಲನೆಯಲ್ಲಿ ಇರುವುದಿಲ್ಲ.

**ವಿಷಯ : ಸಹಕಾರಿ ಕ್ಷೇತ್ರದಲ್ಲಿ ನಾಮಕರಣ ಪದ್ಧತಿಯನ್ನು ಮುಂದುವರಿಕೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 708(526)

ಶ್ರೀ ಕೆ.ಎಸ್.ಪುಟ್ಟಣ್ಣಯ್ಯ (ಪಾಂಡವಪುರ) : ಮಾನ್ಯ ಸಹಕಾರ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಸಹಕಾರಿ ಕ್ಷೇತ್ರದಲ್ಲಿ ಈ ಸರ್ಕಾರವು ನಾಮಕರಣ ಪದ್ಧತಿಯನ್ನು ಮುಂದುವರಿಸುವುದೇ?

ಶ್ರೀ.ಎಸ್.ಎಸ್.ಪಾಟೀಲ್ (ಸಹಕಾರ ಸಚಿವರು) :

ಅ. ಹೌದು

**ವಿಷಯ : ಸೂಳ್ಯ ತಾಲ್ಲೂಕಿನಲ್ಲಿ ಬಸ್ಸಿನ ವ್ಯವಸ್ಥೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 709(737)

ಶ್ರೀ.ಎಸ್.ಅಂಗಾರ (ಸೂಳ್ಯಾ) : ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಸೂಳ್ಯ ತಾಲ್ಲೂಕಿನ ಸೂಳ್ಯ ಮಾವಿನಕಟ್ಟೆ- ಕಂದ್ರಪ್ಪಾಡಿ ಕೊಲ್ಲಮೊಗರು ರಸ್ತೆಯಲ್ಲಿ ಸರಕಾರಿ ಬಸ್ಸು ಓಡುತ್ತಿದೆಯೇ ಅಥವಾ ಹಿಂದೆ ಓಡುತ್ತಿತ್ತೇ?

ಆ. ಓಡತ್ತಿದ್ದಲ್ಲಿ ಯಾವ ವರ್ಷದಿಂದ (ವರ್ಷಾನುವಾರು ವಿವರ ನೀಡುವುದು)

ಶ್ರೀ. ಕೆ.ಎಸ್.ಬೀಳಗಿ (ಸಾರಿಗೆ ಸಚಿವರು)

ಅ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಈ ಮಾರ್ಗದಲ್ಲಿ ಸಧ್ಯ ಬಸ್ಸನ್ನು ಓಡಿಸುತ್ತಿರುವುದಿಲ್ಲ ಮತ್ತು ಈ ಹಿಂದೆಯೂ ಕೂಡ ಓಡಿಸಿರುವುದಿಲ್ಲ.

ಆ. ಉದ್ಭವಿಸುವುದಿಲ್ಲ.

**ವಿಷಯ : ಅನೇಕ ವರ್ಷಗಳಿಂದ ಸ್ವಾಧೀನ ಪಡಿಸಿಕೊಂಡು ಕೃಷಿ ಮಾಡಿರುವುದರ ಬಗ್ಗೆ ಹಕ್ಕು ಪತ್ರ ಸಿಕ್ಕಿಲ್ಲದಿರುವ ಬಗ್ಗೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 71:0 (1174)

ಶ್ರೀ. ಎಸ್.ಅಂಗಾರ (ಸೂಳ್ಯ) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಕಾನ - ಬಾಣೆ ಮತ್ತು ಫಾರೆಸ್ಟ್ ಬಸ್ಸರ್ ಏರಿಯಾದಲ್ಲಿ ಕಳೆದ ಅನೇಕ ವರ್ಷಗಳಿಂದ ಅಗ್ಮೆ ಮಾಡಿದ ಕೃಷಿಕರರಿಗೆ ಈ ವರೆಗೆ ಸರಕಾರದ ವತಿಯಿಂದ ಆ ಜಾಗಕ್ಕೆ ಸಂಬಂಧಪಟ್ಟಂತೆ ಯಾವುದೇ ಹಕ್ಕುಪತ್ರ ಸಿಕ್ಕಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ.

ಆ. ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು) :

ಅ. ಹಾಲಿ ನಿಯಮಗಳ ಪ್ರಕಾರ ಕಾನ-ಬಾಣೆ ಮತ್ತು ಫಾರೇಸ್ಟ್ ಬಸ್ಸರ್ ಇಂತಹ ಜಮೀನುಗಳು ವಿಶೇಷ ಹಕ್ಕುಳ್ಳ ಮತ್ತು ವಿಶಿಷ್ಟ ಉದ್ದೇಶಕ್ಕೆ ಕಾದಿರಿಸಿದ ಜಮೀನುಗಳಾಗಿರುವುದರಿಂದ ಇಂತಹ ಜಮೀನುಗಳನ್ನು ಸಕ್ರಮಗೊಳಿಸಲು ಕಾನೂನಿನಲ್ಲಿ ಅವಕಾಶವಿಲ್ಲದಿರುವುದರಿಂದ ಹಕ್ಕುಪತ್ರ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ.

ಆ. ಉದ್ಭವಿಸುವುದಿಲ್ಲ.

**ವಿಷಯ : ಬೀದರ್‌ನಲ್ಲಿ ಮುಚ್ಚಲಾಗಿರುವ ಡಿಸ್ಟಿಲರಿಗಳ ಕಾರ್ಮಿಕರಿಗೆ ಪರಿಹಾರ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 711(1207)

ಶ್ರೀ ಸೈಯದ್ ಜುಲ್ಫಿಕರ್ ಹಷ್ಮಿ (ಬೀದರ್) : ಮಾನ್ಯ ಕಾರ್ಮಿಕ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಬೀದರ್‌ನಲ್ಲಿರುವ ಇಂಡಿಯನ್ ಬ್ರೇವರೀಸ್ ಅಂಡ್ ಡಿಸ್ಟಿಲರೀಸ್ ಹಾಗೂ ರವೀಂದ್ರ ಡಿಸ್ಟಿಲರಿ ಸಂಸ್ಥೆಗಳು ಮುಚ್ಚಿರುವುದು ನಿಜವೇ?

ಆ. ಹಾಗಿದ್ದಲ್ಲಿ, ಈ ಡಿಸ್ಟಲರಿಗಳನ್ನು ಯಾವಾಗ ಮುಚ್ಚಲಾಯಿತು?

ಇ. ಇಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರ ಸಂಖ್ಯೆ ಎಷ್ಟು?

ಈ. ಈ ಎರಡು ಡಿಸ್ಟಿಲರಿಗಳು ಮುಚ್ಚಿರುವುದರಿಂದ ಬೀದಿಗೆ ಬಿದ್ದಿರುವ ಕಾರ್ಮಿಕರಿಗೆ ಮತ್ತೆ ಉದ್ಯೋಗವನ್ನು ನೀಡುವ ಸಲುವಾಗಿ ಸರ್ಕಾರ ಮತ್ತೆ ಡಿಸ್ಟಿಲರಿಗಳನ್ನು ಪ್ರಾರಂಭಿಸುವಂತೆ ಸೂಚಿಸುವುದೇ?

ಉ. ಇಲ್ಲದಿದ್ದಲ್ಲಿ ಕಾರಣಗಳೇನು?

ಶ್ರೀ.ಸಿ.ಗುರುನಾಥ್ (ಕಾರ್ಮಿಕ ಸಚಿವರು) :

ಅ. ಹೌದು

ಆ. 10-04-94.

ಇ. ಸುಮಾರು 400

ಈ. ಈ ವಿಷಯವು ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ರಿಟ್ ಅರ್ಜಿ ಸಂಖ್ಯೆ : 20726-27:94ರಲ್ಲಿ ಬಾಕಿ ಇರುತ್ತದೆ. ಮಾಲೀಕರನ್ನು ಯಾವುದೇ ದಂಡನೆಗೆ ಗುರಿಪಡಿಸಲಾಗದಂತೆ ಕರ್ನಾಟಕ ಉಚ್ಚ ನ್ಯಾಯಾಲಯದ ತಡೆಯಾಜ್ಞೆ ಇರುವುದರಿಂದ ಮೇಲ್ಕಂಡ ರಿಟ್ ಅರ್ಜಿ ತೀರ್ಮಾನವಾಗುವವರೆಗೂ ಕಾಯಬೇಕಾಗಿದೆ.

**ವಿಷಯ : ಮುಜರಾಯಿ ಇಲಾಖೆಗೆ ಸೇರಿದ ಜಮೀನನ್ನು ಬಿ.ಎಂ.ಎಸ್. ಶಿಕ್ಷಣಾ ಸಂಸ್ಥೆಗೆ ನೀಡಿರುವುದರ ಬಗ್ಗೆ**

ಚುಕ್ಕೆ ರಹಿತ ಪ್ರಶ್ನೆ :- 712 (1209)

ಶ್ರೀ ಸೈಯದ್ ಜುಲ್ಫಿಕರ್ ಹಷ್ಮಿ (ಬೀದರ್) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಬೆಂಗಳೂರು ನಗರದ ಬಸವನಗುಡಿಯ ದೊಡ್ಡಬಸವಣ್ಣ ದೇವಸ್ಥಾನ ರಸ್ತೆಯಲ್ಲಿರುವ ಶ್ರೀ ಕಾರಂಜಿ ಆಂಜನೇಯ ಮತ್ತು ಶ್ರೀ ದೊಡ್ಡಬಸವಣ್ಣ ದೇವಸ್ಥಾನಕ್ಕೆ ಸೇರಿರುವ ಜಾಗದ ಒಟ್ಟು ವಿಸ್ತೀರ್ಣವೆಷ್ಟು;

ಆ. ಇದರಲ್ಲಿ ಬಿ.ಎಂ.ಎಸ್. ಶಿಕ್ಷಣ ಸಂಸ್ಥೆಗೆ ಎಷ್ಟು ಪ್ರಮಾಣದ ಜಾಗವನ್ನು ಯಾವ ಆಧಾರದ ಮೇಲೆ ನೀಡಲಾಗಿದೆ.

ಇ. ಇದಕ್ಕೆ ಸಚಿವರ ಸಂಪುಟದ ಒಪ್ಪಿಗೆ ದೊರೆತಿತ್ತೆ

ಈ. ಈ ರೀತಿ ಜಾಗವನ್ನು ಸದರಿ ಶಿಕ್ಷಣ ಸಂಸ್ಥೆಗೆ ನೀಡುವಾಗ ನೀತಿ ನಿಯಮಗಳನ್ನು ಗಾಳಿಗೆ ತೂರಿರುವುದು ನಿಜವಲ್ಲವೇ?

ಉ. ಹಾಗಿದ್ದಲ್ಲಿ ಸಂಬಂಧಪಟ್ಟವರ ಮೇಲೆ ಶಿಸ್ತಿನ ಕ್ರಮ ಕೈಗೊಂಡು ಜಾಗವನ್ನು ಮತ್ತೆ ವಾಪಸ್ಸು ಪಡೆಯಲಾಗುವುದೇ?

ಶ್ರೀ ಆರ್.ಎಲ್.ಜಾಲಪ್ಪ (ಕಂದಾಯಸಚಿವರು) :

ಅ. 1. ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಸೇರಿದ ಜಾಗದ ಒಟ್ಟು ವಿಸ್ತೀರ್ಣ 10,641 ಚ.ಗ

(1955ನೇ ಸಾಲಿನಲ್ಲಿ ನೀಡಲಾದ 2500 ಚ.ಗ. ಹೊರತುಪಡಿಸಿ)

2. ಶ್ರೀ ದೊಡ್ಡಬಸವಣ್ಣ ದೇವಾಲಯಕ್ಕೆ ಸೇರಿದ ಜಾಗದ ಒಟ್ಟು ವಿಸ್ತೀರ್ಣ 15,730 ಚ.ಗ

ಆ. ಬಿ.ಎಂ.ಎಸ್.ಶಿಕ್ಷಣ ಸಂಸ್ಥೆಗೆ ನಿಯಮಗಳನುಸಾರ ನೀಡಲಾದ ಜಾಗಗಳ ವಿವರಗಳು

| | ದೇವಾಲಯದ ಹೆಸರು | ಆದೇಶ ಸಂಖ್ಯೆ | ನಿಬಂಧನೆಗಳ ವಿವರ | ಒಟ್ಟು ವಿಸ್ತೀರ್ಣ |
|---|---|---|---|---|
| 1) | ಶ್ರೀ ಕಾರಂಜಿ ಆಂಜನೇಯ | ಆರ್.ಡಿ.23.ಎಂಎಲ್‌ಡಿ 70,ದಿ : 7-7-73 ಸ್ವಾಮಿ ದೇವಸ್ಥಾನ | 50 ವರ್ಷಗಳ ಗುತ್ತಿಗೆ ಅವಧಿ ಮಾಹೆಯಾನ 1000 ಬಾಡಿಗೆ ಹಾಗೂ 20,000 ರೂ.ಗಳ ಮುಂಗಡ ಹಣ ಮರ ಪಾವತಿ | 3939 ಚ |
| 2) | " | ಆರ್.ಡಿ. 175.ಎಂ.ಎಲ್‌ಡಿ 85, ಡಿ : 15.11.91 | 5 ವರ್ಷದ ಗುತ್ತಿಗೆ ಅವಧಿಗೆ ಮಾಹೆಯಾನ 2500 ರೂ. ಬಾಡಿಗೆ 20 ಲಕ್ಷ ರೂ. ಗುಡ್‌ವಿಲ್ | 2635 ಚ. |
| 3) | " | ಆರ್‌ಡಿ.31.ಎಂ.ಎಲ್.ಡಿ.80 ದಿ : 22-12-81 | 50 ವರ್ಷಗಳ ಅವಧಿ ಗುತ್ತಿಗೆ ಧರ ಮಾಹೆಯಾನ 670 ರೂ. ಮತ್ತು ಪ್ರತಿ ವರ್ಷ ಶೇ. 10ರಷ್ಟು ಹೆಚ್ಚಳ ಗುಡ್‌ವಿಲ್3,96,000 | 2625ಚ ಮಿ |
| | | | ಒಟ್ಟು ವಿಸ್ತೀರ್ಣ | 9199 52 |
| 4) | ದೇವಾಲಯ | ಆರ್‌ಡಿ.93ಎಂಎಮ್‌ಡಿ 90.ದಿ : 22-1-91 | 30 ವರ್ಷಗಳ ಗುತ್ತಿಗೆ ಅವಧಿವಾರ್ಷಿಕ 12,000ಗಳ ಬಾಡಿಗೆ ಹಾಗೂ ಪ್ರತಿ ವರ್ಷ 5 ರಷ್ಟು ಬಾಡಿಗೆ ಹೆಚ್ಚಳ ಮತ್ತು 30,00,000 ಗುಡ್‌ವಿಲ್ | 4844 ಚ.ಮಿ |
| 5) | " | ಆರ್ ಡಿ.323.ಎಂಎಲ್‌ಡಿ 92ದಿ : 30-10-92 | 30 ವರ್ಷಗಳ ಗುತ್ತಿಗೆ ಅವಧಿ ವಾರ್ಷಿಕ ಬಾಡಿಗೆ ರೂ.11,000 ಹಾಗೂ ಪ್ರತಿ ವರ್ಷ ಶೇ.5: - ರಷ್ಟು ಬಾಡಿಗೆ ಹೆಚ್ಚಳ ಮತ್ತು ರೂ.27,00,000-00 ಗುಡಿವಿಲ್ | 3752 ಚ.ಮಿ |
| | | | ಒಟ್ಟು | 8596ಚ.ಮಿ |

ಇ. ಶ್ರೀದೊಡ್ಡಬಸವಣ್ಣ ದೇವಾಲಯಕ್ಕೆ ಸಂಬಂಧಿಸಿದ ಜಾಗಗಳ ಬಗ್ಗೆ ಸಚಿವಸಂಪುಟದ ಒಪ್ಪಿಗೆಯನ್ನು ಪಡೆಯಲಾಗಿದೆ. ಶ್ರೀಕಾರಂಜಿ ಆಂಜನೇಯ ದೇವಾಲಯಕ್ಕೆ ಸಂಬಂಧಿಸಿದ ಮೂಲ ಕಡತಗಳನ್ನು ಪರಿಶೋಧಿಸಲಾಗುತ್ತಿದೆ ವಿವರಗಳನ್ನು ಶಾಸಕರಿಗೆ ಒದಗಿಸಲಾಗುವುದು.

ಈ. ನಿಜವಲ್ಲ.

ಉ. ನಿಯಮಾನುಸಾರ ಇರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ ಗುತ್ತಿಗೆ ಅವಧಿ ಮುಗಿದ ನಂತರ ಸೂಕ್ತ ಕ್ರಮ ಕೈಗೊಳ್ಳಲಾಗುವುದು.

**ವಿಷಯ : ಬೆಂಗಳೂರು ನಗರದ ಗ್ರೈನ್ ಮರ್ಚೆಂಟ್ಸ್ ಸಹಕಾರ ಬ್ಯಾಂಕಿನಲ್ಲಿ ನೇಮಕಾತಿಯಲ್ಲಿ ರೋಸ್ಟರ್ ಪದ್ಧತಿ ಉಲ್ಲಂಘನೆ**

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 713(1208)

ಶ್ರೀ ಸೈಯದ್ ಜುಲ್ಫಿಕರ್ ಹಷ್ಮಿ (ಬೀದರ್) : ಮಾನ್ಯ ಸಹಕಾರ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಬೆಂಗಳೂರು ನಗರದ ಚಾಮರಾಜಪೇಟೆಯಲ್ಲಿರುವ ದಿ ಗ್ರೈನ್ ಮರ್ಚ್‌ಂಟ್ಸ್ ಸಹಕಾರ ಬ್ಯಾಂಕಿಗೆ ಸಹಕಾರ ಸಂಘಗಳ ನಿಬಂಧಕರು, ಮನ್ನಣೆ ನೀಡಿರುವುದು ನಿಜವೇ?

ಆ. ಹಾಗಿದ್ದಲ್ಲಿ ಈ ಸಹಕಾರಿ ಬ್ಯಾಂಕು ಸಹಕಾರ ಕಾಯ್ದೆಯ ಅನ್ವಯ ಕಾರ್ಯ ನಿರ್ವಹಿಸಬೇಕಾಗಿರುವುದು ?

ಇ. ಈ ಬ್ಯಾಂಕಿನಲ್ಲಿ ಈಗ ಇರುವ ಸಿಬ್ಬಂದಿ ವರ್ಗದ ಸಂಖ್ಯೆ ಎಷ್ಟು ? (ಸಿಬ್ಬಂದಿ ವರ್ಗದವರು ವಿವಿಧ ಗುಂಪುಗಳಿಗೆ ಸೇರಿರುವ ಬಗ್ಗೆ ವಿವರಗಳನ್ನು ಒದಗಿಸುವುದು)

ಈ. ಈ ಬ್ಯಾಂಕಿನಲ್ಲಿ ಸಿಬ್ಬಂದಿ ನೇಮಕಾತಿ ಮಾಡುವಾಗ ರೋಸ್ಟರ್ ಪದ್ಧತಿಯನ್ನು ಉಲ್ಲಂಘನೆ ಮಾಡಿ ತನ್ಮೂಲಕ ಸಿಬ್ಬಂದಿ ನೇಮಕಾತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳಿಗೆ ಅನ್ಯಾಯ ಮಾಡಿರುವುದು ನಿಜವೇ?

ಉ. ಹಾಗಿದ್ದಲ್ಲಿ ಸರ್ಕಾರದವರು ಈ ಬ್ಯಾಂಕಿನ : ಮೇಲೆ ನಿಯಮದನ್ವಯ ಕ್ರಮ ಕೈಕೊಳ್ಳುವರೇ?

ಶ್ರೀ ಎಸ್.ಎಸ್.ಪಾಟೀಲ್ (ಸಹಕಾರ ಸಚಿವರು) :

ಅ. ದಿ ಗ್ರೇನ್ ಮರ್ಚೆಂಟ್ಸ್ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ ಚಾಮರಾಜಪೇಟೆ ಬೆಂಗಳೂರು ಇದನ್ನು ಸಹಕಾರ ಸಂಘಗಳ ಕಾಯಿದೆ 1918 ರನ್ವಯ ಸಹಕಾರ ಸಂಘಗಳ ನಿಬಂದಕರು ಇವರಿಂದ ದಿನಾಂಕ : 29-07-1927 ರಂದು ನೋಂದಾಯಿಸಲ್ಪಟ್ಟಿದೆ.

ಆ. ಹೌದು

ಇ. ಈ ಬ್ಯಾಂಕಿನಲ್ಲಿ ಹಾಲಿ ಕೇಂದ್ರ ಕಛೇರಿ ಹಾಗೂ ಎರಡು ಶಾಖೆಗಳಿಂದ ಒಟ್ಟು 79 ಜನ ಸಿಬ್ಬಂದಿ ವರ್ಗ ಕೆಲಸ ನಿರ್ವಹಿಸುತ್ತಿದೆ. ಹಾಲಿ ಕೆಲಸ ನಿರ್ವಹಿಸುತ್ತಿರುವ ವರ್ಗವಾರು ಸಿಬ್ಬಂದಿಯ ವಿವರ ಈ ಕೆಳಕಂಡಂತಿದೆ.

| | | |
|---|---|---|
| 1) | ಸಾಮಾನ್ಯ ವರ್ಗ | 39 |
| 2) | ಹಿಂದುಳಿದ ವರ್ಗ | 38 |
| 3) | ಪರಿಶಿಷ್ಠ ಜಾತಿ | 01 |
| 4) | ಪರಿಶಿಷ್ಠ ಪಂಗಡ | 01 |
| | ಒಟ್ಟು | 79 |

ಈ. ಸಹಕಾರ ಸಂಘಗಳ ನಿಬಂಧಕರ ಸುತ್ತೋಲೆ ಸಂಖ್ಯೆ ಆರ್ ಎಸ್ ಆರ್ 59 ಎಕ್ಸ್‌ಎಂಸಿ 92-93, ದಿನಾಂಕ: 16-07-1993ರಲ್ಲಿ ಹೊರಡಿಸಿದ ನಂತರ ಈ ಬ್ಯಾಂಕಿನಲ್ಲಿ ಯಾವ ಸಿಬ್ಬಂದಿಯನ್ನು ಖಾಯಂಯಾಗಿ ಕೆಲಸ ನಿರ್ವಹಿಸಲು ನೇಮಿಸಿಕೊಂಡಿರುವುದಿಲ್ಲ. ಈ ಸುತ್ತೋಲೆ ಹೊರಡಿಸುವ ಪೂರ್ವದಲ್ಲಿ ಸರ್ಕಾರದಿಂದ ಧನ ಸಹಾಯ ಪಡೆಯದೇ ಇರುವ ಸಹಕಾರ ಸಂಸ್ಥೆಗಳು ಕಡ್ಡಾಯವಾಗಿ ಮೀಸಲಾತಿಯನ್ನು ಅನುಸರಿಸಬೇಕೆಂಬ ನಿರ್ದೇಶನಗಳಿರಲಿಲ್ಲ. ಆದರೆ ದಿನಾಂಕ: 16.01.1994ರಿಂದ 04.03.95ರ ಅವಧಿಯಲ್ಲಿ ತಾತ್ಕಾಲಿಕವಾಗಿ ಗುತ್ತಿಗೆ ಆದಾರದ ಮೇಲೆ 8 ಜನ ಅಧೀಕ್ಷಕರನ್ನು ಆಡಳಿತ ಮಂಡಳಿಯವರು ನೇಮಿಸಿಕೊಂಡಿದ್ದು ಈ 8 ಮಂದಿ ಅಧೀಕ್ಷೆಕ್ಷರನ್ನು ದಿನಾಂಕ: 16-03-1995ರ ಆಡಳಿತ ಮಂಡಳಿಯ ಸಭೆಯ ವಿಷಯ ಸಂಖ್ಯೆ 14ರಲ್ಲಿ ತೀರ್ಮಾನಿಸಿರುವಂತೆ ದಿನಾಂಕ : 31-03-1995ರಿಂದ ಜಾರಿಗೆ ಬರುವಂತೆ ಕೆಲಸದಿಂದ ತೆಗೆದು ಹಾಕಲಾಗಿದೆ.

ಉ. ಇನ್ನು ಮುಂದೆ ಬ್ಯಾಂಕಿನಲ್ಲಿ ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವಾಗ ಮೀಸಲಾತಿಯನ್ನು ಪಾಲಿಸಲು ಸಹಕಾರ ಸಂಘಗಳ ನಿಬಂಧಕರ ಆದೇಶ ಕ್ರಮಾಂಕ : ಆರ್‌ಎಸ್‌ಆರ್ 59 ಎಕ್ಸ್‌ಎಂಸಿ 93-94, ದಿನಾಂಕ: 01-01-94ರಂದು ನೀಡಿರುವ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 30 (ಬಿ) ರನ್ವಯ ನಿರ್ದೇಶನಗಳನ್ನು ಬ್ಯಾಂಕು ಕಡ್ಡಾಯವಾಗಿ ಪಾಲಿಸಲು ಸೂಚಿಸಲಾಗಿದೆ.

**ವಿಷಯ : ಬೀದರ್ ಜಿಲ್ಲೆಯಲ್ಲಿ ಸಿ'' ಫಾರಂ ನೀರಿಕ್ಷೆಯಲ್ಲಿ ವಿಳಂಭ ವಾಗುತ್ತಿರುವ ಬಗ್ಗೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 714(1205)

ಶ್ರೀ ಸೈಯದ್ ಜುಲ್ಫಿಕರ್ ಹಷ್ಮಿ (ಬೀದರ್) : ಮಾನ್ಯ ಕಂದಾಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಬೀದರ್ ಜಿಲ್ಲೆಯಲ್ಲಿ ಕಳೆದ 2 ವರ್ಷಗಳಲ್ಲಿ ಎಷ್ಟು ಜನರಿಗೆ ಸಿ'' ಫಾರಂ ನೀಡಲಾಗಿದೆ (ತಾಲ್ಲೂಕುವಾರು ಅಂಕಿ ಅಂಶಗಳನ್ನು ಒದಗಿಸುವುದು)

ಆ. ಈ ಅವಧಿಯಲ್ಲಿ ಸಿ ಫಾರಂ ಸಲುವಾಗಿ ಬಂದಿದ್ದ ಅರ್ಜಿಗಳ ಸಂಖ್ಯೆ ಎಷ್ಟು?

ಇ. ಸಿ ಫಾರಂ ಪಡೆದಿರುವವರು ಪೈಕಿ ಎಷ್ಟು ಜನರು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿರುವರು?

ಈ. ಸಿ ಫಾರಂ ನೀಡಿಕೆಯಲ್ಲಿ ತೀವ್ರವಾದ ವಿಳಂಬ ನೀತಿಯನ್ನು ಅನುಸರಿಸುತ್ತಿರುವುದು ನಿಜವೆ?

ಉ. ಹಾಗಿದ್ದಲ್ಲಿ ಅರ್ಜಿ ಸಲ್ಲಿಸಿದ ಎಷ್ಟು ದಿನಗಳಲ್ಲಿ ಸಿ ಫಾರಂ ನೀಡಲಾಗುವುದು?

ಊ. ಸಿ ಫಾರಂ ನೀಡಿಕೆಯಲ್ಲಿ ಉಂಟಾಗಿರುವ ವಿಳಂಬವನ್ನು ತಡೆಗಟ್ಟಲು ಯಾವ ಕ್ರಮಗಳನ್ನು ಅನುಸರಿಸಲಾಗುವುದು?

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು) :

| | | |
|---|---|---|
| ಅ.1) | ಬೀದರ್ ತಾಲ್ಲೂಕು | - 300 |
| 2) | ಔರಾದ್ ತಾಲ್ಲೂಕು | - 650 |
| 3) | ಬಸವ ಕಲ್ಯಾಣ | - 337 |
| 4) | ಭಾಲ್ಕಿ ತಾಲ್ಲೂಕು | - 25 |
| 5) | ಹುಮನಾಬಾದ್ | - 69 |
| | ಒಟ್ಟು | 1381 |

ಆ. 11780

ಇ. 541

ಈ. ಇಲ್ಲ

ಉ. ಸಾಮಾನ್ಯವಾಗಿ 15ರಿಂದ 30 ದಿವಸದೊಳಗಿಂದ ''ಸಿ'' ಫಾರಂಗಳನ್ನು ಕೊಡಲಾಗುತ್ತಿದೆ.

ಊ. ತಾಲ್ಲೂಕು ಸಭೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನೇಮಕಾತಿ ಮಾಡಿ ಅದರ ಶೀಘ್ರದಲ್ಲಿ ''ಸಿ'' ಫಾರಂ ನೀಡುವ ವ್ಯವಸ್ಥೆ ಮಾಡುವುದೆ?

**ವಿಷಯ : ಬೀದರ್ ನಗರದಲ್ಲಿರುವ ಹಳೆ ಬಸ್ ನಿಲ್ದಾಣಕ್ಕೆ ಎಲ್ಲಾ ಬಸ್ಸುಗಳು ಬರುವಂತೆ ಏರ್ಪಾಡು.**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 715(1206)

ಶ್ರೀ ಸೈಯದ್ ಜುಲ್ಫಿಕರ್ ಹಷ್ಮಿ (ಬೀದರ್): ಮಾನ್ಯ ಸಾರಿಗೆ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವಿರೆ?

ಅ. ಬೀದರ್‌ನಲ್ಲಿರುವ ಹಳೆಯ ಬಸ್‌ಸ್ಟ್ಯಾಂಡಿಗೆ ಹೊಸ ಬಸ್‌ಸ್ಟ್ಯಾಂಡಿನಿಂದ ಹೊರಡುವ ಬಸ್ಸುಗಳ ಪೈಕಿ ಕೆಲವೇ ಬಸ್ಸುಗಳು ಬರುತ್ತಿರುವುದು ನಿಜವಲ್ಲವೇ?

ಆ. ಹಾಗಿದ್ದಲ್ಲಿ ಇತ್ತೀಚೆಗೆ ಬೀದರ್‌ನ ಜನರು ಹಳೆಯ ಬಸ್ ನಿಲ್ದಾಣಕ್ಕೆ ಎಲ್ಲ ಬಸ್ಸುಗಳು ಬಂದು ಹೋಗಬೇಕೆಂದು ಒತ್ತಾಯಿಸಿ ಧರಣಿಗಳನ್ನು ಮಾಡಿದ್ದದ್ದು ನಿಜವೆ,

ಇ. ಹಾಗಿದ್ದಲ್ಲಿ ಇನ್ನು ಮುಂದೆ ಹಳೆಯ ನಿಲ್ದಾಣಕ್ಕೆ ಎಲ್ಲಾ ಬಸ್ಸುಗಳು ಬಂದು ಹೋಗುವಂತೆ ಮಾಡಿ ಜನರಿಗೆ ಆಗುತ್ತಿರುವ ಅನಾನುಕೂಲವನ್ನು ತಪ್ಪಿಸಲಾಗುವುದೇ?

ಶ್ರೀ.ಕೆ.ಎಸ್.ಬೀಳಗಿ (ಸಾರಿಗೆ ಸಚಿವರು) :

ಅ. ಹೊಸ ಬಸ್ ನಿಲ್ದಾಣದಿಂದ ಕಾರ್ಯಾಚರಣೆಗೆ ಒಳಪಡಿಸಲಾಗುತ್ತಿರುವ 200 ಸಾರಿಗೆಗಳಿಗೆ ಹಳೆಯ ಬಸ್ ನಿಲ್ದಾಣದ ಬಳಿ ನಿಲುಗಡೆ ಒದಗಿಸಲಾಗಿದೆ. ಇದಲ್ಲದೆ, ಹೊಸ ಬಸ್ ನಿಲ್ದಾಣ ಮತ್ತು ಹಳೆಯ ಬಸ್ ನಿಲ್ದಾಣದ ನಡುವೆ 30 ಸುತ್ತುಗಳನ್ನೊಳಗೊಂಡ 2 ಪ್ರತ್ಯೇಕ ಬಸ್ಸುಗಳನ್ನು ಪ್ರಯಾಣಿಕರ ಅನುಕೂಲಕ್ಕಾಗಿ ಕಾರ್ಯಚರಣೆಗೆ ಒಳಪಡಿಸಲಾಗುತ್ತಿದೆ.

ಆ. ಹೌದು

ಇ. ಮೇಲೆ (ಅ) ಕ್ಕೆ ನೀಡಿರುವ ಉತ್ತರದಿಂದ ಪ್ರಶ್ನೆ ಉದ್ಭವಿಸುವುದಿಲ್ಲ.

### ಪ್ರಕಟಣೆ

ಅಧ್ಯಕ್ಷರು : ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಗಳವರಿಂದ ಈ ಕೆಳಕಂಡ ಸಂದೇಶವು ಬಂದಿರುತ್ತದೆ.

ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯವಿಧಾನ ಹಾಗೂ ನಡವಳಿಕೆಯ ನಿಯಮ 114ರ ಮೇರೆಗೆ ವಿಧಾನ ಸಭೆಯಿಂದ ಅಂಗೀಕಾರವಾದ, 1995ನೇ ಸಾಲಿನ ಕರ್ನಾಟಕ ವಿದ್ಯುತ್ ಸರಬರಾಜು ಉದ್ಯಮಗಳ (ಅರ್ಜನೆ) (ತಿದ್ದುಪಡಿ) ವಿಧೇಯಕವು ಕರ್ನಾಟಕ ವಿಧಾನ ಪರಿಷತ್ತಿನಲ್ಲಿ ದಿನಾಂಕ : 5-4-95ರಯ ಅನುಮೋದಿಸಲ್ಪಟ್ಟಿದೆ ಎಂದು ತಿಳಿಸುತ್ತೇನೆ.

ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯವಿಧಾನ ಹಾಗೂ ನಡವಳಿಕೆಯ ನಿಯಮ 115ರ ಮೇರೆಗೆ ವಿಧಾನ ಸಭೆಯಿಂದ ಅಂಗೀಕೃತವಾದ ಕರ್ನಾಟಕ .ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕ 1995ನ್ನು, ಕರ್ನಾಟಕ ವಿಧಾನ ಪರಿಷತ್ತಿನಲ್ಲಿ, 5-4-95ರಂದು ತಿರಸ್ಕರಿಸಲಾಯಿತೆಂದು ತಿಳಿಸುತ್ತೇನೆ.

### 2. ಸಭೆಯ ಮುಂದಿಡಲಾದ ಕಾಗದ ಪತ್ರಗಳು

ಸಭೆಯ ಮುಂದಿಡಸಲಾದ ಕಾಗದ ಪತ್ರಗಳ ಪಟ್ಟಿ

ಶ್ರೀ ಎಂ.ಸಿ.ನಾಣಯ್ಯ : (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು) :

**I** ಮುಖ್ಯ ಮಂತ್ರಿಗಳ ಪರವಾಗಿ ಶ್ರೀ ಎಂ. ಸಿ. ನಾಣಯ್ಯ (ಕಾನೂನು ಸಚಿವರು) 1978ನೇ ಇಸವಿಯ ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 8(3) ಉಪ ಅನುಚ್ಛೇದದ 1ನೇ ಕಲಮಿನ ಮೇರೆಗೆ

ಕರ್ನಾಟಕ ರಾಜ್ಯ ಅರಣ್ಯ ಇಲಾಖೆಯ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು 994ಕ್ಕೆ ತಿದ್ದುಪಡಿ ಮಾಡುವ ಸಂಬಂಧದಲ್ಲಿ ದಿನಾಂಕ 31ನೇ ಜನವರಿ 1995ರಂದು ಹೊರಡಿಸಲಾದ ಸಿಆಸುಇ 29 ಸೇನಿಇ 94ನೇ ಕ್ರಮಾಂಕದ ಅಧಿಸೂಚನೆಯನ್ನು ಮಂಡಿಸುತ್ತೇನೆ.

**II** ಶ್ರೀ ಜೆ.ಹೆಚ್.ಪಟೇಲ್ (ಉಪ ಮುಖ್ಯ ಮಂತ್ರಿ) ಮಾನ್ಯ ಸಭಾಪತಿಯವರೆ,

1956ರ ಕಂಪನಿಗಳ ಕಾಯ್ದೆಯ 619ಎ ಕಲಮಿನ ಮೇರೆಗೆ

1989-90ನೇ ಸಾಲಿನ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತದ 20ನೇ ವಾರ್ಷಿಕ ವರದಿಯನ್ನು (ವಿಳಂಬಕ್ಕೆ ಕಾರಣದ ಟಿಪ್ಪಣಿಯೊಡನೆ) ಮಂಡಿಸುತ್ತೇನೆ.

**III** ಶ್ರೀ ಎಂ.ಪಿ.ಪ್ರಕಾಶ್ (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಮಂತ್ರಿ) ಮಾನ್ಯ ಸಭಾಪತಿಯವರೆ,

1993ರ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದ 262(3) ನೇ ಕಲಮಿನ ಮೇರೆಗೆ

1991-92ನೇ ಸಾಲಿನ ಧಾರವಾಡ ಜಿಲ್ಲಾ ಪರಿಷತ್ತಿನ ವಾರ್ಷಿಕ ಲೆಕ್ಕಪತ್ರಗಳ ಮೇಲಿನ ಲೆಕ್ಕಪರಿಶೋಧನಾ ವರದಿಯನ್ನು ಮಂಡಿಸುತ್ತೇನೆ.

**IV** ಶ್ರೀ ಪಿ.ಜಿ.ಆರ್.ಸಿಂಧ್ಯ (ಗೃಹ ಮಂತ್ರಿ) ಮಾನ್ಯ ಸಭಾಪತಿಯವರೆ,

1956ರ ಕಂಪನಿಗಳ ಕಾಯ್ದೆಯ 619ಎ ಕಲಮಿನ ಮೇರೆಗೆ

1993-94ನೇ ಸಾಲಿನ ಕರ್ನಾಟಕ ರಾಜ್ಯ ಪೋಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದ 9ನೇ ವಾರ್ಷಿಕ ವರದಿ ಹಾಗೂ ಲೆಕ್ಕಪರಿಶೋಧಕರ ವರದಿಯನ್ನು ಮಂಡಿಸುತ್ತೇನೆ.

**V** ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಮಂತ್ರಿ) ಮಾನ್ಯ ಸಭಾಪತಿಯವರೆ

1. 1987ರ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರದ ಅಧಿನಿಯಮದ 48(5)ನೇ ಕಲಮಿನ ಮೇರೆಗೆ

1992-93ಹಾಗೂ 1993-94ನೇ ಸಾಲುಗಳ ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದ ಲೆಕ್ಕಪರಿಶೋಧನಾ ವರದಿಗಳು

2. 1993-94ನೇ ಸಾಲಿನ ಕಾರವಾರ ನಗರಾಭಿವೃದ್ಧಿ ಪ್ರಾಧಿಕಾರದ ಲೆಕ್ಕಪರಿಶೋಧನಾ ವರದಿ

1987ರ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರದ ಅಧಿನಿಯಮದ 49ನೇ ಕಲಮಿನ ಮೇರೆಗೆ

3. 1993-94ನೇ ಸಾಲಿನ ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದ ವಾರ್ಷಿಕ ವರದಿ

4. 1994-95 (1.4.94ರಿಂದ 31.12.94 ರವರೆಗೆ)ನೇ ಸಾಲಿನ ಕಾರವಾರ ನಗರಾಭಿವೃದ್ಧಿ ಪ್ರಾಧಿಕಾರದ ವಾರ್ಷಿಕ ಆಡಳಿತ ವರದಿಗಳನ್ನು ಮಂಡಿಸುತ್ತೇನೆ.

**VI** ಶ್ರೀ ಬಿ.ಎಸ್.ಬಚ್ಚೇಗೌಡ (ಪಶು ಸಂಗೋಪನೆ ರಾಜ್ಯ ಮಂತ್ರಿ) ಮಾನ್ಯ ಸಭಾಪತಿಯವರೆ,

1956ರ ಕಂಪನಿಗಳ ಕಾಯ್ದೆಯ 619ಎ ಕಲಮಿನ ಮೇರೆಗೆ

ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತದ ಇಪ್ಪತ್ತನೆಯ ವಾರ್ಷಿಕ ವರದಿ ಮತ್ತು 31.3.94ರ ಲೆಕ್ಕಪತ್ರಗಳನ್ನು (ವಿಳಂಭಕ್ಕೆ ಕಾರಣದ ಟಿಪ್ಪಣಿಯೊಡನೆ) ಮಂಡಿಸುತ್ತೇನೆ.

**VII** ಶ್ರೀ ಪಿ.ಸಿ.ಸಿದ್ದನಗೌಡರ್ (ಸಕ್ಕರೆ ಜವಳಿ, ವಿಜ್ಞಾನ ಮತ್ತು ತಂತ್ರ ಜ್ಞಾನ, ಪರಿಸರ ಮತ್ತು ಜೀವಿಶಾಸ್ತ್ರ ರಾಜ್ಯ ಮಂತ್ರಿ) ಮಾನ್ಯ ಸಭಾಪತಿಯವರೆ

1956ರ ಕಂಪನಿಗಳ ಕಾಯ್ದೆಯ 619ಎ ಕಲಮಿನ ಮೇರೆಗೆ

1993-94ನೇ ಸಾಲಿನ ಮೈಸೂರು ಷುಗರ್ ಕಂಪನಿ ನಿಯಮಿತದ 60ನೇ ವಾರ್ಷಿಕ ವರದಿಯನ್ನು ಮಂಡಿಸುತ್ತೇನೆ.

ಅಧ್ಯಕ್ಷರು : ಎಲ್ಲಾ ಕಾಗದ ಪತ್ರಗಳನ್ನು ಸಭೆಯ ಮುಂದೆ ಮಂಡಿಸ ಲಾಯಿತು.

**11.20 ಎ ಎಂ**

ಅಧ್ಯಕ್ಷರ ಅನುಮತಿ ಕೋರಿ ಪ್ರಸ್ತಾಪಿಸಲಾದ್ದ ವಿಷಯಗಳು

**ವಿಷಯ : ಕೊಪ್ಪಳ ನಗರದಲ್ಲಿ ಉಂಟಾಗಿರುವ ಕುಡಿಯುವ ನೀರಿನ ಸಮಸ್ಯೆ ಬಗ್ಗೆ**

ಶ್ರೀ ಸಂಗಣ್ಣಕರಡಿ : (ಕೊಪ್ಪಳ) ಮಾನ್ಯ ಅಧ್ಯಕ್ಷರೇ, ದಿನಾಂಕ 5-4-95ರಂದು ಕೊಪ್ಪಳ ತಾಲ್ಲೂಕಿನಲ್ಲಿ ಬೃಹತ್ ಚಳುವಳಿಯನ್ನು ಮಹಿಳೆಯರು ಮಾಡುತ್ತಿದ್ದಾರೆ. ಇದಕ್ಕೆ ಕಾರಣ ಏನೆಂದರೆ ಕೊಪ್ಪಳ ನಗರದಲ್ಲಿ ಕುಡಿಯುವ ನೀರಿನ ಸಮಸ್ಯೆ ಬೃಹದಾಕಾರವಾಗಿದೆ. ಮಹಿಳೆಯರು ರಾತ್ರಿಯಲ್ಲಿ ನಿದ್ದೆಗೆಟ್ಟು ಬೆಳಗಿನ ಜಾವದವರೆಗೂ ಕಾದು ಕುಳಿತರೂ ನೀರು ಬಾರದೇ ಇದ್ದುದರಿಂದ ಉಗ್ರವಾದ ಚಳುವಳಿಯನ್ನು ಮಾಡುತ್ತಿದ್ದಾರೆ. ಈ ವಿಷಯವನ್ನು ನಾನು ಮಾನ್ಯಮಂತ್ರಿಗಳ ಗಮನಕ್ಕೆ ತರುತ್ತಿದ್ದೇನೆ.

ಶ್ರೀ ಎಂ.ಪಿ.ಪ್ರಕಾಶ್ : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು) : ಮಾನ್ಯ ಅಧ್ಯಕ್ಷರೇ, ಕೊಪ್ಪಳ ನಗರ ನಗರಾಭಿವೃದ್ಧಿ ಸಚಿವರ ವ್ಯಾಪ್ತಿಗೆ ಬರುತ್ತದೆ. ನಿನ್ನೆ ಪ್ರಜಾವಾಣಿ ಪತ್ರಿಕೆಯಲ್ಲಿ ಸಹ ಪ್ರಕಟವಾಗಿದೆ. ಗ್ರಾಮೀಣಾಭಿವೃದ್ಧಿ ಸಚಿವರಿಂದ ಈಬಗ್ಗೆ ಸ್ಪಷ್ಟವಾದ ಉತ್ತರ ಬರಲಿಲ್ಲ ಎಂಬ ತಪ್ಪು ಕಲ್ಪನೆ ಮಾಡಿಕೊಂಡು ಮಾಡಿಯಾಗಿದೆ. ಈ ವಿಷಯ ನನ್ನ ವ್ಯಾಪ್ತಿಗೆ ಬರುವುದಿಲ್ಲ. ಈ ವಿಷಯ ಮಾನ್ಯ ನಗರಾಭಿವೃದ್ಧಿ ಸಚಿವರಿಗೆ ಬರುತ್ತದೆ. ಅವರು ಉತ್ತರ ಕೊಡಬಹುದು.

ಶ್ರೀ ವೈಜನಾಥಪಾಟೀಲ್ : (ನಗರಾಭಿವೃದ್ಧಿ ಸಚಿವರು) : ಮಾನ್ಯ ಅಧ್ಯಕ್ಷರೇ, ಕೊಪ್ಪಳ ನಗರದಲ್ಲಿ ಕುಡಿಯುವ ನೀರಿನ ಸಮಸ್ಯೆ ಏನು ಇದೆ, ಆ ಬಗ್ಗೆ ಅಲ್ಲಿನ ಹೆಣ್ಣು ಮಕ್ಕಳು ಉಗ್ರ ಚಳುವಳಿಯನ್ನು ಮಾಡುತ್ತಿದ್ದಾರೆಂದು 'ಮಾನ್ಯ ಸದಸ್ಯರು ಪ್ರಸ್ತಾಪ ಮಾಡುತ್ತಿದ್ದಾರೆ. ನಾನು ಆ ಬಗ್ಗೆ ಒಂದು ವಿವರವಾದ ವರದಿಯನ್ನು ತರಿಸಿಕೊಂಡು ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸುವುದಕ್ಕೆ ಪ್ರಯತ್ನ ಮಾಡುತ್ತೇನೆ.

ಅಧ್ಯಕ್ಷರು : ತಕ್ಷಣ ಅಧಿಕಾರಿಗಳನ್ನು ಕರೆಯಿಸಿ ಏನಾದರೂ ವ್ಯವಸ್ಥೆ ಮಾಡಿಸಿ.

ಶ್ರೀಮತಿ ಪ್ರಮೀಳ ನೇಸರ್ಗಿ : ಮಾನ್ಯ ಅಧ್ಯಕ್ಷರೇ, ಕುಡಿಯುವ ನೀರಿನ ಸಲುವಾಗಿ ಮಹಿಳೆಯರು ಚಳುವಳಿ ಮಾಡುತ್ತಿದ್ದಾರೆಂದರೆ ಮಾನ್ಯ ಮಂತ್ರಿಗಳು ಉತ್ತರ ಸರಿಯಾಗಿ ಕೊಡಬೇಕು.

ಅಧ್ಯಕ್ಷರು : ನಾನು ಇಲ್ಲಿ ಇರುವಾಗ ತಾವೇಕೆ ಯೋಚನೆ ಮಾಡುತ್ತೀರಿ? ನಾನು ಯಾವಾಗಲೂ ಮಹಿಳೆಯರಿಗೆ ಆದ್ಯತೆ ಕೊಡುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ತಾವು ಮಹಿಳೆಯರಿಗೆ ಆದ್ಯತೆ ಕೊಟ್ಟರೆ ನಮ್ಮ ಗತಿ ಏನು?

ಅಧ್ಯಕ್ಷರು : ಈಗ ಕಬ್ಬುಬೆಳೆಗಾರರ ಸಮಸ್ಯೆ ಬಗ್ಗೆ ಮಾನ್ಯ ಪುಟ್ಟಣ್ಣಯ್ಯ, ಬಿ ಬಿ ಚಿಮ್ಮನಕಟ್ಟಿ, ಹಾಗೂ ನಾಗೇಗೌಡರು ಪ್ರಸ್ತಾಪ ಮಾಡಬಹುದು.

ಶ್ರೀ ಕೆ.ಎಸ್.ಪುಟ್ಟಣಯ್ಯ(ಪಾಂಡವಪುರ) : ಮಾನ್ಯ ಅಧ್ಯಕ್ಷರೇ, ಮಾನ್ಯ ಸಕ್ಕರೆ ಸಚಿವರು ಈ ವಿಷಯವನ್ನು ಬಹಳ ಗಂಭೀರವಾಗಿ ಪರಿಗಣಿಸಬೇಕು. ಇವತ್ತು ಕಬ್ಬಿನ ಸಮಸ್ಯೆ ಏನಾಗಿದೆ ಅಂದರೆ ನನಗೆ ಗೊತ್ತಿರುವ ಹಾಗೆ ಕಳೆದ 15-16 ವರ್ಷಗಳಿಂದ ಕರ್ನಾಟಕ ರಾಜ್ಯದಲ್ಲಿ ಎಲ್ಲಾ ರಾಜಕೀಯ ಪಕ್ಷಗಳ ಸರ್ಕಾರಗಳು ಬಂದು ಸರ್ಕಾರಗಳನ್ನು ರಚನೆ ಮಾಡಿ ಹೋಗಿವೆ. ಆದರೆ ಈ ಸಕ್ಕರೆ ಕಾರ್ಖಾನೆಗಳ ಆಲೋಚನಾ ಕ್ರಮ ಯಾರಿಗೂ ಗೊತ್ತಿಲ್ಲ. ಕಬ್ಬು ಅಂದರೆ ಏನು ಬೆಳೆದ ಕಬ್ಬನ್ನು ಎಷ್ಟು ಸಮಯದವರೆಗೂ ಇಡಬಹುದು ಎನ್ನುವ ಬಗ್ಗೆ ಯಾರೂ ಯೋಚನೆ ಮಾಡುವುದಿಲ್ಲ. ಈಗಾಗಲೇ ಹೆಚ್ಚುವ ಕಬ್ಬಿಗೆ 21-22 ತಿಂಗಳು ಆಗಿದೆ.ಇದರ ಬಗ್ಗೆ ಸರ್ಕಾರ ಯಾವುದೇ ರೀತಿಯ ಗಂಭೀರ ಆಲೋಚನೆ ಮಾಡಿಲ್ಲ. ಕಬ್ಬಿನ ಬಗ್ಗೆ, ಹತ್ತಿಯ ಬಗ್ಗೆ ಹೇಳುವುದಾದರೆ ಕೇಂದ್ರ ಸರ್ಕಾರಕ್ಕೆ, ರಾಜ್ಯ ಸರ್ಕಾರದ ಬೊಕ್ಕಸಕ್ಕೆ ಮೂರನೇ ಒಂದು ಭಾಗದ ಹಣವನ್ನು ಕೊಡುತ್ತಿರುವ ಒಂದು ಕಲ್ಪವೃಕ್ಷ ಆದ್ದರಿಂದ ಸರ್ಕಾರ ದಯಮಾಡಿ ಇದರ ಬಗ್ಗೆ ಗಂಭೀರವಾಗಿ ಪರಿಶೀಲನೆ ಮಾಡಬೇಕು. ಇವತ್ತು ಸರ್ಕಾರ ವಿದೇಶದಿಂದ ಸಕ್ಕರೆಯನ್ನು ತರಿಸಿಕೊಳ್ಳತಕ್ಕಂಥ ಪರಿಸ್ಥಿತಿಗೆ ನಾವು ತಲುಪಿದ್ದೇವೆ. ಆ ಸಕ್ಕರೆಯನ್ನು ನೀವು ನೋಡಿರಬಹುದು ಯಾವ ತರಹ ಆ ಸಕ್ಕರೆ ಇರುತ್ತದೆ ಎಂದು ಇವತ್ತು ಇಡೀ ದೇಶದಲ್ಲಿ ಕಬ್ಬು ಬೆಳೆಯುವಂತಹ ಬೆಳೆಗಾರರ ಬಗ್ಗೆ ಆಲೋಚನೆ ಮಾಡತಕ್ಕಂಥ ಗಂಭೀರವಾದ ಸಮಸ್ಯೆ ಉಂಟಾಗಿದೆ. ಸಹಕಾರಿ ಸಕ್ಕರೆ ಕಾರ್ಖಾನೆಗಳು 17-18 ಇವೆ. ಜಂಟಿ ಕ್ಷೇತ್ರದಲ್ಲಿ 4 ಸಕ್ಕರೆ ಕಾರ್ಖಾನೆಗಳು ಇವೆ. ಖಾಸಗೀ ಕ್ಷೇತ್ರದಲ್ಲಿ 8 ಸಕ್ಕರೆ ಕಾರ್ಖಾನೆಗಳು ಇವೆ. ಒಟ್ಟು ಕರ್ನಾಟಕ ರಾಜ್ಯದಲ್ಲಿರತಕ್ಕಂಥ ಕಬ್ಬು ಸುಮಾರು ಎರಡೂವರೆ ಕೋಟಿ ಟನ್ ಅನ್ನು ಉತ್ಪಾದನೆ ಮಾಡುತ್ತೇವೆ ಎರಡೂವರೆ ಕೋಟಿ ಟನ್ ಕಬ್ಬು ಉತ್ಪಾದನೆ ಮಾಡಿದ್ದರೂ ಕೂಡ ಕರ್ನಾಟಕ ರಾಜ್ಯದಲ್ಲಿರತಕ್ಕಂಥ ಸಕ್ಕರೆ ಕಾರ್ಖಾನೆಗಳು ಕಬ್ಬು ಅರಿಯಲು ಇರುವಂತಹ ಸಾಮರ್ಥ್ಯ ಒಂದು ಕೋಟಿ ಟನ್‌ಗಳು ಮಾತ್ರ. ಉಳಿದ ಕಬ್ಬನ್ನು ಖಂಡಸಾರಿಗಳು ಕ್ರಷರ್ಸ್ ಇನ್ನಿತರೆ ಸಣ್ಣ ಗಾಣಗಳ ಡೀಸಲ್ ಗಾಣಗಳು ಉಪಯೋಸುತ್ತವೆ. ಇನ್ನು ಬೆಳಗಾಂ ಮತ್ತು ಮಂಡ್ಯ ಹಾಗೂ ಬೀದರ್ ಜಿಲ್ಲೆಗಳಲ್ಲಿ ಬಹಳ ಕಬ್ಬು ಉಳಿದು ಕೊಳ್ಳುತ್ತಿದ್ದರೂ ಸಹ ಅದರ ಬಗ್ಗೆ ಆಲೋಚನೆ ಮಾಡುವುದಿಲ್ಲ ಆದ್ದರಿಂದ ನಾನು ಹೇಳುವುದೇನೆಂದರೆ ನೀವು ಏಪ್ರಿಲ್ ತಿಂಗಳಲ್ಲಿ ಎಲ್ಲಾ ಸಕ್ಕರೆ ಕಾರ್ಖಾನೆಗಳ ಮೀಟಿಂಗ್ ಕರೆಯಬೇಕು. ಮೀಟಿಂಗ್ ಕರೆದು ಎಷ್ಟು ಕಬ್ಬು ಇದೆ. ನಿಮ್ಮ ಕಾರ್ಖಾನೆಯಲ್ಲಿ ಎಷ್ಟು ಕಬ್ಬು ಅರಿಯುವ ಸಾಮರ್ಥ್ಯ ಇದೆ ಉಳಿದ ಕಬ್ಬನ್ನು ಏನು ಮಾಡಬೇಕು ಕೆಲವು ಕೈಗಾರಿಕೆಗಳಿಗೆ ಕಬ್ಬು ಇಲ್ಲದೆ ನಿಂತಿವೆ. ಇವತ್ತು

ಗೌರಿಬಿದನೂರು ಸಕ್ಕರ ಕಾರ್ಖಾನೆಗೆ ಕಬ್ಬು ಇಲ್ಲದೆ ನಿಂತಿರುವ ಉದಾಹರಣೆ ಇರುವಾಗ ಕಬ್ಬು ಎಲ್ಲಿ ಜಾಸ್ತಿ ಬೆಳೆದಿದ್ದಾರೆ ಆ ಕಬ್ಬನ್ನು ಇಲ್ಲಿಂದ ಅಲ್ಲಿಗೆ ಡೈವರ್ಟ್ ಮಾಡಿ. ಈ ಬಗ್ಗೆ ಚರ್ಚೆ ಮಾಡಬೇಕು ಇಲ್ಲದಿದ್ದರೆ ಕಬ್ಬು ಬೆಳೆಗಾರರಿಗೆ ತುಂಬಾ ತೊಂದರೆಯಾಗುತ್ತದೆ. ಕಾರ್ಖಾನೆಗಳಿಗೆ ನಾವು ಜೂನ್‌ನಿಂದಲೇ ಲೈಸನ್ಸ್ ಕೊಡಬೇಕು. ಆದ್ದರಿಂದ ಮಾನ್ಯ ಅಧ್ಯಕ್ಷರೇ, ಈ ವಿಷಯದಲ್ಲಿ ತಾವು ಸಂಬಂಧಪಟ್ಟ ಮಂತ್ರಿಗಳಿಗೆ ಇದರ ಬಗ್ಗೆ ಪೂರ್ಣ ವಿವರವಾದ ಚರ್ಚೆಯಾಗಬೇಕು. ಹೇಳಿ ಏಪ್ರಿಲ್ ತಿಂಗಳಲ್ಲಿ ಮೀಟಿಂಗ್ ಕರೆಯುವಂತೆ ಸೂಚನೆ ಕೊಡಿ. ಈ ಕೆಲಸ ಜವಾಬ್ದಾರಿಯುತವಾಗಿ ನಡೆಯಬೇಕೆಂದು ಹೇಳಿ ಮಾನ್ಯ ಮಂತ್ರಿಗಳು ಈ ಬಗ್ಗೆ ಗಂಭೀರವಾಗಿ ಹಾಗೂ ಸಮಂಜಸವಾಗಿ ಉತ್ತರ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ಎನ್. ನಾಗೇಗೌಡ (ಕಿರುಗಾವಲು) ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರಾದ ಪುಟ್ಟಣ್ಣಯ್ಯನವರು ಎರಡು ವಿಚಾರಗಳನ್ನು ಬಹಳ ಚೆನ್ನಾಗಿ ಗಂಭೀರವಾಗಿ ಹೇಳಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿ 40 ಲಕ್ಷ ಟನ್ ಕಬ್ಬು ಇದೆ. ಚಾಮುಂಡಿ ಶುಗರ್ ಕಂಪನಿಯಲ್ಲಿ ಕಬ್ಬು ಅರಿಯುವ ಸಾಮರ್ಥ್ಯ ಇರುವುದು ಶೇಕಡ 48 ಪರ್ಸೆಂಟ್ ಮಾತ್ರ. ಅದಕ್ಕೆ ನಾನು ಸರ್ಕಾರಕ್ಕೆ 3 ಸಲಹೆಗಳನ್ನು ಕೊಡುತ್ತೇನೆ. ಅದೇನೆಂದರೆ ಎಲ್ಲಾ ಸಕ್ಕರೆ ಕಾರ್ಖಾನೆಗಳು ಒಂದು ತಿಂಗಳ ಕಾಲ ಹೆಚ್ಚು ಕಬ್ಬು ಅರೆಯಬೇಕು. ಕಾರಣ ನಾನು ಸಕ್ಕರೆ ಕೈಗಾರಿಕೆಯ ಅಧ್ಯಕ್ಷನಾಗಿ ಕೆಲಸಮಾಡಿರುವ ಹಿನ್ನಲೆಯಲ್ಲಿ ಈ ಮಾತನ್ನು ಹೇಳುತ್ತಿದ್ದೇನೆ. ಒಂದು ತಿಂಗಳ ಕಾಲ ಹೆಚ್ಚು ಕಬ್ಬು ಅರೆದರೆ ಈ ಪರಿಸ್ಥಿತಿಯನ್ನು ಸುದಾರಿಸಬಹುದು ಎರಡನೆಯದು ಕ್ರಷರ್ ಲೈಸೆನ್ಸ್ ತೆಗೆದುಕೊಳ್ಳಬೇಕೆಂದು ಏನು ಮಾಡಿದ್ದೀರಿ ಆ ಕ್ರಷರ್ ಲೈಸೆನ್ಸ್ ತೆಗೆದುಕೊಳ್ಳುವುದನ್ನು ರದ್ದು ಮಾಡಿ. ಸಣ್ಣ ಸಣ್ಣ ರೈತರು ಜಿಲ್ಲಾಧಿಕಾರಿಗಳ ಆಫೀಸ್‌ಗೆ ಹೋಗಿ ಕ್ರಷರ್ ಲೈಸೆನ್ಸ್ ತೆಗೆದುಕೊಳ್ಳುವುದಕ್ಕೆ ಬಹಳ ಕಷ್ಟವಾಗುತ್ತದೆ. ಮೂರನೇಯದು ತಾವು ಷುಗರ್ ಡೈರೆಕ್ಟರೇಟ್‌ನಿಂದ ಜೂರಿಸ್‌ಡಿಕ್ಷನ್ ಏನು ಫಿಕ್ಸ್‌ಮಾಡುತ್ತೀರಿ, ಅದನ್ನು ಮಾಡಬೇಡಿ ಕಾರಣ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಕಬ್ಬು ಸಾಗಾಣಿಕೆ ಮಾಡುವಾಗ ಪರವಾನಿಗೆ ಬೇಕಾಗುತ್ತದೆ. ಆದರೆ ಫ್ಯಾಕ್ಟರಿಗಳವರಿಗೆ ಏರಿಯಾ ಫಿಕ್ಸ್ ಮಾಡಿ ಅಷ್ಟು ಅರೆದುಕೊಳ್ಳತಕ್ಕ ಜವಾಬ್ದಾರಿ ಅವರಿಗೆ ಕೊಡಬೇಕು. ಆ ಕಾರ್ಖಾನೆಗಳು ಕಬ್ಬು ಅರೆಯುವ ಸಾಮರ್ಥ್ಯ ಇದ್ದರೆ ಉಪಯೋಗಿಸಿಕೊಳ್ಳುವಂತೆ ಇರಬೇಕು. ಕಾರ್ಖಾನೆಗಳ ವ್ಯಾಪ್ತಿ ಜಾಸ್ತಿ ಮಾಡಿ. ಮುಖ್ಯವಾಗಿ ಏರಿಯಾ ಜುರಿಸ್‌ಡಿಕ್ಷನ್ ತೆಗದು ಹಾಕಿ. ಒಂದು ಪಕ್ಷ ಏರಿಯಾ ಜ್ಯುರಿಸ್‌ಡಿಕ್ಷನ್ ಮಾಡಿದರೆ ಆ ಏರಿಯಾದಲ್ಲಿ ರೈತರು ಏನು ಕಬ್ಬು ಬೆಳೆದಿರುತ್ತಾರೆ ಅ ಎಲ್ಲಾ 100 ಪರ್‌ಸೆಂಟ್ ಕಬ್ಬನ್ನು ಕಾರ್ಖಾನೆಯವರು ತೆಗೆದುಕೊಳ್ಳಬೇಕು. ಹಾಗೆ ತಾವು ನಿರ್ದೇಶನ ಕೊಡಬೇಕು.

ಶ್ರೀ ಪಿ.ಸಿ. ಸಿದ್ದನಗೌಡರ್ (ಸಕ್ಕರೆ ರಾಜ್ಯಸಚಿವರು) : ಸನ್ಮಾನ್ಯ ಸಭಾಧ್ಯಕ್ಷರೇ ಹಿರಿಯ ಸದಸ್ಯರಾಗಿರತಕ್ಕಂಥ ಮಾನ್ಯ ನಾಗೇಗೌಡರು ಖಂಡಸಾರಿಗೆ ಲೈಸೆನ್ಸ್ ಕೊಡುವುದನ್ನು ರದ್ದು ಮಾಡಿ ಮತ್ತು ಏರಿಯಾ ಜ್ಯುರಿಸ್‌ಡಿಕ್ಷನ್ ಮಾಡಬೇಡಿ ಎನ್ನುವ ಎರಡು ವಿಷಯಗಳನ್ನು ಹೇಳಿದ್ದಾರೆ. ಇವತ್ತು ಮಧ್ಯಾಹ್ನ 3.00 ಗಂಟೆಗೆ ರಾಜ್ಯದ ಎಲ್ಲಾ ಸಹಕಾರಿ ಸಕ್ಕರೆ ಕಾರ್ಖಾನೆ ಹಾಗೂ ಖಾಸಗೀ ಸಕ್ಕರೆ ಕಾರ್ಖಾನೆಗಳ ಅಧ್ಯಕ್ಷರು

ಮತ್ತು ಎಂ.ಡಿ.ಯವರ ಸಭೆಯನ್ನು ಕರೆಯಲಾಗಿದೆ. ನನ್ನ ದೃಷ್ಟಿಯಲ್ಲಿ ಏರಿಯಾ ಜ್ಯುರಿಸ್‌ಡಿಕ್ಷನ್ ಇರಲೇಬೇಕಾಗುತ್ತದೆ. ಉದಾಹರಣೆಗೆ ಹಿರಿಯೂರಿನಲ್ಲಿ ಒಂದು ಫ್ಯಾಕ್ಟರಿ ಇದೆ. ಈ ರಿಸ್ಟ್ರಿಕ್ಷನ್ ಮಾಡದೇ ಇದ್ದರೆ ಆ ಫ್ಯಾಕ್ಟರಿ ಬಂದ್ ಆಗಿ ಬಿಡುತ್ತದೆ. ಈ ವರ್ಷ ಎರಡೂವರೆ ಕೋಟಿ ಲಕ್ಷ ಟನ್ ಕಬ್ಬು ಬೆಳೆದಿದೆ. ಸಕ್ಕರೆ ಫ್ಯಾಕ್ಟರಿ ತೆಗೆಯುವ ಬಗ್ಗೆ 6 ಅಪ್ಲಿಕೇಷನ್ ಕೇಂದ್ರ ಸರ್ಕಾರದ ಒಪ್ಪಿಗೆಗಾಗಿ ಕಳುಹಿಸಲಾಗಿದೆ, ಈಗ ಮತ್ತೆ 15 ಅಪ್ಲಿಕೇಷನ್ಸ್ ಬಂದಿವೆ. ಈ ವಿಷಯದ ಬಗ್ಗೆ ವಿವರವಾಗಿ ಉತ್ತರ ನೀಡಬೇಕಾದರೆ ಅರ್ಧ ಗಂಟೆಯಾದರೂ ಅವಕಾಶ ಬೇಕಾಗುತ್ತದೆ. ಅದಕ್ಕಾಗಿ ಈ ಮಧ್ಯಾಹ್ನ ಕರೆದಿರುವ ಸಭೆಯಲ್ಲಿ ಇದರ ಬಗ್ಗೆ ಪೂರ್ಣವಾಗಿ ವಿಚಾರ ಮಾಡುತ್ತೇನೆ.

ಶ್ರೀ ಕೆ.ಎನ್.ನಾಗೇಗೌಡ : ಮಾನ್ಯ ಅಧ್ಯಕ್ಷರೆ, ಇನ್ನೊಂದು ತಿಂಗಳು ಎಲ್ಲಾ ಸಕ್ಕರೆ ಕಾರ್ಖಾನೆಗಳು ಕಬ್ಬು ಅರೆಯಬೇಕೆಂದು ಆದೇಶ ಕೊಡಲಾಗುತ್ತದೆಯೇ ಎಂದು ಮಾನ್ಯ ಸಚಿವರನ್ನು ತಮ್ಮ ಮೂಲಕ ಕೇಳುತ್ತೇನೆ.

ಶ್ರೀ ಪಿ.ಸಿ.ಸಿದ್ದನಗೌಡರ್ : ಆ ರೀತಿ ನಾನು ಆದೇಶ ಕೊಡುತ್ತೇನೆ. ಆದರೆ ಮೆಷಿನರಿಗಳು ಸರಿಯಾಗಿಲ್ಲವೆಂದು ಹೇಳಿದರೆ ನಾನು ಏನೂ ಮಾಡುವುದಕ್ಕಾಗುವುದಿಲ್ಲ. ನಾನು ಕಾರು ಓಡಿಸು ಎಂದು ಹೇಳುತ್ತೇನೆ. ಆದರೆ ಟೆಕ್ನಿಕಲ್ ಆಗಿ ಡಿಫೆಕ್ಟ್ ಇದ್ದರೆ ನಾನು ಏನೂ ಮಾಡುವುದಕ್ಕಾಗುವುದಿಲ್ಲ.

ಇ. ಖಾಸಗಿ ಐ.ಟಿ.ಐ ಗಳಿಗೆ ಅನುದಾನ

ಶ್ರೀ ಬಿ.ಬಿ.ಚಿಮ್ಮನಕಟ್ಟಿ : (ಬಾದಾಮಿ) : ಮಾನ್ಯ ಸಭಾಧ್ಯಕ್ಷರೆ, ರಾಜ್ಯದ ಅನೇಕ ಪ್ರೈವೇಟ್ ಐ.ಟಿ.ಐ ಕಾಲೇಜಿನ ಸಿಬ್ಬಂದಿ ವರ್ಗದವರು ನ್ಯಾಯ ಕೊಡಬೇಕೆಂದು ಹರಿತಾಳ ಮತ್ತು ಹೋರಾಟ ಮಾಡುತ್ತಿದ್ದಾರೆ. ಈ ಬಗ್ಗೆ ಸರ್ಕಾರಕ್ಕೆ ಅನೇಕ ಸಾರಿ ಮನವಿಗಳನ್ನು ಕೂಡ ಕೊಟ್ಟಿದ್ದಾರೆ ಈ ಬೇಡಿಕೆಯನ್ನು ಈಡೇರಿಸುವ ಬಗ್ಗೆ ಮಾನ್ಯ ಸಿಂಧ್ಯಾರವರು ಹಾಗೂ ಮಾನ್ಯ ದೇಶಪಾಂಡೆಯವರು ವಿರೋಧ ಪಕ್ಷದಲ್ಲಿ ಕುಳಿತಿದ್ದಂಥ ಸಂದರ್ಭದಲ್ಲಿ ಒತ್ತಾಯ ಮಾಡಿದ್ದರು. ಇದು ಬಹಳ ಪ್ರಮುಖವಾದ ವಿಚಾರ. ಗ್ರ್ಯಾಂಟ್ ಇನ್ ಎಯ್ಡ್ ಕೋಡ್ ಒಳಗೆ ನಮ್ಮನ್ನು ಒಳಪಡಿಸಿಕೊಂಡು ಪೂರ್ತಿ ಪಗಾರವನ್ನು ಕೊಡಿ ಎಂದು ಎಂಟು ಹತ್ತು ವರ್ಷಗಳಿಂದ ಕೇಳುತ್ತಾ ಬಂದಿದ್ದರೂ ಸರ್ಕಾರದವರು ಒಂದು ಪೈಸೆ ಅನುದಾನವನ್ನೂ ಕೊಟ್ಟಿಲ್ಲ. ಅವರು ಕೇಳತಕ್ಕಂಥ ಪ್ರಶ್ನೆ ಜೆನಿಯನ್ ಇದೆ. ಇದರ ಬಗ್ಗೆ ಸನ್ಮಾನ್ಯ ಕರಂಬಳ್ಳಿ ಸಂಜೀವಶೆಟ್ಟರು ವಿಧಾನ ಪರಿಷತ್ತಿನಲ್ಲಿ ಪ್ರಶ್ನೆ ಕೇಳಿದಾಗ ಗ್ರ್ಯಾಂಟ್ ಇನ್ ಏಡ್ ಕೋಡ್ ಒಳಗೆ ಸೇರಿಸಲಾಗುತ್ತದೆಂದು ಒಪ್ಪಿಗೆ ಕೊಟ್ಟಿದ್ದಾರೆ ಹಾಗೂ ಇದರ ಬಗ್ಗೆ ಸಂಪುಟದಲ್ಲೂ ತೀರ್ಮಾನವಾಗಿದೆ. ಆದುದರಿಂದ ಮಾನ್ಯ ಲೇಬರ್ ಮಿನಿಸ್ಟರ್‌ರವರು ಇದರ ಬಗ್ಗೆ ಒತ್ತಾಯ ಕೊಟ್ಟು ಸಂಪುಟದಲ್ಲಿ ತೆಗೆದುಕೊಂಡಿರತಕ್ಕಂಥ ನಿರ್ಣಯವನ್ನು ಆದಷ್ಟು ಶೀಘ್ರ ಹೊರಡಿಸಿಕೊಟ್ಟರೆ ಐ.ಟಿ.ಐಯಗಳಲ್ಲಿ ಕೆಲಸ ಮಾಡುವವರಿಗೆ ಜೀವನ ಮಾಡಲು ಅನುಕೂಲ ಮಾಡಿಕೊಟ್ಟ ಹಾಗಾಗುತ್ತದೆ.

ಶ್ರೀ ಬಿ.ಎಸ್.ಯುಡಿಯೂರಪ್ಪ : ಮಾನ್ಯ ಅಧ್ಯಕ್ಷರೆ, ಇದರ ಬಗ್ಗೆ ನಾನು ಕಾಲಿಂಗ್ ಅಟೆನ್‌ಷನ್ ಕೂಡ ಹಾಕಿದ್ದೆ. ಗ್ರಾಮಾಂತರ ಪ್ರದೇಶದ ಮಕ್ಕಳು,

ಏನಾದರೂ ಕೆಲಸ ಸಿಗುತ್ತದೆ ಎನ್ನುವ ದೃಷ್ಟಿಯಿಂದ ಐ.ಟಿ.ಐ ಗಳಿಗೆ ಸೇರಿಕೊಂಡಿದ್ದಾರೆ. ಐಟಿಐಗಳಿಗೆ ಅನುದಾನ ಕೊಡದೇ ಇರುವುದರಿಂದ ಅವುಗಳು ಮುಚ್ಚುವಂಥ ಪರಿಸ್ಥಿತಿಗೆ ಬಂದಿವೆ. ಅಲ್ಲಿ ಕೆಲಸ ಮಾಡುವಂಥ'ವರಿಗೆ ಸಂಬಳ ಇಲ್ಲದೆ ಅವರು ಬೀದಿಪಾಲಾಗಿದ್ದಾರೆ. ಇದರ ಬಗ್ಗೆ ಸಾಕಷ್ಟು ಚರ್ಚೆ ಕೂಡ ಆಗಿದೆ. ಆದುದರಿಂದ ಇದರ ಬಗ್ಗೆ ದಯಮಾಡಿ ಒಂದು ತೀರ್ಮಾನ ತೆಗೆದುಕೊಂಡು ಅನುದಾನ ಕೊಡದಿದ್ದರೆ ಅವರು ಬಾಗಿಲು ಹಾಕುವಂಥ ಪರಿಸ್ಥಿತಿ ಬರುತ್ತದೆ. ಕೂಡಲೇ ಅನುಧಾನ ಕೊಡುವ ಕೆಲಸವನ್ನು ಮಾಡಿ.

ಶ್ರೀ ಸಿ. ಗುರುನಾಥ್ (ಕಾರ್ಮಿಕ ಸಚಿವರು) : ಮಾನ್ಯ ಅಧ್ಯಕ್ಷರೇ, ಹಿಂದಿನ ಸರ್ಕಾರದಲ್ಲಿ, ಗ್ರಾಂಟ್ ಇನ್ ಏಡ್ ಕೊಡುವ ಬಗ್ಗೆ ಗ್ರಾಮಾಂತರ ಪ್ರದೇಶಗಳಲ್ಲಿ ಅದೂ 50 ಸಾವಿರ ಜನ ಸಂಖ್ಯೆ ಒಳಗೆ ಇರುವಂಥ ಪ್ರದೇಶಗಳಲ್ಲಿ ನಡೆಸುವಂಥ ಹಾಗೂ 7 ವರ್ಷಗಳ ಕಾಲ ಸಂಸ್ಥೆಯನ್ನು ನಡೆಸಿದಂತೆ ಅಂಥಹ ಐ.ಟಿ.ಐ ಸಂಸ್ಥೆಗಳಿಗೆ ಗ್ರಾಂಟ್ ಕೊಡಬಹುದು ಎಂಬ ತೀರ್ಮಾನ ಮಾಡಲಾಗಿದೆ. ನಮ್ಮ ರಾಜ್ಯದಲ್ಲಿ ಸುಮಾರು 191 ಖಾಸಗಿ ಐ ಟಿ ಐ ಸಂಸ್ಥೆಗಳಿವೆ. ಅನುದಾನವನ್ನು ಕೊಡುವಾಗ ನ್ಯಾಷನಲ್ ಕೌನ್ಸಿಲ್ ಆಫ್ ವೊಕೇಷನಲ್ ಟ್ರೈನಿಂಗ್ ಆಧಾರದ ಮೇಲೆ ಕೊಡಬೇಕಾಗುತ್ತದೆ. ಆ ಆಧಾರದ ಅನುಗುಣವಾಗಿ ಹಾಗೂ ಮೀಸಲಾತಿಗೆ ಅನುಗುಣವಾಗಿ ಇದನ್ನು ಪರಿಶೀಲನೆ ಮಾಡಿ ನಿರ್ಧಾರ ತೆಗೆದುಕೊಳ್ಳಲಾಗುತ್ತದೆಂದು ಹೇಳಲಿಕ್ಕೆ ಇಚ್ಛಿಸುತ್ತೇನೆ.

ಶ್ರೀ ಕೆ. ಎಸ್. ಪುಟ್ಟಣ್ಣಯ್ಯ (ಪಾಂಡವಪುರ): ಮಾನ್ಯ ಅಧ್ಯಕ್ಷರೆ, ಖಾಸಗಿ ಐ.ಟಿ.ಐ ನಲ್ಲಿ ಕೆಲಸ ಮಾಡತಕ್ಕಂಥವರು 15-20 ದಿವಸಗಳಿಂದ ಧರಣಿ ಕುಳಿತಿದ್ದಾರೆ. ರಾಜ್ಯದಲ್ಲಿರುವಂಥ ಖಾಸಗಿ ಐ ಟಿ ಐ ಕಾಲೇಜುಗಳನ್ನು ಸರ್ಕಾರವೇ ನಡೆಸಬೇಕಾದರೆ ಸುಮಾರು 100ರಿಂದ 150 ಕೋಟಿ ರೂಪಾಯಿಗಳು ಬೇಕಾಗುತ್ತದೆ. ಅನುದಾನ ಕೊಡುವುದಕ್ಕೆ ಹೋದರೆ 2ರಿಂದ ಎರಡೂವರೆ ಕೋಟಿ ರೂಪಾಯಿ ಮಾತ್ರ ಖರ್ಚು ಬರಬಹುದು. ವೃತ್ತಿಪರ ಶಿಕ್ಷಣವನ್ನು ತೆಗೆದುಕೊಡುವಂಥವರು ಯಾವುದೇ ಹಳ್ಳಿಗೆ ಹೋಗಿ ಎಲೆಕ್ಟ್ರೀಷಿಯನ್ ಆಗಿ ಅಥವಾ ಇನ್ಯಾವುದೋ ಕೆಲಸ ಮಾಡಿ ಕೊಂಡು ತನ್ನ ಜೀವನವನ್ನು ಮಾಡಿಕೊಳ್ಳಬಹುದು. ಮೋಟರ್ ಬೈಕ್ ರಿಪೇರಿ ಮಾಡಿಕೊಂಡು ಜೀವನ ಮಾಡಬಹುದು. ಇವತ್ತಿನ ದಿವಸದಲ್ಲಿ ಬಿ.ಎ., ಬಿ.ಎಸ್.ಸಿ, ಗಿಂತ ವೃತ್ತಿಪರ ಶಿಕ್ಷಣ ಬಹಳ ಮುಖ್ಯವಾದುದು ಜೂನ್, ಜುಲೈ ನಲ್ಲಿ ಅವರು ಎಕ್ಸಾಮಿನೇಷನ್ ಮಾಡಬೇಕಾಗಿದೆ. ಅದಕ್ಕಾಗಿ ಧರಣಿ ಕುಳಿತಿರುವವರ ಕರೆದು ಮಾತನಾಡಿ ಒಂದು ತೀರ್ಮಾನ ಮಾಡಿ. ಬಿ.ಇ. ಮತ್ತು ಎಂ.ಬಿ.ಬಿ.ಎಸ್ ಕೋರ್ಸ್‌ಗಳಿಗೆ ಸಾಹುಕಾರರ ಮಕ್ಕಳು ಸೇರಿಕೊಳ್ಳುತ್ತಾರೆ, ಅದೇ ಐ.ಟಿ.ಐ ಕೋರ್ಸ್‌ಗಳಿಗೆ ಬಡವರು ಮತ್ತು ಮಧ್ಯಮ ವರ್ಗದ ಮಕ್ಕಳ ಸೇರಿಕೊಳ್ಳುತ್ತಾರೆ. ಐ ಟಿ ಐ ಗಳಿಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಕೊಟ್ಟು ಯುವಕರಿಗೆ ಹೆಚ್ಚಿನ ರೀತಿಯಲ್ಲಿ ಉದ್ಯೋಗ ಒದಗಿಸುವ ಹಾಗೆ ಸರ್ಕಾರದವರು ಕ್ರಮ ತೆಗೆದುಕೊಳ್ಳಬೇಕು. ವೃತ್ತಿಪರ ಶಿಕ್ಷಣ ಕೊಡುವ ಬಗ್ಗೆ ಸರ್ಕಾರ ಗಂಭೀರವಾಗಿ ಯೋಜನೆ ಮಾಡಬೇಕು. ಇದರಲ್ಲೂ ಕೆಲವರು ಉದ್ದೇಶಪೂರ್ವಕವಾಗಿ ಐ.ಟಿ.ಐ ಸಂಸ್ಥೆಗಳನ್ನು ವ್ಯಾಪಾರ ಸಂಘ ಸಂಸ್ಥೆಗಳನ್ನಾಗಿ

ಪರಿವರ್ತನೆ ಮಾಡಿಕೊಂಡಿರುವುದು ನಿಜ. ಇದರ ಬಗ್ಗೆ ಕಾಲ ವಿಳಂಬ ಮಾಡದೆ ಸರ್ಕಾರದವರು ಗಂಭೀರವಾಗಿ ಪರಿಶೀಲನೆ ಮಾಡಿ ಧರಣಿ ಕುಳಿತಿರುವವರನ್ನು ಕರೆಸಿ ಮಾತನಾಡಿ, ಕಾಲೇಜುಗಳನ್ನು ನಡೆಸುವುದಕ್ಕೆ ಅನುಕೂಲ ಮಾಡಬೇಕು, ಹಾಗೂ ಅವರಿಗೆ ಏನು ಸವಲತ್ತುಗಳನ್ನು ಕೊಡಬೇಕೋ ಅದನ್ನು ಕೊಡಬೇಕೆಂದು ಸರ್ಕಾರದಲ್ಲಿ ಮನವಿ ಮಾಡುತ್ತೇನೆ.

ಶ್ರೀ ಸಿ.ಗುರುನಾಥ್ : ಇವರ ಬಗ್ಗೆ ಆದಷ್ಟು ಬೇಗ ಪರಿಶೀಲನೆ ಮಾಡುತ್ತೇನೆ.

**ವಿಷಯ : ರೇಷ್ಮೆ ಮೇಲೆ ತೆರಿಗೆ ವಿಧಿಸಿರುವುದರಿಂದ ಉಂಟಾಗಿರತಕ್ಕ ಪರಿಸ್ಥಿತಿ ಬಗ್ಗೆ**

ಶ್ರೀ ಬಿ.ಎಸ್. ಯಡಿಯೂರಪ್ಪ (ವಿರೋದ ಪಕ್ಷದನಾಯಕರು) : ಮಾನ್ಯ ಅಧ್ಯಕ್ಷರೆ, ತಾವೂ ಕೋಲಾರ ಜಿಲ್ಲೆಯಿಂದ ಬಂದಿರತಕ್ಕಂಥವರು. ನಮ್ಮ ರಾಜ್ಯದಲ್ಲಿ 80 ಪರ್‌ಸೆಂಟ್‌ನಷ್ಟು ರೇಷ್ಮೆಯನ್ನು ಉತ್ಪಾದನೆ ಮಾಡಲಾಗುತ್ತಿದೆ. ಮಾನ್ಯ ಬಂಗಾರಪ್ಪನವರು ಮುಖ್ಯ ಮಂತ್ರಿಗಳಾಗಿದ್ದಂಥ ಕಾಲದಲ್ಲಿ ಅದರ ಮೇಲೆ 2 ಪರ್ ಸೆಂಟ್ ಟ್ಯಾಕ್ಸ್ ಹಾಕುವುದಕ್ಕೆ ಹೋಗಿದ್ದಾಗ ಈ ಉದ್ದಿಮೆಗೆ ತೊಂದರೆಯಾಗುತ್ತದೆಂದು ವಾಪಸ್ ತೆಗೆದುಕೊಳ್ಳಲಾಗಿತ್ತು. ಇವತ್ತು ಅದರ ಮೇಲೆ 4 ಪರ್‌ಸೆಂಟ್ ಟ್ಯಾಕ್ಸ್ ಹಾಕಿರುವುದರಿಂದ ನಾಳೆಯಿಂದ ರೇಷ್ಮೆ ಉದ್ಯಮ ಪೂರ್ತಿ ಬಂದ್ ಮಾಡುತ್ತೇವೆಂದು ಹೇಳಿದ್ದಾರೆ. ಈ ಉದ್ದಿಮೆ ಉಳಿಸುವ ದೃಷ್ಟಿಯಿಂದ ಟ್ಯಾಕ್ಸ್‌ನ್ನು ಕಡಿಮೆ ಕೊಡಬೇಕು. ಕೇರಳ ಮತ್ತು ಆಂಧ್ರ ಪ್ರದೇಶದಲ್ಲಿ ರೇಷ್ಮೆ ಮೇಲೆ ಟ್ಯಾಕ್ಸ್ ಹಾಕಿಲ್ಲ. 30 ಪರ್ಸೆಂಟ್ ಉತ್ಪಾದನೆ ಮಾಡಿತಕ್ಕಂಥ ನಮ್ಮ ರಾಜ್ಯ ಬೇರೆ ರಾಜ್ಯಗಳಿಗೆ ಮಾರ್ಗದರ್ಶಕವಾಗುವ ಬದಲು ಟ್ಯಾಕ್ಸ್ ಹಾಕಿರುವುದರಿಂದ ರೇಷ್ಮೆ ವ್ಯಾಪಾರವೆಲ್ಲಾ ಪಕ್ಕದ ರಾಜ್ಯಗಳಿಗೆ ಹೋಗಿ ಆ ಉದ್ಯಮವೇ ಬಂದ್ ಆಗುವ ಲಕ್ಷಣಗಳಿವೆ. ಇದರ ಬಗ್ಗೆ ಹೇಳಿಕೆ ಕೊಡಬೇಕೆಂದು ನಾನು ಒತ್ತಾಯ ಮಾಡುತ್ತೇನೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ರೇಷ್ಮೆ ವ್ಯಾಪಾರ ಇಲ್ಲದೆ ಕಬ್ಬನ್ ಪೇಟೆ ಪೂರ್ತಿ ಬಂದ್ ಆಗುತ್ತಿದೆ.

ಶ್ರೀ ಬಿ.ಎಸ್.ಯಡಿಯೂರಪ್ಪ : 4 ಪರ್‌ಸೆಂಟ್ ತೆರಿಗೆ ಹಾಕಿರುವುದನ್ನು ತೆಗೆದು ಹಾಕಿ ರೇಷ್ಮೆ ಉದ್ಯಮಕ್ಕೆ ಆಗುತ್ತಿರುವ ತೊಂದರೆಯನ್ನು ತಡೆಗಟ್ಟಲಾಗುತ್ತದೆಯೇ? ಹಾಗೂ ನಾಳೆಯಿಂದ ರೇಷ್ಮೆ ವ್ಯಾಪಾರಸ್ಥರು ವ್ಯಾಪಾರವನ್ನು ಬಂದ್ ಮಾಡುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಡಿ. ನಾಗರಾಜಯ್ಯ : ಮಾನ್ಯ ಅಧ್ಯಕ್ಷರೆ, ಸರ್ಕಾರವು ತೆರಿಗೆ ಹಾಕಿರುವುದರಿಂದ ಉದ್ದಿಮೆದಾರರಿಗೆ ಯಾವುದೇ ರೀತಿಯಲ್ಲಿ ತೊಂದರೆಯಾಗುವುದಿಲ್ಲ. ಈ ತೆರಿಗೆಯು ಪರ್ಚೇಸರ್ ಮೇಲೆ ಬೀಳುತ್ತದೆಯೇ ಹೊರತು ಉದ್ದಿಮೆದಾರರ ಮೇಲೆ ಬೀಳತಕ್ಕಂಥ ತೆರಿಗೆ ಅಲ್ಲ.ಅದಕ್ಕೋಸ್ಕರವಾಗಿ ಮಾನ್ಯ ವಿರೋಧ ಪಕ್ಷದ ನಾಯಕರು ಏನು ಸಲಹೆಯನ್ನು ಮಾಡಿದ್ದಾರೆ, ಅದನ್ನು ಪರಿಶೀಲನೆ ಮಾಡಿ, ಉದ್ದಿಮೆದ್ದಾರರಿಗೆ ಏನಾದರೂ ತೊಂದರೆಯಾಗುವಂಥಾದ್ದಿದ್ದರೆ ಅದನ್ನು ಪರಿಶೀಲಿಸಿ, ಅವರಿಗೆ ತೊಂದರೆಯಾಗದ ರೀತಿಯಲ್ಲಿ ಅವರಿಗೆ ಸೂಕ್ತವಾದಂಥ ಪರಿಹಾರವನ್ನು ಕಂಡುಹಿಡಿಯುವುದರ ಮೂಲಕ ಅವರ ಸಲಹೆಯನ್ನು ಪರಿಶೀಲನೆ ಮಾಡಲಾಗುವುದು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಾನ್ಯ ಅಧ್ಯಕ್ಷರೇ, ಈಗಾಗಲೇ ಕಕೂನ್ಸ್‌ಗೆ ಒಂದು ಪರ್‌ಸೆಂಟ್‌ನ್ನು ಹಾಕಿದ್ದೀರಿ. ತಮಗೆ ಗೊತ್ತಿರುವ ಹಾಗೆ ನಾವು ಹತ್ತು ಕೆ.ಜಿ.ಕಕೂನ್ ಮಾಡಿದ್ದರೆ ಒಂದು ಕೆ.ಜಿ.ಬರುತ್ತದೆ. ಆ ಒಂದು ಕೆ.ಜಿ ಕೂಡ ಬ್ಲೀಚ್ ಆದ ಮೇಲೆ ಬರತಕ್ಕಂಥಾದ್ದು 750 ಗ್ರಾಂ ಮಾತ್ರ. ಆ ಮೇಲೆ ವೀವಿಂಗ್ ಟೈಮ್‌ನಲ್ಲಿ ಲಾಸ್ ಆಗುತ್ತದೆ. ಸಿಲ್ಕ್ ಎಕ್ಸ್‌ಚೇಂಜ್‌ನಲ್ಲಿ ಈಗಾಗಲೇ 2 ಪರ್‌ಸೆಂಟ್ ಟ್ಯಾಕ್ಸ್‌ನ್ನು ಹಾಕಿದ್ದೀರಿ. ಅದಾದ ಮೇಲೆ ಈಗ 4 ಪರ್‌ಸೆಂಟ್, ಕಲರ್ಸ್‌ಗೆ 7 ಪರ್‌ಸೆಂಟ್, ಒಟ್ಟು 14 ಪರ್‌ಸೆಂಟ್ ಆಗುತ್ತದೆ. ಇಷ್ಟು ಟ್ಯಾಕ್ಸ್ ಎಲ್ಲಿಯೂ ಕೂಡ ಇಲ್ಲ. ಹೀಗೆ ಟ್ಯಾಕ್ಸ್ ತಮಿಳುನಾಡು, ಅಂಧ್ರಪ್ರದೇಶ ಮತ್ತಿತರ ಕಡೆಗಳಲ್ಲಿ ಎಲ್ಲಿಯೂ ಇಲ್ಲ. ತಾವುಗಳು ಹೇಳುತ್ತೀರಿ, ಇದು ಪರಚೇಸರ್ಸ್ ಮೇಲೆ ಹೋಗುತ್ತದೆ ಎಂದು. ಹಾಗಾದರೆ ಗ್ರಾಹಕರಾಗಿ ನಾವು ತಮಿಳುನಾಡಿನ ಕಂಚಿಗೆ ಕಾಳಹಸ್ತಿಗೆ, ಮತ್ತಿತರ ಕಡೆಗೆ ಹೋಗಬೇಕೇ? ಹೀಗೆ ಮಾಡುವುದರ ಮೂಲಕ ಮಹಿಳೆಯರಿಗೆ ಅನ್ಯಾಯ ಮಾಡಿದ ಹಾಗೆ ಆಗಿದೆ. ಬೆಂಗಳೂರು ಮತ್ತಿತರ ಕಡೆಗಳಲ್ಲಿ ರೇಷ್ಮೆ ವ್ಯವಹಾರವು ಪೂರ್ತಿಯಾಗಿ ಸ್ಥಗಿತವಾಗುತ್ತಾ ಇದೆ. ಇದು ಯೋಚನೆ ಮಾಡತಕ್ಕಂಥ ವಿಚಾರವಾಗಿದೆ. ಇದರ ಮೂಲಕ ವ್ಯಾಪಾರಸ್ಥರು ನೌಕರರು ಮತ್ತು ಗ್ರಾಹಕರುಗಳಿಗೆ ಭಾರಿ ಅನ್ಯಾಯವಾಗಿದೆ. ಹೀಗಿರುವಾಗ ಏತಕ್ಕಾಗಿ ಇದನ್ನು ಹೆಚ್ಚಿಗೆ ಮಾಡಿದ್ದೀರಿ?

ಶ್ರೀ ಡಿ. ನಾಗರಾಜಯ್ಯ : ಮಾನ್ಯ ಅಧ್ಯಕ್ಷರಿಗೆ ಈ ಉದ್ದಿಮೆಯಲ್ಲಿ ತೊಡಗಿರುವವರಿಗೆ ಯಾವುದೇ ವಿಧವಾದ ತೊಂದರೆಯಾಗದಂತೆ ಸರಕಾರವು ನೋಡಿಕೊಳ್ಳುತ್ತದೆ. ಮಾನ್ಯ ಸದಸ್ಯರುಗಳು ಯಾವ ವಿಚಾರವನ್ನು ಇಲ್ಲಿ ಪ್ರಸ್ತಾಪ ಮಾಡಿದ್ದಾರೆ, ಆ ಬಗ್ಗೆ ಪರಿಶೀಲನೆ ಮಾಡುತ್ತೇವೆ.

ಅಧ್ಯಕ್ಷರು : ತಾವು ವಿರೋಧ ಪಕ್ಷದ ನಾಯಕರನ್ನು ಮತ್ತು ಇತರ ಸಂಬಂಧಪಟ್ಟವರನ್ನು ಹಾಗೂ ಇಲಾಖೆಯ ಅಧಿಕಾರಿಗಳನ್ನು ತಮ್ಮ ಕಚೇರಿಗೆ ಕರೆಯಿಸಿಕೊಂಡು ವಿಷಯವನ್ನು ಸಮಗ್ರವಾಗಿ ಚರ್ಚೆ ಮಾಡಿ ಒಂದು ತೀರ್ಮಾನಕ್ಕೆ ಬನ್ನಿ.

ಶ್ರೀ ಡಿ.ನಾಗರಾಜಯ್ಯ : ಮಾನ್ಯ ಸದಸ್ಯರುಗಳು ಹೇಳಿದಂಥ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಅದಕ್ಕೆ ಸೂಕ್ತವಾದಂಥ ಒಂದು ಪರಿಹಾರವನ್ನು ಕಂಡುಹಿಡಿಯಲು ಪ್ರಯತ್ನ ಮಾಡುತ್ತೇವೆ.

ಅಧ್ಯಕ್ಷರು : ಸನ್ಮಾನ್ಯ ವಾಟಾಳ್ ನಾಗರಾಜ್‌ರವರು ..

ಶ್ರೀ ವಸಂತ್ ವಿ.ಸಾಲಿಯಾನ್ : ಸನ್ಮಾನ್ಯ ಅಧ್ಯಕ್ಷರೇ,

ಅಧ್ಯಕ್ಷರು : ಇಲ್ಲ ಇಲ್ಲ ... There cannot be a debate now. You are senior Member. You will have to co-operate with me. I have not allowed you.

ನೀವು ಮೊದಲು ಸಕಾಲದಲ್ಲಿ ಬಂದು ಭೇಟಿಯಾಗಿಲ್ಲ. ಈಗ ತಮಗೆ ಅವಕಾಶ ಕೊಡಲು ಆಗುವುದಿಲ್ಲ.

ಶ್ರೀ ವಸಂತ್ ಸಾಲಿಯಾನ : ನಾನು ತಮ್ಮ ಅಪ್ಪಣೆ ಪಡೆದು ಜೀರೋ ಅವರ್‌ನಲ್ಲಿಯೇ ಕೇಳುತ್ತಾ ಇದ್ದೇನೆ. ಒಂದು ಬಹಳ ಮುಖ್ಯವಾದ ವಿಚಾರ ಇದೆ.

ಅಧ್ಯಕ್ಷರು : ದಯಮಾಡಿ ಕುಳಿತುಕೊಳ್ಳಿ .... I am sorry. You will have to meet me early.

ಶ್ರೀ ವಸಂತ್ ವಿ. ಸಾಲಯನ : ಇದು ಬಹಳ ಪ್ರಾಮುಖ್ಯವಾದ ವಿಚಾರ ದಕ್ಷಿಣ ಕನ್ನಡ ಜಿಲ್ಲೆಯ ನೇಕಾರರ ವಿಚಾರವಾದ ಕಾರಣ ನನಗೆ ಅವಕಾಶ ಕೊಡಬೇಕಾಗುತ್ತದೆ.

ಅಧ್ಯಕ್ಷರು : ದಕ್ಷಿಣ ಕನ್ನಡ ಜಿಲ್ಲೆಯ ವಿಚಾರವೇ ಆಗಿರಲಿ, ನೀವು ಮೊದಲು ಬಂದು ಭೇಟಿಯಾಗಿ ಹೇಳಬೇಕು. You have not brought it to my notice. Please resume your seat ದಯಮಾಡಿ ತಾವು ಕುಳಿತುಕೊಳ್ಳಿ. ನೀವು ಹೇಳಿದ ಹಾಗೆ ಅವಕಾಶ ಮಾಡಿಕೊಡಲು ಆಗುವುದಿಲ್ಲ. Please don't enter into argument with the Chair. ದಯಮಾಡಿ ಕುಳಿತುಕೊಳ್ಳಿ.

**ವಿಷಯ : ಮುಖ್ಯಮಂತ್ರಿಯವರು ದೆಹಲಿಯಲ್ಲಿ ತಮಿಳುನಾಡು ರಾಜ್ಯಪಾಲರ ಬಗ್ಗೆ ನೀಡಿರುವ ಹೇಳಿಕೆ.**

ಶ್ರೀ ವಾಟಾಳ್ ನಾಗರಾಜ್ (ಚಾಮರಾಜನಗರ) : ಮಾನ್ಯ ಅಧ್ಯಕ್ಷರೇ, ಎರಡು ಪ್ರಶ್ನೆಗಳನ್ನು ತಮ್ಮ ಗಮನಕ್ಕೆ ತರಬೇಕಾದಂಥಾದ್ದು ಇದೆ. ಮಾನ್ಯ ಮುಖ್ಯಮಂತ್ರಿಯವರು ನಿನ್ನೆ ಡೆಲ್ಲಿಯಲ್ಲಿ ಒಂದು ಸಂದರ್ಭದಲ್ಲಿ ಪತ್ರಿಕಾ ಪ್ರತಿನಿಧಿಗಳ ಜೊತೆಯಲ್ಲಿ ಮಾತನಾಡುವಾಗ ತಮಿಳುನಾಡು ರಾಜ್ಯಪಾಲರ ವರ್ತನೆ ಬಗ್ಗೆ ಮಾತನಾಡಿದ್ದಾರೆ. ಚೆನ್ನಾರೆಡ್ಡಿಯವರ ಕ್ರಮ ಒಕ್ಕೂಟದ ವ್ಯವಸ್ಥೆಗೆ ಅತ್ಯಂತ ಅಪಾಯಕಾರಿ ಎನ್ನತಕ್ಕಂಥ ಮಾತನ್ನು ಈ ಸದನದ ಮುಖ್ಯಮಂತ್ರಿಯವರೇ ಹೇಳಿರತಕ್ಕಂಥ ಮಾತು. ಎಲ್ಲಿಯವರೆಗೆ ಹೇಳಿದ್ದಾರೆ ಅಂದರೆ "ಕ್ರಮ" ಅನೈತಿಕ ಕ್ರಮ, ರಾಜ್ಯಪಾಲರು ತಮ್ಮ ಅಧಿಕಾರದ ದುರುಪಯೋಗ.....

ಶ್ರೀ ಜೆ.ಹೆಚ್.ಪಟೇಲ್ (ಉಪಮುಖ್ಯಮಂತ್ರಿ) : ಮಾನ್ಯ ಅಧ್ಯಕ್ಷರೇ ನನ್ನ ಕ್ರಿಯಾಲೋಪವಿದೆ ಅವೊತ್ತು ಮಾನ್ಯ ಮುಖ್ಯಮಂತ್ರಿಯವರು ಮಾನ್ಯ ಸದಸ್ಯರಿಗೆ ಏನು ಹೇಳಿದ್ದಾರೆ ಅಂದರೆ, ಇಂಥ ರಾಜ್ಯಪಾಲರು, ಮುಖ್ಯಮಂತ್ರಿಗಳಿಗೆ ಸಂಬಂಧಪಟ್ಟ ಹಾಗೆ ಹೊರಗೆ ತಾವು ಏನೇ ಹೇಳಿಕೆ ಕೊಡಬಹುದು, ಸದನದಲ್ಲಿ ಇನ್ನೊಂದು ರಾಜ್ಯದ ಮುಖ್ಯಮಂತ್ರಿ ಇನ್ನೊಂದು ರಾಜ್ಯದ ರಾಜ್ಯಪಾಲರುಗಳ ಬಗ್ಗೆ ಪ್ರಸ್ತಾಪ ಮಾಡಲೇ ಕೂಡದು ನಿಯಮ 326 ರ ಕೆಳಗಡೆ ಅವರ ಹೆಸರನ್ನು ನಾವು ಮೆನ್‌ಷನ್ ಮಾಡುವ ಹಾಗೆ ಇಲ್ಲ ಅದಕ್ಕಾಗಿ ನಮ್ಮ ಮುಖ್ಯಮಂತ್ರಿಯವರು ಅಲ್ಲಿ ಏನು ಹೇಳಿದ್ದಾರೆ ಅದನ್ನು ಇವರು ಹೊರಗಡೆ ಹೇಳಲಿ... ಸದನದಲ್ಲಿ ಬೇಡ.

ಶ್ರೀ ವಾಟಾಳ್ ನಾಗರಾಜ್ ನಮ್ಮ ಮುಖ್ಯ ಮಂತ್ರಿಯವರು ಡೆಲ್ಲಿಯಲ್ಲಿ ಆ ಒಂದು ಹೇಳಿಕೆ ಕೊಟ್ಟಿರುವಾಗ ನಾವು ಇಲ್ಲಿ ಅದಕ್ಕೆ ಬೆಂಬಲವನ್ನು ಸೂಚಿಸಿ,

ನಾವು ಇಲ್ಲಿ ಮಾತನಾಡ ಬೇಕಾಗುತ್ತದೆ. ನಮ್ಮ ಗೌರವಾನ್ವಿತ ಮುಖ್ಯಮಂತ್ರಿಯವರು ಇಲ್ಲಿ ಸದನ ನಡೆಯುವಾಗ ಡೆಲ್ಲಿಯಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. ''ಅನೈತಿಕವಾದುದು.... ಒಕ್ಕೂಟದ ವ್ಯವಸ್ಥೆಗೆ ವಿರುದ್ಧವಾದುದು..... ನಾವು ರಾಷ್ಟ್ರಪತಿಯವರನ್ನು ಭೇಟಿ ಮಾಡುತ್ತೇವೆ.... ಎಂಬಿತ್ಯಾದಿಯಾಗಿ ಹೇಳಿರುವಾಗ, ಇದು ಕ್ರಮ ಸರಿಯಲ್ಲ ಎಂಬ ಬಗ್ಗೆ ಚರ್ಚೆ ಮಾಡಬೇಕಾಗುತ್ತದೆ.

ಅಧ್ಯಕ್ಷರು : ನಮ್ಮ ನಿಯಮಗಳಿಗೆ ವಿರುದ್ಧವಾದುದನ್ನು ಪ್ರಸ್ತಾಪಿಸುವುದರ ಮೂಲಕ ನಾವು ಇಲ್ಲಿ ಹೊಸ ಸಂಪ್ರದಾಯವನ್ನು ಹಾಕುವುದು ಬೇಡ. ತಾವು ಹಿರಿಯ ಸದಸ್ಯರಿದ್ದೀರಿ. ಆ ಸದನದ ಗೌರವ ಕಾಪಾಡುವುದರಲ್ಲಿ ತಾವೆಲ್ಲರೂ ನನಗೆ ಮಾರ್ಗದರ್ಶಕರಾಗಿ ಇರಬೇಕು. ಯಾವುದನ್ನು ನಮ್ಮ ನಿಯಮಗಳು ಅನುಮತಿ ಕೊಡುವುದಿಲ್ಲವೋ ಅದನ್ನು ನಾವಿಲ್ಲ ಚರ್ಚೆ ಮಾಡುವುದು ಸರಿಯಲ್ಲ. ಇನ್ನೊಂದು ರಾಜ್ಯದ ರಾಜ್ಯಪಾಲರ ಕ್ರಮವನ್ನು ನಮ್ಮ ಸದನದಲ್ಲಿ ಚರ್ಚೆ ಮಾಡುವುದು ಸರಿಯಲ್ಲ.

ಶ್ರೀ ವಾಟಾಳ್ ನಾಗರಾಜ್ : ನಾನು ರಾಜ್ಯಪಾಲರ ವ್ಯಕ್ತಿತ್ವದ ಬಗ್ಗೆ ಮಾತನಾಡುತ್ತಾ ಇಲ್ಲ. ಹೀಗೆ ಮುಖ್ಯಮಂತ್ರಿಯವರು ಹೇಳಿದ್ದು ಜಗಜಾಹೀರು ಆಗಿದೆ.

ಅಧ್ಯಕ್ಷರು : ಸಾಮಾನ್ಯ ಕಾರ್ಯಕರ್ತರಿಗೂ ಕೂಡ ಈ ಸದನದ ಹೊರಗೆ ಯಾವುದೇ ವಿಷಯದಲ್ಲಿ ಈ ಪ್ರಪಂಚದಲ್ಲಿ ಇಷ್ಟ ಬಂದಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಲು ಹಕ್ಕು ಇರುತ್ತದೆ. ಆದ್ದರಿಂದ ಇದನ್ನು ತಾವು ಇಲ್ಲಿ ಚರ್ಚೆಯ ವಸ್ತುವನ್ನಾಗಿ ಮಾಡಿಕೊಳ್ಳುವುದು ಬೇಡ. ದಯಮಾಡಿ ಸಹಕರಿಸಿ. ತಾವು ದೂರದರ್ಶನದ ಬಗ್ಗೆ ವಿಷಯವನ್ನು ಪ್ರಸ್ತಾಪ ಮಾಡಬೇಕೆಂದು ಹೇಳಿದ್ದೀರಿ. ಅದನ್ನು ಪ್ರಾರಂಭಿಸಿ..

ಶ್ರೀ ವಾಟಾಳ್ ನಾಗರಾಜ್ : ಡಾ|| ಸುಬ್ರಮಣ್ಯ ಸ್ವಾಮಿಯವರು ನಮ್ಮ ರಾಜ್ಯದ ಮುಖ್ಯ ಮಂತ್ರಿಯವರ ಮೇಲೆಯೂ ಆಪಾದನೆ ಮಾಡಿದ್ದಾರೆ. ಅದು ಅತಿ ಮುಖ್ಯ. ಎಲ್ಲಾ ರಾಜ್ಯಗಳಲ್ಲಿ ಈ ರೀತಿಯಾಗಿ ಹೊರಟರೆ ನಾಳೆ ಪರಿಸ್ಥಿತಿ ಏನು? ರಾಜ್ಯಪಾಲರುಗಳು ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಂಡು ಈ ರೀತಿಯಲ್ಲಿ ನಡೆಸುವುದಾದರೆ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯೇ ಬುಡಮೇಲಾಗುತ್ತದೆ. ಇದು ಸರಿಯಾದ ಕ್ರಮ ಅಲ್ಲ ಎಂಬ ಬಗ್ಗೆ ಸರಿಯಾದ ಚರ್ಚೆಯನ್ನು ಮಾಡಬೇಕಾಗಿದೆ. ಸುಬ್ರಮಣ್ಯ ಸ್ವಾಮಿಯವರ, ಚೆನ್ನಾರೆಡ್ಡಿಯವರ ಹೇಳಿಕೆಗಳೇನು ಎಂಬ ಬಗ್ಗೆ ಮಾತನಾಡಲು ತಾವುಗಳು ಅವಕಾಶ ಕೊಡಿ.

ಅಧ್ಯಕ್ಷರು : ಇದು ನಮ್ಮ ಸದನಗಳ ಕಾರ್ಯವ್ಯಾಪ್ತಿಗೆ ಬರುವುದಿಲ್ಲ. ದಯಮಾಡಿ ನಾವು ಹೊಸ ಸಂಪ್ರದಾಯವನ್ನು ಹಾಕುವುದು ಬೇಡ. ಸುಬ್ರಮಣ್ಯ ಸ್ವಾಮಿಯವರು ದೂರುಕೊಟ್ಟರೆ ದೇವೇಗೌಡರು ಅದಕ್ಕೆ ಉತ್ತರ ಕೊಡುತ್ತಾರೆ. ಆರೋಪ ಮಾಡಿದರೆ ಅದಕ್ಕೆ ಅವರು ಜವಾಬು ಕೊಡುತ್ತಾರೆ. ಆದ್ದರಿಂದ ಈ ಬಗ್ಗೆ ಇನ್ನು ಪ್ರಸ್ತಾಪ ಬೇಡ. ದಯಮಾಡಿ ಹಿರಿಯ ಸದಸ್ಯರಾದ ನೀವು ಸಹಕರಿಸಬೇಕು. ನೀವೆಲ್ಲರೂ ನನಗೆ ಮಾರ್ಗದರ್ಶನ ಮಾಡುತ್ತೀರಿ ಎಂದು ನಂಬಿ ನಾನು ಈ ಜವಾಬ್ದಾರಿಯನ್ನು ಒಪ್ಪಿಕೊಂಡೆ. ನನ್ನನ್ನು ಇಲ್ಲಿ ನೀವು ಕೂರಿಸಿ ಹೊರಿಸಿ ಸಂಪ್ರದಾಯಗಳನ್ನು ಹಾಕಿ ನಿಯಮಗಳನ್ನು ಉಲ್ಲಂಘನೆ ಮಾಡಿದರೆ ನನಗೆ ಅಪಕೀರ್ತಿ ಬರುವುದಿಲ್ಲವೇ? ಹಾಗೆ ನನಗೆ ಬಂದ ಅಪಕೀರ್ತಿಯು ತಮಗೂ ಕೂಡ ಅಪಕೀರ್ತಿ ಅಲ್ಲವೇ?

ಶ್ರೀ ವಾಟಾಳ್ ನಾಗರಾಜ್ : ತಮ್ಮ ಮಾತಿಗೆ ನಾನು ಸಂಪೂರ್ಣವಾದ ಗೌರವವನ್ನು ಕೊಡುತ್ತಾ ಇದ್ದೇನೆ. ತಮ್ಮ ಮಾತನ್ನು ಮೀರಿಹೋಗತಕ್ಕಂಥಾದ್ದು ಇಲ್ಲ. ನಮಗೆ ತಮ್ಮ ಮಾರ್ಗದರ್ಶನ ಇವೊತ್ತು ಬೇಕಾಗಿದೆಯಲ್ಲ ? ಪತ್ರಿಕೆಯಲ್ಲಿ ಬಂದಿರತಕ್ಕಂಥಾದ್ದಕ್ಕೆ ತಮ್ಮ ಮಾರ್ಗದರ್ಶನ ಬೇಕಾಗಿದೆ.

ಅಧ್ಯಕ್ಷರು : ದಯಮಾಡಿ, ನಾವು ಸದನದ ಹೊರಗಡೆ ನಡೆದಿರತಕ್ಕಂಥ ವಿಚಾರಗಳನ್ನು ಇಲ್ಲಿ ಪ್ರಸ್ತಾಪ ಮಾಡುವುದು ಬೇಡ. ತಾವು ದೂರದರ್ಶನದ ಬಗ್ಗೆ ಹಕ್ಕುಚ್ಯುತಿ ಪ್ರಸ್ತಾಪ ಮಾಡುತ್ತೀರೆಂದು ನಿಮ್ಮನ್ನು ಅವಕಾಶ ಕೊಟ್ಟು ಕರೆದಿದ್ದ... ಅದು ಇದ್ದರೆ ಅದರ ಬಗ್ಗೆ ನಾನು ಆಲೋಚನೆ ಮಾಡಬೇಕಾಗುತ್ತದೆ. ಅದಕ್ಕಾಗಿ ಪುಸ್ತಕಗಳನ್ನು ತರಿಸಿ ಇಟ್ಟುಕೊಂಡಿದ್ದ. ದಯಮಾಡಿ ಆ ಬಗ್ಗೆ ಪ್ರಸ್ತಾಪಿಸಿ.

ಶ್ರೀ ಕೆ.ಎನ್. ನಾಗೇಗೌಡ : ಸುಬ್ರಮಣ್ಯ ಸ್ವಾಮಿಯವರು ಈವೊತ್ತು ಎಲ್ಲಾ ರಾಜ್ಯಗಳಿಗೆ ಪ್ರವಾಸ ಮಾಡತಕ್ಕಂಥಾದ್ದನ್ನು ನೋಡಿದರೆ ಅದರ ಅರ್ಥ ಏನು ಎಂಬ ಬಗ್ಗೆ ಚರ್ಚೆ ಮಾಡೋಣ ಎಂದು ಹೇಳಿದ್ದೇನೇ ವಿನಹ ರಾಜ್ಯಪಾಲರ ಬಗ್ಗೆ ನಾವು ಇಲ್ಲಿ ಚರ್ಚೆ ಮಾಡಲು ಬರುವುದಿಲ್ಲ. ಬೇರೆ ವಿಚಾರ ಬೇಕಾದಲ್ಲಿ ಚರ್ಚೆ ಮಾಡೋಣ ಎಂದು ನನ್ನ ಅನಿಸಿಕೆ.

ಹಕ್ಕುಚ್ಯುತಿ ಪ್ರಸ್ತಾಪ

**ವಿಷಯ : ಬೆಂಗಳೂರು ದೂರದರ್ಶನದಲ್ಲಿ ಸದನದ ಕಾರ್ಯಕಲಾಪಗಳ ವರದಿಯಲ್ಲಿ ಆಗಿರತಕ್ಕ ಹಕ್ಕು ಚ್ಯುತಿ**

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೆ,ತಮ್ಮ ಅಪ್ಪಣೆಯನ್ನು ನಾನು ಪಾಲಿಸುತ್ತೇನೆ. ತಾವು ನನ್ನ ಮೇಲೆ ಕೋಪ ಮಾಡಿಕೊಳ್ಳ ಬಾರದು. ಮಾರ್ಗದರ್ಶನ ಮಾಡಬೇಕಾದವರು ದಾರಿ ತಪ್ಪಿಸುತ್ತಾ ಇದ್ದೀರಿ ಎಂಬ ಅಭಿಪ್ರಾಯವನ್ನು ಹೇಳಿದ್ದೀರಿ. ಆದರೆ ನಾನು ಎಂದೂ ನಿಮ್ಮನ್ನು ದಾರಿ ತಪ್ಪಿಸತಕ್ಕಂಥ ಗೋಜಿಗೆ ಹೋಗುವುದಿಲ್ಲ. ಇನ್ನು ಮಾನ್ಯ ಅಧ್ಯಕ್ಷರೇ, ಬೆಂಗಳೂರು ದೂರದರ್ಶನದ ಬಗ್ಗೆ ಅಲ್ಲಿರತಕ್ಕಂಥ ವ್ಯವಸ್ಥೆಯ ಬಗ್ಗೆ ಮಾತನಾಡಬೇಕೆಂಬ ಉದ್ದೇಶ ನನಗಿಲ್ಲ. ಅವರು ಒಂದು ಹೊಸ ಸಂಪ್ರದಾಯವನ್ನು ಅಳವಡಿಸಿ ಕೊಂಡಿದ್ದಾರೆ. 4ನೇ ತಾರೀಖು ಇಲ್ಲಿ ಪ್ರಶ್ನೋತ್ತರವಾದಾಗ ಸಾಮಾನ್ಯವಾಗಿ ಅಲ್ಲಿ ಅದಕ್ಕೆ ಪ್ರಶ್ನೆಗಳು ಮತ್ತು ಅದಕ್ಕೆ ಸರಕಾರದವರು ಉತ್ತರ ಕೊಡತಕ್ಕಂಥಾದ್ದು ಇರುತ್ತದೆ. ದೂರದರ್ಶನದವರು ಪ್ರಶ್ನೆ ಒಂದಕ್ಕೆ ಉತ್ತರ ಎಂದು ಹೇಳತಕ್ಕಂಥಾದ್ದು ಇರುತ್ತದೆ. ಪ್ರಶ್ನೆ ಒಂದಕ್ಕೆ ಉತ್ತರ ಎಂದು ಹೇಳುತ್ತಿರುತ್ತಾರೆಯೇ ಹೊರತು ಈ ಪ್ರಶ್ನೆ ಎತ್ತಿದವರು ಯಾರು ಎಂಬುದನ್ನು ಅವರು ಇವೊತ್ತಿನ ವರೆಗೂ ಹೇಳಲೇ ಇಲ್ಲ. ಇದು ಅವರ ಸಂಪ್ರದಾಯ ಅಥವಾ ನೀತಿ ಇರಬಹುದು. ಲೋಕಸಭೆಯಲ್ಲಿ ಇದು ಹೀಗೆಯೇ ಇದೆಯೆಂಬ ವಾದವೂ ಅವರದ್ದಿರಬಹುದು. ಆದರೆ 4ನೇ ತಾರೀಖು ಕೆಲವು ಪ್ರಶ್ನೆಗಳ ಬಗ್ಗೆ ಇಂಥವರ ಪ್ರಶ್ನೆಗೆ ಇಂಥದ್ದು ಉತ್ತರ ಎಂದು ಹೇಳಿದರು. ನನಗೆ ಸಂತೋಷ. ಏತಕ್ಕೆಂದರೆ ಈ ಸಂಪ್ರದಾಯ ಬದಲಾವಣೆ ಆಗಿದೆಯೋ ಏನೋ ಗೊತ್ತಿಲ್ಲ. ಬದಲಾವಣೆ ಆಗಿದ್ದರೆ ನನಗೆ ಬಹಳ ಸಂತೋಷ. ಅದರ ಬಗ್ಗೆ ನನ್ನದೇನೂ ತಕರಾರು ಇಲ್ಲ.ಅನೇಕ

ಸದಸ್ಯರುಗಳ ಪ್ರಶ್ನೆಗಳು ಬರುತ್ತವೆ. ಈ ಪ್ರಶ್ನೆಗಳು ಉದ್ಭವವಾದಾಗ ಇಂಥವರ ಪ್ರಶ್ನೆಗೆ ನೇರವಾಗಿ ಇಂಥವರು ಉತ್ತರ ಕೊಟ್ಟರು ಎಂದು ಹೇಳಿದರೆ, ನಮಗೆ ನ್ಯಾಯ ದೊರಕಿದ ಹಾಗೆ ಆಗುತ್ತದೆ. ಇಲ್ಲವಾದರೆ ಇದು ಹಕ್ಕುಚ್ಯುತಿಯಾಗುತ್ತದೆ. ಏತಕ್ಕೆಂದರೆ ಅವರು ಈ ರೀತಿಯಾಗಿ ತಾರತಮ್ಯ ಮತ್ತು ಪೂರ್ವಾಗ್ರಹ ಪೀಡಿತರಾಗಿ ಮಾಡತಕ್ಕ ವ್ಯವಸ್ಥೆಯಾಗುತ್ತದೆ. ಇದು ಹೀಗೆ ಆಗಬಾರದು. ಈ ಬಗ್ಗೆ ನಾನು ಸ್ಪಷ್ಟವಾಗಿ ತಮ್ಮ ಮೂಲಕ ಹಕ್ಕುಚ್ಯುತಿಯನ್ನು ತರಬೇಕೆಂಬ ಉದ್ದೇಶವನ್ನು ಹೊಂದಿದ್ದೇನೆ. ತಾವು ಅದನ್ನು ಮಂಡಿಸಲು ಒಪ್ಪಿಗೆ ಕೊಟ್ಟರೆ ನಾನು ಹಕ್ಕುಚ್ಯುತಿಯನ್ನು ಮಂಡಿಸಲು ತಯಾರಾಗಿದ್ದೇನೆ.

**11.50 ಎ.ಎಂ**

ಈ ಬಗ್ಗೆ ತಾವು ಹೆಚ್ಚಿನ ಒತ್ತು ಕೊಟ್ಟು ಕೇಂದ್ರದ ಜೊತೆ ಮಾತನಾಡಿ ಆ ವ್ಯವಸ್ಥೆಯೂ ನಿಮ್ಮ ಕಾಲದಲ್ಲಾಗಬೇಕೆಂಬುದು ನಮ್ಮ ಕಳಕಳಿಯ ಮನವಿ. ಈಗ ತಮಿಳುನಾಡಿನಲ್ಲಿ ತಮಗೆ ಗೊತ್ತಿರುವಂತೆ ಹಿಂದಿ ಸುದ್ದಿ ರದ್ದಾಗಿದೆ. ಕರ್ನಾಟಕದಲ್ಲಿ ಪ್ರಾದೇಶಿಕ ಸುದ್ದಿ ಕೇವಲ ಒಂದು ಸಾರಿ ಕೊಡುತ್ತಾರೆ. ನಾನು ಏನು ಹೇಳುತ್ತೇನೆ, ನಮಗೂ ಹಿಂದಿ ಬೇಕೆಂಬ ಒತ್ತಾಯ ಏನಿಲ್ಲ, ಆದ್ದರಿಂದ ಇಲ್ಲಿಯೂ ಸಹ ಬೆಳಿಗ್ಗೆ ಸಂಜೆ ಪ್ರಾದೇಶಿಕ ಸುದ್ದಿ ಪ್ರಸಾರ ಮಾಡುವುದು ಅತಿ ಮುಖ್ಯ. ಮತ್ತು ಸಂದರ್ಶನ ಮಾಡುವಾಗ ಅವರಿಗೆ ಬೇಕಾದ ಇಬ್ಬರನ್ನು ಸಂದರ್ಶನ ಮಾಡಿಕೊಂಡು ಹೋಗುವುದೇನಿದೆ ಇದು ಒಳ್ಳೆಯದಲ್ಲ. ಇಲ್ಲಿ ದೊಡ್ಡ ಮುಖಂಡರೆಲ್ಲಾ ಇದ್ದಾರೆ ಅವರ ಅಭಿಪ್ರಾಯ ಏನೆಂದು ಕೇಳುವ ಬದಲು ಯಾರೋ ಬೇರೆಯವರನ್ನು ಕರೆದು ಕೇಳುವ ವ್ಯವಸ್ಥೆ ಸಾಧುವಾದುದಲ್ಲವೆಂದು ಮನವಿ ಮಾಡಿಕೊಳ್ಳುತ್ತೇನೆ. ಸಂದರ್ಶನಗಳು ಯಾವರೀತಿ ನಡೆಯುತ್ತವೆ ಎಂದರೆ ಹಿಂದೆ ನಾನು ಗ್ರಾನೈಟ್ ಬಗ್ಗೆ ಸಮಗ್ರವಾಗಿ ಹೋರಾಟ ಮಾಡಿದ್ದೇನೆ ಆದರೆ ದೂರದರ್ಶನದವರು ಯಾರನ್ನು ಸಂದರ್ಶಿಸಿದರು ಎಂದರೆ ಗ್ರಾನೈಟ್ ಲೂಟಿಕೋರರ ಸುದರ್ಶನ ಮಾಡಿದರೇ ಹೊರತು, ಗ್ರಾನೈಟ್‌ನಿಂದ ಅನ್ಯಾಯವಾಗುತ್ತದೆ, ನಿಸರ್ಗಸಂಪತ್ತು ನಾಶವಾಗುತ್ತದೆ ಎಂದು ಹೇಳಿದ ನನ್ನನ್ನು ಒಂದು ದಿವಸವಾದರೂ ಕರೆದು ಹೇಳಿ ಎಂದು ವ್ಯವಸ್ಥೆ ಮಾಡಲಿಲ್ಲ. ಹೀಗೆ ಅನೇಕ ಅಕ್ರಮಗಳು ನಡೆದಿವೆ. ಕೆಲವರ ಮೇಲೆ ಸಿಬಿಐ ಕೇಸಾಗಿ ಸಸ್ಪೆಂಡಾಗಿದ್ದಾರೆ, ಆ ಕೇಸ್‌ಗಳು ಏನಾಗಿವೆ ಎಂಬುದು ಗೊತ್ತಿಲ್ಲ. ಆ ವ್ಯವಸ್ಥೆಯನ್ನೇ ಬದಲಾವಣೆ ಮಾಡುವ ಬಗ್ಗೆ ಸಮಗ್ರವಾಗಿ ಚರ್ಚೆಯಾಗಬೇಕಾಗಿದೆ. ನಾನು ತಮ್ಮಲ್ಲಿ ಅತ್ಯಂತ ಕಳಕಳಿಯಿಂದ...

ಅಧ್ಯಕ್ಷರು : ನಾನು ಏನು ಹೇಳುತ್ತೇನೆಂದರೆ ಅವರು ಯಾರಿದ್ದಾರೋ ಅದನ್ನು ಕರೆಸೋಣ ನನ್ನ ಕಛೇರಿಗೆ ತಾವೂ ಬನ್ನಿ, ಹಕ್ಕುಚ್ಯುತಿ ಬೇಡ, ಕುಳಿತು ಅವರ ವ್ಯವಸ್ಥೆಯನ್ನು ಸರಿಪಡಿಸಿಕೊಳ್ಳಬೇಕೆಂದು ಸಲಹೆ ಸೂಚನೆ ಕೊಡೋಣ.

ಶ್ರೀ ವಾಟಾಳ್ ನಾಗರಾಜ್ : ಬೆಂಗಳೂರು ದೂರದರ್ಶನ ಎಂದರೆ ಅಲ್ಲಿ ಕನ್ನಡವೇ ಬುಡ ಮೇಲಾಗಿದೆ, ಅದು ಯಾವುದೋ ದುರದರ್ಶನ ಇದ್ದ ಹಾಗೆ ಇದೆ, ಕಳಪೆ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಾರೆ ಅದರಿಂದ ನಮಗೆ ಅತ್ಯಂತ ನೋವಾಗುತ್ತದೆ ಇದು ಒಳ್ಳೆಯ ಮಾರ್ಗದರ್ಶನವಲ್ಲ.

ಅಧ್ಯಕ್ಷರು : ನನ್ನ ಕಛೇರಿಗೆ ಅವರನ್ನು ಕರೆಸುತ್ತೇನೆ. ಎಲ್ಲಾ ವಿಚಾರ ಚರ್ಚೆ ಮಾಡೋಣ. ಅವರು ಕೇಂದ್ರದ ಅದೀನಕ್ಕೆ ಒಳಪಡುತ್ತಾರೆ. ನಮ್ಮಲ್ಲಿ ಕೆಲಸ ಮಾಡುವಾಗ ಇಲ್ಲಿನ ಪರಿಸರಕ್ಕೆ ಹೊಂದಿಕೊಂಡು ಇಲ್ಲಿಯ ಪರಿಸ್ಥಿತಿಗೆ ಹೊಂದಿಕೊಂಡು ನ್ಯಾಯ ದೊರಕಿಸಿಕೊಡುವಂತಹ ರೀತಿಯಲ್ಲಿ ಎಲ್ಲರಿಗೂ ಪ್ರಾಶಸ್ತಿಸಿಗುವ ರೀತಿಯಲ್ಲಿ ಕೆಲಸ ಮಾಡಬೇಕೆಂದು ತಮ್ಮ ಸಮುಖದಲ್ಲೇ ಅವರಿಗೆ ಹೇಳೋಣ. ಕರೆಸಿ ಚರ್ಚೆ ಮಾಡೋಣ. ದಯಮಾಡಿ ಹಕ್ಕುಚ್ಯುತಿ ಬೇಡ.

ಶ್ರೀ ವಾಟಾಳ್ ನಾಗರಾಜ್ : ಆಯಿತು.

ಅಧ್ಯಕ್ಷರು : ವಸಂತ ಸಾಲಿಯಾನರವರೇ, ತಮಗೇನು ಹೇಳುತ್ತಿದ್ದೇನೆಂದರೆ ಶೂನ್ಯವೇಳೆಯಲ್ಲಿ ಪ್ರಸ್ತಾಪ ಮಾಡಬೇಕಾಗಿದ್ದರೆ ತಾವು ಸದನ ಪ್ರಾರಂಭವಾಗುವುದಕ್ಕೆ ಮುಂಚೆ ಬಂದು ನನಗೆ ಭೇಟಿ ಮಾಡಿ ಏನು ವಿಷಯ ಎಂದು ಹೇಳಬೇಕು. ಇಲ್ಲಿ ಯಾರ್‍ಯಾರಿಗೆ ಅವಕಾಶ ಕೊಟ್ಟಿದ್ದೇನೆ, ಇವರೆಲ್ಲಾ ಮೊದಲೇ ಬಂದು ನನ್ನನ್ನು ಭೇಟಿಯಾಗಿ ಚರ್ಚೆ ಮಾಡಿರುವವರು. ತಾವು ಕೆಲಸ ಮಾಡಿಲ್ಲ. ಈಗ ಸಡನ್ನಾಗಿ ...........

ಶ್ರೀ ವಸಂತ ವಿ. ಸಾಲಿಯಾನ : ಅಧ್ಯಕ್ಷರೇ, ಇಂಪಾರ್ಟೆಂಟ್ ಸಬ್ಜೆಕ್ಟ್ ಇರುತ್ತದೆ.

ಅಧ್ಯಕ್ಷರು : ಕುಳಿತುಕೊಳ್ಳಿ, ಇಂಪಾರ್ಟೆಂಟ್ ಸಬ್ಜೆಕ್ಟ್‌ಗೇ ಹೇಳುವುದು, ಕನಿಷ್ಠ ಸೌಜನ್ಯ ತೋರಿಸಿ ನಮಗೆ ತಿಳಿಸಬೇಕಾಗುತ್ತದೆ. ಅವರು ಮೊದಲೇ ಬಂದು ಹೇಳಿದ್ದಾರೆ.

ಶ್ರೀ ವಸಂತ ವಿ.ಸಾಲಿಯಾನ : ಆಯಿತು, ಈಗ ಬಂದ ಮೇಲೆ ನಮಗೆ ತಿಳಿಯಿತು. ಅದನ್ನು ಪ್ರಸ್ತಾಪ ಮಾಡಬೇಕಲ್ಲಾ ಅಧ್ಯಕ್ಷರೇ, ಇದು ಒಂದು ಜಿಲ್ಲೆಯ ಪ್ರಶ್ನೆ ಅಧ್ಯಕ್ಷರೇ.

ಅಧ್ಯಕ್ಷರು : ದಯಮಾಡಿ ಕುಳಿತುಕೊಳ್ಳಿ.

ಶ್ರೀ ವಸಂತ ವಿ. ಸಾಲಿಯಾನ : ಇಲ್ಲ ನನಗೆ ಅವಕಾಶ ಕೊಡಬೇಕು ತಾವು.

ಅಧ್ಯಕ್ಷರು : ಸಗೀರ್ ಅಹಮದ್, ತಾವು ಮಾತನಾಡಿ. ನೀವು ಎಲ್ಲರೂ ಬಂದು ತಿಳಿದುಕೊಳ್ಳಬೇಕಲ್ಲಾ ಪ್ರೊಸೀಜರ್ ಏನಿದೆ ಎಂದು. ಇಂಪಾರ್ಟೆಂಟ್ ಅಂದರೆ ಏನು ಮಾಡುವುದಕ್ಕಾಗುತ್ತದೆ ?

Expunged as ordered by the Chair.

ಶ್ರೀ ವಾಟಾಳ್ ನಾಗರಾಜ್ : ಇದು ದೌರ್ಜನ್ಯದ ಪರಮಾವಧಿ ಎಲ್ಲಕ್ಕೂ ಒಂದು ಮಿತಿ ಇದೆ, ಅಧ್ಯಕ್ಷರ ಮೇಲೆ ದಬ್ಬಾಳಿಕೆ ಆಯಿತು.

ಶ್ರೀ ಬಿ.ಎಸ್. ಯಡಿಯೂರಪ್ಪ : ಈಗ ಈ ಸದನವನ್ನು ಇಷ್ಟು ಒಳ್ಳೆಯ ರೀತಿಯಿಂದ ಅಧ್ಯಕ್ಷರು ನಡೆಸಿಕೊಂಡು ಹೋಗುತ್ತಿದ್ದಾರೆ. ಅವರ್‍ಯಾಕೆ ತಾಳ್ಮೆ ಕಳೆದುಕೊಂಡರೋ ನನಗೆ ಗೊತ್ತಿಲ್ಲ, ಅವರು ನೇರವಾಗಿ ಮುಂದೆ ಹೋಗುವುದು ಬೇಡ, ಕ್ಷಮಾಪಣೆ ಕೇಳಲಿ

ಗೊಂದಲ

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಅಧ್ಯಕ್ಷರೇ, ಈಗ ಏನು ಘಟನೆ ನಡೆದಿದೆ ಅದಕ್ಕೆ ನಾನು ವಿಷಾದವನ್ನು ವ್ಯಕ್ತಪಡಿಸುತ್ತೇನೆ. ತಾವು ಕ್ಷಮಿಸಬೇಕು.

ಏನೋ ಒಂದು ಆವೇಶದ ಭರದಲ್ಲಿ ಮಾತನಾಡಿದ್ದಾರೆಂದು ನಾನು ತಿಳಿದುಕೊಂಡಿದ್ದೇನೆ. ಅದಕ್ಕಾಗಿ ಅವರ ಪರವಾಗಿ ನಾನು ಕ್ಷಮೆ ಕೇಳುತ್ತೇನೆ.

ಗೊಂದಲ

ಡಾ॥ ಜೀವರಾಜ ಆಳ್ವ : ಆ ಪಕ್ಷದ ನಾಯಕರೇ ಪಕ್ಷದ ಪರವಾಗಿ ಕ್ಷಮಾಪಣೆ ಕೇಳುತ್ತಿದ್ದಾರೆ It is a gesture he has shown.

ಪಕ್ಷದಪರವಾಗಿ ನಾಯಕರೇ ಎದ್ದು ಕ್ಷಮೆ ಕೇಳುವುದನ್ನು ಅವರು ಅರ್ಥಮಾಡಿಕೊಳ್ಳುತ್ತಾರೆ. ಅವರೇ ಕೇಳಬೇಕೆಂದಿಲ್ಲ. We are dumb founded.

ಶ್ರೀ. ಎಂ. ಮಲ್ಲಿಕಾರ್ಜುನ ಖರ್ಗೆ : ಅವರು ಕೇಳಬಾರದು ಎಂದು ಹೇಳಲು ನಾನು ನಿಂತಿಲ್ಲ. ಆದರೆ ನಿಮ್ಮ ಮನಸಿಗೆ ನೋವು ಮಾಡಬಾರದು ಮತ್ತು ಈ ಸದನದ ಘನತೆ ಗೌರವವನ್ನು ಕಾಪಾಡಿಕೊಂಡು ಹೋಗಬೇಕೆಂಬುದು ನಮ್ಮೆಲ್ಲರ ಸದಿಚ್ಛೆ ಇದೆ. ಅದರಲ್ಲಿ ನಾವೇನೂ ಅಥವಾ ನಮ್ಮ ಪಕ್ಷದ ಸದಸ್ಯರು ಬೇರೆ ಅಲ್ಲ. ಆದರೆ ಯಾವ ಕ್ಷಣಕ್ಕೆ ಅದು ರೀತಿಯಾಯಿತೋ ಗೊತ್ತಿಲ್ಲ. ಏಕೆಂದರೆ ಈ ಸದನದಲ್ಲಿ ಇಲ್ಲಿಯುವರೆಗೂ ಎಂದೂ ಅವರು ಈ ರೀತಿಯು ವರ್ತನೆ ಮಾಡಿದಂಥವರಲ್ಲ. ಇದು 4ನೇ ಸಲ ಅವರು ಈ ಸದನಕ್ಕೆ ಚುನಾಯಿತರಾಗಿ ಬಂದಿರುವುದು. ಅದ್ದರಿಂದ ಅಧ್ಯಕ್ಷರು ತುರ್ತಿಗೆ ಇದರಿಂದ ನೋವಾಗಿದೆ, ಅದನ್ನು ತಾವು ಕ್ಷಮಿಸಬೇಕೆಂದು ಹೇಳಿ ನನ್ನ ಪಕ್ಷದ ಪರವಾಗಿ ಮತ್ತು ಅವರ ಪರವಾಗಿ ನಾನು ಕೇಳಿಕೊಳ್ಳುತ್ತಿದ್ದೇನೆ ಅದ್ದರಿಂದ ಇನ್ನು ಮುಂದೆ ಕಾರ್ಯಕ್ರಮವನ್ನು ತಾವು ಸುಗಮವಾಗಿ ನಡೆಸಬೇಕು. ಅವರೂ ಕೂಡ ವಿಷಾದ ವ್ಯಕ್ತಪಡಿಸುತ್ತಾರೆ. ಅದ್ದರಿಂದ ತಾವು ದಯವಿಟ್ಟು ಮನಸಿನಲ್ಲಿ ಯಾವ ಭಾವನೆಯನ್ನೂ ಇಟ್ಟುಕೊಳ್ಳಬಾರದೆಂದು ವಿನಂತಿಸುತ್ತೇನೆ.

ಶ್ರೀ ಎಂ. ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ) : ಮಾನ್ಯ ಅಧ್ಯಕ್ಷರೇ, ಈ ಸದನದ ಗೌರವ ಉಳಿಸಬೇಕಾಗಿರುವುದು ನಮ್ಮೆಲ್ಲರ ಕರ್ತವ್ಯ. ಅಧ್ಯಕ್ಷರು ಸದನವನ್ನು ಮತ್ತು ಘನತೆಯನ್ನು ಎತ್ತಿಹಿಡಿಯುವ ಸಂದರ್ಭದಲ್ಲಿ ನಡವಳಿಕೆಗಳನ್ನು ಯಾವರೀತಿ ನಡೆಸಿಕೊಂಡು ಹೋಗಬೇಕೆಂಬ ಬಗ್ಗೆ ಪರಮೋಚ್ಚ ಅಧಿಕಾರ ಇರುವುದು ಅಧ್ಯಕ್ಷರಿಗೆ. ಅವರು ಯಾವ ಸಂದರ್ಭದಲ್ಲಿ ಯಾವುದೇ ಮಾತನಾಡಿದರೂ ಸಹ ಕೂಡ ಅವರ ಕರ್ತವ್ಯ ಏನೂ ನಾವು ತಿಳಿದುಕೊಳ್ಳಬೇಕಾಗುತ್ತದೆ. ಆದರೆ ಈ ಸಂದರ್ಭದಲ್ಲಿ ಅಧ್ಯಕ್ಷರು ಪದೇಪದೇ ಹೇಳಿದರೂ ಕೂಡ ಅವರ ಮಾತಿಗೆ ಪುನ : ಪ್ರತಿ ಮಾತನಾಡುವ ಮುಖಾಂತರ ಅಧ್ಯಕ್ಷರ ಆಜ್ಞೆಯನ್ನು ಕೂಡ ಉಲ್ಲಂಘನೆ ಮಾಡುವ ಮಟ್ಟಕ್ಕೆ ಹೋಗುತ್ತಿರುವುದು ಈ ಸಭೆಯ ಹಕ್ಕುಚ್ಯುತಿಯು ಪ್ರಶ್ನೆಯಾಗುತ್ತದೆ ಎಂಬುದನ್ನು ನಾವು ಯಾರೂ ಮರೆಯಬಾರದು. ಅದರಲ್ಲೂ ಶ್ರೀ ವಸಂತರ ಸಾಲಿಯಾನ್‌ರವರು ಹಿರಿಯ ಸದಸ್ಯರು. ಸಚಿವರಾಗಿ ಕೆಲಸ ಮಾಡಿರುವವರು ಇಂಥವರು ಸಂಸದೀಯ ವ್ಯವಹಾರ ಮತ್ತು ಘನತೆಗೆ ಬಹಳ ಕುಂದುತರುವಂತಹ ಮಾತು ಅದು ಎಂದು ಹೇಳಲೇಬೇಕಾಗುತ್ತದೆ. ಇವತ್ತು ಅಧ್ಯಕ್ಷರಿಗೆ ಅವಮಾನ ಮೂಡಿದಂತೆ ವರ್ತಿಸಿದರೆ ಅದು ನಮಗೆ ಅವಮಾನ

ಮಾಡಿದಂತೆ ಯಾವುದೇ ವಿಚಾರದಲ್ಲಿ ಅಧ್ಯಕ್ಷರು ಹೇಳಿದ ಮಾತಿಗೆ ನಾವು ವಿರುದ್ಧ ಮಾತಾಡಿದರೆ ಅದು ಸಭೆಗೆ ಅಗೌರವ ತರುವಂಥದ್ದು, ನಮಗೆ ನಾವೇ ಅಗೌರವ ಮಾಡಿಕೊಳ್ಳುವಂಥದ್ದು ಆದ್ದರಿಂದ ಶ್ರೀ ವಸಂತ ಸಾಲಿಯಾನರವರು ಅಂತಹ ಸದಸ್ಯರಲ್ಲ ಅವರು, ಅವರ ವರ್ತನೆ ಅತ್ಯಂತ ಖಂಡನೀಯವಾದ ವರ್ತನೆ. ಅದನ್ನು ಸದನಖಂಡಿತವಾಗಿ ಖಂಡಿಸಲೇಬೇಕಾಗುತ್ತದೆ. ಆದರೆ ಈ ಸಂದರ್ಭಧಲ್ಲಿ ಕಾಂಗ್ರೆಸ್ ಪಕ್ಷದ ನಾಯಕರಾಗಿರುವ ಶ್ರೀ ಖರ್ಗೆಯವರು ಕೂಡ ಮನನೊಂದಿದೆ, ನಮಗೆಲ್ಲರಿಗೂ ಮನನೊಂದಿದೆ, ಖರ್ಗೆಯವರು ಪಕ್ಷದವತಿಯಿಂದ ಕ್ಷಮಾಪಣೆ ಕೇಳಿದ್ದಾರೆ. ಅಧ್ಯಕ್ಷರೇ, ಇಂತಹ ಘಟನೆಗಳು ಯಾರೇ ಆಗಿರಲಿ ಯಾವ ಪಕ್ಷದವರೇ ಸೇರಿರಲಿ ಸಂಬವಿಸಿದಾಗ ತಕ್ಷಣ ಕಟ್ಟುನಿಟ್ಟಿನ ಕ್ರಮ ಕೈಗೊಂಡು ಈ ಸಭೆಯ ಘನತೆಯನ್ನು ಉಳಿಸಬೇಕಾದಂತಹ ಅತ್ಯಂತ ಪರಮೋಚ್ಛ ಅಧಿಕಾರ ಹೊಂದಿರುವವರು ತಾವು ಇದರಿಂದ ತಮ್ಮ ಮನಸ್ಸಿಗೆ ನೋವಾಗಿದೆ, ನಾನೂ ಕೂಡ ಇದನ್ನು ಖಂಡಿಸುತ್ತೇನೆ. ನಾನು ಇವತ್ತು ಪಾರ್ಲಿಮೆಂಟರಿ ಅಫೇರ್ಸ್ ಮಂತ್ರಿಯಾಗಿದ್ದೇನೆ. ಈಗ ನಡೆದಿರುವ ಘಟನೆ ಯಾವುದು ಇದೆ, ಈ ಘಟನೆಯಿಂದ ನಿಮ್ಮ ಮನಸ್ಸಿಗೆ ಆಗಿರುವ ನೋವಿಗೆ ನಾನೂ ಕೂಡ ಈ ಸಭೆಯ ಮುಖಾಂತರ ನಿಮ್ಮ ಕ್ಷಮಾಪಣೆಯನ್ನು ಕೋರುತ್ತೇನೆ. ಈ ಕೆಲಸವನ್ನು ನಾವು ಮಾಡುತ್ತಿದ್ದೇವೆ. ಆದ್ದರಿಂದ ಶ್ರೀಮಾನ್ ವಸಂತ ಸಾಲಿಯಾನರವರು ಹಿರಿಯ ಸದಸ್ಯರು ಮಂತ್ರಿಗಳಾಗಿದ್ದವರು ನಿಮ್ಮ ವರ್ತನೆಯನ್ನು ತಾವೇ ಇವತ್ತು ಆತ್ಮಾವಲೋಕನ ಮಾಡಿಕೊಳ್ಳಿ. ಇದು ಸರಿಯೇ ಎಂದು. ಆದ್ದರಿಂದ ಆಗಿರುವ ನೋವಿಗೆ ನಾವು ಕೂಡ ಭಾಗಿಗಳಾಗಿದ್ದೇವೆ. ಇವತ್ತು ನಾನು ನನ್ನ ಕರ್ತವ್ಯವನ್ನು ಮಾಡಬೇಕಾಗಿತ್ತು. ನಾನು ನನ್ನ ಕರ್ತವ್ಯವನ್ನು ಮಾಡುವ ಸಂದರ್ಭದಲ್ಲಿ ರಿರುವನ್ನು ಮಂಡಿಸುವುದಕ್ಕೆ ನಾನು ಈಗಾಗಲೇ ಬರವಣಿಗೆಯನ್ನು ಮಾಡಿದ್ದೆ. ಆದರೆ ಆ ಪಕ್ಷದ ನಾಯಕರಾಗಿರುವ ಖರ್ಗೆಯವರು ಹೇಳಿದರು. ಈ ಸಂದರ್ಭದಲ್ಲಿ ಪಕ್ಷದ ವತಿಯಿಂದ ಅವರು ಕ್ಷಮಾಪಣೆಯನ್ನು ಕೇಳುವ ಹಿನ್ನೆಲೆಯಲ್ಲಿ ಶ್ರೀಮಾನ್ ವಸಂತ ಸಾಲಿಯಾನರವರು ಮಾಡಿರುವ ಈ ಒಂದು ಕ್ರಮ ಯಾವುದು ಇದೆ, ಇದನ್ನು ತಾವು ಸಮರ್ಥನೆ ಮಾಡುವುದಿಲ್ಲ ಎಂದು ನಾನು ಭಾವಿಸುತ್ತೇನೆ. ಆದರೆ ಇಂಥ ವರ್ತನೆಗೆ ನಾವು ಅವಕಾಶವನ್ನು ಕೊಡಬಾರದು ಎಂದು ಹೇಳುವ ಧಾಟಿಯಲ್ಲಿ ತಾವೂ ಕೂಡ ಸಂಪೂರ್ಣವಾಗಿ ಅನ್ ಕಂಡೀಷನಲ್ ಅಪಾಲಜಿಯನ್ನು ತಾವು ಸಭಾಧ್ಯಕ್ಷರಿಗೆ ಒಪ್ಪಿಸುವ ಕರ್ತವ್ಯ ಕೂಡ ತಮ್ಮ ಮೇಲಿದೆ ಎಂದು ಈ ಸಂದರ್ಭದಲ್ಲಿ ಹೇಳುತ್ತಿದ್ದೇನೆ. ಆ ಕೆಲಸವನ್ನು ಮಾಡಬೇಕು.

ಶ್ರೀ ವಸಂತ ವಿ.ಸಾಲಿಯಾನ : ಮಾನ್ಯ ಅಧ್ಯಕ್ಷರೇ, ತಮಗೆ ಅವಮಾನ ಮಾಡಬೇಕು ಎಂದು ನಾನು ನಿಲ್ಲಲಿಲ್ಲ. ಒಂದು ಪ್ರಶ್ನೆ ಏನೆಂದರೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಮಹತ್ವವಾದ ತೊಂದರೆಯಿತು. ಅದೇನೆಂದರೆ ಹತ್ತು ಸಾವಿರ ನೇಕಾರರ ಬಗ್ಗೆ ..........

(ಗೊಂದಲ)

ಒಬ್ಬ ಮಾನ್ಯ ಸದಸ್ಯರು : ಮೊದಲು ನೀವು ಕ್ಷಮಾಪಣೆ ಕೇಳಿ.

ಶ್ರೀ ಎಂ.ಸಿ. ನಾಣಯ್ಯ : ತಾವು ಮಾಡಿರುವ ವರ್ತನೆಗೆ ಕಾರಣಗಳೇನು ಎಂದು ಕೇಳುವುದಕ್ಕೆ ನಾವು ತಾಯಾರಾಗಿಲ್ಲ. ನೀವು ಕಾರಣವನ್ನು ಹೇಳಬಾರದು. ಕಾರಣಗಳನ್ನು ಕೊಟ್ಟು ಮಾತನಾಡುವುದು ಸರಿಯಲ್ಲ. ನಿಮ್ಮ ಪಕ್ಷದ ನಾಯಕರು ಎದ್ದು ಪಕ್ಷದ ವತಿಯಿಂದ ಅವರು ಕ್ಷಮಾಪಣೆಯನ್ನು ಕೇಳಿದಾಗ ತಾವು ಇದಕ್ಕೆ ಸಮರ್ಥನೆ ಮಾಡುವುದು, ಅದಕ್ಕೆ ಕಾರಣಗಳನ್ನು ಹೇಳುವುದು ಸರಿಯಲ್ಲ.

ಶ್ರೀ ವಸಂತ ವಿ.ಸಾಲಿಯಾನ : ನಾನು ಸಮರ್ಥನೆ ಮಾಡಿಕೊಳ್ಳುತ್ತಿಲ್ಲ.

ಶ್ರೀ ಎಂ.ಸಿ.ನಾಣಯ್ಯ : ನಾವೆಲ್ಲಾ ಕೇಳಿದ್ದೇವೆ. ನಾವೆಲ್ಲಾ ಸದನದಲ್ಲಿದ್ದೆವು. ನಾವೆಲ್ಲಾ ಸದನದಲ್ಲಿದ್ದಾಗ ತಾವು ಮಾಡಬೇಕಾಗಿರುವ ಒಂದೇ ಕೆಲಸ, ತಾವು ಆ ಕೆಲಸವನ್ನು ಮಾಡಿ ಎಂದು ಈ ಸಂದರ್ಭದಲ್ಲಿ ಕೇಳುವುದಕ್ಕೆ ಇಚ್ಛೆಪಡುತ್ತೇವೆ.

ಶ್ರೀವಸಂತ ವಿ.ಸಾಲಿಯಾನ : ಮಾನ್ಯ ಅಧ್ಯಕ್ಷರೇ, ನನ್ನ ಒಂದು ಬಾವನೆ, ತಮ್ಮ ಜಿಲ್ಲೆಯ ಪ್ರಾಬ್ಲಂಸ್, ಅದಕ್ಕೆ ಬಹಳ ಮಹತ್ವದ ಒಂದು ಪ್ರಶ್ನೆ. ಅದನ್ನು ಮಾನ್ಯ ಅಧ್ಯಕ್ಷರ ಗಮನಕ್ಕೆ ತರಬೇಕು ಎನ್ನುವ ರೀತಿಯಲ್ಲಿ ಆ ವಿಚಾರವನ್ನು ಹೇಳಬೇಕು ಎಂದು ಎದ್ದೆ. ಆದರೆ ಅಧ್ಯಕ್ಷರಿಂದ ಅದಕ್ಕೆ ಪರ್ಮಿಷನ್ ಸಿಗಲಿಲ್ಲ. ನಾನು ತಮಗೆ ನೋವುಂಟುಮಾಡಬೇಕು ಎಂದು ಯಾವುದೇ ಒಂದು ವಿಚಾರ ನನ್ನ ಮನಸ್ಸಿನಲ್ಲಿ ಇರಲಿಲ್ಲ. ಆದರೆ ತಮಗೆ ನಾನು ಏನು ಮಾತನಾಡಿದ್ದೇನೆ, ತಮಗೆ ನೋವಾಗಿದೆ. ಅದಕ್ಕೆ ನಾನು ಕ್ಷಮೆಯಾಚಿಸುತ್ತೇನೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ಮಾನ್ಯ ಅಧ್ಯಕ್ಷರೆ, ನಾನೂ ಸಹ ವಿರೋಧ ಪಕ್ಷದ ನಾಯಕನಾಗಿ ನನ್ನದೂ ಒಂದು ಕರ್ತವ್ಯ ಇದೆ. ದಯಮಾಡಿ ಈವತ್ತು ಘಟನೆ ಏನು ಆಯಿತು, ಇದು ಆಗಬಾರದಾಗಿತ್ತು. ನಾನು ಸಹ ಈ ಭಾಗದಿಂದ ಏನಾಗಿದೆ ಇನ್ನು ಮುಂದೆ ಆಗದಹಾಗೆ ನೋಡಿಕೊಳ್ಳುವ ವ್ಯವಸ್ಥೆಯನ್ನು ನಾವು ಮಾಡುತ್ತೇವೆ. ಅದಕ್ಕೆ ನಾವು ವಿಷಾದವನ್ನು ವ್ಯಕ್ತಪಡಿಸುತ್ತೇವೆ. ಮುಂದೆ ತಾವು ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಿಕೊಂಡು ಹೋಗುತ್ತೀರೆಂದು ನಂಬಿರುತ್ತೇವೆ.

ಶ್ರೀ ವಾಟಾಳ್ ನಾಗರಾಜ್ : ತಮ್ಮ ಮೇಲೆ ಏನು ಪದವನ್ನು ಬಳಸಿದರು ಅದನ್ನು ಕಡತದಿಂದ ಕೂಡಲೇ ತೆಗೆದುಬಿಡಿ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ :- ಆ ಮಾತನ್ನು ಕಡತದಿಂದ ತಾವು ಕೂಡಲೇ ತೆಗೆದು ಬಿಡಿ. ಇದಾದನಂತರ ಅವರಿಗೆ ಎರಡು ನಿಮಿಷ ಅವಕಾಶ ಮಾಡಿಕೊಡಿ.

ಶ್ರೀ ವಾಟಾಳ್ ನಾಗರಾಜ್ : ತಾವು ಬಹಳ ನೋವಿನ ರೀತಿಯಲ್ಲಿ ತೋರುತ್ತಿದ್ದೀರಿ. ತಾವು ಆ ನೋವನ್ನು ಮರೆತುಬಿಡಿ. ದಯಮಾಡಿ ನಮ್ಮೆಲ್ಲರ ಪರವಾಗಿ ಕ್ಷಮಾಪಣೆಯನ್ನು ಕೇಳುತ್ತೇವೆ. ತಾವು ದಯಮಾಡಿ ಮನಸ್ಸಿಗೆ ಬೇಜಾರು ಮಾಡಿಕೊಳ್ಳಬೇಡಿ ಎಂದು ಅತ್ಯಂತ ಕೈಮುಗಿದು ಪ್ರಾರ್ಥನೆ ಮಾಡಿಕೊಳ್ಳುತ್ತೇವೆ. ತಾವು ಸ್ವಲ್ಪ ಲವಲವಿಕೆಯಿಂದ ಇರಬೇಕು.

ಡಾ॥ ಜೀವರಾಜ ಆಳ್ವ : ತಾವು ಸ್ವಲ್ಪ ನಗಬೇಕು.

ಅಧ್ಯಕ್ಷರು : ಯಾರಾದರೂ ನನ್ನನ್ನು ಕ್ಷಮೆ ಕೇಳಬೇಕು ಎಂದು ನಾನು ಬಯಸುವುದಿಲ್ಲ. ಅಷ್ಟು ನಾನು ದೊಡ್ಡವನೂ ಅಲ್ಲ. ನಾನು ಈ ಸದನದ ಒಳಗಡೆ ಬರುವುದಕ್ಕೆ ಬಹಳ ಪ್ರಯತ್ನಪಟ್ಟು ಬಂದಿದ್ದೇನೆ. ಇದನ್ನೇ ಒಂದು ದೊಡ್ಡ ಪುಣ್ಯ ಎಂದು ತಿಳಿದುಕೊಂಡಿದ್ದೇನೆ. ಪ್ರತಿಯೊಬ್ಬರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸಾಧ್ಯವಾದಷ್ಟು ಮಟ್ಟಿಗೆ ನಿಮ್ಮೆಲ್ಲರರನ್ನೂ ನಾನು ವಿಶ್ವಾಸಕ್ಕೆ ತೆಗೆದು ಕೊಂಡು ಕೆಲಸ ಮಾಡುತ್ತಿದ್ದೇನೆ. ಯಾವುದೇ ಈ ಸಮಸ್ಯೆ ಇರಲಿ, ಅದಕ್ಕೆ ನಿಯಮಾವಳಿಗಳಲ್ಲಿ ಅವಕಾಶ ಕಲ್ಪಿಸಿಕೊಂಡು ಎಲ್ಲರನ್ನೂ ಹೊಂದಿಸಿಕೊಂಡು ಹೋಗಬೇಕು. ಅವರಿಗೆ ನಾನು ಅದನ್ನೇ ಹೇಳಿದೆ. ಜೀರೊ ಅವರ್‌ನಲ್ಲಿ ಪ್ರಸ್ತಾಪ ಮಾಡಬೇಕಾಗಿದ್ದರೂ ಸಹಾ ಅದನ್ನು ಪ್ರಾರಂಭವಾಗುವ ಮೊದಲೇ ಬಂದು ಒಂದು ಸೂಚನೆ ಕೊಟ್ಟಿದ್ದರೆ ನಾನು ಅವಕಾಶವನ್ನು ಮಾಡಿ ಕೊಡುತ್ತಿದ್ದೆ. ಮೊದಲೇ ಬಂದು ಮಾತನಾಡಿ ಹೇಳಿದವರ ಒಂದು ಪಟ್ಟಿಯನ್ನು ಮಾಡಿ ಕೊಂಡು ಅದರ ಪ್ರಕಾರ ಒಂದೊಂದಾಗಿ ನಿಮ್ಮನ್ನು ಕರೆಯುತ್ತಿದ್ದೇವೆ. ಇಷ್ಟರ ಮಧ್ಯೆ ಏಕೋ ಅವರು ಆವೇಶಪಟ್ಟರು. ನಾನು ಬಹಳ ಸಾಮಾನ್ಯ ಕುಟುಂಬದಿಂದ ಬಂದವನು ಎಂದು ಮೊದಲ ದಿವಸ ಈ ಸ್ಥಾನದಲ್ಲಿ ಕುಳಿತಾಗಲೇ ನಾನು ಹೇಳಿದೆ. ಇದರಲ್ಲಿ ನನ್ನದೊಡ್ಡಸ್ತಿಕೆ ಪ್ರಶ್ನೆ ಏನೂ ಇಲ್ಲಿ ಇಲ್ಲ. ಹಿಂದಿನವರು ಬಹಳ ಶ್ರಮಪಟ್ಟು ಇದರ ಗೌರವವನ್ನು ಪಾಲಿಸಿಕೊಂಡು ಪರಂಪರೆ ಹಾಕಿಕೊಂಡು ಬಂದಿದ್ದಾರೆ. ಅದಕ್ಕೆ ನಾನು ಇದ್ದಾಗ ಚ್ಯುತಿ ಬರಬಾರದು ಎಂದು ನನ್ನ ಆಸೆ. ಇದರ ಗೌರವವನ್ನು ಇನ್ನಷ್ಟು ಹೆಚ್ಚಿಸುವುದಕ್ಕೆ ಯೋಗ್ಯತೆ ಇದೆ ಎಂದು ನಾನು ಅಂದುಕೊಂಡಿಲ್ಲ. ನನ್ನ ಕಾಲದಲ್ಲಿ ಗೌರವ ಕಡಿಮೆಯಾಗುವುದಕ್ಕೆ ಎಂದೂ ನಾನು ಭಾಗಿಯಾಗಬಾರದು ಎಂದು ಅಷ್ಟೇ ನನ್ನಉದ್ದೇಶ. ಮಾನ್ಯ ಸಗೀರ್ ಅಹಮ್ಮದ್‌ರವರೇ ತಾವು ಪ್ರಾರಂಭ ಮಾಡಿ.

**ವಿಷಯ : ಚಿಕ್ಕಮಂಗಳೂರಿನಲ್ಲಿ 7.3.95 ರಂದು ನಡೆದ ಕೊಲೆಪ್ರಕರಣವನ್ನು ಸಿ.ಬಿ.ಐ ಗೆ ಒಪ್ಪಿಸುವ ಬಗ್ಗೆ .**

ಶ್ರೀ ಸಿ.ಆರ್. ಸಗೀರ್ ಅಹಮದ್ : (ಚಿಕ್ಕಮಗಳೂರು) ಮಾನ್ಯ ಅಧ್ಯಕ್ಷರೇ, ನಡೆದಂಥ ಒಂದು ಘಟನೆಯ ಬಗ್ಗೆಯೂ ಸಹಾ ನನಗೂ ಬಹಳಷ್ಟು ನೋವಾಯಿತು. ಇವತ್ತು ನಮ್ಮ ನಾಯಕರಾದಂಥ ಖರ್ಗೆಯವರು ಆಗಲೇ ವಿಷಾದವನ್ನು ವ್ಯಕ್ತಪಡಿಸುವುದರ ಜೊತೆಗೆ ತಮ್ಮ ಒಂದು ಸೌಜನ್ಯತೆಯ ಬಗ್ಗೆ ನನಗೆ ಬಹಳ ಸಂತೋಷವಾಗುತ್ತಿದೆ. ಹಾಗೂ ತಮ್ಮ ಕೊಠಡಿಗೆ ಬಂದಂಥ ಸಂದರ್ಭದಲ್ಲಿ ಅವರಿಗೆ ಗೌರವವನ್ನು ಕೊಟ್ಟು ಅವರ ಸಮಸ್ಯೆಗಳನ್ನು ಅರಿವು ಮಾಡಿ ಕೊಂಡು ಸದನದಲ್ಲಿ ಮಾತನಾಡುವುದರ ಬಗ್ಗೆ ಹಾಗೂ ನಮ್ಮ ಹಕ್ಕನ್ನು ಕೊಡಿಸುವ ಬಗ್ಗೆ ತಾವು ಬಹಳ ಕಾಳಜಿಯನ್ನು ವಹಿಸಿ ಪಕ್ಷಪಾತ ಮರೆತು ಸದಸ್ಯರಿಗೆ ಗೌರವ ತರುವ ಅವಕಾಶವನ್ನು

ತಾವು ಹಾಕಿಕೊಡುತ್ತಿದ್ದೀರಿ, ಅದಕ್ಕಾಗಿ ಈ ಸದನದ ಗೌರವಾನ್ವಿತ ಸದಸ್ಯರಾದ ನಾವು ತಮ್ಮನ್ನು ಅಭಿನಂದಿಸಬೇಕು. ಈ ಘಟನೆ ಬಗ್ಗೆ ನಾನೂ ಸಹ ನಮ್ಮ ಪಕ್ಷದ ಪರವಾಗಿ ವಿಷಾದವನ್ನು ವ್ಯಕ್ತಪಡಿಸುತ್ತೇನೆ. ನಾನು ಮಾನ್ಯ ಗೃಹಸಚಿವರ ಗಮನಕ್ಕೆ ತರುವ ವಿಷಯವೇನೆಂದರೆ ಚಿಕ್ಕಮಗಳೂರು ಪಟ್ಟಣದಲ್ಲಿ ದಿನಾಂಕ : 7-3-95ರಂದು 12-30 ಗಂಟೆ ಸಮಯದಲ್ಲಿ ಒಬ್ಬಳು ಹೆಣ್ಣುಮಗಳು ಮನೆಯಲ್ಲಿದ್ದಂಥ ಸಂದರ್ಭದಲ್ಲಿ ಕೊಲೆಯಾಗಿದೆ. ಯಾರೂ ಇದುವರೆಗೂ ಕಂಡುಹಿಡಿಯಲಾರದಂಥ ಕೊಲೆಯನ್ನು ಮಾಡಿ ಒಂದು ತಿಂಗಳು ಕಾಲಮುಗಿದಿದೆ. ಆ ವೈದ್ಯರ ಪತ್ನಿಯಾದ ಅರುಣಾ ಎಂಬ ಮಹಿಳೆ ಮನೆಯಲ್ಲಿ ಒಬ್ಬಳೇ ಇದ್ದಂಥ ಸಂದರ್ಭದಲ್ಲಿ ಮೂರು ಜನ ಪೋಲೀಸ್‌ನವರ ಒಂದು ಮಾಹಿತಿ ಪ್ರಕಾರ ಮಾರುತಿ ವ್ಯಾನ್‌ನಲ್ಲಿ ಬಂದಿದ್ದ ಎಂದು ಒಂದು ಮಾಹಿತಿ ಕೊಟ್ಟರೆ ಇನ್ನೊಂದು ಕಡೆ ಮಾಹಿತಿ ಮೋಟಾರ್ ಸೈಕಲ್‌ನಲ್ಲಿ ಬಂದಿದ್ದರು ಎನ್ನುವ ಅಭಿಪ್ರಾಯವನ್ನು ಅವರು ಕೊಡುತ್ತಿದ್ದಾರೆ. ಆದರೆ ಇವರಕೊಲೆ 12-40 ನಿಮಿಷಕ್ಕೆ ಆಗುವಂಥ ಸಂದರ್ಭದಲ್ಲಿ ಅವರ ಮೈಮೇಲೆ ಇದ್ದಂಥ ಒಡವೆಗಳನ್ನು ಸಹಾ ದೋಚಿಕೊಂಡು ಹೋಗಿರುವ ವಿಚಾರ ಆಗಲೇ ಸಾರ್ವಜನಿಕರ ಗಮನಕ್ಕೆ ಬಂದಿದೆ. ನಾನು ಇವತ್ತು ಈ ಶೂನ್ಯವೇಳೆಯಲ್ಲಿ ಈ ವಿಚಾರವನ್ನು ಎತ್ತುವಂಥದ್ದು ಮತ್ತು ತಮ್ಮ ಮುಖಾಂತರ ವಾಗಿ ಸರ್ಕಾರದ ಗಮನಕ್ಕೆ ತರುವುದು ಎಂದರೆ ಇಲ್ಲಿಯವರೆಗೆ ಈ ಕೊಲೆಗಾರರು ಯಾರು ಎನ್ನುವುದರ ಬಗ್ಗೆ ಪತ್ತೆ ಹಚ್ಚುವುದಕ್ಕೆ ಸಾಧ್ಯವಾಗಿಲ್ಲ. ಆದರೆ ಕಾರಣ ಏನೆಂದರ ಚಿಕ್ಕಮಗಳೂರು ಪಟ್ಟಣದಲ್ಲಿ ರಾಜಕೀಯ ಪ್ರಭಾವವನ್ನು ಪೋಲೀಸ್‌ನವರೇ ಬೀರುತ್ತಿದ್ದಾರೆ ಎಂದು ಒಂದು ಅಭಿಪ್ರಾಯ ಚಿಕ್ಕಮಗಳೂರು ಪಟ್ಟಣದ ನಾಗರೀಕರಲ್ಲಿ ಉಂಟಾಗಿದೆ. ಇದರ ಜೊತೆಗೆ ನಾಗರೀಕರಲ್ಲಿ ಬಹಳಷ್ಟು ಭಯಭೀತಿ ಉಂಟಾಗಿದೆ. ಕಾರಣ ಏನೆಂದರೆ, ಈ ಪಟ್ಟಣದಲ್ಲಿ ಈ ರೀತಿ ಹಗಲುದರೋಡೆ ಹಾಗೂ ಹಗಲು ಸಮಯದಲ್ಲಿ ಒಂದು ಕೊಲೆಯಾಗುತ್ತಿದೆ ಎಂದರೆ ಈ ಹಿಂದೆಯೂ ಸಹಾ ಆ ಭಾಗದಲ್ಲಿ ಆ ಜಾಗದಲ್ಲಿ ಒಂದುಕೊಲೆಯಾಗಿದೆ. ಆದರೆ ಆ ಕೊಲೆಯಾದ ನಂತರ ಅಪರಾಧಿಗಳನ್ನು ಪತ್ತೆ ಹಚ್ಚಿ ಅವರ ಮೇಲೆ ಮೊಕದ್ದಮೆ ಮಾಡಿದ ನಂತರ ನ್ಯಾಯಾಲಯದಲ್ಲೂ ಸಹಾ ಅವರನ್ನು ಬಿಡುಗಡೆ ಮಾಡಲಾಗಿದೆ. ಆದ್ದರಿಂದ ಸಾರ್ವಜನಿಕರಲ್ಲಿ ಭಯ ಉಂಟಾಗಿರುವುದರಿಂದ ತಮ್ಮ ಮುಖಾಂತರವಾಗಿ ಮಾನ್ಯ ಗೃಹಸಚಿವರಲ್ಲಿ ಹಾಗೂ ಸರ್ಕಾರದಲ್ಲಿ ನನ್ನ ಮನವಿ ಏನೆಂದರೆ ಈ ಪ್ರಕರಣವನ್ನು ಸಿ.ಓ.ಡಿ.ಗೆ ತಾವು ಒಪ್ಪಿಸುತ್ತೀರಿ ಎಂದು ಹೇಗಿದ್ದರೂ ತಾವು ಈ ಸದನದಲ್ಲಿ ಉತ್ತರವನ್ನು ನೀಡುತ್ತೀರಿ ಎಂದು ಹೇಳಿ ನಾನಂತೂ ಭಾವಿಸಿದ್ದೇನೆ.. ಆದರೆ ನನ್ನ ಒಂದು ಪ್ರಯತ್ನ ತಮ್ಮ ಮುಖಾಂತರ ಸರ್ಕಾರಕ್ಕೆ ತಾವು ದಯಮಾಡಿ ಈ ಪ್ರಕರಣವನ್ನು ಸಿಬಿಐಗೆ ವಹಿಸಬೇಕು ಎಂದು ತಮ್ಮ ಮುಖಾಂತರವಾಗಿ ನಾನು ಸರ್ಕಾರವನ್ನು ಒತ್ತಾಯಿಸುತ್ತೇನೆ. ಈ ಒಂದು ಶೂನ್ಯವೇಳೆಯಲ್ಲಿ ಅವಕಾಶವನ್ನು

ಮಾಡಿಕೊಟ್ಟಿದ್ದಕ್ಕಾಗಿ ತಮಗೆ ಧನ್ಯವಾದಗಳನ್ನು ಅರ್ಪಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯ(ಗೃಹ ಸಚಿವರು) : ಮಾನ್ಯ ಸಭಾಧ್ಯಕ್ಷರೇ 7-3-95 ರಂದು ಶ್ರೀಮತಿ ಅರುಣಾ ಅವರ ಕೊಲೆಯ ಬಗ್ಗೆ ಮಾನ್ಯ ಸಗೀರ್ ಅಹಮದ್‌ರವರು ಈಗಾಗಲೇ ಸರ್ಕಾರದ ಗಮನಕ್ಕೆ, ನನ್ನ ಗಮನಕ್ಕೆ ವಿಚಾರವನ್ನು ತಂದಿದ್ದಾರೆ. ನಮ್ಮ ಸಚಿವರಾಗಿರುವ ಮಾನ್ಯ ಗೋವಿಂದೇ ಗೌಡರು ಸುಮಾರು 15 ದಿನಗಳ ಹಿಂದೆ ಇದರ ಬಗ್ಗೆ ನನಗೆ ಒಂದು ಪತ್ರವನ್ನು ಬರೆದಿದ್ದಾರೆ. ಚಿಕ್ಕಮಗಳೂರಿನ ಅನೇಕ ನಾಗರೀಕರು ಸಹಾ ನನ್ನನ್ನು ಬಂದು ಭೇಟಿ ಮಾಡಿದ್ದಾರೆ. ವಿಷಯದ ಗಂಭೀರತೆಯನ್ನು ತಿಳಿದು ನಾನು ಈಗಾಗಲೇ ಈ ಒಂದು ಪ್ರಕರಣವನ್ನು ಸಿಓಡಿ ಗೆ ಕೊಟ್ಟಿದ್ದೇನೆ. ಸಿ.ಓ.ಡಿ ಪೋಲೀಸ್‌ನವರು ತನಿಖೆಯನ್ನು ಮಾಡಿ ಒಂದು ಪ್ರಥಮ ವರದಿಯನ್ನು ಈಗಾಗಲೇ ಕೊಟ್ಟಿದ್ದಾರೆ. ಅದರ ಪ್ರಕಾರವಾಗಿ ಈ ಒಂದು ಹತ್ಯೆಯನ್ನು, ಕೊಲೆಯನ್ನು ಮಾಡಿರತಕ್ಕವರನ್ನು ಬಂಧಿಸುವುದಕ್ಕೆ ಕೆಲವು ಸುಳಿವು ಸಿಕ್ಕಿದೆ. ಆದರಿಂದ ನನಗೆ ಅನಿಸುತ್ತದೆ ಇದನ್ನು ಸಿಬಿಐಗೆ ಕೊಡತಕ್ಕ ಅವಶ್ಯಕತೆ ಇಲ್ಲ. ವಿಷಯದ ಗಂಭೀರತೆ ಸರ್ಕಾರಕ್ಕೆ ಅರಿವಾಗಿದ್ದುಕೊಂಡು ಈಗಾಗಲೇ ಸಿಓಡಿ ಅವರಿಗೆ ಕೊಟ್ಟಿದ್ದೇವೆ. ಸಿಓಡಿ ಮುಖ್ಯಸ್ಥರು ಒಂದೆರಡು ದಿನಗಳಲ್ಲಿ ಚಿಕ್ಕಮಗಳೂರಿಗೆ ಭೇಟಿಯನ್ನು ಕೊಟ್ಟು ಸ್ವತಃ ಈ ಒಂದು ಕೊಲೆ ಮಾಡಿರತಕ್ಕ ಜನಗಳನ್ನು ಪತ್ತೆ ಮಾಡಲಿಕ್ಕೆ ಎಲ್ಲಾ ಕ್ರಮವನ್ನು ಸಹ ತೆಗೆದುಕೊಂಡಿದ್ದಾರೆ. ಯಾರೂ ಸಹ ಭಯಬೀತರಾಗಿರತಕ್ಕ ಅವಶ್ಯಕತೆ ಇಲ್ಲ. ಚಿಕ್ಕಮಗಳೂರಿನಲ್ಲಿ ಈ ವರ್ಷ ಆಗಿರತಕ್ಕ ಕೊಲೆಗಳಲ್ಲಿ ಎರಡು ಮಾತ್ರ ಪತ್ತೆ ಆಗದೇ ಇರತಕ್ಕದ್ದು. ಒಂದು ಡಾ:ಅವರ ಪತ್ನಿ ದಿ:ಅರುಣಾ ಅವರು, ಮತ್ತೊಂದು ಕೊಲೆ ಬಗ್ಗೆ ಮಾನ್ಯ ಸಗೀರ್ ಅಹಮದ್ ಅವರು ಹೇಳಿದ್ದಾರೆ. ನಾನು ಇದರ ಬಗ್ಗೆ ಅವರೊಂದಿಗೆ ಸುಮಾರು ವಾರದ ಹಿಂದೆ ಮಾತನಾಡಿದ್ದೇನೆ. ನಾವು ಮಾತನಾಡಿದ ತಕ್ಷಣ ಸಂಬಂಧಪಟ್ಟ ಅಧಿಕಾರಿಗಳನ್ನು ಕರೆಸಿ ಮಾತನಾಡಿದ್ದೇನೆ. ಜಿಲ್ಲಾಧಿಕಾರಿಗಳ ಜೊತೆ ಮಾತನಾಡಿದ್ದೇನೆ. ಸಂಬಂಧಪಟ್ಟ ಎಲ್ಲಾ ವಿವರಗಳನ್ನು ಸಹಿತ ನಾನು ಸ್ವತ: ನೋಡಿದ್ದೇನೆ. ತಾವಾಗಲೀ ಅಥವಾ ಚಿಕ್ಕಮಗಳೂರಿನ ಜನತೆಯಾಗಲೀ ಇದರ ಬಗ್ಗೆ ಭಯಬೀತರಾಗತಕ್ಕ ಅವಶ್ಯಕತೆ ಇಲ್ಲ. ನಮ್ಮ ಸಿಓಡಿ ಪೋಲೀಸರು ಆದಷ್ಟು ಬೇಗ ತನಿಖೆ ಮಾಡುತ್ತಾರೆ, ಯಶಸ್ವಿಯಾಗುತ್ತಾರೆಂದು ನಾನು ತಿಳಿದುಕೊಂಡು ಉಳಿದಿರತಕ್ಕ ರಕ್ಷಣೆ ಏನು ಬೇಕು ಮತ್ತು ಬಾಕಿ ವಿಚಾರ ಏನು ಇದೆ, ಕಾನೂನಿನ ಸಂರಕ್ಷಣೆ ದೃಷ್ಟಿಯಿಂದ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳತಕ್ಕ ಭರವಸೆಯನ್ನು ಈ ಸಂದರ್ಭದಲ್ಲಿ ಗೌರವಾನ್ವಿತ ಸದಸ್ಯರಿಗೆ ನಾನು ತಮ್ಮ ಮೂಲಕ ಕೊಡುತ್ತೇನೆ.

**ವಿಷಯ : ದಕ್ಷಿಣ ಕನ್ನಡಜಿಲ್ಲೆಯ ನೇಕಾರರಿಗೆ ರಿಬೇಟ್ ನೀಡದೆ ಇರುವುದು.**

ಶ್ರೀ ವಸಂತ ವಿ ಸಾಲಿಯಾನ (ಕಾಪು) : ಮಾನ್ಯ ಅಧ್ಯಕ್ಷರೇ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಂಟು ನೇಕಾರ ಸಹಕಾರಿ ಸಂಘಗಳು ಇವೆ.ಸುಮಾರು ಮೂರು ಸಾವಿರದಷ್ಟು ಕೈಮಗ್ಗಗಳು ಇವೆ. ಮತ್ತು ಅಲ್ಲಿ ಸುಮಾರು ಹತ್ತು ಸಾವಿರ ನೇಕಾರರು ಕೆಲಸ ಮಾಡುತ್ತಿದ್ದಾರೆ. ಅವರಿಗೆ ಸಲ್ಲಿಸುವ 1994-95ನೇ ಸಾಲಿನ ಮಾರಾಟ ಅಭಿವೃದ್ಧಿ ಸಹಾಯ ಧನ ಅಂದರೆ ರಿಬೇಟ್ ಸುಮಾರು ಒಂದು ಕೋಟಿ ರೂಪಾಯಿ ಪಾವತಿ ಆಗಲಿಲ್ಲ. ಇದರಿಂದ ನೇಕಾರರಿಗೆ ಬಹಳ ತೊಂದರೆ ಆಗಿದೆ. ಆದ್ದರಿಂದ ಸರ್ಕಾರ ಈ ವಿಚಾರವನ್ನು ಕೂಡಲೇ ಪರಿಶೀಲಿಸಿ ಕ್ರಮ ಕೈಗೊಳ್ಳಬೇಕಾ ಅವರಿಗೆ ಒಂದು ಕೋಟಿ ರೂಪಾಯಿ ರಿಬೇಟನ್ನು ಮಾರ್ಚ್ 31ರೊಳಗೆ ಸಿಗಬೇಕಿತ್ತು ಅದು ಸಿಗಲಿಲ್ಲ. ಅದನ್ನು ಸಿಗುವ ಹಾಗೆ ಮಾಡಬೇಕು ಎಂದು ತಮ್ಮ ಮೂಲಕ ಕೇಳಿಕೊಳ್ಳುತ್ತೇನೆ.

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) : ಈಗ ಈ ವಿಷಯವನ್ನು ನಾನು ಸಂಬಂಧಪಟ್ಟ ಮಂತ್ರಿಯವರಿಗೆ ತಿಳಿಸಿ ಒಂದು ತೀರ್ಮಾನಕ್ಕೆ ಬರುತ್ತೇವೆ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಮಂತ್ರಿಗಳು ಇಲ್ಲಿಯೇ ಇದ್ದಾರೆ.

ಶ್ರೀ ಡಿ. ಮಂಜುನಾಥ್ : ಎಲ್ಲೋ ಹೋಗಿದ್ದಾರೆ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಎಲ್ಲೋ ಹೋಗಿದ್ದಾರೆ ಎಂದರೆ ಹೇಗೆ? ಬೇರೆ ಕೆಲಸಕ್ಕೆ ಹೋಗಿದ್ದಾರೆ. ಟೂರ್‌ಗೆ ಹೋಗಿದ್ದರೆ ಏನಾದರೂ ಕಾರಣ ಬೇಕಲ್ಲಾ.

ಶ್ರೀ ಡಿ. ಮಂಜುನಾಥ್ : ನಾನು ಮಂತ್ರಿಗಳನ್ನು ಕರೆಯಿಸಿ ಅವರಿಂದ ಉತ್ತರವನ್ನು ಕೊಡಿಸುತ್ತೇನೆ. ಈಗ ಅವರು ಕೊಶ್ಚನ್ ರೈಸ್ ಮಾಡಿದ್ದಾರೆ.

ಶ್ರೀ ವಸಂತ ವಿ.ಸಾಲಿಯಾನ : ನಾನು ಕ್ವೆಶ್ಚನ್ ರೈಸ್ ಮಾಡಿದ್ದೇನೆ. ಈ ಸಮಸ್ಯೆಗೆ ಏನಾದರೂ ಪರಿಹಾರ ಕಂಡು ಹಿಡಿದ ರಿಲೀಫ್ ಸಿಗುತ್ತದೆಯೇ ಎಂಬ ದೃಷ್ಟಿಯಿಂದ ನಾನು ಈ ವಿಷಯ ಪ್ರಸ್ತಾಪ ಮಾಡಿದ್ದೇನೆ.

ಶ್ರೀ ಸಿ.ಭೈರೇಗೌಡ : ಮಾನ್ಯ ಮಂತ್ರಿಗಳು ವಿಧಾನ ಪರಿಷತ್ತಿನಲ್ಲಿ ಇದ್ದಾರೆ. ಅವರು ಬಂದನಂತರ ಉತ್ತರ ಕೊಡಿಸಬಹುದು.

ಶ್ರೀ ವಸಂತ ವಿ.ಸಾಲಿಯಾನ : ಈಗ ತಾನೇ ನಾನು ಮಾತನಾಡಿದ್ದಕ್ಕೆ ಅವರು ಉತ್ತರ ಕೊಡುತ್ತೇನೆ ಎಂದು ಹೇಳಿದ್ದಾರೆ.

**ವಿಷಯ : ಡಾ॥ ಸುಬ್ರಮಣ್ಯಸ್ವಾಮಿಯವರಿಂದ ಹಕ್ಕುಚ್ಯುತಿ.**

ಡಾ॥ ಜೀವರಾಜ್ ಆಳ್ವ(ಚಿಕ್ಕಪೇಟೆ) : ಮಾನ್ಯ ಅಧ್ಯಕ್ಷರೇ, ತಮ್ಮ ಕ್ಷಮೆ ಕೇಳಿ ಪುನಃ ವಾಟಾಳ್ ನಾಗರಾಜ್ ಅವರು ಈ ಪ್ರಶ್ನೆಯನ್ನು ಎತ್ತಿದಾಗ ತಾವು ಕಾರಣಾಂತರದಿಂದ ಅವಕಾಶವನ್ನು ಕೊಡಲಿಲ್ಲ. ಆದರೆ ಇವತ್ತು ವಿಧಾನ ಸಭೆ

ನಡೆಯುತ್ತಿರುವಾಗ ನಮ್ಮ ಸಭಾ ನಾಯಕರ ಮೇಲೆ ಒಂದು ಗಂಭೀರವಾದ ಆಪಾದನೆಯನ್ನು ಕೇಂದ್ರ ಸರ್ಕಾರದಲ್ಲಿ ಕೇಂದ್ರ ಸಚಿವ ಸಂಪುಟದ ದರ್ಜೆಗೆ ಹೋದಂತಹ ವ್ಯಕ್ತಿಯೊಬ್ಬರು ಮಾಡಿದ್ದಾರೆ. ಸಭೆ ನಡೆಯುತ್ತಿದೆ, ಸಭೆ ನಡೆಯುವಾಗ ಅತ್ಯಂತ ಗಂಭೀರವಾದ ಅಪಾದನೆಯನ್ನು ಮಾಡಿದ್ದಾನೆ. ಈ ವ್ಯಕ್ತಿಯ ಬಗ್ಗೆ ಮತ್ತು ಅವರ ಚರಿತ್ರೆ ಹೇಳಬೇಕಾಗುತ್ತದೆ. ಗವರ್ನರ್ ಪ್ರಶ್ನೆ ಬೇರೆ; ನಾನು ಒಪ್ಪುತ್ತೇನೆ. ತಾವು ಹೇಳಿದ್ದನ್ನು ಪೂರ್ಣವಾಗಿ ಒಪ್ಪುತ್ತೇನೆ, ನಮಗೆ ಸಂಬಂಧಪಡುವುದಿಲ್ಲ ಎಂದು. ಆದರೆ ವಿಧಾನಸಭೆ ನಡೆಯುವಾಗ ಈ ವ್ಯಕ್ತಿ ಸಭಾ ನಾಯಕರ ಮೇಲೆ ಅತ್ಯಂತ ಗಂಭೀರವಾದಂತಹ ಆಪಾದನೆಗಳನ್ನು ಮಾಡಿದಾಗ ಸಭಾ ಅಗೌರವ ಆಗುತ್ತದೋ ಇಲ್ಲವೋ ? ಸಭೆಯ ಗೌರವವನ್ನು ಕಾಪಾಡುವುದರಲ್ಲಿ ನಮ್ಮದೂ ಒಂದು ಕೊಡುಗೆ ಅದಕ್ಕೆ ಇದೆ. ಆದ್ದರಿಂದ we won't go beyond. ಆದರೆ ಮಾತನಾಡೋಣ ಚರ್ಚೆ ಮಾಡೋಣ ಏನೋ ಒಂದು ಪ್ಲೇನ್ ತೆಗೆದುಕೊಂಡು ಹೋಗಿದ್ದಾರೆ ಎಂದು ಹೇಳಿದ್ದಾರೆ. ಎಲ್ಲೋ ಒಂದು ಕಡೆಗೆ ಹೋಗಬೇಕಾಗುತ್ತದೆ. ಸುಬ್ರಮಣಿಸ್ವಾಮಿಯವರು ಎಷ್ಟು ಸಾರಿ ಪ್ಲೇನ್ ತೆಗೆದುಕೊಂಡು ಹೋಗಿಲ್ಲ ? ಆದ್ದರಿಂದ ಸಭಾ-ನಾಯಕರ ಗೌರವ, ಸಭೆಯ ಗೌರವ ನಮ್ಮೆಲ್ಲರ ಗೌರವ. ಅಪಾದನೆ ಆಗಿದ್ದರೆ ಅದರಲ್ಲಿ ತಪ್ಪಾಗಿದ್ದರೆ ಅದಕ್ಕೆ ಉತ್ತರ ಕೊಡೋಣ.

ಶ್ರೀ ಜೆ.ಎಚ್.ಪಟೇಲ್ : ಇದು ಚರ್ಚೆ ಮಾಡಿರತಕ್ಕಂಥ ವಿಷಯ ಅಲ್ಲ. ಆ ವ್ಯಕ್ತಿಗೆ ಯೋಗ್ಯತೇನೂ ಇಲ್ಲ, ನಾವು ಮಾಡಲೂ ಬಾರದು.

ಅಧ್ಯಕ್ಷರು : ಚರ್ಚೆ ಬೇಡ ಅಲ್ಲವೇ?

Dr. Jeevaraj Alva : He is such a congenital liar.

ನಾನು ಒಂದು ಘಟನೆ ಬಗ್ಗೆ ಹೇಳುತ್ತೇನೆ. He has no ethics whatsoever. ನಾನು ಪ್ರಧಾನ ಮಂತ್ರಿ ಚಂದ್ರಶೇಖರ್ ಅವರ ಮನೆಯಲ್ಲಿದ್ದಾಗ ಶೇಖಾವತ್ ಅವರು ಹಾಗೂ ನಮ್ಮ ಶೇಷನ್ ಅವರು ಇದ್ದರು; ಅಲ್ಲಿ ಕುಳಿತಿದ್ದಾಗ ಬಂದು ಹೇಳುತ್ತಾನೆ. ಅಲ್ಲಿ ಪ್ರಧಾನ ಮಂತ್ರಿಗಳ ಮನೆಯಲ್ಲಿ ಜಗಳ ಆಯಿತು. ನೀನು ಯಾವಾಗ ಮ್ಯೂಸಿಕ್‌ಗೆ ಹೋಗುವುದು ಅಕೌಂಟ್ ಯಾವಾಗ ಲೆಕ್ಕ ಮಾಡಲು ಹೋಗುವುದು ಎನ್ನುತ್ತಾನೆ. ನಾನು ಹೇಳಿದೆ. 'Bloody fellow, I will chase you out'.

ಒಂದು ವ್ಯಕ್ತಿ.He gets away. He is such a black- mailer.

ವಿಧಾನ ಸಭೆಯಲ್ಲಿ ಇದು ಪೂರಕವಾದ ಚರ್ಚೆ ಅವನ ಕೆಲಸಾನೇ ಬ್ಲಾಕ್‌ಮೇಲ್ ಮಾಡಿಕೊಂಡು ಇರುವುದು ಅವನ ರಾಜಕಾರಣ ಪೂರ್ಣ ಬ್ಲಾಕ್‌ಮೇಲಿಂಗ್ ಪಾಲಿಟಿಕ್ಸ್

• ಅಧ್ಯಕ್ಷರು : ಸನ್ಮಾನ್ಯ ಪಟೇಲ್ ಅವರು ಹೇಳಿದಂತೆ ಅವರು ಇಲ್ಲಿ ಇಲ್ಲ. ಅದಕ್ಕಾಗಿ ನಾವು ಇಲ್ಲಿ ಚರ್ಚೆಮಾಡಬೇಕಾದ ಅಗತ್ಯ ಇಲ್ಲ. ಅನಾವಶ್ಯಕವಾಗಿ ಅವರಿಗೆ ಏಕೆ ದೊಡ್ಡ ಪ್ರಾಶಸ್ತ್ಯ ಕೊಡಬೇಕು?

ಶ್ರೀ ವಾಟಾಳ್ ನಾಗರಾಜ್ : ನನ್ನ ವಾದ ಅದಲ್ಲ. ನಿಮ್ಮ ಆಜ್ಞೆಯನ್ನು

ಪರಿಪಾಲಿಸಬೇಕು, ನಾವು ದಿಕ್ಕರಿಸಿ ಮಾತನಾಡುತ್ತಿಲ್ಲ. ಸಭೆ ನಡೆಯುತ್ತಿದೆ, ಒಂದು ಕಡೆ ಮುಖ್ಯಮಂತ್ರಿಗಳು ಹೇಳಿಕೆ ಕೊಟ್ಟಿದ್ದಾರೆ, ನಮ್ಮ ಮುಖ್ಯಮಂತ್ರಿಗಳ ಮೇಲೂ ಆರೋಪಣೆ ಇದೆ ಎಂದು ಹೇಳಿ ಈ ತರಹ ಮಾತನಾಡುವಾಗ ನಾವು ಚರ್ಚೆನಡೆಸಬೇಕು. ನಾವು ಹಕ್ಕು ಚ್ಯುತಿ ನೋಟೀಸ್ ಕೊಡಬೇಕು. ಆ ಸುಬ್ರಮಣ್ಯ ಸ್ವಾಮಿ ಅವರನ್ನು ಹಕ್ಕು ಚ್ಯುತಿ ಕಮಿಟಿ ಮುಂದೆ ಕರೆಸಬೇಕು. ಈ ದೇಶಕ್ಕೆ ಇದೇನೂ ಹೊಸದು ಅಲ್ಲ. ಏನೂ ಹುಚ್ಚು ಹುಚ್ಚಾಗಿ ಮಾತನಾಡುತ್ತಾರೆ. ಅದರ ಬಗ್ಗೆ ನಾವು ಸಮಗ್ರ ಚರ್ಚೆ ನಡೆಸಬೇಕು. ಏನು ಹುಡುಗಾಟ ಅವರದ್ದು, ಬಾಯಿಗೆ ಬಂದ ಹಾಗೆ ಮಾತನಾಡತಕ್ಕದ್ದು. ಅಲ್ಲಿ ಹೋಗುತ್ತಾರೆ ಆಂದ್ರದ ಮುಖ್ಯಮಂತ್ರಿ ಬಗ್ಗೆ ಬಂದು ಹೇಳುತ್ತಾರೆ. ಇಡೀ ರಾಷ್ಟ್ರದಾದ್ಯಂತ, ರಾಜ್ಯದಾದ್ಯಂತ ಎಲ್ಲಾ ಮುಖ್ಯಮಂತ್ರಿಗಳ ಮೇಲೆ ಧಾಳಿ ಮಾಡುವುದಕ್ಕೆ ಕೇಂದ್ರದಿಂದ ಇವರನ್ನು ಬಿಟ್ಟಿದ್ದಾರೇನು? ಏನು ಹುಡುಗಾಟ ಇದು? ಇವರ ಮಾತು ಕೇಳಿಕೊಂಡು ಚೆನ್ನಾರೆಡ್ಡಿಯವರು ಎರಡುವರ್ಷಗಳಿಂದ ಅಲ್ಲಿನ ಮುಖ್ಯಮಂತ್ರಿಗಳ ಮೇಲೆ ಹೇಳುತ್ತಾರೆ. ನನಗೂ ಏ ಡಿ ಎಂ ಕೆ ಸರ್ಕಾರಕ್ಕೂ ಖಂಡಿತ ಆಗುವುದಿಲ್ಲ. ಸ್ಪಷ್ಟವಾಗಿ ಹಾಗುವುದಿಲ್ಲ, ನನ್ನ ನೀತಿಯೇ ಬೇರೆ, ಅವರ ನೀತಿಯೇ ಬೇರೆ. ಆದರೆ ಈ ವಿಚಾರದಲ್ಲಿ ಪ್ರಜಾಪ್ರಭುತ್ವದ ದೃಷ್ಟಿಯಿಂದ ಏನಾದರೂ ಉಳಿಯುವುದಕ್ಕೆ ಸಾಧ್ಯವೇ ಈ ತರಹ ಅದರೆ? ಹೊರಗಡೆ ಕುಳಿತು ಕೊಂಡು ಒಬ್ಬ ರಾಜ್ಯಪಾಲರು ಈ - ಸರ್ಕಾರವನ್ನು ಕಿತ್ತು ಹಾಕಬಹುದು. ಸರ್ಕಾರದ ಮೇಲೆ ಕ್ರಮ ತೆಗೆದು ಕೊಳ್ಳಬಹುದು, ಖಿಟ್ಲೆ ಹಾಕುತ್ತೇನೆಂದು ಹೇಳಿದರೆ ಯಾರೋ ಸುಬ್ರಮಣ್ಯ ಸ್ವಾಮಿ ಅವರ ಮಾತು ಕೇಳಿಕೊಂಡು ಪರಿಸ್ಥಿತಿ ಏನಾಗುತ್ತದೆ? ನಾವೆಲ್ಲಿ ಹೋಗುತ್ತೇವೆ? ಮಾನ್ಯ ಮುಖ್ಯಮಂತ್ರಿಗಳಾದ ದೇವೇಗೌಡರೇ, ಈ ಸದನದಿಲ್ಲ ಹೇಳಿಕೆ ಕೊಟ್ಟಿದ್ದಾರೆ. ಅನುಚಿತ, ಅಕ್ರಮ, ಅವಿವೇಕ ಎಂದು ಹೇಳಿದ್ದಾರೆ. ಇದು ಒಕ್ಕೂಟ ವ್ಯವಸ್ಥೆಗೆ ಅನ್ಯಾಯ ಎಂದು ಹೇಳಿದ್ದಾರೆ. ಆದ್ದರಿಂದ ಸುಬ್ರಮಣ್ಯಸ್ವಾಮಿ ಅವರ ನೀತಿಯನ್ನು ನಾವು ಇಲ್ಲಿ ಚರ್ಚೆಮಾಡಲೇ ಬೇಕು. ಮಾನ್ಯ ಉಪ ಮುಖ್ಯಮಂತ್ರಿಯವರೇನೋ ಲಘುವಾಗಿ ಅವರನ್ನು ಬಿಟ್ಟು ಬಿಡೋಣ ಎಂದು ಹೇಳಿದರೆ ಈ ವಿಷಯವನ್ನು ಬಿಡುವುದಿಲ್ಲ. ಅವರು ಇಡೀ ಜೀವನದ ಉದ್ದಕ್ಕೂ ಇದನ್ನೇ ಮಾಡಿಕೊಂಡು ಬಂದಿರುವುದು. ಒಬ್ಬೊಬ್ಬರ ಮೇಲೆ ಆರೋಪಣೆ ಮಾಡಿಕೊಂಡು ಬಂದರೆ ಹೇಗೆ? ತಾವು ದಯಮಾಡಿ ಇದಕ್ಕೆ ಸ್ಪಷ್ಟವಾದ ಉತ್ತರವನ್ನು ಕೊಡಬೇಕು, ಚರ್ಚೆಗೆ ಅವಕಾಶ ಮಾಡಿಕೊಡಬೇಕು ಎಂಬುದು ನನ್ನ ಪ್ರಾರ್ಥನೆ ನಿಮ್ಮನ್ನು ಇಕ್ಕಟ್ಟಿಗೆ ಸಿಕ್ಕಿಸಬೇಕು ಎಂಬ ಉದ್ದೇಶ ನಮಗೆ ಇಲ್ಲ.

ಶ್ರೀ ಜೆ.ಎಚ್.ಪಟೇಲ್ :-ಎಷ್ಟೇ ದೊಡ್ಡವರು ಇರಲಿ, ಸಣ್ಣವರು ಇರಲಿ, ಈ ಸದನದ ಸದಸ್ಯರಾಗಿರಲಿ ಅಥವಾ ಬೇರೆ ಯಾವುದೇ ಸದನದ ಸದಸ್ಯರು ಅಲ್ಲಿ ಏನಾದರೂ ನಮಗೆ ಸಂಬಂಧ ಪಟ್ಟಂಥ ಹೇಳಿಕೆ ಕೊಟ್ಟಾಗ ಅದರ ಬಗ್ಗೆ ಚರ್ಚೆ ಮಾಡಲು ತಮಗೆ ಅಧಿಕಾರ ಇದೆ. ನೀವು ಸಬ್ಜೆಕ್ಟ್‌ಗೆ ಅಲೋ ಮಾಡಬಹುದು.

ಆದರೆ ಈಗ ಅವರು ಈ ಸದನದಲ್ಲಿ ಇಲ್ಲ. ಇಂತಹ ವಿಚಾರಗಳನ್ನೇ ನಾವು ಚರ್ಚೆ ಮಾಡುತ್ತಾ ಹೋಗುವುದು ಬೇಡ. ಅವರ ಬಗ್ಗೆ ಬೇಕಾದರೆ ಪಬ್ಲಿಕ್ ಮೀಟಿಂಗ್ ವ್ಯವಸ್ಥೆ ಮಾಡಿ ಅಲ್ಲ. ವಾಟಾಳ್ ನಾಗರಾಜ್ ಬೇಕಾದಷ್ಟು ಮಾಡಲಿ. ಅವರಿಗೆ ಪತ್ರ ಬರೆದು ಖಂಡನೆ ಮಾಡುವ ವಿಚಾರದಲ್ಲಿ ನಾವೆಲ್ಲಾ ಸೇರೋಣ. ಸದನದಲ್ಲಿ ಚರ್ಚೆ ಗೌರವ ತೋರಿಸುವುದು ಬೇಡ, ಅದು ಸರಿಯಲ್ಲ.

ಶ್ರೀ ವಾಟಾಳ್ ನಾಗರಾಜ್ : ನಾನು ತಮಗೆ ಹಕ್ಕುಚ್ಯುತಿ ನೋಟೀಸ್ ಕಳುಹಿಸುತ್ತೇನೆ.

ಅಧ್ಯಕ್ಷರು : ತಾವು ಹಕ್ಕುಚ್ಯುತಿ ನೋಟೀಸ್ ಕಳುಹಿಸಿಕೊಡಿ.

ಗಮನ ಸೆಳೆಯುವ ಸೂಚನೆಗಳು

**ಅ) ವಿಷಯ : ಬೀದರ್ ನಗರದಲ್ಲಿರುವ ಹಳೆಯ ಬಸ್ ನಿಲ್ದಾಣಕ್ಕೆ ಬಸ್ಸುಗಳು ಬರುತ್ತಿಲ್ಲವಾದ್ದರಿಂದ ಸಾರ್ವಜನಿಕರಿಗೆ ಉಂಟಾಗಿರುವ ತೊಂದರೆ.**

ಶ್ರೀ ಸೈಯದ್ ಜುಲ್ಫೀಕರ್ ಹಷ್ಮಿ(ಬೀದರ್) : ಮಾನ್ಯ ಅಧ್ಯಕ್ಷರೆ, ಬೀದರ್ ನಗರದಲ್ಲಿರುವ ಹಳೆಯ ಬಸ್ ನಿಲ್ದಾಣಕ್ಕೆ ಬಸ್ಸುಗಳು ಬರುತ್ತಿಲ್ಲವಾದ್ದರಿಂದ ಸಾರ್ವಜನಿಕರಿಗೆ ಉಂಟಾಗಿರುವ ತೊಂದರೆಯ ಬಗ್ಗೆ ಮಾನ್ಯ ಸಾರಿಗೆ ಮಂತ್ರಿಯವರ ಗಮನವನ್ನು ಸೆಳೆಯುತ್ತೇನೆ.

ಶ್ರೀ ಕೆ.ಎಸ್.ಬೀಳಗಿ (ಸಾರಿಗೆ ಸಚಿವರು) : ಮಾನ್ಯ ಅಧ್ಯಕ್ಷರೇ, 1956ರಲ್ಲಿ ರಾಜ್ಯಗಳ ಪುನರ್‌ವಿಂಗಡಣೆಯಾದ ನಂತರ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಪ್ರಯಾಣಿಕರ ಸಾರಿಗೆ ವ್ಯವಸ್ಥೆಯನ್ನು ಒದಗಿಸುತ್ತಿದ್ದ ನಿಜಾಂ ರಾಜ್ಯ ರಸ್ತೆ ಸಾರಿಗೆ ಇಲಾಖೆ 1956ನೇ ನವಂಬರ್ 1ರಂದು ಅಂದಿನ ಮೈಸೂರು ಸರ್ಕಾರ ರಸ್ತೆ ಸಾರಿಗೆ ಇಲಾಖೆಯೊಂದಿಗೆ ವಿಲೀನಗೊಳಿಸಲಾಯಿತು. ವಿಲೀನ ಹೊಂದುವ ಮುನ್ನ ಹುಮ್ನಾಬಾದ್, ಗುಲ್ಬರ್ಗ, ಲಿಂಗಸಗೂರು ಮತ್ತು ರಾಯಚೂರಿನ ನಾಲ್ಕು ಘಟಕಗಳ ಮೂಲಕ ಪ್ರದೇಶದಲ್ಲಿ 101 ಬಸ್ಸುಗಳು ಸಂಚರಿಸುತ್ತಿದ್ದವು.

ವಿಲೀನದ ನಂತರ ಆ ಪ್ರದೇಶದಲ್ಲಿನ ಅಗತ್ಯ ಮತ್ತು ಮೋಟಾರು ವಾಹನ ಸಂಚಾರ ಯೋಗ್ಯ ರಸ್ತೆಗಳ ಅಭಿವೃದ್ಧಿಯನ್ನಾದರಿಸಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಬಸ್ಸುಗಳ ಸಂಖ್ಯೆಯನ್ನು ಹೆಚ್ಚಿಸುತ್ತಾ ಬಂತು. ಬೀದರ್ ಒಂದು ಜಿಲ್ಲಾ ಕೇಂದ್ರವಾಗಿದ್ದರೂ ಸಹ ನಿಜಾಂ ರಾಜ್ಯ ರಸ್ತೆ ಸಾರಿಗೆ ಇಲಾಖೆ ಅಲ್ಲಿ ಒಂದು ಬಸ್ ನಿಲ್ದಾಣವನ್ನಾಗಲಿ ಅಥವಾ ಒಂದು ಬಸ್ ಘಟಕವನ್ನಾಗಲಿ ಸ್ಥಾಪಿಸಿರಲಿಲ್ಲ.

ಜಿಲ್ಲೆಯಲ್ಲಿ ಉತ್ತಮ ಸಾರಿಗೆ ವ್ಯವಸ್ಥೆಯನ್ನು ಒದಗಿಸುವ ಸಲುವಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಬೀದರ್‌ನಲ್ಲಿ ಒಂದು ಬಸ್ ನಿಲ್ದಾಣ ಮತ್ತು ಒಂದು ಘಟಕ ನಿರ್ಮಿಸಲು 23125 ಚದರ ಅಡಿಗಳ (21 ಗುಂಟೆಗಳು) ಜಮೀನನ್ನು ಪುರಸಭೆಯಿಂದ ಖರೀದಿಸಿತು ಮತ್ತು ಸದರಿ ಜಮೀನಿಗೆ ಹೊಂದಿಕೊಂಡಂತೆ 1 ಎಕರೆ 35 ಗುಂಟೆಗಳ ವಿಸ್ತೀರ್ಣವುಳ್ಳ ಖಾಸಗೀ ಜಮೀನನ್ನು ದಿನಾಂಕ 26-9-1963ರಂದು ಸ್ವಾಧೀನ ಪಡಿಸಿಕೊಂಡಿತು.

ಸದರಿ 2 ಏಕರೆ 16 ಗುಂಟೆ ಪ್ರದೇಶದ ಒಂದು ಏಕರೆಯನ್ನು ಬಸ್ ನಿಲ್ದಾಣ ನಿರ್ಮಿಸಲು ಉಪಯೋಗಿಸಿಕೊಂಡು ಉಳಿದ 1 ಏಕರೆ 16 ಗುಂಟೆ ಪ್ರದೇಶವನ್ನು ಚಿಕ್ಕ ಘಟಕವನ್ನು ನಿರ್ಮಿಸುವ ಸಲುವಾಗಿ ಕಾದಿರಿಸಲಾಯಿತು. 1963ರಲ್ಲಿ ಬೀದರ್ ಬಸ್‌ನಿಲ್ದಾಣದಿಂದ ಸುಮಾರು 50 ಬಸ್ಸುಗಳ ಸಂಚಾರ ನಿರ್ವಹಣೆ ಮಾಡುತ್ತಿದ್ದವು. ಅವುಗಳು ಹುಮ್ನಾಬಾದ್ ಮತ್ತು ಗುಲ್ಬರ್ಗಾದಲ್ಲಿನ ಘಟಕಗಳಿಂದ ಕಾರ್ಯಾಚರಣೆ ನಿರ್ವಹಿಸುತ್ತಿದ್ದವು.

ತದನಂತರ, ಬೀದರ್ ಜಿಲ್ಲೆಯಲ್ಲಿ ರಸ್ತೆಗಳ ಅಭಿವೃದ್ಧಿಯಾದಂತೆ, ಹೆಚ್ಚು ಹೆಚ್ಚು ಗ್ರಾಮಗಳಿಗೆ ಬಸ್ ಸಂಪರ್ಕಗಳನ್ನೂ ಸಹ ಪ್ರಾರಂಭಿಸಲಾಯಿತು. ಬಸ್ಸುಗಳ ಸಂಖ್ಯೆ ಗಮನಾರ್ಹವಾಗಿ ಬೆಳೆಯಿತು. ಇದರಿಂದಾಗಿ ಬಸ್ ನಿಲ್ದಾಣವು ಇಕ್ಕಟ್ಟಾಯಿತು. ಮತ್ತು ಕಿಷ್ಕಿಂದ ಹೆಚ್ಚಾಯಿತು. ಜಿಲ್ಲೆಯಲ್ಲಿನ ಬಸ್ ಸಂಚಾರ ವ್ಯವಸ್ಥೆಯನ್ನು ಉತ್ತಮಪಡಿಸುವ ಸಲುವಾಗಿ ಬಸ್ ನಿಲ್ದಾಣದ ಹಿಂಭಾಗದಲ್ಲಿನ 1 ಎಕರೆ ಮತ್ತು 16 ಗುಂಟೆ ಭೂಮಿಯಲ್ಲಿ ಒಂದು ಚಿಕ್ಕ ಘಟಕವನ್ನು ದಿನಾಂಕ 21-10-1981ರಂದು ಪ್ರಾರಂಭಿಸಲಾಯಿತು. ಒಂದು ವಿಶಾಲವಾದ ಬಸ್ ಘಟಕ ಮತ್ತು ಒಂದು ಬಸ್ ನಿಲ್ದಾಣವನ್ನು ನಿರ್ಮಿಸುವುದು ಅಗತ್ಯವೆಂದು ಸಂಸ್ಥೆಯು ಮನಗಂಡಿತು. ಅದರಂತೆಯೇ ಸರ್ವೇ ನಂಬರ್ 27:1ರಲ್ಲಿ 12 ಎಕರೆ ಮತ್ತು 20 ಗುಂಟೆಗಳ ವಿಸ್ತೀರ್ಣವುಳ್ಳ ಭೂಮಿಯನ್ನು ದಿನಾಂಕ 21-2-79ರಂದು ಸ್ವಾಧೀನ ಪಡಿಸಿಕೊಳ್ಳಲಾಯಿತು.

1985ರಲ್ಲಿ ಜಿಲ್ಲೆಯಲ್ಲಿನ ಬಸ್ ಮಾರ್ಗಗಳನ್ನು ರಾಷ್ಟ್ರೀಕರಣ ಗೊಳಿಸಲಾಯಿತು. ದಿನಾಂಕ 7-11-1985ರಂದು ರಾಷ್ಟ್ರೀಕರಣ ಯೋಜನೆಯನ್ನು ಕಾರ್ಯಗತಗೊಳಿಸಿದ ನಂತರ ಘಟಕ ಮತ್ತು ಬಸ್ ನಿಲ್ದಾಣಗಳಲ್ಲಿನ ಇಕ್ಕಟ್ಟು ಮತ್ತಷ್ಟು ಹೆಚ್ಚಾಯಿತು. ಇದನ್ನು ನಿವಾರಿಸಲು ಮತ್ತು ಭವಿಷ್ಯತ್ತಿನ ಅಗತ್ಯವನ್ನು ಪೂರೈಸುವ ಸಲುವಾಗಿ ಒಂದು ವಿಶಾಲವಾದ ಘಟಕವನ್ನು ಮತ್ತು ಮಾದರಿ ಬಸ್ ನಿಲ್ದಾಣವನ್ನು ನಿರ್ಮಿಸಲು ತೀರ್ಮಾನಿಸಲಾಯಿತು. ಅದರಂತೆಯೆ ಸರ್ವೆ ಸಂಖ್ಯೆ 27:1 ರಲ್ಲಿನ 4 ಎಕರೆ 10 ಗುಂಟೆಗಳ ಪ್ರದೇಶದಲ್ಲಿ ರೂ.37.48 ಲಕ್ಷಗಳ ವೆಚ್ಚದಲ್ಲಿ ಒಂದು ನೂತನ ಘಟಕವನ್ನು ನಿರ್ಮಿಸಿ 1988 ರ ಮಾರ್ಚ್ ತಿಂಗಳಲ್ಲಿ ಪ್ರಾರಂಭಿಸಲಾಯಿತು. ಹೊಸ ಘಟಕಕ್ಕೆ ಹೊಂದಿಕೊಂಡಂತೆ ಬೀದರ್ - ಉದ್ಗೀರ್ ರಸ್ತೆಗೆ ಹೊಂದಿಕೊಂಡಿರುವ 3 ಎಕರೆ 30 ಗುಂಟೆ ಜಮೀನಿನಲ್ಲಿ ರೂ. 49.46 ಲಕ್ಷಗಳ ವೆಚ್ಚದಲ್ಲಿ ಒಂದು ಮಾದರಿ ಸುಸಜ್ಜಿತ ಬಸ್ ನಿಲ್ದಾಣವನ್ನೂ ನಿರ್ಮಿಸಲಾಯಿತು. ಹಳೆ ಬಸ್ ನಿಲ್ದಾಣದ ವಿಸ್ತೀರ್ಣ ಒಂದು ಎಕರೆ ಇದ್ದರೆ ಹೊಸ ನಿಲ್ದಾಣದ ವಿಸ್ತೀರ್ಣ 3 ಏಕರೆ ಮತ್ತು 30 ಗುಂಟೆಗಳು. ಈ ಬಸ್ ನಿಲ್ದಾಣವನ್ನು ದಿನಾಂಕ 1-2-95ರಂದು ಪ್ರಾರಂಭಿಸಲಾಗಿದೆ. ಹೊಸ ಬಸ್ ನಿಲ್ದಾಣ ಮತ್ತು ಹಳೆಯ ಬಸ್ ನಿಲ್ದಾಣದ ನಡುವಿನ ಅಂತರಸುಮಾರು 1.5 ಕಿ.ಮೀ ಗಳಾಗುವುದು.

ಹೊಸ ಬಸ್ ನಿಲ್ದಾಣದಿಂದ ಈಗ 375 ಬಸ್ಸುಗಳು ಹೊರಡುತ್ತಿದ್ದು ಆ ಪೈಕಿ 200 ಬಸ್ಸುಗಳು, ಬೀದರ್ ಉತ್ತರ ಮತ್ತು ಪೂರ್ವ ಭಾಗಗಳಿಗೆ ಹೋಗುತ್ತಿರುವುವು. ಹಾಗೂ 175 ಬಸ್ಸುಗಳು ಪಶ್ಚಿಮ ಭಾಗಕ್ಕೆ ಹೋಗುತ್ತಿರುವುವು. ಉತ್ತರ ಮತ್ತು ಪೂರ್ವ ಭಾಗಗಳಿಗೆ ಸಂಚರಿಸುವ ಬಸ್ಸುಗಳು ಬಸ್ ನಿಲ್ದಾಣಕ್ಕೆ ಸಮೀಪದಲ್ಲಿ ಹಾದು ಹೋಗುತ್ತಿವೆ ಮತ್ತು ಅವುಗಳಿಗೆ ಹಳೆಯ ಬಸ್ ನಿಲ್ದಾಣದ ಹತ್ತಿರ ನಿಲುಗಡೆಯನ್ನು ಒದಗಿಸಲಾಗಿದೆ. ಸದರೀ ಬಸ್ಸುಗಳ ವಿವರಗಳು ಈ ಕೆಳಗಿನಂತಿವೆ.

| ವಲಯ | ಸಾರಿಗೆಗಳ ಸಂಖ್ಯೆ |
|---|---|
| ಔರಾದ್ | 127 |
| ಜಹಿರಾಬಾದ್ | 37 |
| ಮನ್ನಾ-ಎಖೇಳಿ | 28 |
| ಮನಹಳ್ಳಿ | 9 |
| ಚಿಲ್ಲರಗಿ | 5 |
| ಒಟ್ಟು | 200 |

ಈ ಬಸ್ಸುಗಳು ಹಳೆ ಬಸ್ ನಿಲ್ದಾಣಕ್ಕೆ ಸಮೀಪದಲ್ಲಿ ಹಾದು ಹೋಗುತ್ತಿರುವುದರಿಂದ ಪ್ರಯಾಣಿಕ ವರ್ಗಕ್ಕೆ ಯಾವ ವಿಧವಾದ ಅನಾನುಕೂಲವೂ ಉಂಟಾಗುತ್ತಿರುವುದಿಲ್ಲ.

ಉಳಿದ 175 ಬಸ್ಸುಗಳು ಬೀದರ್‌ನ ಪಶ್ಚಿಮ ಭಾಗದ ಕಡೆ ಕಾರ್ಯಾಚರಣೆ ಮಾಡುತ್ತಿದ್ದು ಅವುಗಳ ವಿವರ ಈ ಕೆಳಗಿನಂತಿವೆ.

| ವಲಯ | ಸಾರಿಗೆಗಳ ಸಂಖ್ಯೆ |
|---|---|
| ಬಸವ ಕಲ್ಯಾಣ | 48 |
| ಹುಮ್ನಾಬಾದ್ | 47 |
| ಗುಲ್ಬರ್ಗಾ | 38 |
| ಭಾಲ್ಕಿ | 27 |
| ಹೈದ್ರಾಬಾದ್ | 11 |
| ಚಿಂಚೋಳಿ | 4 |

ಮೇಲಿನ ಬಸ್ಸುಗಳು ಹಳೆ ಬಸ್ ನಿಲ್ದಾಣದ ಮೂಲಕ ಸಂಚರಿಸುವಂತೆ ಮಾಡಿದಲ್ಲಿ ನಗರದ ರಸ್ತೆಗಳಲ್ಲಿ ಹೆಚ್ಚಿನ ಕಿಷ್ಕಿಂದ ಉಂಟಾಗುವುದಲ್ಲದೆ ಪ್ರತಿಯೊಂದು ಬಸ್ಸು ಮೂರು ನಿರುಪಯುಕ್ತ ಕಿಲೋಮೀಟರುಗಳನ್ನು ಕ್ರಮಿಸಬೇಕಾಗುತ್ತದೆ ಮತ್ತು ಹೊಸ ಬಸ್ ನಿಲ್ದಾಣದಲ್ಲಿ ಬಸ್ಸುಗಳಿಗೆ ಹತ್ತುವ ಪ್ರಯಾಣಿಕರ ಅನುಕೂಲಕ್ಕಾಗಿ ಹಳೆ ಬಸ್ ನಿಲ್ದಾಣ ಮತ್ತು ಹೊಸ ಬಸ್ ನಿಲ್ದಾಣಗಳ ನಡುವೆ 2 ಪ್ರತ್ಯೇಕ ಬಸ್ಸುಗಳನ್ನು ಓಡಿಸಲಾಗುತ್ತಿದೆ. ಅವು ಬೆಳಗ್ಗೆ 0600 ಘಂಟೆಯಿಂದ ರಾತ್ರಿ 0930 ಘಂಟೆಯವರಿಗೆ ಪ್ರತಿ ದಿಕ್ಕಿನಲ್ಲಿ 30 ಸುತ್ತುಗಳ ಕಾರ್ಯಚರಣೆ ಮಾಡುತ್ತಿವೆ.

ಆದುದರಿಂದ ಪ್ರಯಾಣಿಕರು ತ್ರಿಚಕ್ರ ವಾಹನಗಳು, ಟಾಂಗಾಗಳು ಮುಂತಾದ ವೆಚ್ಚದಾಯಕವಾದ ಇತರೆ ಸ್ಥಳೀಯ ಸಾರಿಗೆ ಮಾಧ್ಯಮಗಳನ್ನು ಅವಲಂಬಿಸುವ ಅವಶ್ಯಕತೆ ಇರುವುದಿಲ್ಲ. ಈ ವ್ಯವಸ್ಥೆಯಿಂದಾಗಿ ಹೊಸ ಬಸ್ ನಿಲ್ದಾಣಕ್ಕೆ ಹೋಗಲು ಪ್ರಯಾಣಿಕರಿಗೆ ಯಾವುದೇ ರೀತಿಯ ತೊಂದರೆ ಇರುವುದಿಲ್ಲ.

ಎಲ್ಲಾ ಬಸ್ಸುಗಳು ಹಳೆಯ ಬಸ್ ನಿಲ್ದಾಣದ ಮುಖಾಂತರ ಸಂಚರಿಸುವಂತೆ ವ್ಯವಸ್ಥೆ ಮಾಡಬೇಕೆಂದು ಒತ್ತಾಯಿಸಿ ಒಂದು ವರ್ಗದ ಜನರು ಚಳುವಳಿ ಮಾಡಿದ್ದರು. ಮತ್ತು ದಿನಾಂಕ 20-2-95 ರಂದು ಕೆಲವು ವ್ಯಕ್ತಿಗಳು ಧರಣಿ ಆಚರಿಸಿದರು. ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪೋಲೀಸ್ ಅಧಿಕಾರಿಗಳಂತಹ ಸ್ಥಳೀಯ ವರಿಷ್ಠರಿಗೂ ಮತ್ತು ಇತರ ಸ್ಥಳೀಯ ನಾಯಕರುಗಳಿಗೂ ವ್ಯವಸ್ಥೆಯನ್ನು ವಿವರಿಸಿದ ನಂತರ ಧರಣಿಯನ್ನು ಹಿಂತೆಗೆದುಕೊಳ್ಳಲಾಯಿತು.

ಹೊಸ ಬಸ್ ನಿಲ್ದಾಣದಲ್ಲಿ ಆಧುನಿಕ ಸೌಲಭ್ಯಗಳನ್ನು ಒದಗಿಸಲಾಗಿದೆ ಮತ್ತು ಅದು ಹೆಚ್ಚು ವಿಶಾಲವಾಗಿದ್ದು ಪ್ರಯಾಣಿಕರುಗಳಿಗೆ ಹೆಚ್ಚಿನ ಆಸನಗಳ ಸೌಲಭ್ಯವನ್ನು ಒದಗಿಸಲಾಗಿದೆ. ಎಲ್ಲಾ ಬಸ್ಸುಗಳು ಹಳೇ ಬಸ್ ನಿಲ್ದಾಣವನ್ನು ಸಂಪರ್ಕಿಸುವಂತೆ ಕ್ರಮ ಕೈಗೊಂಡಲ್ಲಿ ಅದರಿಂದ ನಗರದ ರಸ್ತೆಗಳಲ್ಲಿ ವಾಹನಗಳ ದಟ್ಟಣೆ ಹೆಚ್ಚಾಗಿ ಕಿಷ್ಕಿಂದವಾಗುವುದಲ್ಲದೆ ಹೊಸ ಬಸ್ ನಿಲ್ದಾಣದಲ್ಲಿ ಬಸ್ಸಗಳಿಗೆ ಹತ್ತಿದ ಪ್ರಯಾಣಿಕರುಗಳಿಗೆ ಅನಾನುಕೂಲ ಉಂಟಾಗುತ್ತದೆ. ಹಾಗೂ ಒಂದು ಸುಸಜ್ಜಿತ ಬಸ್ ನಿಲ್ದಾಣವನ್ನು ನಿರ್ಮಿಸಿದ ಉದ್ದೇಶ ವಿಫಲವಾಗುವುದು. ಆದುದರಿಂದ ಎಲ್ಲಾ ಬಸ್ಸುಗಳಿಗೂ ಬೀದರ್‌ನ ಹಳೆಯ ಬಸ್ ನಿಲ್ದಾಣದ ಮಾರ್ಗವಾಗಿ ಸಂಚರಿಸುವ ವ್ಯವಸ್ಥೆ ಅಗತ್ಯವಿಲ್ಲ ಎಂದು ನಿರ್ಧರಿಸಲಾಗಿದೆ.

**12.20. ಪಿ.ಎಂ**

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : ಸನ್ಮಾನ್ಯ ಅಧ್ಯಕ್ಷರೆ, ಅಲ್ಲಿರುವ ಹಳೆಯ ಬಸ್ ನಿಲ್ದಾಣಕ್ಕೂ ಹೊಸ ಬಸ್ ನಿಲ್ದಾಣಕ್ಕೂ ಸುಮಾರು ನಾಲ್ಕು ಕಿಲೋ ಮೀಟರ್‌ಗಳಷ್ಟು ವ್ಯತ್ಯಾಸವಿದೆ. ಬಸ್ಸುಗಳು ಹಳೆಯ ಬಸ್ ನಿಲ್ದಾಣದ ಮೂಲಕ ಬರಲು ಕಾನೂನು ಮತ್ತು ಸುವ್ಯವಸ್ಥೆಯ ತೊಂದರೆಯಿದೆ. ಅಲ್ಲಿ ಎಲ್ಲಾ ಪಕ್ಷದವರು ಸೇರಿಕೊಂಡು ಒಂದು ಆ್ಯಕ್ಷನ್ ಕಮಿಟಿ ಮಾಡಿಕೊಂಡಿದ್ದು, ವಿಷಯ ಜನರ ಪರವಾಗಿದೆ. ತಾವು ಇದನ್ನು ಸುಮ್ಮನೆ ಪ್ರತಿಷ್ಠೆಯ ವಿಷಯವಾಗಿರಿಸಿಕೊಂಡರೆ ತುಂಬಾ ತೊಂದರೆಯಾಗುತ್ತದೆ. ಅಲ್ಲಿಗೆ ಸಿಟಿ ಬಸ್ಸುಗಳನ್ನು ಏಕೆ ಹಾಕಿದ್ದೀರಿ? ಆ ಸಿಟಿ ಬಸ್ಸುಗಳು ಬೇರೆ ಊರುಗಳಿಗೆ ಹೋಗುತ್ತವೆ. ಹಳೆಯ ಬಸ್ ನಿಲ್ದಾಣಕ್ಕೆ ಹೋಗಲು ಸರಿಯಾದ ಬಸ್ ಸೌಕರ್ಯವಿಲ್ಲದಿರುವುದರಿಂದ ಆಟೋರಿಕ್ಷಾದಲ್ಲಿ ಪ್ರಯಾಣಿಸಿದರೆ ಕನಿಷ್ಠ 20 ರೂಪಾಯಿಗಳಾಗುತ್ತದೆ. ಬಡವರು ಇಷ್ಟು ಹಣ ತೆತ್ತು ಹೋಗುವುದಕ್ಕಾಗುವುದಿಲ್ಲ. ಅಲ್ಲದೆ, ಹಳೆಯ ಬಸ್ ನಿಲ್ದಾಣದ ಹತ್ತಿರ ಜಿಲ್ಲಾಧಿಕಾರಿಗಳ ಕಛೇರಿ, ರೈಲ್ವೆ ನಿಲ್ದಾಣ ಮುಂತಾದ ಪ್ರಮುಖ ಕಛೇರಿಗಳೆಲ್ಲವೂ ಅಲ್ಲಿಯೇ ಇರುವುದರಿಂದ ಜನರ ದಿನನಿತ್ಯ ಚಟುವಟಿಕೆಗಳಿಗೆ ತೊಂದರೆಯಾದಂತೆ ಅನುಕೂಲ ಮಾಡಿಕೊಡಬೇಕೆಂದು ತಮ್ಮ ಮೂಲಕ ಸಚಿವರಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ಎಸ್.ಬೀಳಗಿ : ಮಾನ್ಯ ಅಧ್ಯಕ್ಷರೆ, ಅಲ್ಲಿರುವ ಹಳೆಯ ಬಸ್ ನಿಲ್ದಾಣ ಮತ್ತು ಹೊಸ ಬಸ್ ನಿಲ್ದಾಣಗಳ ಪರಿಸ್ಥಿತಿಯನ್ನು ತಮ್ಮ ಗಮನಕ್ಕೆ ತರುವುದಾದರೆ ಮಾನ್ಯ ಸದಸ್ಯರು ಹೇಳಿದಂತೆ ವ್ಯವಸ್ಥೆ ಮಾಡಲು ಕಷ್ಟವಾಗುತ್ತದೆ ಮತ್ತು ಅನಾನುಕೂಲವಾಗುತ್ತದೆ. ಅಲ್ಲಿ ಹಳೆಯ ಬಸ್ ನಿಲ್ದಾಣ ಪೂರ್ವಕ್ಕಿದ್ದು, ಪಶ್ಚಿಮಕ್ಕೆ ಹೊಸ ಬಸ್ ನಿಲ್ದಾಣವಿದೆ. ಇದರ ನಡುವಿನ ಅಂತರ ಒಂದೂವರೆ ಕಿಲೋಮೀಟರ್ ಇದೆ. ಈಗಾಗಲೇ ನಾನು ಹೇಳಿಕೆಯಲ್ಲಿ ತಿಳಿಸಿದಂತೆ ಸುಮಾರು 200 ಬಸ್‌ಗಳು ಹೊಸ ಬಸ್ ನಿಲ್ದಾಣದಿಂದ ಹೊರಟು ಪೂರ್ವಕ್ಕಿರುವ ಹಳೆಯ ಬಸ್ ನಿಲ್ದಾಣ ತಲುಪಿ ಅಲ್ಲಿಂದ ಬೇರೆ ಬೇರೆ ಗ್ರಾಮಗಳಿಗೆ ತೆರಳುತ್ತಿವೆ. ಇಲ್ಲಿಂದ ಎಷ್ಟು ಬಸ್‌ಗಳು ಹೋಗುತ್ತದೆ ಎಂಬುದರ ಬಗ್ಗೆಯೂ ವಿವರಣೆ ಕೊಟ್ಟಿದ್ದೇನೆ. ಇವರ ಬೇಡಿಕೆ ಏನೆಂದರೆ ಪಶ್ಚಿಮ ಮಾರ್ಗವಾಗಿ ಹೋಗುವ ಬಸ್ಸುಗಳೂ ಸಹ ಪೂರ್ವಕ್ಕಿರುವ ಹಳೆಯ ಬಸ್ ನಿಲ್ದಾಣ ತಲುಪಿ ಅಲ್ಲಿಂದ ಹಳ್ಳಿಗಳಿಗೆ ಹೋಗಬೇಕೆಂದು.ಅಂದರೆ ಒಂದೂವರೆ ಕಿ.ಮೀ ಮತ್ತೆ ಒಂದೂವರೆ ಕಿ.ಮೀ ಒಟ್ಟು ಮೂರು ಕಿ.ಮೀ ಹೆಚ್ಚಾಗುತ್ತದೆ. ಇಷ್ಟಲ್ಲದೆ ಹೊಸ ಬಸ್ ಸ್ಟ್ಯಾಂಡ್ ಪ್ರವೇಶಿಸುವುದಕ್ಕೋಸ್ಕರ..

ಶ್ರೀ ಗುರುಪಾದಪ್ಪನಾಗಮಾರಪಳ್ಳಿ : ನಾವು ಇದರ ಬಗ್ಗೆ ಅರ್ಧ ಗಂಟೆ ಚರ್ಚೆಗೆ ಅವಕಾಶ ಮಾಡಿಕೊಡಬೇಕು. ನಮಗೆ ಅಲ್ಲಿ ಸಮಸ್ಯೆ ಇದೆ. ನಾನು ಇದಕ್ಕೆ ಸಹಿ ಮಾಡಿಲ್ಲ. ಆದ್ದರಿಂದ ಇಂದು ಮಾತನಾಡಲು ಬರುವುದಿಲ್ಲ. ಈಗ ಜಿಲ್ಲೆಯಲ್ಲಿ ಸತ್ಯಾಗ್ರಹ ಕುಳಿತಿದ್ದಾರೆ. ತೊಂದರೆ ಇದೆ. ಇದನ್ನು ಪರಿಹಾರ ಮಾಡಬೇಕು. ಇಲ್ಲದಿದ್ದರೆ ತೊಂದರೆಯಾಗುತ್ತದೆ.

ಅಧ್ಯಕ್ಷರು : ನಿಮ್ಮ ಜಿಲ್ಲಾ ಶಾಸಕರು ಮತ್ತು ಮಂತ್ರಿಗಳು ನಮ್ಮಕಛೇರಿಗೆ ಬಂದರೆ ಪರಿಹಾರ ಮಾಡುತ್ತೇವೆ.

ಶ್ರೀ ಕೆ.ಎಸ್. ಬೀಳಗಿ: ನಾನು ಮಾನ್ಯ ಸದಸ್ಯರುಗಳಿಗೆ ಈಗಾಗಲೇ ಹೇಳಿದ್ದೇನೆ. ನಾನು ಸಧ್ಯದಲ್ಲಿಯೇ ಬೀದರ್‌ಗೆ ಹೋಗುತ್ತಿದ್ದೇನೆ. ಅಲ್ಲಿಗೆ ನಾನು ಹೋದಾಗ ಮಾನ್ಯ ಸದಸ್ಯರುಗಳನ್ನೆಲ್ಲಾ ಕರೆದು ಅದನ್ನು ಪರಿಶೀಲನೆ ಮಾಡಿ ಚರ್ಚೆ ಮಾಡಿ ಇದನ್ನು ಪರಿಹಾರ ಮಾಡಲು ಪ್ರಯತ್ನಪಡುತ್ತೇನೆ.

ಅಧ್ಯಕ್ಷರು : ಅದು ಒಳ್ಳೆಯ ಕೆಲಸ. ತಾವು ಸ್ಥಳಕ್ಕೆ ಹೋಗಿ ಪರಿಹಾರ ಮಾಡುತ್ತೇನೆಂದು ಹೇಳುತ್ತಿದ್ದಾರೆ.

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : ಹಳೆಯ ಬಸ್ ಸ್ಟ್ಯಾಂಡ್‌ಗೆ ಯಾವ ಬಸ್ಸುಗಳೂ ಸಹ ಬರುವುದ್ದಿಲ ಅವರು ಮಾಡುತ್ತಿರುವುದು ತಪ್ಪು ಸ್ಟೇಟ್‌ಮೆಂಟ್ ಅವರ ಅಧಿಕಾರಿಗಳು ಈ ರೀತಿಯ ಹೇಳಿಕೆ ಕೊಟ್ಟು ಸಚಿವರನ್ನು ತಪ್ಪುದಾರಿಗೆ ಎಳೆಯುತ್ತಿದ್ದಾರೆ. ಅಧಿಕಾರಿಗಳಿಗೆ ಮಿಸ್‌ಗೈಡ್ ಮಾಡುತ್ತಿದ್ದಾರೆ. ಅಲ್ಲಿ ಇರುವ ತೊಂದರೆಯ ಬಗ್ಗೆ ನಮ್ಮ ಭಾಗದ ಉಸ್ತುವಾರಿ ಸಚಿವರು ಮತ್ತು ಸಾರಿಗೆ ಸಚಿವರು ಪರಿಹಾರ ಮಾಡಿಕೊಡುತ್ತೇವೆಂದು ಬರವಣಿಗೆಯಲ್ಲಿ ಬರೆದು ಕೊಡಲಿ. ಇದರ ಬಗ್ಗೆ ಸರ್ಕಾರಕ್ಕೆ ಕಾಳಜಿ ಇದೆಯೇ ಎಂದು ಕೇಳಬಯಸುತ್ತೇನೆ.

ಅಧ್ಯಕ್ಷರು : ಸಾರಿಗೆ ಸಚಿವರು ಬೀದರ್‌ಗೆ ಹೋಗಿ ನಿಮ್ಮಗಳನ್ನು ಜೊತೆಯಲ್ಲಿ ಇಟ್ಟುಕೊಂಡು ಸ್ಥಳವನ್ನು ಪರಿಶೀಲನೆ ಮಾಡಿ ನಿಮ್ಮೊಂದಿಗೆ ಚರ್ಚೆ ಮಾಡಿ ನಿಮ್ಮ

ಸಮಸ್ಯೆಯೇನಿದೆ ಅದನ್ನು ಪರಿಹಾರ ಮಾಡುತ್ತಾರೆ. ಈ ಅಧಿವೇಶನ ಮುಗಿದ ತಕ್ಷಣ ಆ ಕೆಲಸವನ್ನು ಮಾಡುತ್ತಾರೆ. ಅಲ್ಲಿಗೆ ಬಂದು ಪರಿಶೀಲನೆ ಮಾಡಿ ಪರಿಹಾರ ಮಾಡುತ್ತಾರೆ.

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : ನಮ್ಮಲ್ಲಿ ಬಹಳ ತೊಂದರೆ ಇದೆ. ಒಂದು ವಾರದಲ್ಲಿ ಪರಿಹಾರ ಮಾಡುತ್ತೇವೆಂದು ಉಸ್ತುವಾರಿ ಸಚಿವರು ಹೇಳಿದ್ದಾರೆ. ಆ ರೀತಿ ಮಾಡದಿದ್ದರೆ ಇಲ್ಲಿ ರಾಜಕೀಯವನ್ನು ಮಾಡಲು ಪ್ರಯತ್ನ ಮಾಡಿದಂತಾಗುತ್ತದೆ.

ಶ್ರೀ ಗುರುಪಾದಪ್ಪನಾಗಮಾರಪಳ್ಳಿ : ಇವತ್ತೇ ಎಲ್ಲಾ ಶಾಸಕರುಗಳನ್ನು ಕರೆದು ಒಪ್ಪಂದ ಮಾಡಿದರೆ ಒಳ್ಳೆಯದು.

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : ಇದರ ಬಗ್ಗೆ ಉಸ್ತುವಾರಿ ಸಚಿವರು ಹೇಳಲಿ. ಆದರೆ ಇದರ ಬಗ್ಗೆ ಬರೆದುಕೊಟ್ಟಿದ್ದಾರೆ.

ಅಧ್ಯಕ್ಷರು : ಇವತ್ತು ಮಧ್ಯಾಹ್ನ ಸಾರಿಗೆ ಸಚಿವರು ಅವರ ಕಛೇರಿಗೆ ತಮ್ಮಗಳೆಲ್ಲರನ್ನು ಕರೆದು ಮಾತನಾಡುತ್ತಾರೆ.

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : (ಉರ್ದುವಿನಲ್ಲಿ ಮಾತನಾಡಿದರು)

ಶ್ರೀ ವಾಟಾಳ್ ನಾಗರಾಜ್ : ಇದು ಅರ್ಥವಾಗದ ಭಾಷೆ.

ಅಧ್ಯಕ್ಷರು : ದಯವಿಟ್ಟು ಕುಳಿತುಕೊಳ್ಳಿ, ಅವರು ಕನ್ನಡದಲ್ಲಿ ಮಾತನಾಡುತ್ತಿದ್ದರು. ಆದರೆ ಸರಿಯಾಗಿ ವಿಷಯವನ್ನು ಹೇಳಲು ಆಗುತ್ತಿಲ್ಲವಾದರಿಂದ ಆ ರೀತಿ ಮಾತನಾಡುತ್ತಿದ್ದಾರೆ.

(ಗೊಂದಲ)

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : ನಮಗೆ ನಮ್ಮ ಭಾಷೆಯಲ್ಲಿ ಸ್ವಲ್ಪ ಮಾತನಾಡಲು ಅವಕಾಶ ಮಾಡಿಕೊಡಿ. ನಾವು ಇಲ್ಲಿ ಏಕೆ ಬಂದಿದ್ದೇವೆ? ನಮ್ಮ ಮನಸ್ಸಿನಲ್ಲಿರುವ ವಿಚಾರಗಳನ್ನು ಸುಮ್ಮನೆ ಇಟ್ಟುಕೊಂಡು ಮುಖರಂತೆ ಇಲ್ಲಿ ಕುಳಿತುಕೊಳ್ಳಬೇಕೇ? ನಮ್ಮ ಸಮಸ್ಯೆಯನ್ನು ಇಲ್ಲಿ ಹೇಗೆ, ಹೇಳಬೇಕು. ನಮ್ಮ ಭಾಗದಲ್ಲಿ ಕಾನೂನು ಸುವ್ಯವಸ್ಥೆ ಸಮಸ್ಯೆ ಇದೆ.

(ಉರ್ದುವಿನಲ್ಲಿ ಮಾತನಾಡಿದರು)

ಅಧ್ಯಕ್ಷರು : ಹಷ್ಮಿಯವರೇ, ದಯಮಾಡಿ ಕುಳಿತುಕೊಳ್ಳಿ. ನಾನು ಇಲ್ಲಿ ತಮ್ಮ ಜೊತೆಗೆ ಉರ್ದುವಿನಲ್ಲಿ ಮಾತನಾಡಲಾಗುವುದಿಲ್ಲ. ತಮ್ಮ ಭಾಗಕ್ಕೆ ಬಂದಾಗ ಮಾತನಾಡುತ್ತೇನೆ.

ಶ್ರೀ ಸಯ್ಯದ್ ಜುಲ್ಫಿಕರ್ ಹಷ್ಮಿ : ನಮಗೆ ತೊಂದರೆಯಾಗಿದೆ. ಅದನ್ನು ಇಂಥ ಸಮಯದಲ್ಲಿ ಅಥವಾ ಇಂಥ ದಿನಾಂಕದೊಳಗೆ ಪರಿಹಾರ ಮಾಡಿಕೊಡುತ್ತೇವೆಂದು ಹೇಳಬೇಕು.

ಅಧ್ಯಕ್ಷರು : ಇವತ್ತೇ ಸಾರಿಗೆ ಸಚಿವರು ನಿಮ್ಮ ಜಿಲ್ಲೆಯ ಶಾಸಕರುಗಳನ್ನು ಅವರ ಕಛೇರಿಗೆ ಕರೆಸುತ್ತಾರೆ, ನೀವು ಇಲ್ಲ ಏನೇನು ವಿಚಾರಗಳನ್ನು ಹೇಳಬೇಕೆಂದಿದ್ದೀರೋ ಅದನ್ನು ಅಲ್ಲಿ ಹೇಳಿ. ತಾವುಗಳೆಲ್ಲರೂ ಕುಳಿತುಕೊಂಡು ಒಟ್ಟಿಗೆ ಚರ್ಚೆ ಮಾಡಿ ಇದಕ್ಕೆ ಪರಿಹಾರ ಕಂಡುಕೊಳ್ಳಬೇಕು.

(ಅ) ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣ

ಶ್ರೀ ಕೆ.ಎನ್.ನಾಗೇಗೌಡ (ಕಿರುಗಾವಲು) : ಮಾನ್ಯ ಅಧ್ಯಕ್ಷರೇ, ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣದಿಂದ ಮೈಸೂರು ಮತ್ತು ಮಂಡ್ಯ ಜಿಲ್ಲೆಯ ರೈತರಿಗೆ ಉಂಟಾಗಿರುವ ತೊಂದರೆ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳ ಗಮನವನ್ನು ಸೆಳೆಯುತ್ತೇನೆ.

ಶ್ರೀ ಪಿ.ಜಿ.ಆರ್.ಸಿಂಧ್ಯ (ಗೃಹ ಸಚಿವರು) : ಮಾನ್ಯ ಅಧ್ಯಕ್ಷರೆ, ಮುಖ್ಯಮಂತ್ರಿಗಳ ಪರವಾಗಿ ಈ ಕೆಳಕಂಡ ಹೇಳಿಕೆಯನ್ನು ನೀಡುತ್ತೇನೆ.

1) ವಿಶ್ವೇಶ್ವರಯ್ಯ ನಾಲೆಯ ಕೆಳಗಿನ ಕ್ಷೇತ್ರವು ಮೂಲತಃ 1,20,000 ಎಕರೆಗಳಾಗಿದ್ದು, ಇದಕ್ಕನುಗುಣವಾಗಿ ನಾಲೆಯ ವಿನ್ಯಾಸವನ್ನು ತಯಾರಿಸಲಾಗಿತ್ತು. ಆದರೆ ಹಲವಾರು ಕಾರಣಗಳಿಂದ ಈ ನಾಲೆಯ ಕೆಳಗಿನ ಕ್ಷೇತ್ರವು ಹೆಚ್ಚು ವರಿಗೊಂಡಿದ್ದು ಪ್ರಸ್ತುತ ಈ ನಾಲೆಯು1,90,753 ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸಬೇಕಾಗಿದೆ. ನಾಲೆಯ ನೀರನ್ನು ಹಾಯಿಸುವ ಸಾಮರ್ಥ್ಯವು 2287 ಕ್ಯೂಸೆಕ್ಸ್‌ಗಳಾಗಿದ್ದು, ಪ್ರಸ್ತುತ ನೀರಾವರಿ ಸೌಲಭ್ಯ ಒದಗಿಸಬೇಕಾಗಿರುವ ಕ್ಷೇತ್ರಕ್ಕೆ ಸಮರ್ಪಕವಾಗಿ ನೀರನ್ನು ಒದಗಿಸಲು ಈ ಸಾಮರ್ಥ್ಯವನ್ನು 3060 ಕ್ಯೂಸೆಕ್ಸ್‌ಗಳಿಗೆ ಹೆಚ್ಚಿಸಬೇಕಾಗಿದೆ. ಈ ಪರಿಸ್ಥಿತಿಯನ್ನು ಸರಿಪಡಿಸುವ ಸಲುವಾಗಿ ಕೆಳಗೆ ನಮೂದಿಸಿರುವ ಕಾಮಗಾರಿಗಳನ್ನು ಒಳಗೊಂಡಂತೆ ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣದ ಯೋಜನೆಯನ್ನು ಕೈಗೊಳ್ಳಬೇಕಾಗಿದೆ.

ಅ) ವಿಶ್ವೇಶ್ವರಯ್ಯ ನಾಲೆಯ ಮೊದಲ 37ನೇ ಕಿ.ಮೀ.ವರೆಗೆ (ಅಂದರೆ ಹುಲಿಕೆರೆ ಸುರಂಗದ ಪ್ರಾರಂಭದವರೆಗೆ ನಾಲೆಯ ಒಡ್ಡುಗಳನ್ನು ಎತ್ತರಿಸುವುದು ಮತ್ತು ಬಲಪಡಿಸುವುದು ಹಾಗೂ ಈ ಬಾಗದಲ್ಲಿ 8 ಅಡ್ಡ ಚರಂಡಿಗಳನ್ನು (ಸಿ.ಡಿ.ವರ್ಕ್ಸ್) ಮತ್ತು 29 ಹಳೆಯದಾದ ರಸ್ತೆ:ಗಾಡಿ ಸೇತುವೆಗಳನ್ನು ಪುನರ್‌ನಿರ್ಮಿಸುವುದು.

ಆ) ವಿಶ್ವೇಶ್ವರಯ್ಯ ನಾಲೆಯ 37ನೇ ಕಿ.ಮೀ. ಇಂದ 27ನೇ ಕಿ.ಮೀ. ಉದ್ದದ ಸಂಪರ್ಕ ನಾಲೆಯನ್ನು ನಿರ್ಮಿಸಿ ಇದರ ಮೂಲಕ 800 ಕ್ಯೂಸೆಕ್ಸ್ ಪ್ರಮಾಣದಷ್ಟು ನೀರನ್ನು ಕಾವೇರಿ ಶಾಖೆಗೆ ಒದಗಿಸುವುದರಿಂದ ಹುಲಿಕೆರೆ ಸುರಂಗ ಮಾರ್ಗದ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದು.

ಇ) ಸರ್ವಕಾಲಿಕ ಕಾವೇರಿ,ಕೆರಗೋಡು, ಮದ್ದೂರು, ಲೋಕಸರ ಶಾಖೆಗಳನ್ನು ಹಾಗೂ ಸರ್ವಕಾಲಿಕವಲ್ಲದ ತುರುಗನೂರು ಮತ್ತು ಹೆಬ್ಬಕವಾಡಿ ಶಾಖೆಗಳನ್ನು ಬಲಪಡಿಸುವುದು ಮತ್ತು ಈ ನಾಲೆಗಳ ವ್ಯಾಪ್ತಿಯಲ್ಲಿ ಬರುವ ಅಡ್ಡಚರಂಡಿಗಳನ್ನು ಮತ್ತು ರಸ್ತೆ: ಗಾಡಿ ಸೇತುವೆಗಳನ್ನು ನವೀಕರಿಸುವುದು.

2) ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣದ ಕಾಮಗಾರಿಗಳನ್ನು 1979-80 ರಲ್ಲಿ ಪ್ರಾರಂಭಿಸಲಾಗಿದ್ದು, ಈ ಕಾಮಗಾರಿಗೆ ತಗಲುವ ವೆಚ್ಚವನ್ನು 1993-94ರ ದರಗಳ ಪ್ರಕಾರ 98.34 ಕೋಟಿ ರೂ.ಗಳೆಂದು ಅಂದಾಜು ಮಾಡಲಾಗಿದೆ. 1995ರ ಫೆಬ್ರವರಿ ತಿಂಗಳ ಅಂತ್ಯದವರೆಗೆ ಈ ಕಾಮಗಾರಿಯ ಮೇಲೆ ಮಾಡಲಾಗಿರುವ ವೆಚ್ಚವು 56.35 ಕೋಟಿ ರೂ.ಗಳು ಆಗಿರುತ್ತದೆ.

3) ವಿಶ್ವೇಶ್ವರಯ್ಯ ನಾಲೆಯ ಮೊದಲ 37ನೇ ಕಿ.ಮೀ.ವರೆಗಿನ ಭಾಗದಲ್ಲಿ ನಾಲೆಯ ಒಡ್ಡುಗಳನ್ನು ಬಲಪಡಿಸುವ ಮತ್ತು ಅಡ್ಡ ಚರಂಡಿಗಳ ಕಾಮಗಾರಿಗಳು ಪೂರ್ಣಗೊಂಡಿವೆ. 29 ರಸ್ತೆ: ಗಾಡಿ ಸೇತುವೆಗಳ ಪೈಕಿ ಎರಡನ್ನು ಪೂರ್ಣಗೊಳಿಸಲಾಗಿದ್ದು, 5 ಕಾಮಗಾರಿಗಳು ಪ್ರಗತಿಯಲ್ಲಿದೆ. ಉಳಿದ 22 ಸೇತುವೆ ಕಾಮಗಾರಿಗಳನ್ನು ಇನ್ನೂ ಕೈಗೊಳ್ಳಬೇಕಾಗಿದೆ. ಸಂಪರ್ಕ ನಾಲೆಯ ಮೊದಲ 16 ಕಿ.ಮೀ.ಯಲ್ಲಿನ ಮತ್ತು ಈ ನಾಲೆಯಲ್ಲಿ ಬರುವ ಸುರಂಗ ಮಾರ್ಗದ ನಂತರದ ಭಾಗವನ್ನುಅನೇಕವಾಗಿ ಪೂರ್ಣಗೊಳಿಸಲಾಗಿದ್ದು, ನಾಲೆಯ ಹೊದಿಕೆ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿದೆ. ಈ ಕಾಮಗಾರಿಗಳು ನಾಲೆಯಲ್ಲಿ ನೀರು ಹಾಯಿಸುವುದನ್ನು ನಿಲ್ಲಿಸಲಾಗುವ ಅವಧಿಯಲ್ಲಿ ಮಾತ್ರ ಕೈಗೊಳ್ಳಬಹುದಾಗಿದ್ದು, ಇದನ್ನು ತ್ವರಿತಗೊಳಿಸಲು ವಿಶ್ವೇಶ್ವರಯ್ಯ ನಾಲೆಯ ಅಚ್ಚುಕಟ್ಟಿನ ರೈತರುಗಳ ಸಹಕಾರವೂ ಅತ್ಯವಶ್ಯವಾಗಿದೆ.

4) ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣದ ಕಾಮಗಾರಿಯನ್ನು 1997-98ನೇ ಸಾಲಿನಲ್ಲಿ ಪೂರ್ಣಗೊಳಿಸಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

5) ಪುರಾತನ ಅಣೆಕಟ್ಟಿನ ನಾಲೆಗಳಾದ ಚಿಕ್ಕದೇವರಾಯ ನಾಲೆ, ಮಾಧವಮಂತ್ರಿ ನಾಲೆ ಮತ್ತು ರಾಮಸ್ವಾಮಿ ನಾಲೆ, ಇವುಗಳಲ್ಲಿ ತುಂಬಿರುವ ಹೂಳನ್ನು ತೆಗೆದು ಈ ನಾಲೆಗಳ ಕೆಳಗಿನ ಕ್ಷೇತ್ರಕ್ಕೆ ಸಮರ್ಪಕವಾಗಿ ನೀರನ್ನು ಹಾಯಿಸಲು ಮತ್ತು ಸದರಿ ನಾಲೆಗಳಲ್ಲಿ ಅಲ್ಲಲ್ಲಿ ಕೈಗೊಳ್ಳಬೇಕಾಗಿರುವ ದುರಸ್ತಿ ಕಾಮಗಾರಿಗಳಿಗೆ ಅವಶ್ಯವಾಗುವ ಅನುದಾನದಲ್ಲಿ ಸಂಭವಿಸುತ್ತಿರುವ ಕೊರತೆಯಿಂದಾಗಿ ಈ ನಾಲೆಗಳ ದುರಸ್ತಿ ಕಾಮಗಾರಿಗಳನ್ನು ತ್ವರಿತವಾಗಿ ಪೂರ್ಣಗೊಳಿಸಲು ಸಾಧ್ಯವಾಗುವುದಿಲ್ಲ.

6) ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣದ ಮತ್ತು ಕಂಡಿಕೆ (15) ರಲ್ಲಿ ತಿಳಿಸಿರುವ ಅಣೆಕಟ್ಟಿನ ನಾಲೆಗಳ ದುರಸ್ತಿ ಕಾಮಗಾರಿಗಳನ್ನು ಅತಿ ಶೀಘ್ರವಾಗಿ ಪೂರ್ಣಗೊಳಿಸಿ ಈ ಭಾಗದ ರೈತರುಗಳಿಗೆ ಸಂಭವಿಸುತ್ತಿರುವ ತೊಂದರೆಯನ್ನು ಸರಿಪಡಿಸಲು ಸರ್ವ ಪ್ರಯತ್ನಗಳನ್ನು ಮಾಡಲಾಗುವುದು.

ಶ್ರೀ ಕೆ.ಎನ್. ನಾಗೇಗೌಡ : ಸನ್ಮಾನ್ಯ ಅಧ್ಯಕ್ಷರೆ, ಈಗಾಗಲೇ ಸಮಗ್ರವಾದಂಥ ಉತ್ತರವನ್ನು ಸರ್ಕಾರದವರು ಒದಗಿಸಿದ್ದಾರೆ. ಇಲ್ಲಿ ಮೂಲಭೂತ ವಾಗಿರತಕ್ಕ ವಿಚಾರವೇನೆಂದರೆ ವರುಣಾ ನಾಲೆಯ ಆಧುನೀಕರಣದ ಹಿನ್ನೆಲೆಯಲ್ಲಿ ಏನು ನಮ್ಮ ಮಂಡ್ಯ ಭಾಗದಲ್ಲಿ ಚಳುವಳಿ ನಡೆಯಿತು ಆಗ ಒಂದು ಒಪ್ಪಂದವಾಗಿತ್ತು. ಅದೇನೆಂದರೆ, ಆದಷ್ಟು ಬೇಗ ಇದನ್ನು ಮುಗಿಸಿ 800 ಕ್ಯೂಸೆಕ್ಸ್‌ಗಳ ನೀರನ್ನು ನಮಗೆ ಜಾಸ್ತಿ ಕೊಡುತ್ತೇವೆ ಎನ್ನತಕ್ಕ ಮಾತನ್ನು ಹೇಳಿದ್ದರು. ಇದರ ಬಗ್ಗೆ ನಮಗಿರುವ ಚಿಂತನೆ ಏನೆಂದರೆ, ಈ ಕೆಲಸವು 1991ಕ್ಕೇ ಮುಕ್ತಾಯವಾಗಬೇಕಾಗಿತ್ತು, ಆದರೆ 1991 ಆದರೂ ಸಹ ಇದು ಮುಕ್ತಾಯವಾಗಿಲ್ಲ. ಈಗ ಬೇಸಿಗೆ ಬಹಳ ಜಾಸ್ತಿ

ಇದೆ. ನಮ್ಮ ಭಾಗದಲ್ಲಿ 1 ಲಕ್ಷದ 90 ಸಾವಿರ ಎಕರೆಗಳಷ್ಟು ಬೆಳೆ ಬೆಳೆದು ನಿಂತಿದೆ. ಹಿಂದೆ 14-15 ವರ್ಷಗಳಿಂದ ನಮಗೆ ಈ ಬೆಳೆಯಾಗಿಲ್ಲ. ಅಚ್ಚು ಕಟ್ಟಿನಲ್ಲಿ ನೀರು ಇಲ್ಲದೆ ಭತ್ತ ಮತ್ತು ಇತರ ಕಬ್ಬುಗಳೂ ಸಹಿತ ಬಹಳ ತೊಂದರೆಯಾಗಿರತಕ್ಕಂಥ ಸಂದರ್ಭದಲ್ಲಿ ಒಂದೇ ಒಂದು ತಾಂತ್ರಿಕವಾದ ಕಾರಣ ಏನೆಂದರೆ ಹಣ ಬಿಡುಗಡೆ ಮಾಡಲಿಲ್ಲ. ಹಿಂದೆ ಇದ್ದಂತಹ ನಮ್ಮ ಉಪ ಮುಖ್ಯ ಮಂತ್ರಿಗಳೂ ಸಹ ಹೋದ ಸಾರಿ 28 ರೂಪಾಯಿಗಳು ಕೊಟ್ಟಿದ್ದರು. ಕೇವಲ 16 ಕೋಟಿ ಮಾತ್ರ ಅದು 10 ಕೋಟಿ ಹಣ ಬಿಡುಗಡೆ ಮಾಡಿ ಹೋದ ಸಾರಿ ಸಹ ಆ ಕೆಲಸ ಆಗಲಿಲ್ಲ. ಕಳೆದ 14-15 ವರ್ಷಗಳಿಂದ ನಿರಂತರವಾಗಿ 90 ಕೋಟಿ ಅಂದರೆ ಇನ್ನು ಸುಮಾರು 70-80 ಕೋಟಿ ರೂಪಾಯಿ ಹಣ ಬೇಕು. ಇದನ್ನು ಬಡ್ಜೆಟ್ಟಿನಲ್ಲಿ ಸೇರಿಸಿದ್ದೀರಿ. ಮೂರು ವರ್ಷದಲ್ಲಿ ಈ ವಿಶ್ವೇಶ್ವರಯ್ಯ ನಾಲ ಆಧುನೀಕರಣವನ್ನು ನಾವು ಉಳಿದಿರತಕ್ಕಂತಹ 60-70 ಕೋಟಿ ಹಣ ಕೊಟ್ಟು ಮುಗಿಸಿಕೊಡುತ್ತೇವೆ ಎನ್ನತಕ್ಕಂತಹ ಮಾತನ್ನು ನಮ್ಮ ಸರ್ಕಾರ ಹೇಳಿದೆ. ಅದಕ್ಕೆ ಬದ್ಧರಾಗಬೇಕು ಅನ್ನುವುದು ಒಂದೇ ಒಂದು ವಿಚಾರ. ಎರಡು, ಅಲ್ಲಿ 8 ಅಕ್ಕಡೇಟ್ ಬರುತ್ತದೆ. ಇಡೀ ಮಂಡ್ಯ ಜಿಲ್ಲೆಯಲ್ಲಿ ಆರು ತಿಂಗಳು ನಾವು ಬೆಳೆ ನಿಲ್ಲಿಸಬೇಕು. ಅದು ತಿಂಗಳು ಎಲ್ಲಾ ನಾಲೆಗಳನ್ನು ಮುಚ್ಚಿ ಬೆಳೆ ನಿಲ್ಲಿಸಬೇಕಾಗುತ್ತದೆ. ಈಗಾಗಲೇ ಕೆ.ಆರ್.ಎಸ್. ಕಮಿಟಿ ಮೀಟಿಂಗ್‌ನಲ್ಲಿ ಬೆಳೆಗಳನ್ನು ನಿಲ್ಲಿಸಬೇಕು ಎನ್ನತಕ್ಕಂತಹ ವಿಚಾರ ಬಂದಾಗ ನಾವು ಹೇಳಿದ್ದು ಸರ್ಕಾರ ಕನಿಷ್ಟ ಪಕ್ಷ ಈ ವರ್ಷ 40 ಕೋಟಿ ರೂಪಾಯಿ ಹಣ ಕೊಟ್ಟು ಚಾನಲ್ ರಿಪೇರಿ ಇವೆಲ್ಲವನ್ನೂ ಮಾಡಿಕೊಡುತ್ತೇವೆ ಎಂದು ಭರವಸೆ ಕೊಟ್ಟರೆ ನಾವು ಮತ್ತು ರೈತ ಸಂಘದವರು, ಮಾನ್ಯ ಪುಟ್ಟಣ್ಣನಯ್ಯನವರ ಎಲ್ಲಾ ರಾಜಕೀಯ ಪಕ್ಷದ ರೈತ ಮುಖಂಡರು ಸೇರಿ ತಾವು ರೈತರಲ್ಲಿ ಮನವಿ ಮಾಡಿಕೊಳ್ಳುತ್ತೇವೆ. ಬೇಸಿಗೆ ಕಾಲದಲ್ಲಿ 96 ಜನವರಿಯಿಂದ ಒಂದು ಮೂರು - ನಾಲ್ಕು ತಿಂಗಳು ಕಾಲ ಇಡೀ ಮಂಡ್ಯ ಜಿಲ್ಲೆಯ ಎಲ್ಲಾ ನಾಲೆಗಳನ್ನು ಬಂದ್ ಮಾಡಿ ನಾಲಾ ರಿಪೇರಿ ಮಾಡಿ ಕೊಡುವುದಕ್ಕೆ ನಾನು ಸಿದ್ದನಿದ್ದೇನೆ. ಆದರೆ ಹಣ ಬಿಡುಗಡೆ ಮಾಡಬೇಕಾಗಿದೆ ನೀವು ಮಾಡುವುದಕ್ಕೆ ಬರುವುದಿಲ್ಲ. ರೈತರು ಹಣ ಬಿಡುಗಡೆ ಮಾಡದೇ ಇದ್ದರೆ ಒಪ್ಪುವುದಿಲ್ಲ. ಏಕೆಂದರೆ 15 ವರ್ಷಗಳಿಂದ ಹಣ ಬಿಡುಗಡೆ ಆಗದೆ ಕೆಲಸ ನಿಂತು ಹೋಗಿದೆ. ಇದು ನಮಗೆ ಮೂರು ಟೆಕ್ನಿಕಲ್ಲಾಗಿ ಆಗಬೇಕು. ಮಾನ್ಯ ಅಧ್ಯಕ್ಷರೆ, ಇನ್ನು ನಮ್ಮ ಕೆಲಸ ಮುಗಿಯಬೇಕಾದರೆ ಅದಕ್ಕೆ ಎಂಟು ಕನೆಕ್ಷನ್ ಕೊಡಬೇಕಾದರೆ 10 ಕೋಟಿ ರೂಪಾಯಿಗಳಷ್ಟು ಹಣಬೇಕು. ಈಗ 20 ಪರ್ಸೆಂಟ್ ಕೆನಾಲ್ ವರ್ಕ್ಸ್ ಇನ್ನೂ ಮುಗಿದಿಲ್ಲ. ಇನ್ನೂ 70 ಪರ್ಸೆಂಟ್ ಕೆನಾಲ್ ವರ್ಕ್ಸ್ ಹಾಗೆಯೇ ಇದೆ. ಈ ದೃಷ್ಟಿಯಿಂದ ನಮಗೆ ಗ್ರಾಂಟ್ ಕೊಡತಕ್ಕಂಥಾದ್ದು ಬಹಳ ಮುಖ್ಯ ಅಲ್ಲ. ನಮಗೆ ಎಲ್ ಓ ಸಿ ಕೊಡತಕ್ಕಂಥದ್ದು ಬಹಳ ಮುಖ್ಯ. ಸುಮಾರು 60-70 ವರ್ಷದ ನಾಲೆಗಳು ಎಲ್ಲಾ ಒಡೆದು ಹೋಗಿವೆ. ಅದಕ್ಕೆ ಕಂಟ್ರೋಲಿಂಗ್ ಸಿಸ್ಟಮ್‌ಗಳು

ಇಲ್ಲ. ಎಲ್ಲಾ ಟ್ಯೂಬುಗಳು ಒಡೆದು ಹೋಗಿವೆ. ಇವತ್ತು ನೀರು ಬಿಟ್ಟರೆ ನಾಳೆ ನೀರೂ ಸಹ ರೈತರಿಗೆ ದೊರಕುತ್ತಿಲ್ಲ. ಈ ದೃಷ್ಟಿಯಿಂದ ಅದರಲ್ಲೂ ವಿಶೇಷವಾಗಿ ಮೂರು ತಾಲ್ಲೂಕುಗಳಾದ ಮದ್ದೂರು, ಮಂಡ್ಯ, ಮಳವಳ್ಳಿ ಈ ಮೂರು ತಾಲ್ಲೂಕುಗಳ ಹಿಂಭಾಗದಲ್ಲಿ ಇರತಕ್ಕಂಥ 70-80 ಸಾವಿರ ಎಕರೆ ಜಮೀನಿಗೆ ಅಂತೂ ತೀವ್ರವಾದಂತಹ ತೊಂದರೆಯಾಗಿದೆ. ಆದರೆ ಬನ್ನೂರುಕ್ಷೇತ್ರಕ್ಕೂ ಹಾಗೂ ನರಸಾಪುರದ ಟೈಲೆಂಡರ್ಸ್‌ಗಳಿಗೆ ತೊಂದರೆಯಾಗಿದೆ. ಇದು ಹಿಂದಿನಿಂದ ಇರತಕ್ಕಂಥದ್ದು. ಮೂರು ವರ್ಷಗಳಲ್ಲಿ ನಾವು ಹಣ ಬಿಡುಗಡೆ ಮಾಡುತ್ತೇವೆ ಇದನ್ನು ಸಂಪೂರ್ಣವಾಗಿ ಮಾಡಿಕೊಡುತ್ತೇವೆ ಎಂದು ತಾವು ಹೇಳಬೇಕು.ಆದರೆ ಈ ವರ್ಷ ಕನಿಷ್ಠ ಪಕ್ಷ 35 ಕೋಟಿ ಎಲ್.ಓ.ಸಿ.ಅದು ಬರೀ ಗ್ರಾಂಟ್ ಎಂದು ಹೇಳಿದರೆ ನಾನು ಒಪ್ಪುವುದಿಲ್ಲ. ನಾವು ಬೇಕಾದಷ್ಟು ಪ್ರಯತ್ನ ಮಾಡಿದೆವು. ಆದರೆ ಆಗಲಿಲ್ಲ. ಅದನ್ನು ಎಲ್ ಓ ಸಿ ಕೊಡತಕ್ಕಂಥದ್ದು ಅನ್ನತಕ್ಕಂತಹದನ್ನು ಹೇಳಬೇಕು. ಏಕೆಂದರೆ ಸರ್ಕಾರಿ ಸಕ್ಕರೆ ಕಾರ್ಖಾನೆ ಇದೆ. ಕಬ್ಬು ಬೆಳೆದಿದೆ ಈ ಎಲ್ಲಾ ದೃಷ್ಟಿಯಿಂದ ತಾವು ಮಾಡಬೇಕು. ಕೆನಾಲ್ ವರ್ಕ್ಸ್ ಮತ್ತು ಬ್ರಿಡ್ಜ್ ವರ್ಕ್ಸ್ ಮಾಡತಕ್ಕಂಥದ್ದು ಮಾತ್ರ ಅಲ್ಲ. ನಾಲಾ ರಿಪೇರಿ ಸಹ ಮಾಡಬೇಕು. ಆ ನಾಲಾ ರಿಪೇರಿಯನ್ನು ನೀವು ಪ್ರೈಯೊರಿಟಿ ಮೇಲೆ ತೆಗೆದುಕೊಳ್ಳುವಂತಹ ಆದೇಶ ಕೊಡಬೇಕು. ಈ 3-4 ವಿಚಾರಕ್ಕೆ ತಾವು ಉತ್ತರ ಹೇಳಿದರೆ ಸಾಕು ಎಂದು ನಾನು ಭಾವಿಸುತ್ತೇನೆ.

ಶ್ರೀ ಎಸ್. ಕೃಷ್ಣಪ್ಪ (ಬನ್ನೂರು) : ಮಾನ್ಯ ಮಂತ್ರಿಗಳು ತಮ್ಮ ಸ್ಟೇಟ್‌ಮೆಂಟನ್ನು ಕೊಡುವಾಗ ಒಂದು ಮಾತನ್ನು ಹೇಳಿದ್ದಾರೆ. ಮಾಧವ ಮಂತ್ರಿ ಮತ್ತು ಚಿಕ್ಕದೇವರಾಜ ನಾಲೆ ಹಾಗೂ ರಾಮಸ್ವಾಮಿ ನಾಲೆಗಳ ಹೂಳೆತ್ತುವ ಬಗ್ಗೆ ಸರ್ಕಾರದಲ್ಲಿ ಹಣ ಇಲ್ಲ, ಕೊಡುವುದಕ್ಕಾಗುವುದಿಲ್ಲ ಎನ್ನುವ ಮಾತನ್ನು ಹೇಳಿದ್ದಾರೆ. ನಾನು ಹೇಳುತ್ತೇನೆ. ಮಾನ್ಯ ಅಧ್ಯಕ್ಷರೆ, ಬಹುಶಃ ಈ ನಾಲಾಗಳು ನೂರಾರು ವರ್ಷಗಳ ಹಳೆ ನಾಲಾಗಳು. ನಿನ್ನೆ ಮೊನ್ನೆಯ ನಾಲಾಗಳು ಅಲ್ಲ. ಇವು ಕನ್ನಂಬಾಡಿ ಕಟ್ಟೆ ಕೃಷ್ಣ ರಾಜ ಸಾಗರ ಕಟ್ಟೆ ಕಟ್ಟುವುದಕ್ಕಿಂತ ಮೊದಲು ಇದ್ದಂತಹ ನಾಲಾಗಳು ಬಹುಶಃ ಈ ನಾಲಾಗಳಲ್ಲಿ ಹಿಂದೆ ಸಿ.ಡಿ.ಎಸ್ ನಾಲೆಗೆ ಸುಮಾರು 900 ಕ್ಯೂಸೆಕ್ಸ್ ನೀರನ್ನು ಕೊಡುತ್ತಿದ್ದರು. ನಮ್ಮಲ್ಲಿ ಉಂಡರೆ ಉಬ್ಬಸ, ಸತ್ತರೆ ಸಂಕಟ. ನೀರನ್ನು ಬಿಡದೆ ಹೋದರೆ ಕೊನೆಯವರಿಗೆ ನೀರು ಮುಟ್ಟುವುದಿಲ್ಲ. ಇಲ್ಲಿ ಬಿಟ್ಟರೆ ನಾಲೆ ನೀರಿನ ಮೇಲೆ ಹೋಗುತ್ತದೆ. ಅಂತಹ ಸಂದರ್ಭದಲ್ಲಿ ಲಿಂಕ್ ಕೆನಾಲ್ ಏನಿದೆ, ಈ ಲಿಂಕ್ ಕೆನಾಲ್ ಆದ ಮೇಲೆ ಇಲ್ಲಿ ಬಿಡತಕ್ಕಂಥ ನೀರು ಏನಿದೆ ಇದು ರಾಮಸ್ವಾಮಿ ನಾಲೆಗೆ ಹೋಗಬೇಕಾಗುತ್ತದೆ. ಈ ನೀರು ರಾಮಸ್ವಾಮಿ ನಾಲೆಗೆ ಹೋದಾಗ ಎಲ್ಲಾ ಅಣ್ಣೆ ಕಟ್ಟುಗಳು ಒಡೆದು ಹೋಗುತ್ತವೆ. ಅದರ ಜೊತೆಗೆ ಈಗಾಗಲೇ ರೈತರು ಲಕ್ಷಾಂತರ ರೂಪಾಯಿಗಳ ನಷ್ಟವನ್ನು ಕ್ಲೇಮ್ ಮಾಡುತ್ತಿದ್ದಾರೆ. ಅದನ್ನು ನಾನು ಸರ್ಕಾರದ ಗಮನಕ್ಕೆ ತಮ್ಮ ಮುಖಾಂತರ ತರುವುದಕ್ಕೆ ಇಚ್ಛೆ ಪಡುತ್ತೇನೆ. ಈಗ ಈ ನಾಲೆಯೇ ಮುಚ್ಚಿ ಹೋದ ಮೇಲೆ ತಾವು ಮಾಡುವದು ಏನು? ತಾವು ಹೊಸ ನಾಲೆಗೆ ಹೆಚ್ಚಿಗೆ ಹಣವನ್ನು ಕೊಡುವಂತಹ ಗಮನವನ್ನು ಏನು ತಾವು

ಹರಿಸುತ್ತೀರಿ, ಅದೇ ರೀತಿ ಇಂತಹ ನೂರಾರು ವರ್ಷಗಳ ನಾಲೆಗಳಲ್ಲಿ ಹೊಳೆತ್ತುವ ಕೆಲಸ ಪ್ರಾರಂಭವಾಗಬೇಕು. ಇವುಗಳನ್ನು ಆದುನೀಕರಣಗೊಳಿಸಿ ಆ ಭಾಗದ ರೈತರಿಗೆ ಸೌಕರ್ಯವನ್ನು ಸರ್ಕಾರ ಮಾಡಿಕೊಡಬೇಕಾಗುತ್ತದೆ. ಇದರ ಬಗ್ಗೆ ಸರ್ಕಾರ ದಯವಿಟ್ಟು ತಾತ್ಸಾರ ಮನೋಭಾವನೆಯನ್ನು ತಾಳುವುದು ಬೇಡ. ಏಕೆಂದರೆ ಅದರಲ್ಲಿ ಸುಮಾರು 15 ಸಾವಿರ ಹೆಕ್ಟೇರ್ ಜಮೀನು ಇವತ್ತು ನೀರಾವರಿ ಆಗುತ್ತಿದೆ. ಇದರ ಮುಖಾಂತರ ಬರತಕ್ಕಂಥ ಚಿನ್ನೂರು ಕೆರೆ ಮತ್ತು ಅದರ ಮೇಲೆ ಹೋಗತಕ್ಕಂಥಹ ಶ್ರೀರಾಮ್ ಎಕ್ಸ್‌ಟೆನ್‌ಷನ್ ಮತ್ತೆ ಇನ್ನೊಂದು ಕಡೆ ಇರತಕ್ಕಂತಹ ರಾಮಸ್ವಾಮಿ ಮತ್ತು ಮಾಧವ ಮಂತ್ರಿ ನಾಲೆಗಳ ಬಗ್ಗೆ ತಾವು ದಯವಿಟ್ಟು ಗಮನವನ್ನು ಹರಿಸಬೇಕಾಗುತ್ತದೆ. ಏಕೆಂದರೆ ಇದರ ಕಡೆ ನೀವು ಏನಾದರೂ ಗಮನ ಕೊಡದೇ ಹೋದರೆ ಆ ಭಾಗದ ರೈತರಿಗೆ ಬಹಳ ಅನ್ಯಾಯವಾಗುತ್ತದೆ. ತಾವು ಏನಾದರೂ ಮಾಡಿ ಸರ್ಕಾರದಿಂದ ಹಣ ಬಿಡುಗಡೆ ಮಾಡಿ ಈ ಹೂಳನ್ನು ತೆಗೆದು ಈ ನಾಲಾಗಳ ದುರಸ್ತೀಕರಣ ಮಾಡಿಕೊಡಬೇಕೆಂದು ನಾನು ತಮ್ಮ ಮುಖಾಂತರ ಸರ್ಕಾರಕ್ಕೆ ಮನವಿ ಮಾಡಿಕೊಳ್ಳುತ್ತೇನೆ.

ಶ್ರೀ ಕೆ.ಎಸ್. ಪುಟ್ಟಣ್ಣಯ್ಯ (ಪಾಂಡವಪುರ) : ಮಾನ್ಯ ಸಭಾಧ್ಯಕ್ಷರೆ, ನಮ್ಮ ಇಬ್ಬರು ಹಿರಿಯ ಸಹ ಸದಸ್ಯರು ವಿಶ್ವೇಶ್ವರಯ್ಯ ನಾಲಾ ಹಾಗೂ ಇನ್ನೊಂದು ಸಿ.ಎಸ್.ನಾಲೆಯ ಬಗ್ಗೆ ಮಾತನಾಡಿದರು. ಏನೇ ಮಾತನಾಡಿದರೂ ಅಲ್ಲಿ ಮುಖ್ಯವಾಗಿ ಬೇಕಾಗಿರುವುದು ಹಣ. ಆಧುನೀಕರಣ ಮಾಡುತ್ತೇವೆಂದು ಹೇಳಿ ಸುಮಾರು 10-15 ವರ್ಷದಿಂದ ಹೇಳುತ್ತಿದ್ದಾರೆ. ಈ ವರುಣಾ ನಾಲೆ ಹಾಗೂ ವಿ ಸಿ ನಾಲೆ ಎರಡೂ ಒಂದೇ ಸಾರಿ ಮುಕ್ತಾಯ ಮಾಡುವಂತಹ ಕಾರ್ಯಕ್ರಮ ಮಾಡುತ್ತೇವೆ ಎಂದು ಹೇಳಿ ಎಂದು ಮಾತುಕತೆ ನಡೆದಿತ್ತು. ಆದರೆ ಈ ಕೆಲಸ ಇನ್ನೂ ಆಗಿಲ್ಲ. ಎಂಟು ಅಕ್ವಡಟ್‌ಗಳನ್ನು ಟರ್ನ್‌ಮಾಡಬೇಕಾದರೆ ಒಂದೇ ಸಾರಿ ಮಾಡಬೇಕು. ಇದಕ್ಕೆ ಬೇಕಾಗುವಷ್ಟು ಹಣವನ್ನು ಕೊಟ್ಟು ಒಂದೇ ಸಾರಿ ಮಾಡಬೇಕು. 20 ದಿವಸದ ಒಳಗೆ ಎಂಟು ಅಕ್ವಡಟ್‌ಗಳ ಕೆಲಸ ಹೆಚ್ಚು ಫಾಸ್ಟಾಗಿ ಆಗಬೇಕು. ಮಾಡದೆ ಇದ್ದರೆ ಎಂಟು ಲಕ್ಷ ಎಕರೆಯಲ್ಲಿ ಇರತಕ್ಕಂತಹ ಬೆಳೆಗೆ ಅನಾನುಕೂಲವಾಗುತ್ತದೆ. ಇದನ್ನು ಅತ್ಯಂತ ಗಂಭೀರವಾಗಿ ಆಲೋಚನೆ ಮಾಡಬೇಕು. ಹೊರ ರಾಜ್ಯಗಳಲ್ಲಿ ಭಾಕ್ರಾನಂಗಲ್‌ನಲ್ಲಿ ಕಾಲುವೆಗಳನ್ನು ಆಧುನೀಕರಣ ಮಾಡಿ ರೈತರಿಗೆ ಯಾವುದೇ ಸಮಸ್ಯೆ ಇಲ್ಲದಂತೆ ಮಾಡಿದ್ದಾರೆ. ಆದ್ದರಿಂದ ತಾವು ವೈಜ್ಞಾನಿಕವಾಗಿ ಆಲೋಚನೆ ಮಾಡಿ ಕಾಲುವೆಗಳನ್ನು ಆಧುನೀಕರಣ ಮಾಡದೇ ಇದ್ದರೆ ಬಹಳ ತೊಂದರೆಯಾಗುತ್ತದೆ. ತಾವೇನೋ ಹೊಸ ಕಾಲುವೆಗಳನ್ನು ಮಾಡುತ್ತಿದ್ದೀರಿ, ಆದರೆ ಹಳೇ ಕಾಲುವೆಗಳು ಮುಚ್ಚಿ ಹೋಗತಕ್ಕಂತಹ ಪರಿಸ್ಥಿತಿ ಸೃಷ್ಟಿಯಾಗಿದೆ. ಈಗ ಮುಖ್ಯ ಮಂತ್ರಿಯವರ ಪರವಾಗಿ ಸನ್ಮಾನ್ಯ ಗೃಹ ಮಂತ್ರಿಯವರಾದ ಸಿಂಧ್ಯರವರು ಉತ್ತರ ಓದಿದ್ದಾರೆ. ಇದಕ್ಕೆ ಸಂಬಂಧಪಟ್ಟಂತೆ ಮೈಸೂರು ಹಾಗೂ ಮಂಡ್ಯ ಜಿಲ್ಲೆ ಎಲ್ಲಾ ಶಾಸಕರನ್ನು ಕರೆದು ಅತ್ಯಂತ ಗಂಭೀರವಾಗಿ ಚರ್ಚೆ ಮಾಡಿ ಇದಕ್ಕೆ ಒಂದು ಅಂತಿಮವಾದ ರೂಪ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಏಕೆಂದರೆ ಏಪ್ರಿಲ್ ಮೇ ತಿಂಗಳಲ್ಲಿ ಮಳೆಗಾಲದಲ್ಲಿ ಮಾಡಿದರೆ ನಮಗೆ ಸುಲಭವಾಗುತ್ತದೆ. ಏಪ್ರಿಲ್ ಮೇ ತಿಂಗಳು ಕಳೆದರೆ ಅನುಕೂಲವಾಗುತ್ತದೆ ದಯವಿಟ್ಟು ಇದರ ಬಗ್ಗೆ ತಾವು ಮಾನ್ಯ ಬಹಳ

ಮಂತ್ರಿಗಳು ಗಮನಕ್ಕೆ ತಂದು ದಯವಿಟ್ಟು ಸಭೆಯನ್ನು ಕರೆದು ಅನುಕೂಲ ಮಾಡಿಕೊಡಬೇಕೆಂದು ತಮ್ಮ ಮೂಲಕ ಸನ್ಮಾನ್ಯ ಗೃಹ ಮಂತ್ರಿಯವರನ್ನು ಕೋರುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯ : ಸನ್ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರುಗಳಾದ ನಾಗೇಗೌಡರು ಕೃಷ್ಣಪ್ಪನವರು ಮತ್ತು ಪುಟ್ಟಣ್ಣಯ್ಯನವರು ಅನೇಕ ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಬಹಳ ಮುಖ್ಯವಾಗಿ ಟೀನರಸೀಪುರ, ಬನ್ನೂರು ಟೇಲ್‌ಎಂಡರ್ಸ್‌ಗೆ ನೀರು ಸಿಗದೆ ಇರತಕ್ಕಂಥಾದ್ದು ಮತ್ತು ಅನೇಕ ಅಕ್ವಡಟ್ ಕೆಲಸವನ್ನು ಬೇಗ ಮಾಡಿಸಿಕೊಡತಕ್ಕಂಥದ್ದು ಮತ್ತು ಬಹಳ ಮುಖ್ಯವಾಗಿ ಈ ಆಧುನೀಕರಣ ಕೆಲಸಕ್ಕೆ ಹಣವನ್ನು ಬಿಡುಗಡೆ ಮಾಡುವುದು ಬಡ್ಜೆಟ್‌ನಲ್ಲಿ ಅಷ್ಟೇ ಅಲ್ಲ, ಎಲ್‌ಒಸಿಯನ್ನು ಬಿಡುಗಡೆ ಮಾಡಬೇಕು ಎನ್ನತಕ್ಕಂತಹ ಸಲಹೆಯನ್ನು ಕೊಟ್ಟಿದ್ದಾರೆ. ಹಾಗೂ ಮಂಡ್ಯ, ಮೈಸೂರು ಜಿಲ್ಲೆ ಶಾಸಕರನ್ನು ಮಾನ್ಯ ಮುಖ್ಯ ಮಂತ್ರಿಗಳು ಹಾಗೂ ನೀರಾವರಿ ಮಂತ್ರಿಗಳು ಕರೆದು ಸಮಾಲೋಚನೆ ಮಾಡಿ ಈ ಕೆಲಸವನ್ನು ತ್ವರಿತಗತಿಯಲ್ಲಿ ಮಾಡಿಸಿ ಕೊಡಬೇಕು ಎನ್ನತಕ್ಕಂತಹ ಮಾತನ್ನು ಹೇಳಿದ್ದಾರೆ.

**12.50 ಪಿ.ಎಂ**

ಈ ಭಾನುವಾರ ಕಾವೇರಿಗೆ ಸಂಬಂಧಪಟ್ಟಹಾಗೆ ಮಾನ್ಯ ಮುಖ್ಯಮಂತ್ರಿಗಳು ಎಲ್ಲರನ್ನೂ ಸಭೆಗೆ ಕರೆದಿದ್ದಾರೆ. ನಾನೂ ಸಹ ಭರವಸೆಯನ್ನು ಕೊಡುತ್ತೇನೆ. ನಾವೆಲ್ಲರೂ ಕುಳಿತು ಚರ್ಚೆ ಮಾಡೋಣ. ಏಕೆಂದರೆ ನಾನು ನೀರಾವರಿ ಮಂತ್ರಿಯಾಗಿದ್ದಾಗ, ಹೊನ್ನೂರಿಗೆ ಮತ್ತು ಟಿ. ನರಸೀಪುರಕ್ಕೆ ಬಂದಿದ್ದೇನೆ. ಮಾಧವಮಂತ್ರಿ ಮತ್ತು ಸಿ.ಡಿಚಾನೆಲ್ ಎಲ್ಲವನ್ನು ನಾವು ನೋಡಿರತಕ್ಕಂಥಾದ್ದು. ನನಗೂ ಸಹ ಅಲ್ಲಿನ ಪರಿಸ್ಥಿತಿಯ ಸಂಪೂರ್ಣ ಮಾಹಿತಿ ಇದೆ. ನಾನೂ ಸಹ ಕಾವೇರಿ ಬೆಲ್ಟ್‌ಗೆ ಬರತಕ್ಕಂಥಾವನು. ಆ ಭರವಸೆಯನ್ನು ಕೊಡುತ್ತೇನೆ. ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಭಾನುವಾರ ನಾವು ಕುಳಿತು ಕೊಂಡಾಗ ಅದರ ಬಗ್ಗೆಯೂ ಸಹ ಚರ್ಚೆ ಮಾಡಿ ಆ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನ ಮಾಡೋಣ ಬಹಳ ಮುಖ್ಯವಾಗಿ ಅದಕ್ಕೆ ರೈತರು ಸಹಕಾರ ಮಾಡುವಂತಾದ್ದು ಹಾಗೂ ಅದಕ್ಕೆ ಬೇಕಾಗಿರತಕ್ಕಂಥ ಹಣವನ್ನು ಬಿಡುಗಡೆ ಮಾಡತಕ್ಕಂಥಾದ್ದು ಮತ್ತೊಂದು. ಅದರ ಬಗ್ಗೆ ನಾನು ಅವರಿಗೆ ಭರವಸೆ ಕೊಡುತ್ತೇನೆ. ನಾವು ಏನು ಈ ವರ್ಷ ಬಜೆಟ್‌ನಲ್ಲಿ 32 ಕೋಟಿ ರೂಪಾಯಿಗಳನ್ನು ಆಧುನಿಕರಣದ ಕೆಲಸಕ್ಕೆ ಕೊಡುತ್ತೇವೆಂದು ಹೇಳಿದ್ದೇವೆ, ಅದನ್ನು ಎಲ್‌ಒಸಿ ರೂಪಾದಲ್ಲಿ ಕೊಡುತ್ತೇವೆ. ಈ ಕೆಲಸವನ್ನು ಆದಷ್ಟು ಬೇಗ ಮುಗಿಸಬೇಕು ಎಂದು. 1997ನೇ ಇಸವಿಗೆ ಅಲ್ಲ, 1996ರ ಕೊನೆಯಲ್ಲಿ ಈ ಎಲ್ಲಾ ಕೆಲಸವನ್ನು ಮಾಡತಕ್ಕಂಥ ಪ್ರಯತ್ನ ಮಾಡುತ್ತೇವೆ ಎನ್ನುವ ಭರವಸೆಯನ್ನು ಈ ಸಂದರ್ಭದಲ್ಲಿ ಕೊಡುತ್ತೇನೆ.

ಶ್ರೀ ಎಸ್.ಕೃಷ್ಣಪ್ಪ : ಹೂಳು ಎತ್ತುವುದಕ್ಕೆ ಹಣ ಕೊಡುವುದರ ಬಗ್ಗೆ ಏನೂ ಹೇಳಲಿಲ್ಲ.

ಶ್ರೀ ಪಿ.ಜಿ.ಆರ್.ಸಿಂಧ್ಯ : ಆಧುನೀಕರಣ ಎಂದರೆ ಹೂಳು ಎತ್ತತಕ್ಕಂಥಾದ್ದು ತೂಬು ಎತ್ತತಕ್ಕಂಥಾದ್ದು, ಕಟ್ಟತಕ್ಕಂಥಾದ್ದು, ಎಲ್‌ಒಸಿ ಬಿಡುಗಡೆ ಮಾಡತಕ್ಕಂಥಾದ್ದು ಇದೆಲ್ಲಾ ಸೇರಿಕೊಂಡು ಬಿಡುತ್ತದೆ. ಇದು ರಸಾಯನ ಇದ್ದಹಾಗೆ.

ಶ್ರೀ ಎನ್.ಕೃಷ್ಣಪ್ಪ : ಹಳೆ ನಾಲೆ ಸೇರುವುದಿಲ್ಲ ಸ್ವಾಮಿ. ತಾವು ಗ್ರಾಂಟ್ ಕೊಟ್ಟಿಲ್ಲ. ತಮ್ಮಲ್ಲಿ ನಾನು ಮನವಿ ಮಾಡಿಕೊಳ್ಳುತ್ತೇನೆ, ಅದಕ್ಕೆ ದುಡ್ಡು ಕೊಟ್ಟಿಲ್ಲ. ತಾವು ದಯವಿಟ್ಟು ಹೊಸದಾಗಿ ದುಡ್ಡು ಕೊಡಬೇಕಾಗುತ್ತದೆ.

ಶ್ರೀ ಪಿ.ಜಿ.ಆರ್. ಸಿಂಧ್ಯ : ನನಗೆ ಗೊತ್ತಿದೆ, ಟೈಲ್ ಎಂಡರ್ಸ್‌ಗೆ ನೀರು ಹೋಗುತ್ತಿಲ್ಲ, ಅವರ ಕ್ಷೇತ್ರದಲ್ಲೇ ಬಹಳ ತೊಂದರೆ ಇದೆ, ಬೆಳೆ ಆಗುತ್ತಿಲ್ಲ. ಅವರ ಸಮಸ್ಯೆಗಳನ್ನು ಬಗೆಹರಿಸುತ್ತೇವೆ.

ಇ) ದಕ್ಷಿಣ ಕನ್ನಡ ಜಿಲ್ಲೆಯ ಎಸ್.ಕೆ.ಸಿ.ಸಿ.ಡಬ್ಲ್ಯು ಸ್ಟೋರ್ಸ್ (ಜನತಾ ಬಜಾರಿಗೆ) ಚುನಾಯಿತ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ವಿಶೇಷಾಧಿಕಾರಿಯವರನ್ನು ನೇಮಿಸಿರುವುದರಿಂದ ಸಾರ್ವಜನಿಕರಿಗೆ ತೊಂದರೆ .

ಶ್ರೀ ಡಿ.ವಿ.ಸದಾನಂದ ಗೌಡ(ಸುಳ್ಯ) : ದಕ್ಷಿಣ ಕನ್ನಡ ಜಿಲ್ಲೆಯ ಎಸ್.ಕೆ.ಸಿ.ಸಿ.ಡಬ್ಲ್ಯು ಸ್ಟೋರ್ಸ್‌ನ ಚುನಾಯಿತ ಮಂಡಳಿಯನ್ನು ರದ್ದುಗೊಳಿಸಿ ವಿಶೇಷಾಧಿಕಾರಿಯನ್ನು ನೇಮಿಸಿರುವುದರಿಂದ ಸಾರ್ವಜನಿಕರಿಗೆ ಉಂಟಾಗಿರುವ ತೊಂದರೆ ಬಗ್ಗೆ ಮಾನ್ಯ ಸಹಕಾರ ಸಚಿವರ ಗಮನವನ್ನು ಸೆಳೆಯುತ್ತೇನೆ.

ಶ್ರೀ ಎಸ್.ಎಸ್.ಪಾಟೀಲ್ (ಸಹಕಾರ ಸಚಿವರು): ಮಾನ್ಯ ಅಧ್ಯಕ್ಷರೆ, ತಮ್ಮ ಅನುಮತಿಯನ್ನು ಪಡೆದು ಈ ಹೇಳಿಕೆಯನ್ನು ನೀಡಬಯಸುತ್ತೇನೆ.

ದಕ್ಷಿಣ ಕನ್ನಡ ಜಿಲ್ಲೆಯ ಎಸ್.ಕೆ.ಸಿ.ಸಿ.ಡಬ್ಲ್ಯೂ ಸ್ಟೋರ್ಸ್ ಇದರ ಮೇಲೆ ಕಾಯ್ದಿಟ್ಟ ನಿಧಿಯನ್ನು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಲ್ಲಿ ಗುರಿತಾಯಿಸದೇ ಇರುವುದೇ ಹಲವಾರು ಪ್ರಕರಣಗಳಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಉಲ್ಲಂಘಿಸಿರುವುದು, ನಿಬಂಧಕರ ಪೂರ್ವಾನುಮತಿ ಪಡೆಯದೆ ಹಲವಾರು ಹುದ್ದೆಗಳಿಗೆ ನೇಮಕಾತಿ ಮಾಡಿಕೊಂಡಿರುವುದು ಜನರೇಟರ್ ಖರೀದಿ ಮಾಡಿದ್ದು, ವ್ಯಾಪಾರ ಮಳಿಗೆ ತೆಗೆದಿರುವುದು, ಹಣ ಖರ್ಚು ಮಾಡಿರುವುದು ನೌಕರರಿಂದ ಹಣ ವಸೂಲಿಗೆ ಕ್ರಮ ಕೈಗೊಳ್ಳದೇ ಇರುವುದು ಇಂತಹ ಇನ್ನಿತರ ಹಲವಾರು ಗುರುತರವಾದ ಅಪಾದನೆಗಳು ಬರಲಾಗಿ ಮೊದಲಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಕಲಂ 65ರ ಮೇರೆಗೆ ಪರಿವೀಕ್ಷಣೆ ಮಾಡಲು ವಿಚಾರಣಾಧಿಕಾರಿಗಳನ್ನು ನೇಮಿಸಲಾಯಿತು. ತದನಂತರ ಅವರು ನೀಡಿದ ವರದಿ ಹಾಗೂ ಅದರಲ್ಲಿನ ಅಪಾದನೆಗಳ ಅನುಸಾರ ಅದೇ ಕಾಯ್ದೆಯ ಕಲಂ 68ರ ಅನ್ವಯ ಲೋಪದೋಷಗಳನ್ನು ಸರಿಪಡಿಸಲು ಆದೇಶ ಹೊರಡಿಸಲಾಗಿದ್ದಿತು. ಇದಾದ ನಂತರ ಸಹಕಾರ ಸಂಘಗಳ ನಿಬಂಧಕರು ಮಾಡಿದ ಶಿಫಾರಸ್ಸನ್ನು ಅನುಸರಿಸಿ ಸರ್ಕಾರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 30(ಎ) ಪ್ರಕಾರ ಆಡಳಿತವನ್ನು ತನ್ನ ವಶಕ್ಕೆ ತೆಗೆದುಕೊಂಡು ವಿಶೇಷಾಧಿಕಾರಿಗಳನ್ನು ನೇಮಿಸಿತು. ಈ ಎಲ್ಲಾ ಅಂಶಗಳಿಂದ ಸರ್ಕಾರ ಹೆಚ್ಚಿನ ಅಧಿಕಾರ ಚಲಾಯಿಸಿ ಸಂಘದ ಆಡಳಿತವನ್ನು ತೆಗೆದುಕೊಂಡಿದೆ. ಎನ್ನುವುದು ಸರಿಯಲ್ಲ.

ಸಂಘಕ್ಕೆ ವಿಶೇಷಾಧಿಕಾರಿಗಳನ್ನು ನೇಮಿಸಿದ ನಂತರ ಸಂಘದ ವಹಿವಾಟು ಸ್ಥಗಿತಗೊಂಡು ಅವಶ್ಯ ವಸ್ತುಗಳ ವಿತರಣೆಯು ಹದಗೆಟ್ಟಿದೆ ಎಂದು ಹೇಳುವುದು ಸತ್ಯ ಸಂಗತಿಯಲ್ಲ. ಆಡಳಿತ ಮಂಡಳಿಯ ವಿರುದ್ಧ ಮಾಡಲಾದ ಆಪಾದನೆಗಳಲ್ಲಿ ವರ್ಷದಿಂದ ವರ್ಷಕ್ಕೆ ವಹಿವಾಟು ಎಂಬ ಬಗ್ಗೆ ಹೇಳಬೇಕೆಂದರೆ ಕಡಿಮೆಯಾಗುತ್ತಿದೆ. ಸಂಘದ ವ್ಯಾಪಾರ ವಹಿವಾಟು 1991-92ಕ್ಕೆ ರೂ.8.06ಕೋಟಿ 1992-93ಕ್ಕೆ 7.80ಕೋಟಿ ಹಾಗೂ 93-94ಕ್ಕೆ ರೂ.9.84ಕೋಟಿ ಯಾಗಿರುತ್ತದೆ. ಇದರಿಂದ ಆಡಳಿತ ಮಂಡಳಿ ಇರುವಾಗಲೇ ವಹಿವಾಟು ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿರುವುದು ಕಂಡುಬರುತ್ತದೆ. ಸರ್ಕಾರವು ಮೇ 1994ರಲ್ಲಿ ಆಡಳಿತವನ್ನು ವಹಿಸಿಕೊಂಡನಂತರ ಕಳೆದ 10 ತಿಂಗಳ ವಹಿವಾಟು ರೂ.5.35 ಕೋಟಿಯಾಗಿರುತ್ತದೆ. ಪೂರ್ತಿ ವರ್ಷಕ್ಕೆ ವಹಿವಾಟು ತೆಗೆದುಕೊಂಡರೆ ತಿಂಗಳ ಸರಾಸರಿ ವ್ಯವಹಾರವು ರೂ.55.00 ಲಕ್ಷಗಳಾಗುತ್ತದೆ. ಹಾಗೂ ವರ್ಷದ ವ್ಯವಹಾರವು ರೂ.6.45 ಕೋಟಿ ಗಳಾಗುತ್ತದೆ. ಒಂದು ಸಂದರ್ಭದಲ್ಲಿ ನಕರಾತ್ಮಕ ಬೆಳವಣಿಗೆ ಕಂಡುಬಂದರೂ ಈ ಬೆಳವಣಿಗೆಯು ಆಡಳಿತ ಮಂಡಳಿ ಅಧಿಕಾರದಲ್ಲಿದ್ದಾಗಲೂ ಇದ್ದು ವ್ಯಾಪಾರ ವಹಿವಾಟು 1991-92ರಲ್ಲಿ ರೂ.8.06 ಕೋಟಿ ಇದ್ದು 1993-94ಕ್ಕೆ ರೂ.6.84 ಕೋಟಿಗೆ ಇಳಿದಿತ್ತು. ಈ ಪ್ರವೃತ್ತಿಯು ಮುಂದುವರೆದಿದ್ದು ವಿಶೇಷಾಧಿಕಾರಿಗಳ ನೇಮಕಾತಿ ನಂತರ ಇದನ್ನು ತಕ್ಷಣವೇ ನಿಲ್ಲಿಸಲು ಸಾಧ್ಯವಾಗಿರುವುದಿಲ್ಲ.

ಅವಶ್ಯಕ ಆಹಾರ ಧಾನ್ಯಗಳ ಹಂಚಿಕೆಯಲ್ಲಿ ಜಿಲ್ಲಾಧಿಕಾರಿಗಳು (ಆಹಾರ) ಇವರು 1993-94ಮತ್ತು 1994-95ರ ಹಂಚಿಕೆಯನ್ನು ಹೋಲಿಸಿದಾಗ ರೂ.70ರಿಂದ 80 ಲಕ್ಷಗಳ ಸರಬರಾಜು ಕಡಿಮೆ ಮಾಡಿರುತ್ತಾರೆ. ಸರ್ಕಾರವು ಸಂಘದ ಆಡಳಿತವನ್ನು ವಹಿಸಿಕೊಂಡ ಮೇಲೆ (9ತಿಂಗಳಿಗೆ) ರೂ.2.35 ಕೋಟಿ ಸಗಟು ವಹಿವಾಟು ಮಾಡಿದೆ. ಇದು 1993-94ರಲ್ಲಿ (9ತಿಂಗಳಿಗೆ) ರೂ.3.12 ಕೋಟಿಗಳಾಗಿತ್ತು. ಒಂದು ವೇಳೆ ಅವಶ್ಯ ಆಹಾರ ಧಾನ್ಯಗಳ ವಿತರಣೆಯನ್ನು ಹಿಂದಿನ ವರ್ಷಗಳ ಮಟ್ಟಕ್ಕೆ ಉಳಿಸಿಕೊಂಡಿದ್ದರೆ, 12ತಿಂಗಳ ವ್ಯವಹಾರವು ರೂ.7.03ಕೋಟಿ ಆಗುತ್ತಿತ್ತು. 1993-94ನೇ ಸಾಲಿಗಿಂತ 1994-95ನೇ ಸಾಲಿನಲ್ಲಿ ಶೇ.2.7 ಬೆಳವಣಿಗೆ ಆಗುತ್ತಿತ್ತು. ಹಿಂದಿನ ವರ್ಷಗಳಿಗೆ ಹೋಲಿಸಿದಾಗ ಸಂಘದ ವ್ಯವಹಾರವು ಸ್ಥಗಿತಗೊಂಡಿರುವುದಿಲ್ಲ. ಈ ಕಾರಣದಿಂದ ಸಂಘವು ಅವನತಿಯ ಹಾದಿಯಲ್ಲಿದ್ದು ಸಾರ್ವಜನಿಕರಿಗೆ ತೊಂದರೆಯಾಗಿದೆ ಎಂದು ತೀರ್ಮಾನಕ್ಕೆ ಬರುವುದು ಸರಿಕಾಣುವುದಿಲ್ಲ.

(ಮಾನ್ಯ ನಾಗೇಗೌಡರು ಅಧ್ಯಕ್ಷ ಪೀಠವನ್ನು ಅಲಂಕರಿಸಿದರು)

ಶ್ರೀ ಡಿ.ವಿ.ಸದಾನಂದಗೌಡ : ಮಾನ್ಯ ಅಧ್ಯಕ್ಷರೆ, ಈ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಜನತಾ ಬಜಾರ್ ಈ ಕರ್ನಾಟಕ ರಾಜ್ಯದ ಸಹಕಾರ ಸಂಘಗಳಲ್ಲಿ ಅತ್ಯಂತ ದೊಡ್ಡ ಸಂಘ. ಸುಮಾರು 9 ರಿಂದ 10 ಕೋಟಿ ರೂಪಾಯಿಯವರೆಗೆ ವ್ಯವಹಾರ ಮಾಡುತ್ತಿದ್ದಂತಹ ಸಂಘ. ಕೇವಲ ಇದು ಅವಶ್ಯಕ ವಸ್ತುಗಳನ್ನು ಮತ್ತು

ರೇಷನ್ ವಸ್ತುಗಳನ್ನು ಮಾತ್ರ ವಿತರಣೆ ಮಾಡುವಂತಾದ್ದು ಅಲ್ಲ. ಬಾಕಿ ವಸ್ತುಗಳನ್ನು ವಿತರಣೆ ಮಾಡುವಂತಹ ಒಂದು ವ್ಯವಸ್ಥೆ ಇತ್ತು. ಎಲ್ಲಾ ಸಾಮಗ್ರಿಗಳನ್ನು ಎಂದರೆ ಸರ್ಕಾರಕ್ಕೆ ಸಂಬಂಧಪಟ್ಟಂತಹ ಎಲ್ಲಾ ಸಾಮಾನುಗಳನ್ನು ಮತ್ತು ದೇವಸ್ಥಾನ ಕಟ್ಟಲು ಸುಬ್ರಮಣ್ಯ ಮುರುದೇಶ್ವರ ಮುಂತಾದ ದೇವಸ್ಥಾನಗಳಿಗೆ ಕೂಡ ಎಲ್ಲಾ ವಸ್ತುಗಳನ್ನು ಇಲ್ಲಿಂದಲೇ ಕೊಡುವಂತಹ ವ್ಯವಸ್ಥೆ ಇತ್ತು. ಹಾಗೂ ಹರಿಜನ ಗಿರಿಜನಗಳಿಗೂ ಕೂಡ ವಸ್ತುಗಳನ್ನು ಪೂರೈಕೆ ಮಾಡುವಂತಹ ಮತ್ತು ಎಲ್ಲಾ ಹಾಸ್ಟೆಲ್‌ಗಳಿಗೂ ಕೂಡ ಇಲ್ಲಿಂದಲೇ ಪೂರೈಕೆ ಮಾಡುವಂತಹ ವ್ಯವಸ್ಥೆ ಇತ್ತು. ಏನೇ ಇದ್ದರೂ ಕೂಡ ಈ ಸಹಕಾರ ರಂಗದಲ್ಲಿ ನಾವು ತಿಳಿದಮಟ್ಟಿಗೆ ಆಡಳಿತ ಮಂಡಳಿ ಇರುವಂತಾದ್ದು ಅತ್ಯಂತ ಸೂಕ್ತ ಎಂದು ಹೇಳುವುದು ತಮಗೆ ಗೊತ್ತಿರುವ ವಿಚಾರ. ಇದೇ ರೀತಿಯಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇರುವಂತಹ ಈ ಜನತಾ ಬ್ಜಜಾರ್‌ಗೆ 6-3-93ನೇ ಇಸವಿಯಲ್ಲಿ ಆಢಳಿತ ಮಂಡಳಿಗೆ ಚುನಾವಣೆ ನಡೆದಿತ್ತು. ಒಟ್ಟು 11 ಸ್ಥಾನಗಳಲ್ಲಿ 10 ಸ್ಥಾನಗಳನ್ನು ಭಾರತೀಯ ಜನತಾ ಪಕ್ಷ ಪಡೆದುಕೊಂಡಿತ್ತು. ಭಾರತೀಯ ಜನತಾ ಪಾರ್ಟಿ ಆ ಸ್ಥಾನಗಳನ್ನು ಪಡೆದುಕೊಂಡ ತಕ್ಷಣ ಅಲ್ಲಿ ಸೋತಂತಹ ಪಕ್ಷ ಸಹಕಾರ ತತ್ವಗಳನ್ನು ಗಾಳಿಗೆ ತೂರುವಂತಹ ವ್ಯವಸ್ಥೆ ಮಾಡಿ ಅದರ ಮೇಲೆ ತನ್ನ ಕಣ್ಣನ್ನು ಹಾಕುವಂತಹ ಪ್ರಯತ್ನವನ್ನು ಮಾಡಿತು. ಇದರ ಮೇಲೆ ಹಲವಾರು ದೋಷರೋಪಣೆ ಮಾಡುವಂತಹ ವ್ಯವಸ್ಥೆಯಾಯಿತು. ಅದಕ್ಕೆ ಸೆಕ್ಷನ್ ಕೋ ಅಪರೇಟಿವ್ ಸೊಸೈಟಿ ಆ್ಯಕ್ಟ್ ಪ್ರಕಾರ ಅದನ್ನು ಎನ್‌ಕ್ವೈಯರಿ ಮಾಡಬೇಕು ಎಂದು ಅದರಲ್ಲಿ ಇದ್ದಂತಹ ಅಧಿಕಾರಿಗಳು ಅದಕ್ಕೆ ಪ್ರಚೋದನೆ ಕೊಡುವಂತಹ ಸಂಗತಿ ನಡೆಯಿತು.ಸರ್ಕಾರಿ ಅಧಿಕಾರಿಗಳು ಎಂದರೆ ಡೆಪ್ಯೂಟಿ ರಿಜಿಸ್ಟ್ರಾರ್ ಆಫ್ ಕೋ-ಅಪಟೀವ್ ಸೊಸೈಟೀಸ್. ಅದೇ ರೀತಿ ಫುಡ್ ಅಂಡ್ ಸಿವಿಲ್ ಸಪ್ಲೈ ಅಧಿಕಾರಿಗಳು ಮತ್ತು ಜನರಲ್ ಮ್ಯಾನೇಜರ್ ಇವರೆಲ್ಲಾ ಸೇರಿಕೊಂಡು ಇದನ್ನು ಮಾಡಿದ್ದಾರೆ. ಈ ಆಡಳಿತ ಮಂಡಳಿ ಇದ್ದ ಕಾರಣ ಅವರಿಗೆ ಅದರಲ್ಲಿ ಏನೂ ಮಾಡುವುದು ಆಗುತ್ತಿಲ್ಲ ಎನ್ನುವ ದೃಷ್ಟಿಕೋನದಿಂದ ರೋಷಾರೋಪಣೆ ಮಾಡುವಂತಹ ಪ್ರಯತ್ನಗಳನ್ನು ಮಾಡಿ. ಜಾಯಿಂಟ್ ರಿಜಿಸ್ಟ್ರಾರ್‌ಗೆ ಬರೆದರು. ಅದನ್ನು ಎನ್‌ಕ್ವೈಯರಿ ಮಾಡಬೇಕು ಎಂದು ಸೆಕ್ಷನ್ 65ರ ಕೋ-ಅಪರೇಟಿವ್ ಸೊಸೈಟಿ ಆ್ಯಕ್ಟ್ ಪ್ರಕಾರ ಎನ್‌ಕ್ವೈರಿ ಮಾಡುವಂತಹ ಪ್ರಯತ್ನ ಮಾಡಿದರು. ಅದಕ್ಕೆ 2 ತಿಂಗಳು ಅವಧಿ ಕೊಟ್ಟಿದ್ದರು. ತಾವು ಗಮನಿಸಬೇಕಾದ ಅಂಶ ಇದು. ಯಾವುದೇ ಒಂದು ಸರ್ಕಾರ ಎನ್‌ಕ್ವೈರಿ ಮಾಡಬೇಕು ಎಂದು...

ಶ್ರೀ ಎಸ್.ಎಸ್. ಪಾಟೀಲ್ : 65 ಅಲ್ಲ ಸೆಕ್ಷನ್ 64 ಅದು.

ಶ್ರೀ ಡಿ.ವಿ.ಸದಾನಂದಗೌಡ : ಯಾವುದೇ ಒಂದು ಅವಧಿಯಲ್ಲಿ ಅದನ್ನು ಎನ್‌ಕ್ವೈಯರಿ ಮಾಡಬೇಕು ಎಂದು ಸರ್ಕಾರದಿಂದ ನೇಮಿಸಲ್ಪಟ್ಟಂತಹ ಕಮಿಟಿ ಅದಕ್ಕೆ 2 ತಿಂಗಳು ಕೊಟ್ಟರೂ ಮತ್ತೊಂದು ತಿಂಗಳು ಬೇಕು ಎಂದು ಕೇಳುವಂತಹ ಪರಿಸ್ಥಿತಿ

ಇದ್ದರೂ ಕೂಡ ಇಲ್ಲಿ ಒಂದು ವಿಶೇಷ ಸಂದರ್ಭ ನಿರ್ಮಾಣವಾಯಿತು. 20 ದಿವಸಗಳಲ್ಲಿ ಇದರ ಮೇಲೆ ಎನ್‌ಕ್ವೈಯರಿ ಮಾಡಿ ನಮ್ಮ ಜಾಯಿಂಟ್ ರಿಜಿಸ್ಟಾರ್ ಕಳುಹಿಸುವಂತಹ ವಿಚಾರ ಮಾಡಿದರು. ಅದೇರೀತಿ ಸೆಕ್ಷನ್ 68 ಕೋ-ಅಪರೇಟಿವ್ ಸೊಸೈಟಿ ಆಕ್ಟ್ ಪ್ರಕಾರ ಅವರು ಏನು ಮಾಡಿದರು ಎಂದರೆ ಆಡಳಿತ ಮಂಡಳಿಗೆ ಒಂದು ಅವಕಾಶ ಕೊಟ್ಟರು. 30 ದಿವಸಗಳೊಳಗೆ ಆಡಳಿತ ಮಂಡಳಿ ಏನಾದರೂ ತಪ್ಪುಗಳು ಇದ್ದರೆ ಅದನ್ನು ರೆಕ್ಟಿಫೈ ಮಾಡಬೇಕು ಎಂದು ಹೇಳಿ ಅವಕಾಶ ಕೊಟ್ಟರು. ಈ ಒಂದು ಅವಕಾಶವನ್ನು 18-4-94ಕ್ಕೆ ಕೊಟ್ಟರು. ಅದನ್ನು ಒಂದು ತಿಂಗಳ ಒಳಗೆ ಮಾಡಿ ಎಂದು ಹೇಳಿದರು. ಆದರೆ ಒಂದು ತಿಂಗಳ ಅವಧಿಯನ್ನು ಸಹ ಪೂರ್ತಿಯಾಗಿ ಅವರಿಗೆ ಅವಕಾಶ ಕೊಡಲಿಲ್ಲ. ಅದಕ್ಕೆ ಅಧಿಕಾರಿಗಳು ಏನು ಮಾಡಿದರು ಎಂದರೆ 7-5-94 ಸರ್ಕಾರಕ್ಕೆ ಸೆಕ್ಷನ್ 30ರ ಪ್ರಕಾರ ಸೂಪರ್‌ಸೀಡ್ ಮಾಡಬೇಕು ಎಂದು ಮನವಿಯನ್ನು ಸಲ್ಲಿಸಿದರು. ಇದು ಬಹಳ ವಿಪರ್ಯಾಸ. ಯಾವುದೇ ಒಂದು ಆಡಳಿತ ಮಂಡಳಿಗೆ ಒಂದು ತಿಂಗಳು ಅವಕಾಶ ಕೊಟ್ಟು ಅಲ್ಲಿ ಇದ್ದಂತಹ ತಪ್ಪನ್ನು ತಿದ್ದಿಕೊಳ್ಳಬೇಕು, ಸರಿ ಮಾಡಬೇಕು ಎಂದು ಪರವಾನಗಿ ಕೊಟ್ಟರೂ ಕೂಡ 18-4-94ಕ್ಕೆ ಕೊಟ್ಟಂಥ ಒಂದು ನೋಟೀಸನ್ನು 18-5-94ರವರೆಗೆ ಇದರೇ ಅದನ್ನು 7-5-94ಕ್ಕೆ ಸೂಪರ್‌ಸೀಡ್ ಮಾಡಿದರು. ಇದು ಭಾರೀ ಆಶ್ಚರ್ಯವಾಗಿದೆ. ಈ ರೀತಿ ಅಲ್ಲಿ ಮಾಡುವುದಕ್ಕೆ ಕಾರಣವೇನು? ಅಲ್ಲಿ ರಾಜಕೀಯ ಹಸ್ತಕ್ಷೇಪವನ್ನು ಸಹಕಾರ ರಂಗದಲ್ಲಿ ಮಾಡಬೇಕು ಎನ್ನುವ ಒಂದೇ ದೃಷ್ಟಿಕೋನದಿಂದ ಮಾಡಿದ್ದಾರೆ. ನಮ್ಮ ಸಹಕಾರ ಸಚಿವರು ಸಹಕಾರ ತತ್ವದಲ್ಲಿ ಅಪಾರ ನಂಬಿಕೆ ಇದ್ದಂತಹ ಹಿರಿಯ ರಾಜಕಾರಣಿಗಳು. ನಾನು ಹಿಂದೆ ಅವರನ್ನು ಭೇಟಿ ಮಾಡಿದಾಗ ಸಹಕಾರ ರಂಗದಲ್ಲಿ ರಾಜಕೀಯ ಹಸ್ತಕ್ಷೇಪ ಮಾಡಬಾರದು ಎಂದು ಹೇಳಿದಂತಹವರು ನಮ್ಮ ಈಗಿನ ಸಹಕಾರ ಮಂತ್ರಿಗಳಾಗಿದ್ದಾರೆ. ಇದು ತುಂಬಾ ಸಂತೋಷದ ಸಂಗತಿ.

ಛೇರ್‌ಮನ್ : ಸ್ವಲ್ಪ ಬೇಗ ಮುಗಿಸಿ.

ಶ್ರೀ ಹೆಚ್. ಶಿವಪ್ಪ : ಅಲ್ಲಿ ಕುಳಿತುಕೊಂಡ ಮೇಲೆ ವರಸೆ ಬದಲಿಯಾಯಿತು. ಇಲ್ಲಿದ್ದಾಗಲೇ ಬೇರೆಯಾಗುತ್ತದೆ. ಅಲ್ಲಿದ್ದಾಗಲೇ ಬೇರೆಯಾಗುತ್ತಿದೆ.

ಶ್ರೀ ಡಿ.ವಿ. ಸದಾನಂದಗೌಡ : ನಮ್ಮ ಮಂತ್ರಿಗಳು ಕೊಟ್ಟಂಥ ಉತ್ತರದಲ್ಲಿ ಕೊಟ್ಟಿದ್ದಾರೆ. ಆಡಳಿತ ಮಂಡಲಿ ಇದ್ದಾಗೆ ಮತ್ತೆ ನಂತರ ದಿನಗಳಲ್ಲಿ ವ್ಯತ್ಯಾಸವಾಗಿದೆ. ಎಂದು ಹೇಳಿ. ನನಗೆ ತಿಳಿದಮಟ್ಟಿಗೆ ಏನಾಗಿದೆ ಎಂದರೆ ಅಲ್ಲಿ ಹಿಂದೆ ಏನು ವಸ್ತು ಸಾಮಗ್ರಿಗಳು ವಿತರಣೆಯಾಗುತ್ತಿತ್ತು ಈಗ ಶೇ.50ರಷ್ಟು ವಿತರಣೆ ಆಗುತ್ತಿಲ್ಲ. ಇಲ್ಲಿ ಒಪ್ಪಿಕೊಂಡಿದ್ದಾರೆ. 93-94, ಹಾಗೂ 94-95ಕ್ಕೆ ಹೋಲಿಸಿದಾಗ 70ರಿಂದ 80ರಷ್ಟು ಸರಬರಾಜು ಕಡಿಮೆಯಾಗುತ್ತಿದೆ. ಇದನ್ನು ತಾವು ಗಮನದಲ್ಲಿಟ್ಟುಕೊಳ್ಳಬೇಕು. ಏಕೆಂದರೆ ಈ ಒಂದು ಆಡಳಿತ ವ್ಯವಸ್ಥೆ ಅಧಿಕಾರಿಗಳು ಕೈಗೆ ಬಂದಾಗ ಹೇಗಿತ್ತು, ಅಲ್ಲಿ ಚುನಾಯಿತ ಪ್ರತಿನಿಧಿಗಳ ಇದ್ದಾಗ ಹೇಗಿತ್ತು ಎಂದು ನೋಡುವಂತಹ ಅವಶ್ಯಕತೆ ಈವತ್ತು ಇದೆ. ಸುಮಾರು 70 ಲಕ್ಷದಿಂದ 80 ಲಕ್ಷ ರೂ.ಗಳಷ್ಟು ವ್ಯವಹಾರ ಕುಂಠಿತಗೊಳಿಸುವುದಕ್ಕೆ ಕಾರಣ ಅಲ್ಲಿರುವಂತಹ ಅಧಿಕಾರಿಗಳೆಂದು ನನಗನಿಸುತ್ತದೆ. ಆದ್ದರಿಂದ ಅಲ್ಲಿ ಚುನಾಯಿತ ಜನ ಪ್ರತಿನಿಧಿಗಳು ಇದ್ದಾಗ ಮಾತ್ರ ಅಲ್ಲ

ಸರಿಯಾದಂತಹ ರೀತಿಯಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ. ಮತ್ತೊಂದು ದೊಡ್ಡ ಸಂಗತಿ ಎಂದರೆ ತನಿಖಾ ವರದಿ ಇದರಲ್ಲಿ ಕೊಟ್ಟಿರುವಂತಹ ಅಂಶ ಎಷ್ಟು ಕ್ಷುಲಕ ಎಂದು ಗೊತ್ತಾಗುತ್ತದೆ. ನಾನು ಎಲ್ಲವನ್ನು ಓದುವುದಕ್ಕೆ ಹೋಗುವುದಿಲ್ಲ. ಈಗಾಗಲೇ ಸಭಾಧ್ಯಕ್ಷರು ಶೀಘ್ರವಾಗಿ ಮುಗಿಸಬೇಕೆಂದು ನನಗೆ ಅಪ್ಪಣೆ ಕೊಟ್ಟಿರುವುದರಿಂದ ಕೆಲವು ಪ್ರಾಮುಖ್ಯವಾದಂತಹ ವಿಚಾರಗಳನ್ನು ಮಾತ್ರ ಪ್ರಸ್ತಾಪ ಮಾಡುತ್ತೇನೆ. ಸಣ್ಣ ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. Reserve fund is not fully invested. DA has been paid at 36%..

ತಮಗೆ ಗೊತ್ತಿದೆ. ಇವತ್ತು ಸರ್ಕಾರದವರು ಅಧಿಕಾರಿಗಳಿಗೆ ಎಷ್ಟು ಡಿ.ಎ ಕೊಡುತ್ತಿದ್ದಾರೆ, ಎಂಬುದು ಡಿ. ಎ ಹೆಚ್ಚು ಕೊಟ್ಟಿದ್ದರೂ ಕೂಡ ಸಂಬಂಧಪಟ್ಟಂತಹ ನೌಕರರು ಪಡೆದುಕೊಂಡಿದ್ದಾರೆ ಮತ್ತು ಬರವಣಿಗೆಯಲ್ಲಿ ಬರೆದುಕೊಂಡಿದ್ದಾರೆ.

ಛೇರ್‌ಮನ್ : ಮಾನ್ಯ ಸದಾನಂದಗೌಡರೇ, ನಿಮಗೆ ಏನು ಬೇಕಾಗಿದೆ ಅದನ್ನು ಕೇಳಿ.

ಶ್ರೀ. ಎ.ರುಕ್ಮಯ ಪೂಜಾರಿ : ಆಡಳಿತ ಮಂಡಳಿ ಇದ್ದಾಗ ಒಳ್ಳೆಯ ರೀತಿಯಲ್ಲಿ ವ್ಯವಹಾರವಾಗುತ್ತಿತ್ತು. ಅದೇ ರೀತಿಯ ವ್ಯವಹಾರವನ್ನು ಪುನಃ ಮಾಡಬೇಕು ರಾಜಕೀಯ ಉದ್ದೇಶದಿಂದ ಸೂಪರ್‌ಸೀಡ್ ಆಯಿತು.

ಶ್ರೀ ಬಿ.ಎಸ್.ಯಡಿಯೂರಪ್ಪ : ಅವರ ಕಾಲದಲ್ಲಿ ಸೇಡನ್ನು ತೀರಿಸಿಕೊಳ್ಳುವುದಕ್ಕೆ ಮಾಡಿದ್ದು. ಈಗ ನೀವು ಒಳ್ಳೆಯವರು ಅಧಿಕಾರಕ್ಕೆ ಬಂದಿದ್ದೀರಿ, ಆದುದರಿಂದ ಅದನ್ನು ತೆಗೆದುಹಾಕಿ ಹಿಂದೆ ಚುನಾಯಿತ ಮಂಡಳಿ ಏನು ಇತ್ತೋ ಅದನ್ನು ಮತ್ತೆ ರನ್ ಓವರ್ ಮಾಡಬೇಕು.

ಶ್ರೀ ಡಿ.ವಿ.ಸದಾನಂದಗೌಡ ಅಷ್ಟು ಹೇಳಿದರೆ ಸಾಕು ಯಾವುದೇ ರಾಜಕೀಯ ಹಸ್ತಕ್ಷೇಪವಿಲ್ಲದೆ ಇದು ಆಗಬೇಕೆಂಬುದು ನನ್ನ ಅಭಿಪ್ರಾಯವಾಗಿದೆ.

ಶ್ರೀ ಎ.ರುಕ್ಮಯ್ಯ ಪೂಜಾರಿ ಸಹಕಾರಿ ಕ್ಷೇತ್ರದಲ್ಲಿ ರಾಜಕೀಯ ಹಸ್ತಕ್ಷೇಪ ಮಾಡಬಾರದೆಂದು ಹೇಳಿದ್ದಾರೆ. ಅಲ್ಲಿ ಅಧಿಕಾರಕ್ಕೆ ಹೋದರೆ ಅದಕ್ಕೆ ತದ್ ವಿರುದ್ಧವಾಗಿ ಇಲ್ಲಿ ಏನಾಗಿದೆ ಎಂದರೆ ಎಸ್.ಕೆ.ಸಿ.ಸಿ ಡಬ್ಲ್ಯೂ ಇಲ್ಲಿಗೆ 6-3-93ರಲ್ಲಿ ಚುನಾವಣೆ ನಡೆಯಿತು ಒಟ್ಟು 11ಸ್ಥಾನಗಳು ಇತ್ತು. ಅದರಲ್ಲಿ 10 ಸ್ಥಾನಗಳು ಬಿ.ಜೆ.ಪಿ ಬಂತು ಒಂದು ಸ್ಥಾನ ಕಾಂಗ್ರೆಸ್‌ಬಂತು. ಅದರ ನಂತರ ಅಲ್ಲಿ ನಾಲ್ಕು ಜನ ಅಧಿಕಾರಿಗಳು ಇದ್ದರು. ಕಾಂಗ್ರೆಸ್...ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಳ್ಳುವ ದೃಷ್ಟಿಯಿಂದ ಪುನಃ 6 ಜನರನ್ನು ನಾಮನಿರ್ದೇಶನ ಮಾಡಿತ್ತು. ಇದು ಕಾನೂನಿಗೆ ವಿರುದ್ಧವೆಂದು ಅಲ್ಲಿರುವಂತಹ ಆಡಳಿತ ಮಂಡಳಿ ಹೈಕೋರ್ಟ್‌ಗೆ ಹೋಗಿ ಸ್ಟೇ ಆರ್ಡರ್ ತೆಗೆದುಕೊಂಡರು. ಆದ್ದರಿಂದ ಅದನ್ನು ಸ್ವಾಧೀನ ಮಾಡಿಕೊಳ್ಳಲು ಆಗಲಿಲ್ಲ. ಕೊಟ್ಟಿರುವಂಥಾದ್ದು ಸಣ್ಣ ಪುಟ್ಟ ವ್ಯತ್ಯಾಸವನ್ನೇ ದೊಡ್ಡ ಆರೋಪವೆಂದು ಮಾಡಿಕೊಂಡು ಇದನ್ನು ಸೂಪರ್ ಸೀಡ್ ಮಾಡಿದ್ದಾರೆ. ಈ ಸಂದರ್ಭದಲ್ಲಿ ನಾನು ಒತ್ತಾಯ ಮಾಡುತ್ತಿದ್ದೇನೆ. ಹಿಂದಿನ ಸರ್ಕಾರ ಕೇವಲ ರಾಜಕೀಯ ಉದ್ದೇಶ ಇಟ್ಟುಕೊಂಡು ಅದನ್ನು ಸೂಪರ್ ಸೀಡ್ ಮಾಡಿದೆ. ಇದರ ಬಗ್ಗೆ ಸರಿಯಾದ ತನಿಖೆ ಮಾಡಿ ಪುನಃ ಹಿಂದಿನಂತೆ ಆಡಳಿತ ಮಾಡಳಿಯವರೇ ಮುಂದುವರೆಯುವಂತಹ ಅವಕಾಶವನ್ನು ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ಜಯರಾಮ ಶೆಟ್ಟಿ : ಮಂಗಳೂರು ಜನತಾ ಬಜಾರ್ ಅನ್ನು ಸರ್ಕಾರದ ಆಡಳಿತಕ್ಕೆ ತೆಗೆದುಕೊಳ್ಳುವುದಕ್ಕಿಂತ ಮುಂಚೆ ಚುನಾಯಿತ ಮಂಡಳಿ ಇರುವಾಗ ದಿನವಹಿ ಒಂದೂವರೆ ಲಕ್ಷ ರೂ.ಗಳ ವಹಿವಾಟು ನಡೆಯುತ್ತಿತ್ತು. ಈಗ ಕನಿಷ್ಠ ಒಂದು ದಿವಸಕ್ಕೆ 35ಸಾವಿರಕ್ಕಿಂತಲೂ ಕಡಿಮೆ ವ್ಯಾಪಾರವಾಗುತ್ತದೆ. ಇದರಿಂದಾಗಿ ಅಕ್ಕಪಕ್ಕದ ಅಂಗಡಿಯವರು ಅದರ ಉಪಯೋಗವನ್ನು ಮಾಡಿಕೊಳ್ಳುತ್ತಿದ್ದಾರೆ. ಆದುದರಿಂದ ಆಡಳಿತ ಮಂಡಳಿಗೆ ಅವಕಾಶ ಮಾಡಿಕೊಡಬೇಕು.

ಶ್ರೀ ಕುಂಬ್ಳೆ ಸುಂದರರಾವ್ : ನಾನು ಈ ಜನತಾಬಜಾರಿಗೆ 10 ವರ್ಷಗಳಿಂದ ಸದಸ್ಯನಾಗಿದ್ದೇನೆ. ಮನೆಗೆ ಬೇಕಾದಂತಹ ಸಾಮಾನುಗಳನ್ನು ಅಲ್ಲಿಂದಲೇ ತೆಗೆದುಕೊಳ್ಳುವಂತಹ ಪರಿಪಾಠವನ್ನು ಇಟ್ಟುಕೊಂಡಿದ್ದೇನೆ. ನಮ್ಮ ಮನೆಯವರು ಅಲ್ಲಿಗೆ ಹೋದರೆ ಬೇಕಾದಂಥ ಸಾಮಾನುಗಳು ಸಿಗುವುದಿಲ್ಲ. ಈಗ 2-3 ಅಂಗಡಿಗಳಿಗೆ ಓಡಾಡಬೇಕಾಗುತ್ತದೆ. ಗಣೇಶ ಬಜಾರ್, ಭಟ್ ಬಜಾರ್ ಗಳಿಗೆ ಹೋಗಿ ಸಾಮಾನುಗಳನ್ನು ತೆಗೆದುಕೊಂಡು ಹೋಗಬೇಕಾಗಿದೆ. ಅದನ್ನು ಸಾಗಿಸಲು ಸಂಕಷ್ಟಕ್ಕೆ ಒಳಗಾಗುತ್ತೇವೆ. ಈ ಸಂಸ್ಥೆಯನ್ನು ಸೂಪರ್‌ಸೀಡ್ ಮಾಡುವುದಕ್ಕೆ ಕಾರಣ ಜನರೇಟರ್ ಕೊಂಡದ್ದು ಎಂದು ಹೇಳುತ್ತಾರೆ. ನನಗೆ ಇದು ವಿಚಿತ್ರವೆನಿಸುತ್ತದೆ. ರಾಜ್ಯದಲ್ಲಿ ವಿದ್ಯುತ್ತಿನ ಪರಿಸ್ಥಿತಿ ಈ ರೀತಿ ಇದೆ. ಯಾವ ಹೊತ್ತಿನಲ್ಲಿ ಮಂಗಳೂರಿನಲ್ಲಿ ಯಾವಾಗ ವಿದ್ಯುತ್ ಹೋಗುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಜನರೇಟರ್ ಖರೀದಿ ಮಾಡಿದ್ದು ತಪ್ಪು ಎಂದರೆ ವಿಚಿತ್ರ. ಬೆಳಗ್ಗೆ ವ್ಯಾಪಾರ ಮಾಡುತ್ತಾರೆಂದರೆ ಅದು ಒಂದು ಅಪರಾಧವಾಗುತ್ತದೆ. ರಾತ್ರಿ ಹೊತ್ತಿನಲ್ಲಿ ವ್ಯಾಪಾರ ಮಾಡುವುದು ಹೇಗೆ? ಇದನ್ನು ಅಪರಾಧ ಪಟ್ಟಿಯಲ್ಲಿ ಸೇರಿಸಿರುತ್ತಾರೆನ್ನುವುದು ಒಂದು ವಿಪರ್ಯಾಸವೆಂದು ಕಾಣುತ್ತದೆ 1993-94ರಲ್ಲಿ 9 ತಿಂಗಳುಗಳಿಗೆ 312ಕೋಟಿ ರೂ.ಗಳು ವ್ಯಾಪಾರವಾಗಿದ್ದು ಅವಶ್ಯಕವಾದಂತಹ ಧಾನ್ಯಗಳ ವಿತರಣೆಯನ್ನು ಹಿಂದಿನ ವರ್ಷದ ಮಟ್ಟಕ್ಕೆ ಉಳಿಸಿಕೊಂಡರೆ 12ತಿಂಗಳಲ್ಲಿ 7 ಕೋಟಿ ರೂ.ಗಳು ಆಗುತ್ತಿತ್ತು. ಮಗಳಿಗೆ ಮದುವೆ ಮಾಡಿದರೆ ಮೊಮ್ಮಗ ಹುಟ್ಟುತ್ತಾನೆ ಎನ್ನುವ ಹಾಗೆ ಆಗಿದೆ. ಎಷ್ಟು ವಿಚಿತ್ರ ಎಂದರೆ ವಿತರಣೆ ಏಕೆ ಮಾಡಲಿಲ್ಲ, ಸಾಮಾನುಗಳು ಏಕೆ ಹೋಗಿಲ್ಲ. ವ್ಯಾಪಾರ ಏಕೆ ಮಾಡಲಿಲ್ಲ ಎಂದು ಕೇಳಲಿಲ್ಲ. ಒಳಗಡೆ ಅಧಿಕಾರಿಗಳಿಗೆ ವ್ಯಾಪಾರ ಬೇಕಾಗಿಲ್ಲ. ಅವರಿಗೆ ಲಾಭ ಬೇಕಾಗಿಲ್ಲ, ಕುರ್ಚಿ ಬೇಕಾಗಿದೆ, ಭ್ರಷ್ಟಾಚಾರ ಬೇಕಾಗಿದೆ. ಈ ರೀತಿಯಲ್ಲಿ ಜನತಾ ಬಜಾರ್ ಆಗಿದೆ. ಅದನ್ನು ಉಳಿಸಿಕೊಡಬೇಕೆಂದು ನಾನು ಕಳಕಳಿಯಿಂದ ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಶ್ರೀ ಎಸ್.ಎಸ್.ಪಾಟೀಲ್ : ಈಗಾಗಲೇ ಮಾನ್ಯ ಸದಸ್ಯರುಗಳು ಸಹಕಾರಿ ಕ್ಷೇತ್ರದ ಮೇಲೆ ಒಂದು ವಿಶ್ವಾಸವನ್ನು ಕಾಣುತ್ತಿದ್ದಾರೆ. ಇವತ್ತು ನಮ್ಮ ಸದಾನಂದ ಗೌಡರು ಹೇಳಿದ ಹಾಗೆ ಸರ್ಕಾರದ ಹಸ್ತಕ್ಷೇಪ ಅಲ್ಲಿ ಇರಬಾರದು ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಅಷ್ಟೇ ಅಲ್ಲ ಸಾಧ್ಯವಾದಷ್ಟು ಮಟ್ಟಿಗೆ ಆಡಳಿತ ಮಂಡಳಿಯನ್ನು ಮುಂದುವರೆಸಬಾರದೆಂದು ನಮ್ಮ ಸರ್ಕಾರದ ನಿಲುವು. ಆ ದೃಷ್ಟಿಯಿಂದ ತಾವು ಏನು ಹೇಳಿದ್ದೀರಿ, ಹಳೆಯ ಕಮಿಟಿಯವರಿಗೆ ಅಧಿಕಾರವನ್ನು ನಡೆಸಿಕೊಡಿ ಎಂದು, ಅದಕ್ಕೆ ಅವಕಾಶವಿಲ್ಲ. ಹಿಂದೆ ಒಳ್ಳೆಯ ಕೆಲಸ ಮಾಡಿದಂತಹ

ಜನರ ಬಗ್ಗೆ ಹೇಳಿದ್ದೀರಿ. ಆಡಳಿತ ಮಂಡಳಿಯವರು ಚೆನ್ನಾಗಿ ಕೆಲಸ ಮಾಡುತ್ತಿಲ್ಲವೆಂದು ಹೇಳಿದ್ದೀರಿ. ನಾವು ಆ ವಿಷಯಗಳಿಗೆ ಹೋಗುವುದಿಲ್ಲ ಎಲ್ಲಿ ಬಹಳ ತಪ್ಪುಗಳು ಇರುತ್ತವೆಯೋ ಅದನ್ನು ನಾವು ಕಸಿದುಕೊಳ್ಳೋಣ. ಅದನ್ನು ಅನಿವಾರ್ಯವಾಗಿ ಕಸಿದುಕೊಳ್ಳಬೇಕಾಗುತ್ತದೆ.

ಶ್ರೀ ಎ.ರುಕ್ಮಯ್ಯ ಪೂಜಾರಿ : ಸಾಧ್ಯವಾದರೆ ಒಂದು ಸದನ ಸಮಿತಿಯನ್ನು ಮಾಡಿ ಅನಿವಾರ್ಯವಾಗಿ ರಾಜಕೀಯ ಹಸ್ತಕ್ಷೇಪ ಮಾಡಿಕೊಂಡು ರಾಜಕೀಯ ದುರುದ್ದೇಶವನ್ನು ಇಟ್ಟುಕೊಂಡು ಲಾಭ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಪಟ್ಟಿದ್ದಾರೆ. ಇದರ ಬಗ್ಗೆ ಸಮಾಧಾನವಾಗದಿದ್ದರೆ ತಾವು ಸದನ ಸಮಿತಿಯನ್ನು ಮಾಡಿ.

ಶ್ರೀ ಎಸ್.ಎಸ್.ಪಾಟೀಲ್ : ಅವರು ಏನು ಮಾಡಿದ್ದಾರೆ ಅದನ್ನು ನಾನು ಹೇಳುವುದಕ್ಕೆ ಹೋಗುವುದಿಲ್ಲ. ಆದರೆ ಇದರಲ್ಲಿ ಮಂಡಳಿಯವರ ತಪ್ಪು ಇದೆ. ಅವರು ಸರಿಯಾಗಿ ಕೆಲಸ ಮಾಡಿಲ್ಲ, ಜನರೇಟರ್ ಬಗ್ಗೆ ತಾವು ಹೇಳಿದ್ದಿರಲ್ಲಾ, ಅದು ನನಗೆ ಆಶ್ಚರ್ಯವಾಗುತ್ತದೆ. ಜನರೇಟರ್ ಅನ್ನು ತೆಗೆದುಕೊಂಡು ಅವರು ಅದನ್ನು ಉಪಯೋಗಿಸಿಲ್ಲ. ಅದನ್ನು ಹಾಗೆಯೇ ಇಟ್ಟಿದ್ದಾರೆ. ಅದು ಉಪಯೋಗಿಸಿದ್ದರೆ ಆಡಳಿತ ಮಂಡಳಿಯವರು ಡೀಸಲ್ ಖರ್ಚು ಹಾಕಬೇಕಾಗಿತ್ತು.

(ಗೊಂದಲ)

ಛೇರ್ಮನ್ : ಸದಾನಂದ ಗೌಡರೇ, ತಾವು ಕುಳಿತುಕೊಳ್ಳಿ, ಅವರು ಉತ್ತರವನ್ನು ಕೊಟ್ಟ ಮೇಲೆ ತಾವು ಕೇಳಿ.

ಶ್ರೀ ಎಸ್.ಎಸ್.ಪಾಟೀಲ್ : ನಾವು ಯಾವುದೇ ಆಡಳಿತ ಮಂಡಳಿಯನ್ನು ರದ್ದು ಪಡಿಸಿ ಬಹಳ ದಿವಸಗಳು ಆಡಳಿತ ಅಧಿಕಾರಿಗಳ ಕೈಯಲ್ಲಿ ಇಡಲಿಕ್ಕೆ ನಾನು ಒಪ್ಪುವುದಿಲ್ಲ. ಶೀಘ್ರವಾಗಿ ಚುನಾವಣೆಯನ್ನು ಮಾಡಿ ಅಧಿಕಾರವನ್ನು ಆಡಳಿತ ಮಂಡಳಿಗೆ ವಹಿಸಬೇಕಾಗುತ್ತದೆ.

ಶ್ರೀ ಡಿ.ವಿ.ಸದಾನಂದ ಗೌಡ: ಈಗ ಸಹಕಾರಿ ರಂಗ ಚುನಾವಣೆಗಳು ಮುಂದೆ ಹೋಗುವುದ್ದಿಲ್ಲವೆಂದರೆ ಚುನಾವಣೆ ಮಾಡುವುದಕ್ಕೆ ನಮ್ಮ ಅಭ್ಯಂತರವೇನೂ ಇಲ್ಲ. ಈ ಚುನಾವಣೆ ಮುಂದೆ ಮುಂದೆ ಹೋದರೆ ಅಲ್ಲಿರುವಂತಹ ಅಧಿಕಾರಿಗಳಿಗೆ ಮತ್ತಷ್ಟು ಆಡಳಿತ ಅಧಿಕಾರವನ್ನು ಮುಂದುವರೆಸುವುದಕ್ಕೆ ಅವಕಾಶ ಕೊಟ್ಟ ಹಾಗೆ ಆಗುತ್ತದೆ.

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು): ಮಾನ್ಯ ಅಧ್ಯಕ್ಷರೆ, ಮಾನ್ಯ ವಿರೋಧಪಕ್ಷದ ನಾಯಕರು ಯಾವುದೋ ಹಿಂದೆ ನಡೆದು ಹೋಯಿತು. ತಾವು ಈಗ ಬಂದಿದ್ದೀರಿ ಇದರ ಬಗ್ಗೆ ಕಾಳಜಿ ವಹಿಸಿ ಹಸ್ತಕ್ಷೇಪ ಮಾಡದೆ ಸಹಕಾರಿ ಕ್ಷೇತ್ರವನ್ನು ಅವರ ಸ್ವಾಧೀನಕ್ಕೆ ಬಿಡಿ ಎಂದು ಹೇಳಿದರು. ಸಹಕಾರಿ ಸಂಸ್ಥೆಗಳಾಗಲಿ, ಷಹಕಾರಿ ಕ್ಷೇತ್ರದಲ್ಲಾಗಲಿ ಎಲ್ಲೂ ಕೂಡ ಆಡಳಿತ ಅಧಿಕಾರಿಗಳನ್ನು ಬಹಳ ವರ್ಷ ಇಟ್ಟುಕೊಳ್ಳುವುದು ಬಹಳ ಅಪಾಯ ಎಂಬುದು ನಮಗೆಲ್ಲಾ ಗೊತ್ತಿದೆ. ಅಪಾಯವಾಗುವಂತಹ ಪರಿಸ್ಥಿತಿಗೆ ಹೋಗುವ ಮುನ್ನ ಚುನಾವಣೆಯ ಕೆಲಸವನ್ನು ನಡೆಸುತ್ತೇವೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಶ್ರೀ ಡಿ.ವಿ.ಸದಾನಂದಗೌಡ : ಸಹಕಾರಿ ಸಂಘಗಳ ಚುನಾವಣೆಗಳು ಮುಂದೆ ಹೋಗುತ್ತಿದೆ. ಇದೇ ತಿಂಗಳಲ್ಲಿ ಎಷ್ಟು ದಿವಸಗಳಲ್ಲಿ ಚುನಾವಣೆ ಮಾಡುತ್ತೀರಿ?

Sri S.S.Patil : Under the cooperative Act, for restoration/ reinstatement there is no provison.

ಶ್ರೀ ಡಿ.ವಿ.ಸದಾನಂದಗೌಡ : ಚುನಾವಣೆಗಳನ್ನು ಎಷ್ಟು ಸಮಯದಲ್ಲಿ ಮಾಡುತ್ತೀರಿ ಎಂಬುದನ್ನು ಹೇಳಿ.

ಶ್ರೀ ಬಿ.ಎಸ್.ಯಡಿಯೂರಪ್ಪ : ನಿರ್ದಿಷ್ಟವಾಗಿ ಒಂದು ತಿಂಗಳಲ್ಲಿ ಚುನಾವಣೆಗಳನ್ನು ಮಾಡಿ ಮುಗಿಸಿ.

ಶ್ರೀ ಎಸ್.ಎಸ್.ಪಾಟೀಲ್ : ನಾನು ಸ್ಪಷ್ಟವಾಗಿ ಹೇಳುತ್ತೇನೆ. ಆದಷ್ಟು ಜಾಗ್ರತೆ ಚುನಾವಣೆ ಮಾಡಿ ಅಧಿಕಾರವನ್ನು ವಹಿಸಿಕೊಡುತ್ತೇವೆ.

ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕ, 1995

ಮಂಡನೆಗೆ ಅನುಮತಿ ಕೋರಿಕೆ

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು) : ಮಾನ್ಯ ಅಧ್ಯಕ್ಷರೆ, 1995ರ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸಲು ತಮ್ಮ ಅನುಮತಿ ಕೋರುತ್ತೇನೆ.

ಛೇರ್‌ಮನ್ : ಪ್ರಸ್ತಾವ ಏನೆಂದರೆ 1995ರ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳು (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ನೀಡುವುದು.

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು ಮತ್ತು ಮಂಡನೆಗೆ ಅನುಮತಿ ನೀಡಲಾಯಿತು

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು) ಮಾನ್ಯ ಅಧ್ಯಕ್ಷರೆ, 1995ರ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿವೇತನಗಳು ಮತ್ತು ಭತ್ಯೆಗಳು (ತಿದ್ದುಪಡಿ)(ವಿಧೇಯಕವನ್ನು ಸಭೆಯ ಮುಂದೆ ಮಂಡಿಸುತ್ತೇನೆ.

ಛೇರ್‌ಮನ್ : ವಿಧೇಯಕವನ್ನು ಮಂಡಿಸಲಾಗಿದೆ.

ಪರ್ಯಾಲೋಚನಾ ಪ್ರಸ್ತಾವ

ಶ್ರೀ ಎಂ.ಸಿ.ನಾಣಯ್ಯ(ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು): ಮಾನ್ಯ ಅಧ್ಯಕ್ಷರೇ, 1995ರ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳು (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಕೋರುತ್ತೇನೆ.

ಪ್ರಸ್ತಾವವನ್ನು ಮಂಡಿಸಲಾಯಿತು

ಶ್ರೀ ಎಂ.ಸಿ.ನಾಣಯ್ಯ : ಮಾನ್ಯ ಸಭಾಧ್ಯಕ್ಷರೇ ಇದೊಂದು ಸರಳವಾಗಿರತಕ್ಕಂಥ ತಿದ್ದುಪಡಿ, ಇದು ತಮಗೆಲ್ಲರಿಗೂ ಗೊತ್ತಿದೆ, ಈಗಿರತಕ್ಕಂಥ ಸೌಲಭ್ಯದ ಪ್ರಕಾರ ರಾಜ್ಯದ ಒಳಗಡೆ ನಮ್ಮ ಕೆ.ಎಸ್.ಆರ್.ಟಿ.ಸಿ ಬಸ್ಸುಗಳಲ್ಲಿ ಶಾಸಕರುಗಳು ಹೋಗುವುದಕ್ಕೆ ಸೌಲಭ್ಯ ಇದೆ, ಇದನ್ನು ರಾಜ್ಯದ ಹೊರಗಡೆಯು ಕೂಡ ಮಾಡಬೇಕು ಎಂದು ಹೇಳುತ್ತಾ ಇರತಕ್ಕಂಥದ್ದು ಒಂದು. ಎರಡನೆಯದು, ಈ ಭತ್ಯೆ

ಕೊಟ್ಟಿರತಕ್ಕಂಥದ್ದು ಪಾರ್ಲಿಮೆಂಟರಿ ಫಂಕ್ಷನರೀಸ್ ಮತ್ತು ಸ್ಪೀಕರ್, ಡೆಪ್ಯೂಟಿ ಛೇರ್ಮನ್‌ರವರಿಗೆ ಸಂಬಂಧಪಟ್ಟ ಹಾಗೆ ಈ ಹಿಂದೆ ನಾವು ಒಂದು ತಿದ್ದುಪಡಿಯನ್ನು ತಂದಾಗ ಅವರಿಗೆ ಕೊಟ್ಟಿರತಕ್ಕಂಥ ಸೌಲಭ್ಯವನ್ನು ನಮ್ಮ ಕೈತಪ್ಪಿನಿಂದ ಆ ಸಂದರ್ಭದಲ್ಲಿ ಬಿಟ್ಟು ಹೋಗಿತ್ತು. ಅದನ್ನೂ ಕೂಡ ಈ ಸಂದರ್ಭದಲ್ಲಿ ಅಳವಡಿಸಲಿಕ್ಕೆ ಇರುವಂಥ ತಿದ್ದುಪಡಿ ಈ ತಿದ್ದುಪಡಿಗೆ ಸಭೆಯ ಸರ್ವಾನುಮತದ ಅಂಗೀಕಾರ ಇದೆಯೆಂದು ನಾನು ಭಾವಿಸುತ್ತೇನೆ.

ಛೇರ್‌ಮನ್ : ಪ್ರಸ್ತಾವ ಏನೆಂದರೆ, 1995ರ ಕರ್ನಾಟಕದ ವಿಧಾನ ಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸುವುದು.

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು

ಖಂಡ ಖಂಡವಾಗಿ ವಿಧೇಯಕವನ್ನು ಪರ್ಯಾಲೋಚಿಸುವುದು

ತಿದ್ದುಪಡಿ ಪ್ರಸ್ತಾವ

ಖಂಡ 2ಕ್ಕೆ ತಿದ್ದುಪಡಿ

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು): ಮಾನ್ಯ ಛೇರ್ಮನರವರೇ, ಖಂಡ 2ಕ್ಕೆ ನಾನು ಈ ಕೆಳಕಂಡ ತಿದ್ದುಪಡಿಯನ್ನು ಮಂಡಿಸುತ್ತೇನೆ.

''2ನೇ ಖಂಡಕ್ಕೆ ಅದರ 3ನೇ ಖಂಡದ ಪುನರ್ ಸಂಖ್ಯೆಯನ್ನು ನೀಡತಕ್ಕದ್ದು ಹಾಗೂ ಪುನರ್ ಸಂಖ್ಯೆ ನೀಡಲಾದ 3ನೇ ಖಂಡಕ್ಕೆ ಮೊದಲು ಕರ್ನಾಟಕ ವಿಧಾನಮಂಡಲದವರ ವೇತನಗಳು ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ವಿಧಿನಿಯಮ 1957ರ 2ನೇ ಪ್ರಕರಣದ ಇ(1)ರಲ್ಲಿರುವ ನೂರು ಮತ್ತು ಇನ್ನೂರ ಐವತ್ತೈದು ಎಂಬ ಪದಗಳಿಗೆ ಕ್ರಮವಾಗಿ ಇನ್ನೂರ ಐವತ್ತು ಮತ್ತು ಮುನ್ನೂರ ಐವತ್ತು ಎಂಬ ಪದಗಳನ್ನು ಸೇರಿಸುವುದು ಹಾಗೂ ಇದು 1ನೇ ಸೆಪ್ಟೆಂಬರ್ 1993ರಿಂದ ಜಾರಿಗೆ ಬರುವುದೆಂದು ಭಾವಿಸತಕ್ಕದ್ದು''

ಪ್ರಸ್ತಾವ ಮಂಡಿಸಲ್ಪಟ್ಟಿತು

ಛೇರ್‌ಮನ್ : ಪ್ರಸ್ತಾವ ಏನೆಂದರೆ

''2ನೇ ಖಂಡಕ್ಕೆ ಅದರ 3ನೇ ಖಂಡದ ಪುನರ್ ಸಂಖ್ಯೆನ್ನು ನೀಡತಕ್ಕದು ಹಾಗೂ ಪುನರ್ ಸಂಖ್ಯೆ ನೀಡಲಾದ 3ನೇ ಖಂಡಕ್ಕೆ ಮೊದಲು ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ವಿಧಿನಿಯಮ 1957ರ 2ನೇ ಪ್ರಕರಣದ ಇ(1) ರಲ್ಲಿರುವ 'ನೂರು' ಮತ್ತು ಇನ್ನೂರ ಐವತ್ತೈದು ಎಂಬ ಪದಗಳಿಗೆ ಕ್ರಮವಾಗಿ ಇನ್ನೂರ ಐವತ್ತು ಮತ್ತು ಮುನ್ನೂರ ಐವತ್ತು ಎಂಬ ಪದಗಳನ್ನು ಸೇರಿಸುವುದು''

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು

ಛೇರ್‌ಮನ್ : ಪ್ರಸ್ತಾವ ಏನೆಂದರೆ;

''2ನೇ ಖಂಡಕ್ಕೆ ಅದರ 3ನೇ ಖಂಡದ ಪುನರ್ ಸಂಖ್ಯೆಯನ್ನು ನೀಡತಕ್ಕದ್ದು ಹಾಗೂ ಪುನರ್ ಸಂಖ್ಯೆ ನೀಡಲಾದ 3ನೇ ಖಂಡಕ್ಕೆ ಮೊದಲು ಕರ್ನಾಟಕ

ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ವಿಧಿನಿಯಮ 1957ರ 2ನೇ ಪ್ರಕರಣದ ೩(1)ರಲ್ಲಿರುವ 'ನೂರು' ಮತ್ತು ಇನ್ನೂರ ಐವತ್ತೈದು ಎಂಬ ಪದಗಳಿಗೆ ಕ್ರಮವಾಗಿ ಇನ್ನೂರ ಐವತ್ತು ಮತ್ತು ಮುನ್ನೂರ ಐವತ್ತು ಎಂಬ ಪದಗಳನ್ನು ಸೇರಿಸುವುದು''

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು

ಹೊಸ ಖಂಡ 2 ತಿದ್ದುಪಡಿಯಾದಂತೆ

ಛೇರ್‌ಮನ್ : ಪ್ರಸ್ತಾವ ಏನೆಂದರೆ;

''ಹೊಸ ಖಂಡ 2 ತಿದ್ದುಪಡಿಯಾದಂತೆ ಈ ವಿಧೇಯಕದ ಅಂಗವಾಗಿರುತ್ತದೆ''

(ಪ್ರಸ್ತಾವ ಅಂಗೀಕರಿಸಲ್ಪಟ್ಟಿತು ಮತ್ತು ಹೊಸ ಖಂಡ 2 ತಿದ್ದುಪಡಿಯಾದಂತೆ ವಿಧೇಯಕಕ್ಕೆ ಸೇರಿಸಲ್ಪಟ್ಟಿತು)

ಖಂಡ 2 ಅನ್ನು 3ನೇ ಖಂಡವಾಗಿ ಪರಿವರ್ತಿಸುವ ಬಗ್ಗೆ ತಿದ್ದುಪಡಿ

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು) : ಮಾನ್ಯ ಛೇರ್ಮನ್‌ರವರೆ, ನಾನು ಈ ಕೆಳಕಂಡ ತಿದ್ದುಪಡಿಯನ್ನು ಮಂಡಿಸುತ್ತೇನೆ.

''2ನೇ ಖಂಡವನ್ನು 3ನೇ ಖಂಡವಾಗಿ ಪರಿವರ್ತಿಸುವುದು''

ಪ್ರಸ್ತಾವ ಮಂಡಿಸಲ್ಪಟ್ಟಿತು

ಛೇರ್‌ಮನ್ : ಪ್ರಸ್ತಾಪ ಏನೆಂದರೆ,

''ಖಂಡ 2 ತಿದ್ದುಪಡಿಯಾಗಿ 3ನೇ ಖಂಡವಾಗಿ ಪರಿವರ್ತಿತವಾದಂತೆ ವಿಧೇಯಕದ ಅಂಗವಾಗಿರುತ್ತದೆ.''

(ಪ್ರಸ್ತಾವ ಅಂಗೀಕರಿಸಲ್ಪಟ್ಟಿತು ಮತ್ತು ಖಂಡ 2 ತಿದ್ದುಪಡಿಯಾಗಿ 3ನೇ ಖಂಡವಾಗಿ ಪರಿವರ್ತವಾದಂತೆ ವಿಧೇಯಕಕ್ಕೆ ಸೇರಿಸಲ್ಪಟ್ಟಿತು)

ಖಂಡ 1 ಇತ್ಯಾದಿ

ಛೇರ್‌ಮನ್ : ಪ್ರಸ್ತಾವ ಏನೆಂದರೆ;

''ಮೊದಲನೆಯ ಖಂಡ, ದೀರ್ಘ ಶೀರ್ಷಕೆ ಪ್ರಸ್ತಾವನೆ ಹಾಗೂ ಅದಿ ನಿಯಮಗೊಳಿಸುವ ಸೂತ್ರ ಸಂಹಿತೆ ವಿಧೇಯಕದ ಭಾಗವಾಗಿರುತ್ತದೆ''

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು

(ವೊದಲನೆಯ ಖಂಡ, ದೀರ್ಘ ಶೀರ್ಷಿಕೆ, ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸೂತ್ರ ಸಂಹಿತೆಗಳನ್ನು ವಿಧೇಯಕಕ್ಕೆ ಸೇರಿಸಲ್ಪಟ್ಟಿತು)

ಪ್ರಸ್ತಾವದ ಅಂಗೀಕಾರ

ಶ್ರೀ ಎಂ.ಸಿ.ನಾಣಯ್ಯ (ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು) : ಮಾನ್ಯ ಛೇರ್‌ಮನ್‌ರವರೇ, 1995ರ ಕರ್ನಾಟಕ ವಿಧಾನ ಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕವನ್ನು ತಿದ್ದುಪಡಿಯಾದ ರೀತಿಯಲ್ಲಿ ಅಂಗೀಕರಿಸಬೇಕೆಂದು ಕೋರುತ್ತೇನೆ.

ಛೇರ್‌ಮನ್: ಪ್ರಸ್ತಾವ ಏನೆಂದರೆ

"1995ರ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕವನ್ನು ತಿದ್ದುಪಡಿ ಮಾಡಿರುವಂತೆ ಅಂಗೀಕರಿಸುವುದು"

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು ಮತ್ತು ಮಸೂದೆಗೆ ಒಪ್ಪಿಗೆ ನೀಡಲಾಯಿತು.

(2) ಕರ್ನಾಟಕ ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕ, 1995

ಪುನರ್ ಪರ್ಯಾಲೋಚನಾ ಪ್ರಸ್ತಾವ

ಶ್ರೀ ಎಂ.ಪಿ.ಪ್ರಕಾಶ್ (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಮಂತ್ರಿಗಳು): ಮಾನ್ಯ ಅಧ್ಯಕ್ಷರೇ, "1995ರ ಕರ್ನಾಟಕ ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕ (ವಿಧಾನಪರಿಷತ್ತಿನಿಂದ ತಿರಸ್ಕೃತವಾದ) ವನ್ನು ಪುನರ್ ಪರ್ಯಾಲೋಚಿಸಬೇಕೆಂದು ಕೋರುತ್ತೇನೆ."

ಪ್ರಸ್ತಾವವನ್ನು ಮಂಡಿಸಲ್ಪಟ್ಟಿತು

* ಶ್ರೀ ಎಂ.ಪಿ.ಪ್ರಕಾಶ್ : ಮಾನ್ಯ ಅಧ್ಯಕ್ಷರೆ, ಈ ಮನೆಯಲ್ಲಿ ಈಗಾಗಲೇ ಕರ್ನಾಟಕ ಪಂಚಾಯತ್‌ರಾಜ್ಯ ಆದ್ಯಾದೇಶವನ್ನು ನಾವು ಪ್ರಕಟಣೆ ಮಾಡಿರತಕ್ಕಂಥದನ್ನು ಮುಂದೆ ಕ್ರಮವಾಗಿ ಆ ವಿಚಾರದಲ್ಲಿ ತಿದ್ದುಪಡಿಯನ್ನು ತಂದು ಆದ್ಯಾದೇಶದ ಬದಲು ವಿಧೇಯಕವನ್ನು ನಾವು ಮಂಡಿಸಿದೆವು. ಆ ಸಂದರ್ಭದಲ್ಲಿ ಕೆಳಮನೆಯಲ್ಲಿಯೂ ಕೂಡ ಈ ವಿಚಾರವನ್ನು ಕೂಲಂಕುಷವಾಗಿ ಬಹಳ ದೀರ್ಘವಾಗಿ ಪ್ರಶ್ನೆ, ಉತ್ತರಗಳ ನಂತರ ಈ ಸದನವು ತನ್ನ ವಿವೇಕದಿಂದ ಈ ಮಸೂದೆಯನ್ನು ಮಂಜೂರಾತಿ ಮಾಡಿತು. ಆ ಸಂದರ್ಭದಲ್ಲಿ ಬಿ.ಜೆ.ಪಿ.ಪಕ್ಷದವರು ಸಭಾತ್ಯಾಗ ಮಾಡಿದರು, ಕಾಂಗ್ರೆಸ್ ಪಕ್ಷದವರು ಯಾವುದೇ ಭಿನ್ನಾಭಿಪ್ರಾಯಗಳನ್ನು ವ್ಯಕ್ತಮಾಡದೆ, ಕೆಲವು ವಿಚಾರಗಳನ್ನು ಪ್ರಸ್ತಾಪಮಾಡಿದರೂ ಕೂಡ ಈ ವಿಧೇಯಕದ ವಿರೋಧವಾಗಿ ಮತ ಚಲಾವಣೆ ಮಾಡಲಿಲ್ಲ. ಈ ಸಂದರ್ಭದಲ್ಲಿ ಪ್ರಸ್ತಾಪಿಸಲ್ಪಟ್ಟಿರತಕ್ಕಂಥ ಅನೇಕ ವಿಷಯಗಳನ್ನು ಮೇಲ್ಮನೆಯಲ್ಲಿ ನಾನು ಪ್ರಸ್ತಾಪ ಮಾಡಿದರೂ ಸಹಿತ ಅಲ್ಲಿ ತಮ್ಮದೇ ಆಗಿರತಕ್ಕ ಕೆಲವು ಕಾರಣಗಳಿಗಾಗಿ ಈ ವಿಧೇಯಕಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲ, ಈ ಸಂವಿಧಾನದ 197ನೇ ಪರಿಚ್ಛೇದದ ಪ್ರಕಾರ ಯಾವುದಾರದೂ ಒಂದು ವಿಧೇಯಕ ಕೆಳಮನೆಯಲ್ಲಿ ಅದು ಅಂಗೀಕಾರವಾಗಿ ಮೇಲ್ಮನೆಗೆ ಹೋದಾಗ ಅದು ತಿರಸ್ಕರಿಸಲ್ಪಟ್ಟಿದ್ದರೆ ಅದರ ಪುನರ್ ಪರಿಶೀಲನೆಗಾಗಿ ಕೆಳಮನೆಗೆ ಬರುತ್ತದೆ, ಈಗಾಗಲೇ ಆಗಿ ಹೋಗಿರತಕ್ಕಂಥದ್ದು, ಒಪ್ಪಿಗೆಯನ್ನು ಕೊಟ್ಟಿರತಕ್ಕಂಥದ್ದು ಆ ಕಾರಣಕ್ಕಾಗಿ ಮತ್ತೆ ತಮ್ಮ ಮೂಲಕವಾಗಿ ಈ ವಿಚಾರದ ಎಲ್ಲಾ ವಿವರಗಳ ಬಗ್ಗೆ ಚರ್ಚೆಮಾಡದೆ ಅದನ್ನು ಮತ್ತೆ ಸಭೆ ಅಂಗೀಕರಿಸಬೇಕೆಂದು ತಮ್ಮ ಮೂಲಕ ಪ್ರಾರ್ಥನೆಯನ್ನು ಮಾಡುತ್ತೇನೆ.

ಶ್ರೀ ವೈ.ರಾಮಕೃಷ್ಣ(ಆನೇಕಲ್) : ಈಗ ಈ ಬಿಲ್ಲನ್ನು ಇಲ್ಲಿ ಮಂಡಿಸಿದಾಗ ನಾವು ಅನೇಕ ಜನ ಈ ವಿಚಾರವನ್ನು ತಮ್ಮ ಗಮನಕ್ಕೆ ತಂದಿದ್ದೆವು. ಇದು ಯಾವರೀತಿ ಅವೈಜ್ಞಾನಿಕವಾಗಿದೆ ಮತ್ತು ಇದರ ಬುನಾಧಿ ಭದ್ರವಾಗಿಲ್ಲ, ತಾವೇನು ಎ ವರ್ಗ ಮತ್ತು ಬಿ ವರ್ಗ ಅಂಥ ಮಾಡಿದ್ದೀರಿ ಮತ್ತು ಸೆನ್ಸ್‌ಸ್‌ನಲ್ಲಿ ಬ್ಯಾಕ್‌ವರ್ಡ್‌ಕ್ಲಾಸ್ ಎಷ್ಟಿದೆ ಎಂದು ಅವರೇನು ಗಣನೆಗೆ ತೆಗೆದುಕೊಂಡಿಲ್ಲ, ನೀವು 80ಪರ್‌ಸೆಂಟ್, 20 ಪರ್‌ಸೆಂಟ್ ಎಂದು ಏನು ಮಾಡಿದ್ದೀರಿ ಅದರಲ್ಲಿ ಯಾವುದು

80 ಪರ್‌ಸೆಂಟ್ ಮತ್ತು ಯಾವುದು 20 ಪರ್‌ಸೆಂಟ್ ಎಂದು ನಮೂದನೆ ಮಾಡಿಲ್ಲ ಹಾಗೆಯೇ ಪರಿಶಿಷ್ಟಜಾತಿಯವರ ವಿಚಾರ ಬಂದಾಗ ತಾವು 23 ಪರ್‌ಸೆಂಟ್ ಕೊಟ್ಟಿದ್ದೇವೆಂದು ಹೇಳಿದಿರಿ, 1991ರ ಸೆನ್ಸ್‌ಸ್ ಪ್ರಕಾರ ಫಿಗರ್ಸ್ ತೆಗೆದುಕೊಂಡಿದ್ದೇವೆ ಎಂದು ಹೇಳಿದಿರಿ, ನಾನು ತಮ್ಮನ್ನು ಕೇಳುತ್ತಿದ್ದೇನೆ, ಈಗ ಷೆಡ್ಯೂಲ್ ಟ್ರೈಬ್ಸ್‌ಗೆ ಸುಮಾರು 12ರಿಂದ 15 ಲಕ್ಷ ಜನರನ್ನು ಸೇರಿಸಿದ್ದಾರೆ, ಅವರನ್ನು ನೀವು ಷೆಡ್ಯೂಲ್ ಟ್ರೈಬ್‌ನೊಳಗೆ ತೆಗೆದುಕೊಂಡು ಏಕೆ ಪರಿಗಣನೆ ಮಾಡಲಿಲ್ಲ? ಪರಿಗಣನೆ ಮಾಡದೆಹೋದರೆ ಈ ಷೆಡ್ಯೂಲ್ ಕ್ಯಾಸ್ಟ್ ಷೆಡ್ಯೂಲ್ ಟ್ರೈಬ್ಸ್‌ಗೆ ಏನಿದೆ ಹಿಂದೆ ಎಷ್ಟು ಇತ್ತು, ಅದು ಅಷ್ಟೇ ಇರುತ್ತದೆ, ಅದಕ್ಕೋಸ್ಕರ ಸೀಟುಗಳು ಕಡಿಮೆಯಾಗಿದೆ. ಅದಕ್ಕೋಸ್ಕರ ವರ್ಗೀಕರಣವಾಗಲಿ ಅಥವಾ ನಮಗೆ ಕೊಟ್ಟಿರತಕ್ಕಂಥ ಸೀಟುಗಳಾಗಲಿ ಯಾವುದೂ ಸಮರ್ಪಕವಾಗಿಲ್ಲ. ಅದಕ್ಕೋಸ್ಕರ ಇದನ್ನು ಜಾಯಿಂಟ್ ಸೆಲೆಕ್ಟ್ ಕಮಿಟಿಗೆ ರೆಫರ್ ಮಾಡಿ ಇಲ್ಲದಿದ್ದರೆ ಬಿಲ್ಲನ್ನು ಮುಂದುವರೆಸಿ ಮರುಪರ್ಯಾಲೋಚನೆಯಾದರೂ ಮಾಡಿ. ಈಗ ನಾವು ಇಷ್ಟು ಹೇಳಿದರೂ ಕೂಡ ಇದನ್ನು ಮೇಲ್ಮನೆಗೆ ತೆಗೆದುಕೊಂಡು ಹೋದಿರಿ, ಅಲ್ಲಿ ಧೀರ್ಘವಾಗಿ ಚರ್ಚೆ ಮಾಡಿದಿರಿ, ಇದೇ ಪಾಯಿಂಟನ್ನು ಅವರೂ ಕೂಡ ರೈಸ್ ಮಾಡಿದ್ದಾರೆ, ದಯವಿಟ್ಟು ಇದೆಲ್ಲವನ್ನೂ ತಾವು ಅರ್ಥಮಾಡಿಕೊಳ್ಳಬೇಕು ಈಗ ಅರ್ಟಿಕಲ್ 179 ಹೇಳಿದಿರಿ, ಅರ್ಟಿಕಲ್ 179ಏನು ಹೇಳುತ್ತದೆ, ಮುಂದಿನ ಅಧಿವೇಶನದಲ್ಲಿ ಇದನ್ನು ಚರ್ಚೆ ಮಾಡಬಹುದು ಎಂದು ಇದರಲ್ಲಿ ಇದೆ. ಸಂವಿಧಾನ ಇದಕ್ಕೆ ಸಮ್ಮತಿಸುತ್ತದೆ. ಅದಕ್ಕೋಸ್ಕರವಾಗಿ ದಯವಿಟ್ಟು ಅತುರಾತುರವಾಗಿ ಇದನ್ನು ತೆಗೆದುಕೊಂಡು ಬಂದು ಪಾಸ್‌ಮಾಡಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ. ಮತ್ತೊಮ್ಮೆ ನಾನು ಪುನರ್ ಉಚ್ಚಾರ ಮಾಡುತ್ತಿದ್ದೇನೆ. ನಾವು ಇದನ್ನು ಖಂಡಿಸುತ್ತೇವೆ, ಇದರಲ್ಲಿ ರಾಜಕೀಯ ಆತುರತೆಯನ್ನು ತೋರಿಸಬೇಡಿ, ಸ್ಟಾಟಿಸ್‌ಸ್ಟಿಕ್ಸ್‌ಇ ಲ್ಲ, ಮತ್ತು ಕೊಟ್ಟಿರತಕ್ಕಂಥ ಸ್ಟಾಟಿಸ್‌ಸ್ಟಿಕ್ಸ್ ಸಮರ್ಪಕವಾಗಿಲ್ಲ. ದಯವಿಟ್ಟು ಇದನ್ನು ತಾವು ಜಾಯಿಂಟ್ ಸೆಲೆಕ್ಟ್ ಕಮಿಟಿಗೆ ರೆಫರ್ ಮಾಡಬೇಕು.

**1.20 ಪಿ.ಎಂ**

ಶ್ರೀ ಬಿ.ಎಸ್.ಯಡಿಯೂರಪ್ಪ (ವಿರೋಧಪಕ್ಷದ ನಾಯಕರು): ಮಾನ್ಯ ಅಧ್ಯಕ್ಷರೇ, ಅವತ್ತಿನಿಂದ ಇವತ್ತಿನವರೆಗೂ ನಾವು ಇದನ್ನು ವಿರೋಧ ಮಾಡಿಕೊಂಡು ಬಂದಿದ್ದೇವೆ. ಬ್ಯಾಕ್‌ವರ್ಡ್‌ನಲ್ಲಿ ಎ ಕ್ಯಾಟಗರಿ ಬಿ ಕ್ಯಾಟಗರಿ ಎಂದು ಮಾಡಿದಾಗ ನಿರ್ಧಿಷ್ಟವಾಗಿ ಹೇಗೆ ಮೀಸಲಾತಿ ಮಾಡಬೇಕು ಎನ್ನುವುದನ್ನು ತಾವು ಸ್ಪಷ್ಟ ಮಾಡದೇ ಚುನಾವಣೆ ನಡೆದು ಹೋಯಿತು. ಅದೇ ರೀತಿ ಎಸ್.ಟಿ. ಎಸ್.ಸಿ ಜನಾಂಗಕ್ಕೆ ಮೀಸಲಾತಿ ಕಲ್ಪಿಸುವಲ್ಲಿಯೂ ತಾವು ಹಿಂದೆ ಬಿದ್ದಿರಿ, ಇದರಿಂದ ಸಾಕಷ್ಟು ಜನರಿಗೆ ಅನ್ಯಾಯವಾಯಿತು. ಮಾನ್ಯ ವೈ.ರಾಮಕೃಷ್ಣರವರು ಆ ಬಗ್ಗೆ ಸಾಕಷ್ಟು ಹೇಳಿದ್ದಾರೆ. ಅದನ್ನು ನೀವು ಒಪ್ಪಿಕೊಳ್ಳಲೇಬೇಕು. ಇಲ್ಲದಿದ್ದರೆ ನಾವು ವೋಟ್‌ಗೆ ಪ್ರೆಸ್ ಮಾಡಬೇಕಾಗುತ್ತದೆ. ಆಗ ಏನು ನಿರ್ಧಾರ ಆಗುತ್ತೋ ಅದರಂತೆ ತಾವು ಮುಂದುವರಿಯಬಹುದು. ಅದಕ್ಕೆ ನಮ್ಮದೇನೂ ಅಭ್ಯಂತರ ಇಲ್ಲ.

*ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ (ಗುರಮಿಠ್‌ಕಲ್): ಮಾನ್ಯ ಅಧ್ಯಕ್ಷರೇ, ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕ 1995 ಇದು ಈಗಾಗಲೇ

ವಿಧಾನ ಪರಿಷತ್ತಿನಿಂದ ತಿರಸ್ಕೃತವಾದ ರೂಪದಲ್ಲಿ ಪುನಃ ಇವತ್ತು ನಮ್ಮ ಮುಂದೆ ಬಂದಿದೆ. ಇದರ ಬಗ್ಗೆ ಈಗಾಗಲೇ ಅನೇಕ ಸಲ ನಾವು ಪ್ರಸ್ತಾಪ ಮಾಡಿದ್ದೇವೆ. ಪಂಚಾಯತ್-ರಾಜ್‌ನಲ್ಲಿ ನಂಬಿಕೆ ಇರತಕ್ಕ ನಾವೆಲ್ಲರೂ ಕೂಡ ಹೆಚ್ಚಿನ ಪ್ರಾತಿನಿದಿತ್ವವನ್ನು ಹಿಂದುಳಿದ ವರ್ಗದವರಿಗೆ ಹರಿಜನ ಗಿರಿಜನರಿಗೆ ಕೊಡಬೇಕು ಎನ್ನುವಂತಹ ದೃಷ್ಟಿಯಿಂದ ಕೆಲವು ತಿದ್ದುಪಡಿಗಳನ್ನು ನಾವು ತಂದಿದ್ದೇವು. ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಇವತ್ತು ತಾವು ಹೊಸ ತಿದ್ದುಪಡಿಯನ್ನು ತಂದಿದ್ದೀರಿ. ಮಾನ್ಯ ಅಧ್ಯಕ್ಷರೇ, ವಿಶೇಷವಾಗಿ ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಯ 4ನೇ ಪ್ಯಾರಾದಲ್ಲಿ ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳಿಗೆ ಅವರ ಜನಸಂಖ್ಯೆಯ ಪ್ರಮಾಣವನ್ನು ಪರಿಗಣಿಸದೇ ಅನುಕ್ರಮವಾಗಿ ಶೇಕಡ 15 ಮತ್ತು ಶೇಕಡ 3ರಷ್ಟು ಕನಿಷ್ಟ ಮೀಸಲಾತಿಗೆ ಉಪಬಂಧ ಕಲ್ಪಿಸಲಾಗಿದ್ದು,. ಅಂತಹ ಉಪಬಂಧಗಳನ್ನು ಬಿಟ್ಟು ಬಿಡಲು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ಕ್ಕೆ ತಿದ್ದುಪಡಿಯನ್ನು ಮಾಡುವುದು ಯುಕ್ತ ಎಂದು ಪರಿಗಣಿಸಲಾಗಿದೆ. ಎಂಬುದಾಗಿ ಸೂಚಿಸಲಾಗಿದೆ. ಈ ಅಂಶದ ಬಗ್ಗೆಯೇ ನಮ್ಮ ಚಳುವಳಿ. ಇದರ ಬಗ್ಗೆಯೇ ನಾವು ಪರಿಶಿಷ್ಟ ಜಾತಿಯವರಿಗೆ ಕನಿಷ್ಟ ಶೇಕಡ 15ಮತ್ತು ಪರಿಶಿಷ್ಟ ಪಂಗಡದವರಿಗೆ ಕನಿಷ್ಟ ಶೇಕಡ 3ರಷ್ಟು ಪ್ರಾತಿನಿಧಿತ್ವವನ್ನು ಕೊಡಲೇಬೇಕೆಂದು ಹಠ ಹಿಡಿದಿದ್ದೆವು. ಎಲ್ಲಾ ವರ್ಗದ ಜನರಿಗೆ ಸಾಮಾಜಿಕ ನ್ಯಾಯವನ್ನು ಕೊಡಬೇಕೆಂಬ ಮಾತನ್ನು ನಾವು ನೀವು ಎಲ್ಲರೂ ಆಡುತ್ತೇವೆ. ಅದಕ್ಕೆ ನೀವು ಏನು ಹೇಳಬಹುದು. ಜನಸಂಖ್ಯೆ ಆಧಾರದ ಮೇಲೆ ನಾವು ಇವತ್ತಿನ ದಿವಸ ಮೀಸಲಾತಿ ಮಾಡಿದ್ದೇವೆ. ಅದಕ್ಕಾಗಿ ಕನಿಷ್ಟ ಶೇಕಡ 15ಮತ್ತು ಶೇಕಡ 3ರಷ್ಟು ಮೀಸಲಾತಿ ಅನ್ನತಕ್ಕಂತಹ ಅವಶ್ಯಕತೆ ಇಲ್ಲ. ಅದು ಕಾನೂನು ಬಾಹಿರವಾಗಿದೆ. ಅದಕ್ಕಾಗಿ ನಾವು ಅದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಜನಸಂಖ್ಯೆ ಆಧಾರದ ಮೇಲೆ ನಾವು ಮೀಸಲಾತಿ ಕೊಡುವುದಕ್ಕೆ ಅದರ ಪ್ರಕಾರ ನಾವು ತಿದ್ದುಪಡಿಯನ್ನು ತಂದಿದ್ದೇವೆ ಎನ್ನತಕ್ಕಂತಹ ವಾದ ತಮ್ಮದಿದೆ. ನಮ್ಮ ವಾದ ಏನೆಂದರೆ ಸಮಾಜದ ಯಾವ ವರ್ಗಕ್ಕೆ ಸಾಮಾಜಿಕ ನ್ಯಾಯವನ್ನು ತಾವು ಕೊಡಬೇಕೆಂದು ಬಯಸಿದ್ದೀರೋ. ಆ ಜನರಿಗೆ ರಕ್ಷಣೆ ಕೊಡುವುದಕ್ಕೋಸ್ಕರ ಈ ಮಿನಿಮಮ್ ಕ್ಲಾಸ್ ಅನ್ನು ನಾವು ಹಾಕಿದ್ದೇವೆ. ಒಂದು ತಾಲ್ಲೂಕಿನಲ್ಲಿ ಒಂದು ಪಂಚಾಯತ್‌ನಲ್ಲಿ, ಒಂದು ಜಿಲ್ಲೆಯಲ್ಲಿ ಕೇವಲ 10ಜನ ಇರಬಹುದು. ಆದರೆ ಕನಿಷ್ಠ ಶೇಕಡ 15ರಷ್ಟಾದರೂ ಮೀಸಲಾತಿ ಕೊಡಿ ಎಂದು ಏಕೆ ಕೇಳಿದ್ದೇವೆ ಎಂದರೆ ಅಲ್ಲಿ ಒಬ್ಬನಾದರೂ ಮನುಷ್ಯ ಇದರಿಂದಾಗಿ ಆರಿಸಿ ಬರುತ್ತಾನೆ ಎಂದು. ಇವತ್ತು ನಾವು ನೋಡುತ್ತಿದ್ದೇವೆ. ಸ್ಪೆಷಲ್ ಕಾಂಪೋನೆಂಟ್ ಪ್ಲಾನ್‌ನಲ್ಲಿ ಸುಮಾರು ಹತ್ತು ವರ್ಷಗಳಿಂದ ನೂರಾರು ಕೋಟಿ ರೂಪಾಯಿ ಹಾಳಾಗುತ್ತಿದೆ. ಹೀಗೆ ಪ್ರತಿ ಜಿಲ್ಲೆ ಪ್ರತಿ ತಾಲ್ಲೂಕಿನಲ್ಲಿ ಎಸ್.ಸಿ.ಪಿ ಅಮೌಂಟ್ ಇದ್ದೇ ಇರುತ್ತದೆ. ಟ್ರೈಬಲ್ ಪ್ಲಾನ್ ಇರುತ್ತದೆ. ಮತ್ತು ಅನೇಕ ಯೋಜನೆಗಳು ಕೇಂದ್ರ ಸರ್ಕಾರದಲ್ಲಿರುತ್ತವೆ ಮತ್ತು ರಾಜ್ಯ ಸರ್ಕಾರದ ಹಲವು ಯೋಜನೆಗಳೂ ಕೂಡ ಪಂಚಾಯತ್‌ನಲ್ಲಿ ತಾಲ್ಲೂಕು ಮತ್ತು ಜಿಲ್ಲೆಯಲ್ಲಿ ಇರುತ್ತವೆ. ಇವೆಲ್ಲವುಗಳನ್ನೂ ನೋಡಿಕೊಳ್ಳುವುದಕ್ಕೆ ಕನಿಷ್ಠ ಪಕ್ಷ ಒಬ್ಬನಾದರೂ ಸದಸ್ಯ ಆ ಪಂಚಾಯತ್ ರಾಜ್‌ನಲ್ಲಿ ಆರಿಸಿ ಬರಲೀ, ಆ ಒಂದು ತಾಲ್ಲೂಕು ಪಂಚಾಯತ್‌ನಲ್ಲಿ ಆರಿಸಿ ಬರಲಿ ಜಿಲ್ಲಾ ಪರಿಷತ್ತಿನಲ್ಲಿ ಆರಿಸಿ ಬರಲಿ ಎನ್ನತಕ್ಕಂತಹ

ದೃಷ್ಟಿಯಿಂದಲೇ ನಾವು ಕನಿಷ್ಠ ಮೀಸಲಾತಿ ಫಿಕ್ಸ್-ಮಾಡಿದ್ದು ಗರಿಷ್ಠ ಮೀಸಲಾತಿ ಪ್ರಕಾರ ಅದು ಶೇಕಡ 20 ಇರಬಹುದು 21 ಇರಬಹುದು, 23 ಇರಬಹುದು ಅಥವಾ 25 ಇರಬಹುದು. ಆದರೆ ಕನಿಷ್ಠ ಪಕ್ಷ ಅವರಿಗೆ ರಕ್ಷಣೆ ಸಿಗಬೇಕು ಎನ್ನತಕ್ಕ ದೃಷ್ಟಿಯಿಂದ ಆ ಕ್ಲಾಸ್ ಅನ್ನು ನಾವು ತಂದಿದ್ದೇವೆ. ಅದಕ್ಕೆ ನೀವು ಏನು ಮಾಡಿದಿರಿ. ಅದನ್ನು ಹೊಡೆದು ಹಾಕಿ ನಾವು ಮಾಡಿದ್ದೇ ಸರಿ ನಾವು ಹೇಳಿದ್ದೇ ಸರಿ ಎಂದು ಭಾವಿಸಿ ಈ ತಿದ್ದುಪಡಿಯನ್ನು ಹೊಸದಾಗಿ ತಿದ್ದುಪಡಿ ಮಾಡಿ ಆ ಕ್ಲಾಸ್‌ಡಿಲೀಟ್ ಮಾಡಿ ನೀವು ಆ ವಿಧೇಯಕವನ್ನು ಮೇಲ್ಮನೆಯಲ್ಲಿ ತೆಗೆದುಕೊಂಡು ಹೋದಿರಿ. ಅಲ್ಲಿ ಈ ವಿಧೇಯಕ ತಿರಸ್ಕೃತಗೊಂಡಿದೆ. ಆದುದರಿಂದ ಈಗಲಾದರೂ ಕನಿಷ್ಠ ಮೀಸಲಾತಿಗೆ ನೀವು ಒಪ್ಪಿಕೊಳ್ಳಿ. ಏಕೆಂದರೆ ಅದರ ದುಷ್ಪರಿಣಾಮ ಕೂಡ ನಾಳೆ ಆಗುತ್ತದೆ, ಹೇಗೆ ಎಂದರೆ ಈಗ ಗ್ರಾಮ ಪಂಚಾಯಿತಿಯ ಚುನಾವಣೆಗಳನ್ನು ನಾವು ಈ ಒಂದು ಕ್ಲಾಸ್ ಕೆಳಗೆ ನಡೆಸಿದ್ದೇವೆ. ಆ ಚುನಾವಣೆಯಲ್ಲಿ ಸಾವಿರಾರು ಜನ ಸದಸ್ಯರು ಆ ಪ್ರಾವಿಷನ್ ಅಡಿಯಲ್ಲಿ ಈಗಾಗಲೇ ಆರಿಸಿ ಬಂದಿದ್ದಾರೆ. ಆ ರೀತಿ ಆರಿಸಿ ಬಂದಿರುವವರ ಗತಿ ಏನು? ಅವರನ್ನು ಸೇಫ್‌ಗಾರ್ಡ್ ಮಾಡುವುದಕ್ಕೆ ನಿಮ್ಮಲ್ಲಿ ಏನಾದರೂ ಪ್ರಾವಿಷನ್ ಇದೆಯೇ? ಅವರು ಕನಿಷ್ಠ ಶೇಕಡ 15ರಷ್ಟು ಹಾಗೂ ಕನಿಷ್ಠ ಶೇಕಡ 3ರಷ್ಟು ಮೀಸಲಾತಿಯಲ್ಲಿ ಗ್ರಾಮಪಂಚಾಯಿತಿಯ ಸದಸ್ಯರನ್ನು ಹಾಕಿದ್ದೀರಾ ಅಂದರೆ ಇಲ್ಲ. ಇದರಿಂದ ಈಗ ಗ್ರಾಮ ಪಂಚಾಯಿತಿಯಲ್ಲಿ ಏನು ಏಳೆಂಟು ಸಾವಿರ ಸದಸ್ಯರು ಆರಿಸಿ ಬಂದಿದ್ದಾರೆ ಅವರಿಗೆ ಧಕ್ಕೆ ಆಗುತ್ತದೆ. ಹೆಚ್ಚಿನ ರೀತಿಯಲ್ಲಿ ಬಡವರಿಗೆ ಮತ್ತು ಮುಂದೆ ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಯಲ್ಲಿ ಅವರಿಗೆ ಹೆಚ್ಚಿನ ಪ್ರಾತಿನಿಧಿತ್ವ ಏನು ಸಿಗುತ್ತಿತ್ತು, ಈ ಒಂದು ಪ್ರಾವಿಷನ್‌ನಿಂದ ಅದನ್ನೂ ಕೂಡ ತಾವು ಮೊಟಕುಗೊಳಿಸಿದಿರಿ. ಅದನ್ನು ಹಾಗೆಯೇ ಬಿಟ್ಟಿದ್ದರೆ ಸರ್ಕಾರದ ಗಂಟೇನು ಹೋಗುತ್ತಿತ್ತೋ ನನಗೆ ತಿಳಿಯುತ್ತಿಲ್ಲ. ಒಂದು 10-15ಜನ ಹಿಂದುಳಿದ ವರ್ಗದವರು ಹೆಚ್ಚಾಗಿ ಆರಿಸಿ ಬಂದಿದ್ದರೆ ಸರ್ಕಾರಕ್ಕೆ ಏನು ತೊಂದರೆಯಾಗುತ್ತಿತ್ತು. ಇವತ್ತು ದೇಶದೊಳಗೆ ಎಷ್ಟೋ ಜನ, ಜನಸಂಖ್ಯೆ ಇಲ್ಲದೇ ಇವತ್ತಿನ ದಿವಸ 10-20 ಜನ ಶಾಸಕರಾಗುತ್ತಿದ್ದಾರೆ, ಪಾರ್ಲಿಮೆಂಟ್ ಸದಸ್ಯರು ಆಗುತ್ತಾರೆ. ಕೆಲವು ಕಡೆ ದೇಶದಲ್ಲಿ ................

ಶ್ರೀ ಎಂ.ಪಿ.ಪ್ರಕಾಶ್ : ಪ್ರಧಾನ ಮಂತ್ರಿಗಳೂ ಆಗುತ್ತಾರೆ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಅದನ್ನಾದರೂ ತಾವು ಅರ್ಥಮಾಡಿಕೊಳ್ಳಿ. ನಿಮ್ಮ ಪಕ್ಷದಿಂದ ಮಾನ್ಯ ವಿ.ಪಿ.ಸಿಂಗ್‌ರವರು ಪ್ರಧಾನ ಮಂತ್ರಿಯಾಗಿದ್ದಾಗ ಅವರ ಜನಸಂಖ್ಯೆ ಏನು ಜಾಸ್ತಿ ಇತ್ತೇ? ಮಾನ್ಯ ನರಸಿಂಹರಾಯರವರ ಜನಸಂಖ್ಯೆಯೂ ಕೂಡ ಜಾಸ್ತಿ ಇರಲಿಲ್ಲ, ಮಾನ್ಯ ವಿ.ಪಿ.ಸಿಂಗ್‌ರವರ ಜನಸಂಖ್ಯೆಯೂ ಕೂಡ ಜಾಸ್ತಿ ಇರಲಿಲ್ಲ. ಯಾವಾಗ ಸರ್ವಾನುಮತದಿಂದ ಇದೇ ಸಭೆಯಲ್ಲಿ, ಇದೇ ಮನೆಯಲ್ಲಿ ಒಂದು ಕಾನೂನು ಪಾಸ್ ಆಗಿತ್ತೋ ಅದನ್ನು ನೀವು ಏಕೆ ಬದಲಾಯಿಸಿದಿರಿ? ಬಡವರ ಬಗ್ಗೆ ನಮಗೆ ಅನುಕಂಪ ಇದೆ ಎನ್ನತಕ್ಕವರು, ಏಕೆ ಇದನ್ನು ಮೊಟಕುಗೊಳಿಸಿದಿರಿ? ನಿಮಗೆ ಹೊಸ ಕಾನೂನಂತೂ ಮಾಡಲಿಕ್ಕೆ ಆಗುವುದಿಲ್ಲ. ಆದಾಗ್ಯೂ ಸಹ ಇದ್ದ ಕಾನೂನನ್ನು ತಿದ್ದುಪಡಿ ಮಾಡಿ ಅವರ ಹಕ್ಕನ್ನು ಮೊಟಕುಗೊಳಿಸುತ್ತೀರಿ ಎಂದರೆ

ಇದು ಯಾವ ನ್ಯಾಯ? ನೀವು ಹೇಳುವುದೊಂದು, ಮಾಡುವುದೊಂದು ಎಂದು ನಾವು ಹೇಳಬೇಕಾಗುತ್ತದೆ. ಒಂದು ಕಡೆ ಹೇಳುತ್ತೀರಿ, ಇನ್ನೊಂದು ಕಡೆ ಹೇಳಿದಂತೆ ನಡೆದುಕೊಳ್ಳದೇ ಬೇರೆಯವಂತೆ ಮಾಡಿದ್ದೀರಿ. ಇದು ಯಾರು ರಿಸರ್ವೇಷನ್ ಬೇಡವೆಂದು ಹೇಳುತ್ತಾರೋ, ಅವರು ಮಾಡಿದ ರೀತಿ ಆಯಿತು.

ಶ್ರೀ ಎಂ.ನಾರಾಯಣಸ್ವಾಮಿ (ಬೇತಮಂಗಲ) : ಹೇಳುವುದು ಒಂದು, ಮಾಡುವುದು ಒಂದು ಎಂಬುದು ನಿಮಗೆ ಅನ್ವಯಿಸುತ್ತದೆ, ನಮಗಲ್ಲ. ನಾವು ನುಡಿದಂತೆ ನಡೆಯುತ್ತೇವೆ. ನೀವು ಹೇಳುವುದೊಂದು, ಮಾಡುವುದೊಂದು. ಅದಕ್ಕಾಗಿ ಇವತ್ತು ನೀವು ಅಲ್ಲಿದ್ದೀರಿ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಆಯಿತು, ಇನ್ನು ಮುಂದೆ ನೋಡೋಣ. ಇವತ್ತು ನೀವು ನಮ್ಮ ಅಭಿಪ್ರಾಯವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇದರಿಂದಾಗಿ ಏನು 10-20 ಪರ್ಸೆಂಟ್ ವ್ಯತ್ಯಾಸ ಏನೂ ಆಗುವುದಿಲ್ಲ. ಕೇವಲ ಎರಡು ಎರಡೂವರೆ ಪರ್ಸೆಂಟ್ ಹೆಚ್ಚು ಸೀಟುಗಳನ್ನು ಎಸ್.ಸಿ.ಮತ್ತು ಎಸ್.ಟಿ.ಯವರಿಗೆ ಕೊಡಬೇಕಾಗುತ್ತದೆ. ಇದನ್ನು ಸರ್ಕಾರಕ್ಕೆ ಸಹಿಸಲಾಗುತ್ತಿಲ್ಲ. ಕಾನೂನಿನಲ್ಲಿ ಅನೇಕ ನ್ಯೂನತೆ ಇದೆ ಎಂದು ಹೇಳಿಕೊಂಡಿದ್ದರೂ, ಏಕೆ ಈ ವಿಧಿಗೆ ಮಾತ್ರ ತಿದ್ದುಪಡಿ ತರುತ್ತೀರಿ? ಏಕೆ ಇದಕ್ಕೆ ಮಾತ್ರ ವಿಶೇಷವಾದಂತಹ ಮಹತ್ವ ನೀಡುತ್ತೀರಿ? ಎಲ್ಲಾ ತಿದ್ದುಪಡಿಯನ್ನು ಒಟ್ಟಿಗೇ ತನ್ನಿ.ಎರಡೂ ಪರ್ಸೆಂಟ್ ಅಧ್ಯಕ್ಷರು ಬರುತ್ತಾರೆ, ಎರಡು ಪರ್ಸೆಂಟ್ ತಾಲ್ಲೂಕು ಪಂಚಾಯತ್ ಸದಸ್ಯರು ಜಾಸ್ತಿಯಾಗುತ್ತಾರೆ ಜಿಲ್ಲಾ ಪರಿಷತ್ತಿನ ಸದಸ್ಯರು ಜಾಸ್ತಿಯಾಗುತ್ತಾರೆ, ಇದು ಒಂದು ಕಾರಣವೇ? ಇಲ್ಲದಿದ್ದರೆ ಇದನ್ನು ತೆಗೆದುಹಾಕಲು ಕಾರಣ ಏನು ಎಂಬುದನ್ನು ತಿಳಿಸಬೇಕು. ಅವರಿಗೆ ಸಿಕ್ಕಿರತಕ್ಕಂಥ ಹಕ್ಕನ್ನು ಮೊಟಕುಗೊಳಿಸಬೇಕು ಅಥವಾ ತೆಗೆದುಹಾಕಬೇಕೆಂದು ನಿಮ್ಮ ಅಭಿಪ್ರಾಯ ಇದ್ದರೆ, ನಿಜವಾಗಿಯೂ ಅದನ್ನು ಖಂಡಿಸಬೇಕಾಗುತ್ತದೆ. ಅದು ಸರಿಯಲ್ಲ. ಈ ಮನೆಯಲ್ಲಿ ಹಾಗೂ ಆ ಮನೆಯಲ್ಲಿ ಒಮ್ಮತದಿಂದ ಮಾಡಿದಂತಹ ಕಾನೂನಿಗೆ ನೀವು ಯಾವ ಉದ್ದೇಶದಿಂದ ತಿದ್ದುಪಡಿ ತರುತ್ತಿದ್ದೀರಿ? ತಮಗೆ ಗೊತ್ತಿದೆ, ಮಂಡಲ್ ಕಮೀಷನ್ ವರದಿ ಪ್ರಕಾರ ಶೇಕಡಾ ಇಪ್ಪತ್ತೇಳರಷ್ಟು ಮೀಸಲಾತಿಯನ್ನು ಕೊಡಬೇಕಾಗುತ್ತದೆ. ವಿ.ಪಿ.ಸಿಂಗ್‌ರವರು ಇದ್ದಾಗ, ಅದನ್ನು ಜಾರಿಗೆ ತರಬೇಕು ಎಂದು ಹೋದಾಗ ಸಾಕಷ್ಟು ಗಲಾಟೆಯಾಯಿತು. ಜನ ಅದನ್ನು ಒಪ್ಪಲಿಲ್ಲ. ಕೌಂಟರ್ ಎಜಿಟೇಷನ್ಸ್ ಆಯಿತು. ಆದರೆ ಕೊನೆಗೆ ಈಗಿರತಕ್ಕ ಸರ್ಕಾರ ಶ್ರೀ ನರಸಿಂಹರಾಯರ ಸರ್ಕಾರ ಅದನ್ನು ಇಂಪ್ಲಿಮೆಂಟ್ ಮಾಡಿತು.

ಶ್ರೀ ಆರ್.ಎಲ್.ಜಾಲಪ್ಪ : ಮಂಡಲ್ ವರದಿ ಪ್ರಕಾರ ಶೇಕಡ 27 ರಷ್ಟು ಮೀಸಲಾತಿಯನ್ನು ಜಾರಿಗೆ ತರಬೇಕೆಂದು ವಿ.ಪಿ.ಸಿಂಗ್‌ರವರು ಹೋದಾಗ ಎಷ್ಟು ಎಜಿಟೇಷನ್ ಆಯಿತು. ಜನ ಆಕ್ಸೆಪ್ಟ್ ಮಾಡಲಿಲ್ಲ. ಸಾಕಷ್ಟು ಗಲಾಟೆ ಆಯಿತು. ಕೌಂಟರ್ ಎಜಿಟೇಷನ್ ಆಯಿತು. ಆದರೆ ಇದನ್ನೇ ನರಸಿಂಹರಾಯರು ಹೇಳಿದಾಗ ಎಜಿಟೇಷನ್ ಆಗಲಿಲ್ಲವಲ್ಲಾ, ಏಕೆ?

ಶ್ರೀ ಕೆ.ಎಂ.ಶ್ರೀನಿವಾಸ ಗೌಡ : ವಿ.ಪಿ.ಸಿಂಗ್‌ರವರು ಹೇಳಿದ್ದನ್ನೇ ನರಸಿಂಹರಾಯರು ಹೇಳಿದಾಗ ಏತಕ್ಕೆ ಎಜಿಟೇಷನ್ ಆಗಲಿಲ್ಲ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಅಲ್ಲಲ್ಲ, ನೀವು ಹೇಳೋದು ಸುಪ್ರೀಮ್ ಕೋರ್ಟ್ ಬಗ್ಗೆ ಆದರೆ ಅವರ ತಲೆಯೊಳಗೆ ಏನು ಇದೆ ಗೊತ್ತೇ? ಮಾಡಿಸುವವರು ಇವರೇ ಇದ್ದರೇನೋ ಅದಕ್ಕೇ ಹೀಗೆ ಆಗಿದೆ ಎಂದು, ಇದೇ ತಿಳಿವಳಿಕೆ ಅವರದ್ದು.

(ಗೊಂದಲ)

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಹಾಗಾದರೆ ನಾನೂ ಕೇಳಬೇಕಾಗುತ್ತದೆ. ಹಿಂದೆ ನಿಮ್ಮ ಪಕ್ಷದಲ್ಲಿ ಇರುವ ಶೇಕಡ ತೊಂಭತ್ತರಷ್ಟು ಸದಸ್ಯರು ಹಾವನೂರ ಕಮೀಷನ್ ವರದಿಯನ್ನು ವಿರೋಧ ಮಾಡಿದರು. ಭೂಸುಧಾರಣಾ ಕಾನೂನನ್ನು ವಿರೋಧ ಮಾಡಿದರು.

ಶ್ರೀ ಆರ್.ಎಲ್.ಜಾಲಪ್ಪ : ಸುಳ್ಳು ಹೇಳುತ್ತಿದ್ದೀರಿ, ಅನೇಕ ಜನ ಮಾಡಲಿಲ್ಲ, ಕೆಲವರು ಮಾಡಿದರು. ಆಮೇಲೆ ಅವರೂ ಒಪ್ಪಿಕೊಂಡರು.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ನಾನೇಕೆ ಸುಳ್ಳುಹೇಳಲಿ. ಒಬ್ಬರು ಇಬ್ಬರು ಅಲ್ಲ;

ಶ್ರೀ ಎಸ್. ಆರ್ ಲಕ್ಷ್ಮಯ್ಯ: ನಮ್ಮ ಪಕ್ಷದ ಜನ ಅದನ್ನೆಲ್ಲಾ ಮಾಡುವವರಲ್ಲ. ಗೋಮುಖವ್ಯಾಘ್ರಗಳು ಅದನ್ನೆಲ್ಲಾ ಮಾಡುವುದು.

ಛೇರ್‌ಮನ್ : ಎಂ.ಪಿ. ಪ್ರಕಾಶರವರು ನಿಂತಿದ್ದಾರೆ. ಎಲ್ಲರೂ ಕುಳಿತುಕೊಳ್ಳಿ.

ಶ್ರೀ ಎಂ.ಪಿ.ಪ್ರಕಾಶ್ : ಮಾನ್ಯ ಅಧ್ಯಕ್ಷರೇ, ಈಗ ಅವರು ನಮ್ಮ ಪ್ರಧಾನ ಮಂತ್ರಿಗಳು ಈ ವಿಚಾರಗಳ ಬಗ್ಗೆ ತೀರ್ಮಾನವನ್ನು ತೆಗೆದುಕೊಂಡಿದ್ದಾರೆ ಎಂದು ಹೊಗಳಿಕೆಯಿಂದ ಹೇಳುತ್ತಿದ್ದಾರೆ. ಆ ಹೆಗ್ಗಳಿಕೆ ಕೂಡ ಶಿಕ್ಷಣಕ್ಕೆ ಸಂಬಂಧಪಟ್ಟಿದ್ದಲ್ಲ ಉದ್ಯೋಗಕ್ಕೆ ಮಾತ್ರ ಇದೆ. ಮಾನ್ಯ ಮಲ್ಲಿಕಾರ್ಜುನ ಖರ್ಗೆಯವರು ಪ್ರಧಾನ ಮಂತ್ರಿಗಳ ಮೇಲೆ ಪ್ರಭಾವ ಬೀರಿ 16(4) ರ ಪ್ರಕಾರ ಶಿಕ್ಷಣದಲ್ಲೂ ಕೂಡ ಶೇಕಡಾ 27 ರಷ್ಟು ಹಿಂದುಳಿದ ಜನಾಂಗಕ್ಕೆ ಪ್ರಾತಿನಿಧ್ಯ ಕೊಡಲಿಕ್ಕೆ ಪ್ರಯತ್ನ ಮಾಡುತ್ತಾರೋ?

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಹೋಗೋಣ, ನಾವು ನೀವು ಕೂಡಿ ಪ್ರಯತ್ನ ಮಾಡೋಣ.

ಶ್ರೀ ಎಂ. ನಾರಾಯಣ ಸ್ವಾಮಿ : ಶ್ರೀ ಪಿ.ವಿ. ನರಸಿಂಹರಾಯರು ಮಂಡಲ್ ಕಮಿಷನ್ ಜಾರಿಗೆ ತಂದರು ಎಂದು ಹೇಳುತ್ತಾರೆ. ಆದರೆ ಹತ್ತು ವರ್ಷಗಳ ಕಾಲ ಕೇಂದ್ರ ಸರ್ಕಾರ ಮಂಡಲ್ ಕಮಿಷನ್ ರಿಪೋರ್ಟನ್ನು ಧೂಳಿನಲ್ಲಿ ಇಟ್ಟಿದ್ದು, ಅದನ್ನು ಜಾರಿಗೆ ತರತಕ್ಕ ಸೌಜನ್ಯ ತೋರಿಸಲಿಲ್ಲ. ಅದಕ್ಕೆ ಉತ್ತರ ಹೇಳಬೇಕು.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆಃ ಈಗ ಮಂಡಲ್ ಕಮಿಷನ್ ಮಾಡಿದವರು ನಾವೇ, ಅದನ್ನು ಜಾರಿಗೆ ತಂದವರೂ ನಾವೇ.

(ಗೊಂದಲ)

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಹಿಂದೇ ಕಾಕಾ ಸಾಹೇಬ್ ಕಾಲೇಲರ್ ಹೀಗೆ ಅನೇಕ ವರದಿಗಳನ್ನು ಕೇಂದ್ರ ಸರ್ಕಾರ ಜಾರಿ ಕೊಟ್ಟಿದೆ. ನೀವು ಅಧನ್ನೆಲ್ಲಾ ಹೇಳುತ್ತಿಲ್ಲ, ಈಗ ನೀವು ಅದು ಒಂದೇ ಮಾಡಿ ಆಚರಣೆಗೆ ತರಲಿಕ್ಕೆ ಆಗಲಿಲ್ಲ. ಮಂಡಲ್ ಕಮಿಷನ್ ಮಾಡಿದ್ದೇವೆ ಎಂದು ಹೇಳುತ್ತಿರಿ, ಆದರೆ ಅದನ್ನು ಜಬರದಸ್ತಾಗಿ ಇಂಪ್ಲಿಮೆಂಟ್ ಮಾಡುವುದಕ್ಕೆ ನಿಮಗೆ ಸಾಧ್ಯಾವಾಗಲಿಲ್ಲ.

ಶ್ರೀ ಎಂ. ನಾರಯಣ ಸ್ವಾಮಿಃ ಅವಕಾಶವನ್ನೇ ಕೊಡಲಿಲ್ಲ. ಎಲ್ಲಾ ಕಡೆ ಬೆಂಕಿ ಹಚ್ಚಿದರು.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆಃ ನೀವು ತಂದಂಥ ಹೊಸ ಕಾನೂನು ಏನಿತ್ತು ಅದು ಜಾರಿಗೆ ಬರಲಿಲ್ಲ. ಅದಕ್ಕಾಗಿ ಎಜಿಟೇಷನ್ ಆಯಿತು. ಯಾವುದೇ ಹೊಸ ಕಾನೂನನ್ನು ಜಾರಿಗೊಳಿಸಲು ಹೋದರೆ, ವೆಸ್ಟೆಡ್ ಇಂಟರೆಸ್ಟ್ ಇರುತ್ತದೆ, ಅವು ಅದಕ್ಕೆ ವಿರೋಧ ಮಾಡುವುದು ಇರುತ್ತದೆ. ಅದು ಎಲ್ಲಾ ಕಡೆ ಇರುತ್ತದೆ. ನಿಮ್ಮ ಪಾರ್ಟಿನಲ್ಲೂ ಕೂಡ ವಿರೋಧ ಮಾಡಿದರು. ಇದು ಎಲ್ಲಾ ಕಡೆ ಇರುತ್ತದೆ.

ಶ್ರೀ ಡಿ. ಆರ್. ಪಾಟೀಲ್ : ಮಂಡಲ್ ಆಯೋಗದ ವರದಿಯನ್ನು ಜಾರಿಗೆ ತರುವ ಸಮಯ ಬಹಳ ಕೆಟ್ಟದ್ದು ಇತ್ತು. ದೇವಿಲಾಲ್‌ರವರಿಂದ ವಿ.ಪಿ. ಸಿಂಗ್‌ರವರಿಗೆ ರಾಜಕೀಯವಾಗಿ ವಿರೋಧ ಬಂತು.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆಃ ಅದರಲ್ಲಿ ಸತ್ಯಾಂಶ ಇದೆ.

ಶ್ರೀ ಎಂ.ಸಿ. ನಾಣಯ್ಯ : ಇಷ್ಟೆಲ್ಲಾ ಮಾತನಾಡುತ್ತಿದ್ದೀರಿ; ಮಾನ್ಯ ಸಭಾಧ್ಯಕ್ಷರೇ, ಇತಿಹಾಸದ ಪುಟಗಳಲ್ಲಿ ಸೇರಿ ಹೋಗಿರತಕ್ಕಂಥ ತೀರ್ಮಾನಗಳನ್ನು ಎಷ್ಟು ಕೆದಕಿದರೂ ಕೂಡ ಅದರಿಂದ ಏನೂ ಪ್ರಯೋಜನ ಆಗುವುದಿಲ್ಲ. ಮಂಡಲ್ ಆಯೋಗವನ್ನು ರಚನೆ ಮಾಡಿದವರು ಯಾರು? ಯಾರ ಕಾಲದಲ್ಲಿ ರಚನೆ ಮಾಡಿದರು? ಅವರು ಹೇಳಬಹುದು ಮಂಡಲ್ ಆಯೋಗವನ್ನು ರಚನೆ ಮಾಡಿದವರು ನಾವು ಎಂದು. ನೀವೆಲ್ಲ, ಮೊರಾರ್ಜಿ ದೇಸಾಯಿಯವರು ಪ್ರಧಾನ ಮಂತ್ರಿಯಾಗಿದ್ದಾಗ ಮಂಡಲ್ ಆಯೋಗದ ರಚನೆಯಾಯಿತು. ಆ ಮಂಡಲ್ ವರದಿಯನ್ನು ಕೊಟ್ಟಾಯಿತು. ನಂತರ ಮೊರಾರ್ಜಿ ಸರ್ಕಾರ ಬಿದ್ದಾದ ಮೇಲೆ ಎಷ್ಟು ವರ್ಷ ನೀವು ಅಧಿಕಾರದಲ್ಲಿ ಇದ್ದೀರಿ? ವಿ.ಪಿ. ಸಿಂಗ್‌ರವರು ಅಧಿಕಾರಕ್ಕೆ ಬರುವವರೆಗೆ ಮಂಡಲ್ ವರದಿ ಧೂಳು ಹಿಡಿದಿದ್ದ ವರದಿಯನ್ನು ಹೊರಗಡೆ ತರಲಿಕ್ಕೆ ಕಾಂಗ್ರೆಸ್‌ನವರಿಗೆ ಮನಸ್ಸು ಬರಲಿಲ್ಲ. ಕಡೆಗೆ ವಿ.ಪಿ. ಸಿಂಗ್‌ರವರೇ ಅದನ್ನು ತರಬೇಕಾಯಿತು. ಅದನ್ನು ಕಡೆಗೆ ತಂದು ಆಯಿತು. ವಿ.ಪಿ. ಸಿಂಗ್‌ರವರು ಶೇಕಡ 27ರಷ್ಟು ಆ ಹಿಂದುಳಿದವರಿಗೆ ಮೀಸಲಾತಿ ಕೊಡಬೇಕು ಎಂದು ತೀರ್ಮಾನ ತೆಗೆದುಕೊಂಡಾಗ ರಾಜಕೀಯವಾಗಿ ಬೇಕಾದಷ್ಟು ವಿರೋಧಗಳು ಬಂದಾಗ ನಿಮ್ಮ ಪಾತ್ರ ಏನಿತ್ತು ಲೋಕಸಭೆಯಲ್ಲಿ ತಾವು ಬಿ.ಜೆ.ಪಿ.ಯವರ ಜೊತೆಯಲ್ಲಿ ಸೇರಿ ಹೊರಗಡೆ ಉಳಿದು ವಿ.ಪಿ. ಸಿಂಗ್‌ರವರನ್ನು ಕೆಳಗಡೆ ಇಳಿಸಬೇಕೆಂದು ಪ್ರಯತ್ನವನ್ನು ಮಾಡಿದುದ್ದು ಇತಿಹಾಸಗಳ ಪುಟಗಳಲ್ಲಿ ಹೋಗಿರತಕ್ಕಂಥ ತೀರ್ಮಾನವೆಂಬುದನ್ನು ತಾವು ದಯವಿಟ್ಟು ಮರೆಯಬೇಡಿ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಕೊನೆಗೆ ಅವರವರೇ ಕಚ್ಚಾಡಿಕೊಂಡು ಅವರೇ ಬಿದ್ದರು...

(ಗೊಂದಲ)

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆಃ ಶ್ರೀ ಡಿ.ಆರ್. ಪಾಟೀಲ್ ಹೇಳಿದ ಹಾಗೆ ನೇರವಾಗಿ ಸಹಾಯ ಮಾಡಬೇಕು ಎಂದು ತಂದಿದ್ದಲ್ಲ, ಅವರೂ ಕೂಡ ರಾಜಕೀಯ ಉದ್ದೇಶಕ್ಕಾಗಿ ಇದನ್ನು ಬಳಸಿಕೊಂಡರು ಎಂದು ಚಳುವಳಿ ನಡೆಯಿತು, ಅವರು ನೇರವಾಗಿ ತರಬೇಕು ಎಂದು ಮನಸ್ಸು ಇಟ್ಟಿದ್ದರೆ ಅವರು ಆರಿಸಿ ಬಂದ ತಕ್ಷಣ,

ಅದೇ ವರ್ಷದಲ್ಲಿ ತೆಗೆದುಕೊಂಡು ಬಂದಿದ್ದರೆ ಖಂಡಿತವಾಗಿಯೂ ಜಾರಿಯಲ್ಲಿ ಬರುತ್ತಿತ್ತು. ಆದರೆ ಕೊನೆಯ ಘಳಿಗೆಗೆ ಯಾವಾಗ ದೇವಿಲಾಲ್ ಮತ್ತು ವಿ.ಪಿ.ಸಿಂಗ್‌ರವರ ಘರ್ಷಣೆ ಪ್ರಾರಂಭವಾಯಿತೋ ಆವಾಗ ತಂದರು. ನಾನು ಹೇಳುತ್ತಿರುವುದು ಇಷ್ಟೆ, ಯಾವುದೇ ಮೀಸಲಾತಿ ತಂದಾಗ ಚಳುವಳಿ ಆಗುತ್ತದೆ. ಆದರೆ ಇಲ್ಲಿ ಅದಕ್ಕೆ ಚಳುವಳಿ ಅಥವಾ ಅಪಸ್ವರದ ಈ ದೃಷ್ಟಿಯಲ್ಲಿ ಆಗಲಿಲ್ಲ. ಅದಕ್ಕಾಗಿ ಜಾರಿಯಲ್ಲಿ ಇದ್ದಂಥದ್ದನ್ನು ನೀವು ಏತಕ್ಕೆ ಹಿಂದಕ್ಕೆ ತೆಗೆದುಕೊಳ್ಳುತ್ತಿದ್ದೀರಿ ಎನ್ನತಕ್ಕಂಥ ಮಾತನ್ನು ನಾನು ಕೇಳುತ್ತಿದ್ದೇನೆ. when this has been accepted by all, ಇದರ ಬಗ್ಗೆ ಯಾರದೂ ಕೂಡ ವಿರೋಧ ಇಲ್ಲ. ಕೇವಲ ವಿರೋಧ ಇರುವುದು ಸರ್ಕಾರದಿಂದ ಮಾತ್ರ. ನಿಮಗೆ ಜನ ಏನಾದರೂ ಹೇಳಿದ್ದಾರೋ, ಇದು ಸರಿ ಇಲ್ಲ, ಇದನ್ನು ತೆಗೆಯಿರಿ ಎಂದು? ಅಥವಾ ಯಾರಾದರೂ ನಿಮಗೆ ರೆಪ್ರಸೆಂಟೇಷನ್ ಕೊಟ್ಟಿದ್ದಾರೋ ಅವರಿಗೆ ಎರಡು ಪರ್‌ಸೆಂಟ್ ಜಾಸ್ತಿ ಕೊಟ್ಟಿದ್ದೀರಿ, ಅವರ ಜನ ಜಾಸ್ತಿ ಎಲೆಕ್ಟ್ ಆಗಿದ್ದಾರಾ ಎಂದು? ಅದಕ್ಕಾಗಿ ನಾನು ಹೇಳುತ್ತಿದ್ದೇನೆ.

ಈ ಒಂದೇ ದೃಷ್ಟಿಯಿಂದ ಯಾವಾಗ ಶಾಂತ ರೀತಿಯಿಂದ ಜನ ಅದನ್ನು ಅಕ್ಸೆಪ್ಟ್ ಮಾಡಿದ್ದಾರೆ, ಸ್ವೀಕಾರ ಮಾಡಿದಾಗ ಆಗ ಆ ಪ್ರಾವಿಷನ್‌ನನ್ನೇ ಇಟ್ಟುಕೊಂಡು ಮುಂದೆ ಹೋಗಬೇಕೇ ಹೊರತು ಅದಕ್ಕೆ ತಿದ್ದುಪಡಿ ತರಬಾರದು. ಈಗಲೂ ತಾವು ಅರ್ಥ ಮಾಡಿಕೊಂಡು ಅದು ಏನು ಪ್ರಾವಿಷನ್ ಇತ್ತೋ ಅದನ್ನು ರೆಸ್ಟೋರ್ ಮಾಡಿ ಆ ಜನರಿಗೆ ಸಹಾಯ ಮಾಡಬೇಕು ಎಂದು ತಮ್ಮ ಮುಖಾಂತರ ಕೇಳಿಕೊಳ್ಳುತ್ತೇನೆ. ಇಲ್ಲದಿದ್ದರೆ ಅದನ್ನು ಜಾಯಿಂಟ್ ಸೆಲೆಕ್ಟ ಕಮಿಟಿಗೆ ರೆಫರ್ ಮಾಡಿ. ಅಲ್ಲಿ ನಿಮಗೆ ಅವಕಾಶ ಇರುತ್ತದೆ ಯಾವ ರೀತಿಯಾಗಿ ಹಿಂದುಳಿದವರಿಗೇ 'ಎ' ಗ್ರೂಪ್‌ನವರಿಗೆ 'ಬಿ' ಗ್ರೂಪಿನವರಿಗೆ ಅಥವಾ ಮೂರು ಪರಸೆಂಟ್ ಇತ್ಯಾದಿ ಕೊಟ್ಟಿದ್ದೀರಿ, ಅದನ್ನು ಕೂಲಂಗಕಷವಾಗಿ ಚರ್ಚೆ ಮಾಡಿ ನಾವು ಮುಂದೆ ವಿಧೇಯಕವನ್ನು. ತರುವುದಕ್ಕೆ ಸಾಧ್ಯವಾಗುತ್ತದೆ. ಇಲ್ಲವೆಂದರೆ ಸಮಗ್ರವಾಗಿ ನೀವು ಏನು ತಿದ್ದುಪಡಿಯನ್ನು ತರುತ್ತಿದ್ದೇವೆ ಎಂದು ಹೇಳುತ್ತೀರಿ ಅದರ ಜೊತೆಯಲ್ಲಿ ತೆಗೆದುಕೊಂಡು ಬನ್ನಿ, ಅದನ್ನೂ ಬೇಕಾದರೆ ನಾವು ಜಾಯಿಂಟ್ ಕಮೀಟಿಗೆ ರೆಫರ್ ಮಾಡೋಣ. ಅದಕ್ಕಾಗಿ ಇದನ್ನು ಯೋಚನೆ ಮಾಡಬೇಕು. ಎಂದು ಪುನಃ ತಮ್ಮ ಮುಖಾಂತರ ಅವರನ್ನು ಕೇಳಿಕೊಳ್ಳುತ್ತೇನೆ.

* ಶ್ರೀ ಕೆ.ಎಸ್. ಈಶ್ವರಪ್ಪ (ಶಿವಮೊಗ್ಗ) ಸನ್ಮಾನ್ಯ ಅಧ್ಯಕ್ಷರೇ, ಸ್ವಲ್ಪ ಕೂಲಂಕುಶವಾದ ಚರ್ಚೆ ಸಾಕಷ್ಟು ಇಲ್ಲಿ ಹಾಗೂ ಮೇಲ್ಮನೆಯಲ್ಲಿ ಆಗಿದೆ. ಇಲ್ಲಿ ಗಮನಿಸಬೇಕಾದುದು ಏನೆಂದರೆ ಯಾವ ಬಡವರಿಗೆ ಎಲ್ಲಾಜಾತಿಯ ಬಡವರಿಗೆ ಅನುಕೂಲ ಆಗಬಹುದು ಎಂಬ ಯೋಚನೆ ಮಾಡಿದರೆ ಅದೂ ಆಗಲಿಲ್ಲ. ಹೋಗಲಿ ಮೈನಾರಿಟೀಸ್‌ಗೆ ಅನುಕೂಲ ಮಾಡಿಕೊಡುತ್ತೇವೆಂದು ಸರ್ಕಾರ ಏನು ಹೇಳುತ್ತಿದೆ ಅದನ್ನಾದರೂ ಮಾಡಿದ್ದಾರಾ? ಅವರಿಗೂ ಕೂಡ ಏನೂ ಅನುಕೂಲ ಆಗಲಿಲ್ಲ. ಎಸ್.ಸಿ.ಎಸ್.ಟಿ ಗಳಿಗೆ ಅನುಕೂಲ ಮಾಡಿಕೊಡಲು ಪ್ರಯತ್ನವನ್ನು ನಾವು ಮಾಡುತ್ತೇವೆ ಎಂಬ ಹೇಳಿಕೆಯನ್ನು ಕೊಡುತ್ತಾರೆ. ಹಿಂದಿನ ಬಾರಿ ಮಂಡಲ ಪಂಚಾಯತಿ ಮತ್ತು ಜಿಲ್ಲಾಪಂಚಾಯತಿಗೆ ಹೋಲಿಸಿದರೆ ಹಿಂದಿನ ಸಂಖ್ಯೆಗೂ ಈಗಿನ ಸಂಖ್ಯೆಗೂ ಮತ್ತೆ

ಕಡಿಮೆಯಾಗಿದೆ. ಹೋಗಲಿ ಇಡೀ ರಾಜ್ಯವನ್ನು ಒಂದು ಒಂದು ಯುನಿಟ್‌ನ್ನಾಗಿ ಮಾಡಿಕೊಂಡು ಪ್ರತಿ ತಾಲ್ಲೂಕು ಪಂಚಾಯತಿ, ಪ್ರತಿ ಜಿಲ್ಲಾ ಪಂಚಾಯತಿಗೆ ಏನು ರಿಸರ್ವೇಷನ್ ಮುಖಾಂತರ ಎಸ್‌ಸಿ ಎಸ್‌ಟಿ ಗಳಿಗೆ ಅನುಕೂಲ ಆಗಬೇಕಾಗಿತ್ತೋ ಅದೂ ಆಗಲಿಲ್ಲ. ಈ ರೀತಿ ಒಟ್ಟಾರೆಯಾಗಿ ಈ ಬಿಲ್ ಅನ್ನು ನೋಡುತ್ತಾ ಹೋದರೆ ಇದು ರಾಜಕೀಯವಾಗಿ ನಮಗೆ ಯಾವರೀತಿ ಅನುಕೂಲವಾಗುತ್ತೋ ಆ ದಿಕ್ಕಿನಲ್ಲಿ ಮಾತ್ರ ತಮ್ಮ ಪ್ರಯತ್ನವನ್ನು ಮಾಡಿಕೊಂಡು ಹೋಗುತ್ತಿರುವುದನ್ನು ಇಡೀ ರಾಜ್ಯದ ಜನತೆ ಖಂಡನೆ ಮಾಡುತ್ತದೆ. ನಾನು ಒಂದೊಂದೇ ಹೇಳುವುದಕ್ಕೆ ಹೋಗುವುದಿಲ್ಲ. ಇವರು ಮೈನಾರಿಟೀಸ್ ಬಗ್ಗೆ ಅನುಕೂಲ ಮಾಡಿಕೊಡುತ್ತೇವೆ ಎಂದು ಹೇಳುತ್ತಾರೆ. ಮುಸಲ್ಮಾನರಿಗೆ ರಿಸರ್ವೇಷನ್ ಮಾಡಿದರು, ಕ್ರಿಶ್ಚಿಯನ್ನರಿಗೆ ರಿಸರ್ವೇಷನ್ ಮಾಡಿದರು ಅದು ನನಗೆ ಬಹಳ ಸಂತೋಷ. ಆದರೆ ಜೈನರು ಏನು ಪಾಪ ಮಾಡಿದ್ದರು ಸ್ವಾಮಿ. ಅವರನ್ನು ಏಕೆ ಇದರ ಜೊತೆ ಸೇರಿಸಲಿಲ್ಲ? ಈ ಒಂದು ರಾಜ್ಯದಲ್ಲಿರುವ ಮೈನಾರಿಟೀಸ್ ಒಡೆದು ಅವರನ್ನೇ ವಿಧ್ರುವಿಧ್ರು ಮಾಡಿ ಅವರಲ್ಲಿ ಯಾರು ತಮಗೆ ಅನುಕೂಲ ಮಾಡಬಹುದು ಎಂಬ ಕಲ್ಪನೆ ಇಟ್ಟುಕೊಂಡು ಇದನ್ನೇ ಮುಂದುವರಿಸುವುದಕ್ಕೆ ಪ್ರಯತ್ನ ಮಾಡಿದಿರಿ. ಆ ಮೈನಾರಿಟೀಸ್‌ನ್ನು ಒಡೆದಿರಿ. ಅದೇ ರೀತಿ ಹಿಂದುಳಿದ ವರ್ಗದವರಿಗೆ ಅನುಕೂಲ ಮಾಡಿಕೊಡುತ್ತೇವೆ ಎನ್ನುತ್ತಾ ಈ ಕುಂಬಾರರು, ಕುರುಬರು ಕುಪ್ಪಾರರು ಈ ರೀತಿ ಮಾಡಿಕೊಂಡು 'ಎ' ಮತ್ತು 'ಬಿ' ಮಾಡಿದರು. ಈ ರೀತಿ ಏನು 'ಎ' ಮತ್ತು 'ಬಿ' ಎಂದು ಜಾತಿ ಮುಖಾಂತರ ಮಾಡಿಕೊಂಡರೋ ಅಲ್ಲಾದರೂ ರಿಸರ್ವೇಷನ್ ಕೊಟ್ಟು ಅವರಿಗೆ ನ್ಯಾಯ ದೊರಕಿಸಿಕೊಟ್ಟರೇ? ಅಲ್ಲೂ ಇಲ್ಲ, ಇದನ್ನು ತುಂಬಾ ನೊಂದುಕೊಂಡು ಹೇಳುತ್ತಿದ್ದೇವೆ. ಅಲ್ಲೂ ಲಾಟರಿ ಮಾಡಿದರು. ಏಕೆ ಲಾಟರಿ ಎತ್ತಿದಿರಿ ಎಂದು ಕೇಳಿದರೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸೆನ್ಸಸ್ ವರದಿ ಇಲ್ಲವೆಂದರು. ಹೀಗಾದರೆ ಏಕೆ ಸರ್ಕಾರ ಇರಬೇಕು? ಹಿಂದುಳಿದವರಿಗೆ ಅನುಕೂಲ ಮಾಡಿಕೊಡಬೇಕು ಎಂಬ ಅಪೇಕ್ಷೆ ಇದ್ದರೆ ಆ ಸೆನ್ಸಸ್‌ನ್ನು ತರಿಸಿಕೊಂಡು ಅದರ ಮುಖಾಂತರ ಹಿಂದುಳಿದ ವರ್ಗದವರಿಗೆ ಕೊಟ್ಟು 'ಎ' ಕ್ಯಾಟಗರಿಯಲ್ಲಿ 'ಎ' ಕ್ಯಾಟಗರಿಯವರೇ ಚುನಾವಣೆಗೆ ನಿಲ್ಲಬೇಕು ಅಲ್ಲಿ 'ಬಿ' ಕ್ಯಾಟಗರಿಯವರಿಗೆ ಅವಕಾಶ ಕೊಡುವುದಿಲ್ಲ ಅದೇ ರೀತಿ 'ಬಿ' ಕ್ಯಾಟಗರಿ ಇರುವ ಕಡೆ 'ಬಿ' ನವರಿಗೇ ಅವಕಾಶ ಕೊಡುತ್ತೇವೆ ಎಂದಿದ್ದರೆ ನಾವು ಅದನ್ನು ಖಂಡಿತ ಒಪ್ಪುತ್ತಿದ್ದೆವು. 'ಎ' ಮತ್ತು 'ಬಿ' ಮಾಡಿದ ಹಾಗೆ ಮಾಡಿ ಅವೆರಡನ್ನೂ ಕ್ಲಬ್ ಮಾಡಿದರು. ಲಾಟರಿ ಮಾಡಿದರು.

ಯಾವ ರೀತಿ ಈ ರಾಜ್ಯ ಸರ್ಕಾರ ಲಾಟರಿ ಹೊಡೆದಹಾಗೆ ಚುನಾವಣೆಯಲ್ಲಿ ಗೆದ್ದು ಬಂದಿರೋ, ಅದೇ ಪ್ರಕಾರ ಲಾಟರಿ ಪ್ರಕಾರ ಎ ಮತ್ತು ಬಿ ಎಂದು ಮಾಡಿ ಹಿಂದುಳಿದ ವರ್ಗದವರಿಗೆ ಇದರಲ್ಲಿ ದ್ರೋಹ ಮಾಡಿದ್ದಾರೆ. ಇವರಿಗೆ ಈಗ ಬಹುಮತ ಇರಬಹುದು.

ಒಬ್ಬ ಮಾನ್ಯ ಸದಸ್ಯರು : ಮಾನ್ಯ ಅಧ್ಯಕ್ಷರೇ, ಮೊದಲು ತಾಲ್ಲೂಕು ಪಂಚಾಯತಿ ಜಿಲ್ಲಾ ಪರಿಷತ್ತು ಇಲ್ಲಿ ಅವರಿಗೆ ಅಧಿಕಾರ ಸಿಕ್ಕಿರಲಿಲ್ಲ. ಇವರಿಗೆ ಈ ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯತಿಯಲ್ಲಿ ಪ್ರಪ್ರಥಮವಾಗಿ ಸಿಕ್ಕಿದೆ. ಅದನ್ನು ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಕರ್ನಾಟಕದ ಇತಿಹಾಸದಲ್ಲೇ ಕೆಲವು

ಜಾತಿಗಳಿಗೆ ಪ್ರಾತಿನಿಧ್ಯ ಸಿಕ್ಕಿರಲಿಲ್ಲ. ಅಂತಹ ಉತ್ತಮವಾದ ಪ್ರಾತಿನಿಧ್ಯ ಈಸಾರಿ ಸಿಕ್ಕಿದೆ.

ಶ್ರೀ ಕೆ.ಎಸ್. ಈಶ್ವರಪ್ಪ : ಈರೀತಿ ಮೇಲ್ನೋಟಕ್ಕೆ ಒಂದು ರೀತಿ ವಿಷದ ಗುಳಿಗೆಗೆ ಸಿಹಿಯನ್ನು ಒಂದು ಪಾಲು ಮೆತ್ತಿ ಹಿಂದುಳಿದ ವರ್ಗದವರಿಗೆ ಅನುಕೂಲ ಮಾಡಿದ್ದೇವೆ. ಎಂಬ ಮಾತನ್ನು ಹೇಳಿಕೊಂಡು ಅಧಿಕಾರಕ್ಕೆ ಬಂದು ಬಿಟ್ಟರು. ನಾನು ಈಗ ಸ್ಪಷ್ಟವಾಗಿ ಹೇಳುತ್ತಿದ್ದೇನೆ. 'ಎ' ಮತ್ತು 'ಬಿ' ಗಳಿಗೆ ಲಾಟರಿ ಮಾಡಿರಲಿಲ್ಲವೇ? ಹಿಂದುಳಿದ ವರ್ಗದವರಿಗೆ ದ್ರೋಹ ಮಾಡಿಲ್ಲವೇ? ನಾನು ಏಕೆ ಸ್ಪಷ್ಟವಾಗಿ ಹೇಳುತ್ತಿದ್ದೇನೆಂದರೆ ಈ ರೀತಿ ಮಾಡಲಿಲ್ಲ ಎಂದು ಅವರು ಹೇಳಿದರೆ ನಾನು ಖಂಡಿತ ಒಪ್ಪಿಕೊಳ್ಳುತ್ತೇನೆ. 'ಎ' ಮತ್ತು 'ಬಿ' ಮಾಡಿದ್ದ ಅರ್ಥ ಏನು? 'ಎ' ಮತ್ತು 'ಬಿ' ಮಾಡಿದ ಉದ್ದೇಶ ಏನು? ನೀವು ಲಾಟರಿ ಮಾಡಲಿಲ್ಲವೇ? ಮಾಡಲಿಲ್ಲ ಎಂದು ಹೇಳಿ ನೋಡೋಣ.

ಶ್ರೀ ಎಂ.ಸಿ.ನಾಣಯ್ಯ : ಸಭಾಧ್ಯಕ್ಷರೇ, ನನ್ನ ಹಿರಿಯ ಮಿತ್ರರಾಗಿರತಕ್ಕಂಥ ಈಶ್ವರಪ್ಪನವರು ನಾವು ಅಧಿಕಾರಕ್ಕೆ ಹೇಗೆ ಬಂದೆವು ಎಂಬುದರ ಬಗ್ಗೆ ವಿಶ್ಲೇಷಣೆ ಮಾಡಿದರು. ವಿಷದ ಗುಳಿಗೆಗೆ ಸಿಹಿಯ ಲೇಪನವನ್ನು ಹಚ್ಚಿ ಜನತೆಗೆ ಅದನ್ನು ತೋರಿಸಿ ರಾಜ್ಯದ ಜನತೆಗೆ ಮೋಸ ಮಾಡಿ ನಾವು ಅಧಿಕಾರಕ್ಕೆ ಬಂದೆವು ಎಂದು ಹೇಳಿದ್ದಾರೆ. ಸ್ವಾಮಿ ಈ ರಾಜ್ಯದಲ್ಲಿರತಕ್ಕಂಥ ಸುಮಾರು ಎರಡೂವರೆ ಕೋಟಿ ಮತದಾರರು ಏನು ಇದ್ದಾರಲ್ಲಾ ಅವರನ್ನು ಇನ್ನು ಮುಂದೆ ಆ ರೀತಿ ಮೋಸ ಮಾಡಲಿಕ್ಕೆ ಆಗುವುದಿಲ್ಲ. ನಿಮ್ಮ ಮೋಸದ ಮಾತಿಗೆ ಅವರು ಇನ್ನು ಬಗ್ಗುವುದ್ದಿಲ. ಈ ರಾಜ್ಯದ ಜನತೆ ಮೊನ್ನೆ ಮತ ಕೊಟ್ಟಿರತಕ್ಕಂಥ ಜನತೆಯ ಪ್ರಬುದ್ಧತೆಯನ್ನು ಯಾರೂ ಪ್ರಶ್ನೆ ಮಾಡಬೇಡಿ. ಅವರು ಮುಠ್ಠಾಳರು ಎಂದು ತಾವು ಹೇಳಬೇಡಿ. ಯಾರು ನಮಗೆ ಮತವನ್ನು ಕೊಟ್ಟು ಅಧಿಕಾರ ಕೊಟ್ಟಿರೋ ಅವರನ್ನು ಮುಠ್ಠಾಳರು ಎಂದು ನೀವು ಹೇಳುತ್ತಿರೇನು? ಅವರನ್ನು ನಾವು ಮೋಸ ಮಾಡಿದೆವು ಎಂದು ನೀವು ಹೇಳುತ್ತೀರೇನು? ಅವರ ಪ್ರಭುದ್ಧತೆಯನ್ನು ತಾವು ಪ್ರಶ್ನೆ ಮಾಡುತ್ತಿದ್ದೀರಿ. ಇದರ ಅರ್ಥ ಏನು?

ಶ್ರೀಮತಿ ಪ್ರಮೀಳಾ ನೇಸರ್ಗಿ : ಯಾರೂ ಹಾಗೆ ಹೇಳಲಿಲ್ಲ. ನೀವೇ ಹೇಳುತ್ತಿರುವುದು. "ಮಾಡಿದವರ ಪಾಪಾ ಆಡಿದವರ ಬಾಯಲ್ಲಿ."

ಶ್ರೀ ಜೆ.ಹೆಚ್.ಪಟೇಲ್ : ಅಧ್ಯಕ್ಷರೇ, 'ಎ' ಮತ್ತು 'ಬಿ' ಮಾಡಿ ಮೋಸ ಮಾಡಿದೆವು ಎಂದು ಹೇಳಿದರು. 'ಎ' ಮತ್ತು 'ಬಿ' ಮಾಡಿದುದರಿಂದ ನಿಜವಾಗಲೂ ಬ್ಯಾಕ್‌ವರ್ಡ್ ಕ್ಲಾಸ್ ಎ ನವರಿಗೆ ಸಿಗುತ್ತಿರುವ ಪ್ರೊಟೆಕ್ಷನ್ ಇವರಿಗೆ ಬೇಡವೇ? ಮಾನ್ಯ ಸದಸ್ಯರೂ ಸಹ ಹುಟ್ಟುತ್ತಲೇ ಬ್ಯಾಕ್‌ವರ್ಡ್ ಕ್ಲಾಸ್ ಜಾತಿಗೆ ಸೇರಿದವರು ಅಂದರೆ ಕುರುಬರು. ಇದರಲ್ಲಿ ಜಾತಿ ಎನ್ನುವ ಪ್ರಶ್ನೆಯಲ್ಲ. ಹೀಗೆ ಕುರುಬರು, ಒಕ್ಕಲಿಗರು ಮತ್ತು ಲಿಂಗಾಯಿತರು ಒಟ್ಟಿಗೆ ನಿಲ್ಲಬಹುದಾದ ಸಂದರ್ಭವನ್ನು ತೆಗೆದು ಕುರುಬರ ಜೊತೆಗೆ ಇವರು ಹೋಗಬಾರದು ಎಂದು ಮಾಡಿದರೆ ಅದು ತಪ್ಪೇ ಇವರು ಟೀಕೆ ಮಾಡುವುದಕ್ಕೂ ಅರ್ಥ ಇರಬೇಕು.

*ಶ್ರೀ ಬಿ.ಎಸ್.ಯಡಿಯೂರಪ್ಪ : ಬಹುಶಃ ಮಾನ್ಯ ಜೆ.ಹೆಚ್.ಪಟೇಲ್‌ರವರು ಈಶ್ವರಪ್ಪನವರು ಆಡಿದ ಮಾತನ್ನು ಅರ್ಥ ಮಾಡಿಕೊಂಡಿಲ್ಲ. ಅದರ ಬಗ್ಗೆ ನಾನು

ಹೇಳುತ್ತೇನೆ. ಅದೇ ರೀತಿ ಆಗಿದ್ದರೆ ನಮ್ಮದು ಅಭ್ಯಂತರ ಏನೂ ಇರುತ್ತಿರಲಿಲ್ಲ. 'ಎ' ಕ್ಯಾಟಗರಿ ಮತ್ತು 'ಬಿ' ಕ್ಯಾಟಗರಿ ಮಾಡಿದಿರಿ. ಏಕೆಂದರೆ ಹಿಂದುಳಿದ ವರ್ಗದವರಿಗೆ ಅನುಕೂಲ ಮಾಡುವುದಕ್ಕೆ. ಅದಕ್ಕೆ ನಾವು ತುಂಬಾ ಸಂತೋಷ ಪಡುತ್ತೇವೆ. ಇದರಲ್ಲಿ ಪರ್ಸೆಂಟೇಜ್ ಜಾಸ್ತಿ, ಕಮ್ಮಿ ಇದರ ಚಿಂತೆ ಈಗ ಬೇಡಿ. ಆದರೆ ಆದದ್ದು ಏನು? 'ಎ' ಕ್ಯಾಟಗರಿ ಮತ್ತು 'ಬಿ' ಕ್ಯಾಟಗರಿ ಜನಾಂಗದವರ ವಿಂಗಡಣೆ ಮಾಡಿ ನೀವು ಈಗ ಲಿಸ್ಟ್ ಹೊರಡಿಸಿದ್ದೀರಲ್ಲಾ ಅದರ ಆಧಾರದ ಮೇಲೆ ಸೆನ್ಸಸ್‌ನಲ್ಲಿ ಅಂಕಿ ಅಂಶಗಳು ಆ ಜಾತಿಗೆ ಸಿಕ್ಕಲಿಲ್ಲ. ಶಿವಮೊಗ್ಗ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳು ಯಾವ ಯಾವ ಕ್ಯಾಟಗರಿಯವರಿಗೆ ಎಷ್ಟೇಷ್ಟು ಹಂಚಬೇಕು ಎನ್ನುವುದರ ಬಗ್ಗೆ ಒಂದು ಸಭೆಯನ್ನು ಕರೆದರು. ನಾನು ಮತ್ತು ಕಾಗೋಡು ತಿಮ್ಮಪ್ಪನವರು ಸಭೆಯಲ್ಲಿ ಇದ್ದೆವು. ನಾವು ಜಿಲ್ಲಾಧಿಕಾರಿಗಳಿಗೆ ಹೇಳಿದೆವು. 'ಎ' ಕ್ಯಾಟಗರಿ 'ಬಿ' ಕ್ಯಾಟಗರಿಯಲ್ಲಿ ಯಾವುದೋ ಒಂದು ಕಡೆ ಕುರುಬ ಜನಾಂಗ ಜಾಸ್ತಿ ಇದ್ದಾರೆ, ನಗರದಲ್ಲಿ ಎಲ್ಲೋ ಒಂದು ಕಡೆ ಇವರ ಜನಾಂಗ ಜಾಸ್ತಿ ಇದ್ದಾರೆ. ನೀವು ಲಾಟರಿ ಎತ್ತುವುದರಿಂದ 'ಎ' ಗ್ರೂಪ್‌ನವನು 'ಬಿ' ಗ್ರೂಪ್ ಇರುವ ಕಡೆ ಮತ್ತು 'ಬಿ' ಗ್ರೂಪ್‌ನವನು 'ಎ' ಗ್ರುಪ್ ಇರುವ ಕಡೆಬರುತ್ತಾನೆ. ಇದು ಆಗಿದೆ. ಮಾನ್ಯ ಪ್ರಕಾಶ್‌ರವರು ಈ ರೀತಿ ಆಗಿಲ್ಲ ಎಂದು ಹೇಳಲಿ ನೋಡೋಣ. ಈ ರೀತಿ ಆದರೆ ಇದು ಅನ್ಯಾಯ ಎಂದು ನಾವು ಹೇಳಿದೆವು. ಸನ್ಮಾನ್ಯ ಅಧ್ಯಕ್ಷರೇ, ನಮ್ಮ ನಾಣಯ್ಯನವರು ಹೇಳಿದರು. ಇವೊತ್ತು ಏನಾಯಿತು ಸ್ವಾಮಿ, ತಾವೇನು ಹೇಳಿದ್ದೀರಿ, ಇಲ್ಲಿ ಈಶ್ವರಪ್ಪನವರು ರಾಜಕಾರಣಕ್ಕೆ ಬಂಚಾರ ಹೇಳಬೇಕಾಗುತ್ತದೆ. ಕಹಿಯನ್ನು ಸಿಹಿ ಲೇಪನ ಹಚ್ಚಿ ಕುಡಿಸಿ ನುಂಗಿಸಿ ಅಧಿಕಾರಕ್ಕೆ ಬಂದಿರಿ ಎಂದು ಅವರು ಹೇಳಿದ್ದಾರೆ. ನೀವು ಏನು ಹೇಳಿದಿರಿ, ಇವೊತ್ತು ರಾಜ್ಯದ ದೇಶದ ರಾಜಕೀಯ ಪರಿಸ್ಥಿತಿ ಬಗ್ಗೆಯೂ ತಾವು ಯೋಚನೆ ಮಾಡಬೇಕಾಗುತ್ತದೆ. ತಾವು ಮಾತೆತ್ತಿದ್ದರೆ ಈ ಕಡೆಯವರನ್ನು ಹುಡುಕಿ ಮಾತನಾಡುತ್ತಿದ್ದೀರಲ್ಲಾ ಇವೊತ್ತು ದೇಶದ ರಾಜಕಾರಣ ಸ್ಥಿತಿ ಏನಾಗಿದೆ? ಒರಿಸ್ಸಾ ಏನಾಯಿತು? ಇವೊತ್ತು ಯಾವ ಪಕ್ಷವನ್ನು ಟೀಕೆ ಮಾಡುತ್ತಿದ್ದೀರೋ ಆ ಭಾರತೀಯ ಜನತಾ ಪಕ್ಷ ನಾಲ್ಕು ರಾಜ್ಯಗಳಲ್ಲಿ ನಾವು ಅಧಿಕಾರದಲ್ಲಿದ್ದೇವೆ. 5 ದೊಡ್ಡ ರಾಜ್ಯಗಳಲ್ಲಿ ಅಧಿಕೃತ ವಿರೋಧ ಪಕ್ಷದಲ್ಲಿದ್ದೇವೆ. ಇವೊತ್ತು ಇಡೀ ದೇಶದ ವಿಧಾನಸಭೆಯ ಸದಸ್ಯರನ್ನು ಲೆಕ್ಕ ತೆಗೆದುಕೊಂಡರೆ ಕಾಂಗ್ರೆಸ್‌ಗಿಂತ ಜಾಸ್ತಿ ಇರುವಂಥ ಏಕೈಕ ಮೊದಲನೆಯ ಪಕ್ಷ ಭಾರತೀಯ ಜನತಾ ಪಕ್ಷ ಎನ್ನುವುದನ್ನು ಮರೆತು ನೀವು ಮಾತನಾಡಬೇಡಿ. ಇರಬಹುದು, ಕರ್ನಾಟಕ ರಾಜ್ಯದಲ್ಲಿ ಜನ ಒಳ್ಳೆಯ ತೀರ್ಪನ್ನು ಕೊಟ್ಟಿದ್ದಾರೆ. ನೀವು ಅಧಿಕಾರದಲ್ಲಿದ್ದೀರಿ ಎಂದು ನನಗೆ ದುಃಖವಿಲ್ಲ. ನಾವು ಜನರ ತೀರ್ಪನ್ನು ಸ್ವಾಗತ ಮಾಡಬೇಕಾಗುತ್ತದೆ. 5 ವರ್ಷ ಉಸಿರು ಕಟ್ಟುವಂಥ ವಾತಾವರಣದಲ್ಲಿ ನಮ್ಮ ಸ್ನೇಹಿತರುಗಳಾದ ಕಾಂಗ್ರೆಸ್‌ನವರ ಸರ್ಕಾರ ಬೇಡ ಎಂದು ರಾಜ್ಯದವರಿಗೆ ಅನಿಸಿತು. ನಾವು ಅಧಿಕಾರದಲ್ಲಿ ಬರಬಹುದು ಎನ್ನುವ ವಿಶ್ವಾಸವನ್ನು ಜನರಿಗೆ ಮೂಡಿಸಲು ನಮಗೆ ಆಗಲಿಲ್ಲ. ನಮ್ಮ ಪತ್ರಿಕಾ ಸ್ನೇಹಿತರುಗಳಿಗೂ ಸಹಿತ ನಮ್ಮ ಬಗ್ಗೆ ವಿಶ್ವಾಸ ಬರಲಿಲ್ಲ. ಹೀಗಾಗಿ ಹೇಗೋ ಏನೋ ನೀವು ಅಧಿಕಾರದಲ್ಲಿದ್ದೀರಿ. ಇನ್ನೂ ಐದು ವರ್ಷ ಅಲ್ಲೇ ಇರಬೇಕು ಅವಧಿ ಪೂರ್ಣ

ಮಾಡಬೇಕು ಎಂದರೆ ಈಗಲಾದರೂ ಮಾಡಿರುವ ತಪ್ಪನ್ನು ಸರಿಪಡಿಸಿಕೊಳ್ಳಿ, ಅದಕ್ಕೆ ನಿಮಗೆ ನಾವು ಸಹಕಾರ ಕೊಡುತ್ತೇವೆ, ಸಹಕಾರ ಕೊಡುವುದಕ್ಕೆ ಸಿದ್ಧವಿದ್ದೇವೆ ಎಂದು ನಾವು ಹೇಳಿದರೆ ಅದನ್ನು ಅಪಾರ್ಥ ಮಾಡಿಕೊಂಡು ನಾವು ಹೋದ ದಾರಿಯಲ್ಲೇ ಹೋಗುತ್ತೇವೆ, ನಾವು ಅದೇ ಬಾವಿಗೆ ಬಿದ್ದು ಸಾಯುತ್ತೇವೆ, 1983ರಲ್ಲಿ ಆಗಿದ್ದು ಮರುಕಳಿಸಿದರೂ ಚಿಂತೆಯಿಲ್ಲ ಎಂದು ನೀವು ಹೇಳಿದರೆ ನಮ್ಮದೇನೂ ಅಭ್ಯಂತರವಿಲ್ಲ. ಸನ್ಮಾನ್ಯ ಪ್ರಕಾಶ್‌ರವರು ಸಾಕಷ್ಟು ಗ್ರಾಮೀಣಾಭಿವೃದ್ಧಿ ಬಗ್ಗೆ ಮತ್ತು ಅಲ್ಲಿಯ ಜನರ ಬಗ್ಗೆ ತಿಳಿದಿರುವವರು ಮತ್ತು ಸಮಸ್ಯೆ ಗೊತ್ತಿರತಕ್ಕಂಥವರು ಈಗಲಾದರೂ ಅದನ್ನು ಜಾಯಿಂಟ್ ಸೆಲಕ್ಟ್ ಕಮಿಟಿಗೆ ಕೊಟ್ಟು ಅದನ್ನು ಸರಿಪಡಿಸುತ್ತೇವೆ ಅಂತ ಹೇಳಿದರೆ...

(ಗೊಂದಲ)

ಶ್ರೀ ಕೆ.ಎಸ್. ಈಶ್ವರಪ್ಪ : ಅಧ್ಯಕ್ಷರೇ, ಇಡೀ ಕರ್ನಾಟಕ ರಾಜ್ಯದ ಜನತೆಯನ್ನು ಮುಠ್ಠಾಳರು ಎಂದು ನಾವು ಭಾವಿಸಿಲ್ಲ, ಅವರನ್ನು ಮುರಾರಿಗಳು ಅಂದರೆ ದೇವರು ಎಂದು ಭಾವಿಸುತ್ತೇವೆ. ಯಾವ ದೃಷ್ಟಿಯಲ್ಲೂ ಕೂಡ ನನ್ನ ಬಾಯಲ್ಲಿ ಕರ್ನಾಟಕ ರಾಜ್ಯದ ಜನತೆ ಮುಠ್ಠಾಳರು ಎನ್ನುವ ಪದ ಬಂದರೆ ನನ್ನ ಬಾಯಿ ಬಿದ್ದು ಹೋಗುತ್ತದೆ. ಹುಳು ಬೀಳುತ್ತದೆ. ನಾನು ಖಂಡಿತ ಆ ರೀತಿ ಹೇಳುವುದಿಲ್ಲ. ನಾನು ಆ ರೀತಿ ಹೇಳುವುದಕ್ಕೂ ಹೋಗಲಿಲ್ಲ. ನಾನು ನೇರವಾಗಿ ತಮ್ಮ ಮುಖಾಂತರ ನಾಣಯ್ಯನವರನ್ನು ಕೇಳುತ್ತೇನೆ. ಈ ರಾಜ್ಯದಲ್ಲಿ ಮತ್ತು ಬಿ ಲಿಸ್ಟ್ ಮಾಡಿ ಲಾಟರಿ ಆಗಲಿಲ್ಲವೇ? ಅವರು ಆಗಿಲ್ಲ ಎಂದು ಹೇಳಿದರೆ ನಾನು ರಾಜಕೀಯ ಬಿಟ್ಟು ಹೊರಟು ಹೋಗುತ್ತೇನೆ. ಎರಡನೆಯದಾಗಿ ಕಳೆದ ಬಾರಿಗೂ ಈ ಬಾರಿಗೂ ಎಸ್‌ಸಿ:ಎಸ್‌ಟಿ ಹೋಲಿಸಿದರೆ ಹೋದ ಸಾರಿ ಆ ಸಂಖ್ಯೆ ಜಾಸ್ತಿ ಇತ್ತು ಆದರೆ ಈ ಬಾರಿ ಕಡಿಮೆಯಾಗಿದೆ. ಕಡಿಮೆಯಾಗಿಲ್ಲ ಎಂದು ಅವರು ಹೇಳಿದರೆ ನಾನು ರಾಜಕೀಯ ಬಿಡುತ್ತೇನೆ. ಮೂರನೆಯದಾಗಿ 'ಎ' ಗೆ ಎಲ್ಲಾ ಮೈನಾರಿಟಿಸ್‌ನ್ನು ಸೇರಿಸಿದ್ದರೆ ನಾನು ರಾಜಕೀಯ ಬಿಡುತ್ತೇನೆ. ನಾನು ಏಕೆ ಎಲ್ಲವನ್ನೂ ಹೇಳುತ್ತಿದ್ದೇನೆಂದರೆ ಇಲ್ಲಿ ಅನ್ಯಾಯ ನಡೆದಿದೆ. ಅದನ್ನು ನಿಮ್ಮ ಗಮನಕ್ಕೆ ತರುತ್ತಿದ್ದೇನೆ. ನಮಗೆ ಬಹುಮತ ಇದೆ. ಈ ವಿಧೇಯಕವನ್ನು ನಾವೇ ಪಾಸ್ ಮಾಡಿಕೊಳ್ಳುತ್ತೇವೆ, ನೀವು ವಿರೋಧ ಪಕ್ಷದವರು ಇದ್ದೀರಿ, ನೀವು ಬೇಕಾದರೆ ಸಭಾತ್ಯಾಗ ಮಾಡಿ ಎಂದರೆ ಅದಕ್ಕೆ ನಾವು ತಯಾರಿದ್ದೇವೆ. ಯಾವುದಾದರೂ ಒಂದರಲ್ಲಿಯೂ ನಾನು ಸುಳ್ಳು ಹೇಳಿದ್ದರೆ ತಾವು ಹೇಳಿ. ನನ್ನ ಚರ್ಚೆಯಲ್ಲಿ ಇದು. ನೀವು ಹೇಳಿದ್ದಕ್ಕೋಸ್ಕರ ವಿರೋಧ ಪಕ್ಷದವರಾದ ನಾವು ವಿರೋಧ ಮಾಡುತ್ತಿದ್ದೇವೆ ಎಂದು ನಾನು ಹೇಳುತ್ತಿಲ್ಲ. ನಾನು ಕುರುಬ ನಿಜ, ನನ್ನ ವೈಯುಕ್ತಿಕವಾಗಿ ಒಂದೇ ಜಾತಿಗೆ ಅನ್ಯಾಯವಾಗಿದೆ ಎಂದು ನಾನು ಹೇಳುತ್ತಿಲ್ಲ. ಪಟೇಲರು ಲಿಂಗಾಯಿತರು, ಎಲ್ಲಾ ಲಿಂಗಾಯಿತರಿಗೂ ಅನುಕೂಲವಾಗಿದೆ, ಅದನ್ನೂ ಕೂಡ ನಾನು ಹೇಳುತಿಲ್ಲ. ಈ ಸಮಾಜದಲ್ಲಿ ಯಾರು ಹಿಂದುಳಿದವರು ಇರುತ್ತಾರೆ ಅವರಿಗೆ ಅನುಕೂಲ ಮಾಡಿಕೊಡಬೇಕು ಎಂಬ ಅಪೇಕ್ಷೆ ಪಟ್ಟಿದ್ದೀರೋ ಅವರಿಗೆ ನಿಜವಾಗಿಯೂ ಆ ಅನುಕೂಲ ಸಿಕ್ಕಿಲ್ಲ, ಅದನ್ನು ನಾನು ನೊಂದು ಹೇಳುತ್ತಿದ್ದೇನೆ. ಅಧ್ಯಕ್ಷರೇ ಇಡೀ

ರಾಜ್ಯದ ಜನತೆಯ ಪ್ರಶ್ನೆ ಇದು. ಗ್ರಾಮಾಂತರ ಜನತೆಯ ಪ್ರಶ್ನೆ. ಇದರ ಮಧ್ಯೆ ಈ ರಿಸರ್ವೇಷನನ್ನು ಮತ್ತೆ ಇನ್ನೇನೋ ಮಾಡುವುದಕ್ಕೆ ಹೋಗಿದ್ದಾರೆ.

(ಗೊಂದಲ)

ಛೇರ್‌ಮಾನ್ : ಈ ವಿಧೇಯಕ ಇಲ್ಲಿ ಚರ್ಚೆಯಾಗಿ ವಿಧಾನ ಪರಿಷತ್ತಿಗೆ ಈಗಾಗಲೇ ಹೋಗಿದೆ.

**1.50 ಪಿ.ಎಂ**

ಶ್ರೀ ಕೆ. ಎಸ್. ಈಶ್ವರಪ್ಪ : ಈ ರಾಜ್ಯದಲ್ಲಿ, ಈ ದೇಶದಲ್ಲಿ ಮೇಲ್ಮನೆಗೆ ಹೆಚ್ಚಿನ ಬೆಲೆ ಇದೆ. ಆ ಮೇಲ್ಮನೆಯಲ್ಲಿರತಕ್ಕವರು ಬುದ್ಧಿವಂತ ಜನ, ಇದು ಸರಿಯಿಲ್ಲವೆಂದು ವಾಪಸ್ ಕಳುಹಿಸಿದ್ದಾರೆ.

(ಗೊಂದಲ)

ಛೇರ್‌ಮಾನ್ : ಈ ಮನೆಯಲ್ಲೂ ಕೂಡ ಬುದ್ಧಿವಂತರಿದ್ದಾರೆ.

(ಗೊಂದಲ)

ಶ್ರೀ.ಎಂ.ಪಿ.ಪ್ರಕಾಶ್ : ನಿಮ್ಮ ಮಾತನ್ನು ಕೇಳಿದ್ದೇವೆ, ಉತ್ತರ ಕೊಡಲಿಕ್ಕೆ ಅವಕಾಶ ಮಾಡಿಕೊಡಿ.

ಶ್ರೀ ಕೆ.ಎಸ್.ಈಶ್ವರಪ್ಪ : ಮೇಲ್ಮನೆಯ ಜನ ಬುದ್ಧಿವಂತರು ಅಂದರೆ ಇವರು ದಡ್ಡರು ಎಂದು ಅಲ್ಲ. ಅಧ್ಯಕ್ಷರೇ ಈಗ ರಾಜ್ಯದ ಜನತೆ ಇವರಿಗೆ ಅಧಿಕಾರ ಕೊಟ್ಟರು ಎಂದರೆ, ಜನತೆಯನ್ನು ಮುಠ್ಠಾಳ ಜನ ಎಂದು ಅವರು ಹೇಳಿದರು. ಮೇಲ್ಮನೆಯಲ್ಲಿ ಬುದ್ಧಿವಂತರು ಇದ್ದಾರೆ ಎಂದರೆ ನಾವು ದಡ್ಡರೇ ಎಂದು ಕೇಳುತ್ತಾರೆ. ಇದೇನೋ ನನಗೊಂದೂ ಅರ್ಥವಾಗುತ್ತಿಲ್ಲ.

(ಗೊಂದಲ)

ಶ್ರೀ.ಎಂ.ಪಿ.ಪ್ರಕಾಶ್ : ಸನ್ಮಾನ್ಯ ಅಧ್ಯಕ್ಷರೇ, ಈಗಾಗಲೇ ಅನೇಕ ವಿಚಾರಗಳ ಬಗ್ಗೆ ಪ್ರಸ್ತಾಪಿಸಲ್ಪಟ್ಟಿದೆ. ನಾನು ಈ ವಿಷಯದಲ್ಲಿ ಮತ್ತೆ ಪುನಾರವರ್ತನೆ ಮಾಡತಕ್ಕಂತಹ ಅಗತ್ಯವಿಲ್ಲ. ಮತ್ತು ಖರ್ಗೆಯವರು ಎತ್ತಿರತಕ್ಕಂತಹ ಎರಡು ವಿಷಯಗಳ ಬಗ್ಗೆ ಮಾತ್ರ ನಾನು ಉತ್ತರವನ್ನು ಕೊಡಲಿಕ್ಕೆ ಇಷ್ಟಪಡುತ್ತೇನೆ. ಇಲ್ಲಿ ನಾವು ಆತ್ಮವಂಚನೆ ಮಾಡಿಕೊಳ್ಳಬೇಕಾದಂಥ ಅಗತ್ಯವಿಲ್ಲ. ಅವರು ಹೇಳಿದರು, ಕೇವಲ ಶೇಕಡ ಎರಡು ಅಥವಾ ಎರಡೂವರೆಯಷ್ಟು ಪರಿಶಿಷ್ಟಜಾತಿ ಜನಾಂಗಕ್ಕೆ ಅನುಕೂಲವಾಗುತ್ತದೆ ಎನ್ನುವ ಕಾರಣಕ್ಕಾಗಿಯೇ ನೀನು ಈ ವಿಧೇಯಕದಲ್ಲಿ ತಿದ್ದುಪಡಿ ತರತಕ್ಕಂಥ ಅಗತ್ಯವಾಗಿತ್ತು ಎನ್ನುವ ಮಾತನ್ನು ಹೇಳಿದ್ದಾರೆ. ಈ ಸಂದರ್ಭದಲ್ಲಿ ತಮ್ಮ ಮೂಲಕವಾಗಿ ಅವರ ಗಮನಕ್ಕೆ ತರಬಯಸುತ್ತೇನೆ. 73ನೇ ಸಂವಿಧಾನದ ತಿದ್ದುಪಡಿಯ ಆಧಾರಕ್ಕೆ ಅನುಗುಣವಾಗಿ ಕರ್ನಾಟಕ ಪಂಚಾಯತ್‌ರಾಜ್ ಕಾನೂನನ್ನು ತಂದು ಸಂದರ್ಭದಲ್ಲಿ, ಈ ಪರಂತುವನ್ನು ತಂದು, ಅಂದರೆ ಶೇಕಡ 15 ಕ್ಕಿಂತ ಕಡಿಮೆಯಿಲ್ಲದಂತೆ, ಶೇಕಡ 3 ಕ್ಕೆ ಕಡಿಮೆಯಿಲ್ಲದಂತೆ ಎನ್ನುವಂಥ ಒಂದು ವಾಖ್ಯಾನವನ್ನು ಸೇರಿಸಿದ್ದರು, ಅದನ್ನು ತೆಗೆದಿದ್ದೇವೆ ಎನ್ನುವಂತಹ ಮಾತನ್ನು ಅವರು ಹೇಳುತ್ತಾರೆ. ಆದರೆ 74ನೇ ಸಂವಿಧಾನದ ತಿದ್ದುಪಡಿಗೆ ಅನುಗುಣವಾದಂಥ ರೀತಿಯಲ್ಲಿ,

ಮುಂದೆ ನಗರಪಾಲಿಕೆಯ ವಿಧೇಯಕವನ್ನು ಈ ಮನೆಯಲ್ಲಿ ಮಂಡಿಸಿರತಕ್ಕಂಥ ಆಗಿನ ಕಾಂಗ್ರೆಸ್ ಸರ್ಕಾರದವರು ಅಲ್ಲಿ ಮಾತ್ರ ಪರಿಶಿಷ್ಟ ಜಾತಿ ಮತ್ತು ಜನಾಂಗಕ್ಕೆ ಶೇಕಡ ಕನಿಷ್ಟ ಇಷ್ಟು ಮೀಸಲಾತಿ ಇರಬೇಕು ಎನ್ನುವಂಥ ಶಬ್ದವನ್ನು ಅವರು ಬಳಸಿಲ್ಲ. ಅಂದರೆ ಸಾಮಾಜಿಕ ನ್ಯಾಯದ ಬಗ್ಗೆ. ಗ್ರಾಮೀಣ ಪ್ರದೇಶದಲ್ಲಿರತಕ್ಕಂಥ ಪರಿಶಿಷ್ಟ ಜಾತಿಗೆ ಶೇಕಡಾ 15ಕ್ಕಿಂತ ಕಡಿಮೆ ಪರಿಶಿಷ್ಟ ಪಂಗಡಕ್ಕೆ ಶೇಕಡ 3ಕ್ಕಿಂತ ಕಡಿಮೆ ಇಲ್ಲದಂತೆ ಎನ್ನುವಂತಹ ಪರಿಚ್ಛೇದವನ್ನು ಸೇರಿಸಿ ತಕ್ಕಂತಹ ಅದೇ ಸರ್ಕಾರ, ನಗರಪಾಲಿಕೆಯ ಕಾನೂನನ್ನು ಈ ಸದನದಲ್ಲಿ ಮಂಡಿಸಿದಂತ ಸಂದರ್ಭದಲ್ಲಿ ಗರಿಷ್ಟ ಮೀಸಲಾತಿಯ ವಿಷಯವನ್ನು ಏತಕ್ಕೆ ಮಾತನಾಡಲಿಲ್ಲ? ಏತಕ್ಕೆ ಮಾತನಾಡಲಿಲ್ಲವೆಂದರೆ ಇವರು ವೈರುದ್ಯ ಅವರಿಗೆ ಅರ್ಥವಾಯಿತು. ಆ ವೈರುದ್ಯ ಮತ್ತು ವಿಫಲತೆ ಅರ್ಥವಾಗಿರ ತಕ್ಕಂಥದ್ದು; 1200 ರಷ್ಟು ಸ್ಥಾನಗಳು, ಅಂದರೆ, 391 ರಷ್ಟು ಸ್ಥಾನಗಳು ಗ್ರಾಮಪಂಚಾಯಿತಿ ಚುನಾವಣೆಯಲ್ಲಿ ಪರಿಶಿಷ್ಟ ಜಾತಿಗೆ 697 ಸ್ಥಾನಗಳು ಪರಿಶಿಷ್ಟ ಪಂಗಡಕ್ಕೆ ಯಾವುದೇ ಕಾರಣಕ್ಕಾಗಿಯೂ ಕೂಡ ನಾಮಪತ್ರ ಸಲ್ಲಿಸದೇ ಇರತಕ್ಕಂತಹ ಒಂದು ವಿಫಲತೆಯನ್ನು ಕಂಡಾಗ ಅದರ ವಾಸ್ತವಿಕವಾದಂಥ ಅರಿವನ್ನು ತಿಳಿದುಕೊಂಡಂಥ ಸಂದರ್ಭದಲ್ಲಿ ಅದೇ ಕಾಂಗ್ರೆಸ್ ಸರ್ಕಾರದವರು, ನಗರಪಾಲಿಕೆಯ ಕಾನೂನನ್ನು ಈ ಸದನದಲ್ಲಿ ತಂದು ಪಾಸ್ ಮಾಡಿಕೊಳ್ಳುವಂಥ ಸಂದರ್ಭದಲ್ಲಿ ಈ ಕನಿಷ್ಠ ಮೀಸಲಾತಿ ವಿಚಾರವನ್ನು ಪ್ರಸ್ತಾಪ ಮಾಡಲಿಲ್ಲ. ಆ ಕಾರಣಕ್ಕಾಗಿ ಆತ್ಮವಂಚನೆ ಮಾತನ್ನು ಇಲ್ಲಿ ಹೇಳಬೇಕಾಗಿರತಕ್ಕಂತಹ ಅಗತ್ಯವಿಲ್ಲ ಮತ್ತು ರಾಜಕೀಯವನ್ನು ಬೆರಸಬೇಕಾದಂತಹ ಅಗತ್ಯವಿಲ್ಲ. ಸನ್ಮಾನ್ಯ ಅಧ್ಯಕ್ಷರೇ, ಮತ್ತೊಂದು ಆತಂಕವನ್ನು ಅವರು ವ್ಯಕ್ತಪಡಿಸಿದರು. ಅದು ಯಾವ ಆತಂಕವೆಂದರೆ, ಈ ಕಾನೂನನ್ನು ತಿದ್ದುಪಡಿ ಮಾಡುವುದರ ಮೂಲಕವಾಗಿ, ಗ್ರಾಮಪಂಚಾಯಿತಿಗೆ ಈ ಕನಿಷ್ಟ ಮೀಸಲಾತಿಯ ಆಧಾರದ ಮೇಲೆ ಆರಿಸಿ ಬರತಕ್ಕಂತಹ ಸದಸ್ಯರ ಗತಿಯೇನು? ಅದು ಅವರ ಮೇಲೆ ಆಗುವಂತಹ ಪರಿಣಾಮವೇನು ಎನ್ನುವುದರಲ್ಲಿ ಪ್ರಾಯಶಃ ಅವರು ಇದನ್ನು ಗಮನಿಸದೇ ಹೋಗಿರಬಹುದು. ಉಳಿಸುವಿಕೆ ಎನ್ನುವುದನ್ನು ಸೆಕ್ಷನ್ 10ರ ಕೆಳಗೆ, ಕ್ಲಾಸ್ (1)ರ ಕೆಳಗೆ ತಂದಿರತಕ್ಕಂತಹ ತಿದ್ದುಪಡಿಯಲ್ಲಿ ಈ ಮಾತನ್ನು ಹೇಳಿದ್ದಾರೆ. ಈ ಅಧಿನಿಯಮದಲ್ಲಿ ಇರುವ ಗ್ರಾಮಪಂಚಾಯಿತಿ ಸ್ಥಾನಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಈ ಅಧಿನಿಯಮ ಪ್ರಾರಂಭವಾಗುವುದಕ್ಕೆ ನಿಕಟ ಪೂರ್ವದಲ್ಲಿ ನಡೆದ ಚುನಾವಣೆಯ ಮೇಲೆ ಪ್ರಭಾವ ಬೀರತಕ್ಕದ್ದಲ್ಲ. ಆದ್ದರಿಂದ ಈ ನಿಯಮ ಇರುವುದರಿಂದ ಈ ನಿಕಟ ಪೂರ್ವದಲ್ಲಿ ನಡೆಸಿರತಕ್ಕಂಥ ಗ್ರಾಮಪಂಚಾಯಿತಿ ಸದಸ್ಯರ, ಅಧ್ಯಕ್ಷರ ಹಾಗೂ ಉಪಾಧ್ಯಕ್ಷರ ಚುನಾವಣೆಗಳ ಮೇಲೆ ಈ ನಿಯಮಾವಳಿಯಡಿಯಲ್ಲಿ ಅಡ್ಡಿ ಬರದೇ ಇರುವುದರಿಂದ ಅದರ ಬಗ್ಗೆ ಆತಂಕವನ್ನು ವ್ಯಕ್ತಮಾಡತಕ್ಕಂತಹ ಅಗತ್ಯವಿಲ್ಲ. ಮತ್ತೆ ಮಾನ್ಯ ಈಶ್ವರಪ್ಪನವರು, ಇದು ರಾಜಕೀಯವಾಗಿ ಮಾಡಿರತಕ್ಕಂತಹದ್ದು, ಅಲ್ಪಸಂಖ್ಯಾತರನ್ನು ವಿಭಜನ ಮಾಡಿದ್ದೀರಿ ಎನ್ನುವ ಒಂದು ಮಾತನ್ನು ಹೇಳಿದರು. ಪ್ರಥಮಬಾರಿಗೆ ಮುಸ್ಲಿಂ ಜನಾಂಗವನ್ನು ಆ ಪ್ರಭೇದದಲ್ಲಿ ಸೇರಿಸಿಕೊಳ್ಳುವುದರ ಮೂಲಕವಾಗಿ ಅವರಿಗೆ ಅಧಿಕಾರವನ್ನು ಕೊಟ್ಟಿದ್ದೇವೆ. ಅದೇ ರೀತಿ ಕ್ರಿಶ್ಚಿಯನ್ನರನ್ನು ಈ ವರ್ಗದಲ್ಲಿ ಸೇರಿಸಿದ್ದೇವೆ. ಅದಕ್ಕೆ ಇರತಕ್ಕಂಥ ಆಧಾರ ಹಿಂದಿನ ಸರ್ಕಾರ ಮಾಡಿರತಕ್ಕಂಥಹ

ಕಾನೂನಿನಲ್ಲಿ ಅತ್ಯಂತ ಹಿಂದುಳಿದಿರತಕ್ಕಂತಹವರು, ಅತೀ ಹಿಂದುಳಿದಿರತಕ್ಕಂತವರು, ಹಿಂದುಳಿದಿರತಕ್ಕಂತಹವರು ಮತ್ತು ಉದ್ಯೋಗದ ಗುಂಪುಗಳೆಂದು ನಾಲ್ಕು ಭಾಗಗಳನ್ನು ಹಿಂದಿನ ಸರ್ಕಾರ ಮಾಡಿರುವುದರಲ್ಲಿ ಅತ್ಯಂತ ಹಿಂದುಳಿದವರು ಮತ್ತು ಹಿಂದುಳಿದವರನ್ನು ಪ್ರಭೇದ (ಎ)ಗೆ ಸೇರಿಸುವ ಮುಖಾಂತರ ನಾವು ಏನು ಮಾಡಿದ್ದೇವೆ ಎಂಬುದನ್ನು ಹೇಳುತ್ತೇವೆ. ಕೆನೆಯ ಮೊಸರು ಅಥವಾ ಕ್ರಿಮಿ ಲೇಯರ್ ಎನ್ನುವ ಮಾತನ್ನು ಸುಪ್ರೀಂ ಕೋರ್ಟ್‌ನವರು ಏನು ಹೇಳಿದರು, ಆ ವಾದಕ್ಕೆ ಅನುಗುಣವಾಗಿ 20 ಎಕರೆಗಿಂತ ಕಡಿಮೆ ಜಮೀನು ಇರತಕ್ಕವರು, ಕ್ಲಾಸ್ ಒನ್ ಅಫಿಸರ್ಸ್ ಮಕ್ಕಳಲ್ಲದೇ ಇರುವವರು ಮತ್ತು ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಕೊಡದೇ ಇರತಕ್ಕಂತಹವರು ಇವರನ್ನು ಸೇರಿಸಿ ಆ ವರ್ಗಕ್ಕೂ ಕೂಡಿ ನ್ಯಾಯ ಒದಗಿಸಿಕೊಡಬೇಕೆಂದು, ಶೇಖಡ 33 ರಷ್ಟು ಮೀಸಲಾತಿಯನ್ನು ಈಗಾಗಲೇ ಮಾಡಿದ್ದೇವೆ. ಇದನ್ನು ನಾನು ಹೆಚ್ಚು ದೀರ್ಘವಾಗಿ ಎಳೆಯದೆ, ಈಗಾಗಲೇ ಸದನದಲ್ಲಿ ಕೂಲಂಕುಶವಾಗಿ ಚರ್ಚೆ ಮಾಡಿ ಒಪ್ಪಿಗೆಯನ್ನು ಕೊಟ್ಟಿರುವುದರಿಂದ ಜಂಟಿ ಸದನದ ಸಮಿತಿಗೆ ಇದನ್ನು ಒಪ್ಪಿಸುವ ಅಗತ್ಯವಿಲ್ಲ ಮತ್ತು ಈ ಬಗ್ಗೆ ಹೆಚ್ಚು ಚರ್ಚೆ ಮಾಡದೆ, ನಾನು ತಮ್ಮ ಮೂಲಕ ಅವರಲ್ಲಿ ಅರಿಕೆ ಮಾಡಿ ಕೊಳ್ಳುತ್ತಿದ್ದೇನೆ, ಹಿಂದೆ ತಾವು ಈ ಬಗ್ಗೆ ವಿರೋಧವನ್ನು ಮಾಡಿಲ್ಲ. ಸನ್ಮಾನ್ಯ ಖರ್ಗೆಯವರು ಮತ್ತು ಅವರ ಮಿತ್ರ ಸದಸ್ಯರು ಆ ವಿಚಾರದಲ್ಲಿ ವಿರೋಧ ಮಾಡಿಲ್ಲ, ಅವರ ಮಿತ್ರರು ಸಭಾತ್ಯಾಗ ಮಾಡಿದ್ದಾರೆ. ಮೇಲ್ಮನೆಯಲ್ಲಿಯೂ ಕೂಡ ಸಭಾತ್ಯಾಗ ಮಾಡಿದ್ದಾರೆ, ಆ ಕಾರಣಕ್ಕಾಗಿ ತಮ್ಮ ಮೂಲಕ ಅವರಲ್ಲಿ ವಿನಯಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ, ದಯವಿಟ್ಟು ಇದಕ್ಕೆ ಒಪ್ಪಿಗೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ. ಬಿ.ಎಸ್. ಯಡಿಯೂರಪ್ಪ : (ವಿರೋಧ ಪಕ್ಷದ ನಾಯಕರು): ನಾವು (ಎ), (ಬಿ) ಕ್ಯಾಟಗರಿಗಳ ಬಗ್ಗೆ ಹೇಳಿದೆವು, ಅದರ ಬಗ್ಗೆ ಯಾವುದೇ ರೀತಿಯ ಉತ್ತರವನ್ನು ಸಹ ತಾವು ಕೊಟ್ಟಿಲ್ಲ. ಈಗ ಈ ಬಗ್ಗೆ ಸಾಕಷ್ಟು ಚರ್ಚೆ ಮಾಡಿದ್ದೇವೆ. ಜಾಯಂಟ್ ಸೆಲೆಕ್ಟ್ ಕಮಿಟಿಗೆ ಕಳುಹಿಸುವುದಕ್ಕೂ ತಾವು ಸಿದ್ಧವಿಲ್ಲ, ಅದರಿಂದ ತಾವು ಬಹುಮತವಿದೆ ಎಂದು ವಿಧೇಯಕವನ್ನು ಪಾಸ್ ಮಾಡಬೇಕೆಂದು ತೀರ್ಮಾನ ಮಾಡಿದ್ದೀರಿ. ನಾವು ಈಗಾಗಲೇ ನಮ್ಮ ಅಭಿಪ್ರಾಯವನ್ನು ಹೇಳಿದ್ದೇವೆ. ಆ ಮನೆಯ ಅಭಿಪ್ರಾಯಕ್ಕೂ ಮನ್ನಣೆ ಕೊಡದೇ ಇರತಕ್ಕಂತಹ ಸಂದರ್ಭದಲ್ಲಿ ಅನಿವಾರ್ಯವಾಗಿ ಇವತ್ತು ಬೇರೆ ದಾರಿ ಇಲ್ಲದೆ ಸಭಾತ್ಯಾಗ ಮಾಡುತ್ತಿದ್ದೇವೆ.

(ಬಿ. ಜೆ. ಪಿ. ಸದಸ್ಯರು ಸಭಾತ್ಯಾಗ ಮಾಡಿದರು).

ಶ್ರೀ ಎಂ.ಸಿ. ನಾಣಯ್ಯ: ಮಾನ್ಯ ಸಭಾಧ್ಯಕ್ಷರೆ, ಭಾರತೀಯ ಜನತಾ ಪಾರ್ಟಿಯವರು ಹೋಗುತ್ತಿದ್ದಾರೆ. ಅವರು ನಮ್ಮ ಜೊತೆಯಲ್ಲೇ ಇರುತ್ತಾರೆ. ಈ ಒಂದು ವಿಧೇಯಕವನ್ನು ಜಂಟಿ ಸದನದ ಸಮಿತಿಗೆ ಒಪ್ಪಿಸಬೇಕೆಂದು ಮಾನ್ಯ ವಿರೋಧಪಕ್ಷದ ನಾಯಕರಾಗಿರತಕ್ಕಂತಹ ಮಾನ್ಯ ಯಡಿಯೂರಪ್ಪನವರು ಮತ್ತು ಮಿತ್ರರಾಗಿರತಕ್ಕಂತಹ ಖರ್ಗೆಯವರು ಹೇಳಿದ್ದಾರೆ. ಮಾನ್ಯ ಸಭಾಧ್ಯಕ್ಷರೇ ನಿಯಮಗಳಡಿಯಲ್ಲಿ ಇದನ್ನು ಜಂಟಿ ಸದನದ ಸಮಿತಿಗೆ ಒಪ್ಪಿಸತಕ್ಕಂತಹ ಅಧಿಕಾರ

ಈಗ ಇಲ್ಲ. ಯಾವಾಗ ಒಂದು ವಿಧೇಯಕವನ್ನು ನಾವು ಪರ್ಯಾಲೋಚನೆಗೆ ತೆಗೆದು ಕೊಳ್ಳಬೇಕೆಂದು ನಾವು ಸದನದ ಮುಂದೆ ಇಡುತ್ತೇವೆ, ಆ ಸಂದರ್ಭದಲ್ಲಿ ಯಾರಾದರೂ ಒಬ್ಬರು ಇದನ್ನು ಜಂಟಿ ಸದನದ ಸಮಿತಿಗೆ ಒಪ್ಪಿಸಬೇಕೆಂದು ಆ ಒಂದು ನಿರ್ಣಯವನ್ನು ಸದನದ ಮುಖಾಂತರ ತಂದು ಒಪ್ಪಿಗೆ ಪಡೆದು ಈ ಕೆಲಸವನ್ನು ಮಾಡಬೇಕು. ಈ ಸದನದಲ್ಲಿ ಇದನ್ನು ಪ್ರಥಮಬಾರಿಗೆ ಮಂಡಿಸಿ, ಈ ವಿಧೇಯಕ ಚರ್ಚೆಗೆ ಬಂದು ಅಂಗೀಕಾರವಾದಮೇಲೆ, ಪುನಃ ಮರು ವಾಪಸ್ ಬಂದ ಮೇಲೆ ಪುನಃ ಇದನ್ನು ಜಂಟಿ ಸದನದ ಸಮಿತಿಗೆ ಒಪ್ಪಿಸುವುದಕ್ಕೆ ಅವಕಾಶವಿಲ್ಲ, ಅದು ಅಸಿಂಧುವಾಗುತ್ತದೆ. ಆದ್ದರಿಂದ ಮಾನ್ಯ ಅಧ್ಯಕ್ಷರೇ, ಖರ್ಗೆಯವರಿಗೆ ಈ ಒಂದು ವಿಚಾರವನ್ನು ಕೂಡ ಗಮನಕ್ಕೆ ತರುವುದರ ಮುಖಾಂತರ.......

ಛೇರ್ಮನ್: ಮಾನ್ಯ ಖರ್ಗೆಯವರೇ, ಈಗಾಗಲೇ ಮಂತ್ರಿಗಳು ಉತ್ತರವನ್ನು ಕೊಟ್ಟಾಗಿದೆ.

ಶ್ರೀ.ಸಿ.ಬೈರೇಗೌಡ (ಕೃಷಿ ಸಚಿವರು) : ಹೊಸ ಸಂಪ್ರದಾಯವನ್ನು ತಾವು ಹಾಕುವುದಕ್ಕೆ ಹೋಗಬೇಡಿ. ಮಾನ್ಯ ಮಂತ್ರಿಗಳು ಚರ್ಚೆಗೆ ಉತ್ತರ ಕೊಟ್ಟಿದ್ದಾರೆ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಅವರು ಏನು ಹೇಳಿದ್ದರು ಅದಕ್ಕೆ ಉತ್ತರ ಕೊಟ್ಟಿದ್ದಾರೆ.

ಛೇರ್ಮನ್ : ಮಾನ್ಯ ಖರ್ಗೆಯವರೇ, ನೀವು ಮಾತನಾಡುವ ಸಂದರ್ಭದಲ್ಲಿ ಪಾಟೀಲರು ಎರಡು ಮೂರು ಕ್ಲಾರಿಫಿಕೇಷನ್ ಕೇಳಿದಾಗ ತಾವೇ ಯೀಲ್ಡ್ ಆಗಿ ಅವರು ಹೇಳಿದ್ದಾರೆ. ತಮ್ಮದು ಚರ್ಚೆ ಮುಗಿದಿದೆ. ವಿರೋಧಪಕ್ಷದ ನಾಯಕರ ಚರ್ಚೆ ಮುಗಿದಿದೆ, ನಂತರ ಮಂತ್ರಿಗಳು ಉತ್ತರ ಕೊಟ್ಟಿದ್ದಾರೆ. ಮತಕ್ಕೆ ಹಾಕುವಂತಹ ಹಂತದಲ್ಲಿ ನಾವು ಇದ್ದೇವೆ. ಮತ್ತೆ ಡಿಬೇಟ್‌ಗೆ ಹೋಗುವ ಸ್ಟೇಜ್‌ಗೆ ಹೋಗುವುದು ಬೇಡ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ಶ್ರೀಮಾನ್ ಪ್ರಕಾಶ್‌ಜಿಯವರು, ಎರಡು ವಿಷಯಗಳನ್ನು ಪ್ರಸ್ತಾಪ ಮಾಡಿದರು. ಒಂದು ಏನೆಂದರೆ, ಈ ನಗರಪಾಲಿಕೆ ಕಾನೂನಿನಲ್ಲಿ ಕನಿಷ್ಟ ಶೇಕಡಾ 15 ಮತ್ತು 3 ರಷ್ಟು ಮೀಸಲಾತಿ ತರಲಿಲ್ಲ, ಏತಕ್ಕೆ ತರಲಿಲ್ಲವೆಂದು ಕೇಳಿದರು. ಅಲ್ಲಿ ತರಲಿಲ್ಲವೆಂದು ಇಲ್ಲಿ ಇದ್ದುದ್ದನ್ನು ತೆಗೆಯಬೇಕೆಂದು ಇದೆಯೇ? ಕಾನೂನಿನಲ್ಲಿ ಒಂದು ಇದೆ. ಅಲ್ಲಿ ಕೊರತೆ ಇದ್ದರೆ ನೀವು ಅದನ್ನು ತುಂಬತಕ್ಕ ಪ್ರಯತ್ನ ಮಾಡಿ. ನೀವು ತಿದ್ದುಪಡಿ ತನ್ನಿ, ಅದಕ್ಕೆ ನಾವು ಬೆಂಬಲ ಕೊಡುತ್ತೇವೆ. ಆದರೆ ಇದ್ದುದ್ದನ್ನು ನೀವು ತೆಗೆದು ಇವತ್ತಿನ ದಿವಸ ಅಲ್ಲಿ ಇಲ್ಲ, ನೀವು ಅದನ್ನು ಮಾಡಲಿಲ್ಲ. ಅದಕ್ಕಾಗಿ ಇಲ್ಲಿ ನಾವೂ ಕೂಡ ತೆಗೆದು ಹಾಕುತ್ತೇವೆ ಅಂದರೆ, ಇದು ಸರಿಯಲ್ಲ. ಏಕೆಂದರೆ ನಾನು ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ ಚಾರ್ಜ್ ತೆಗೆದುಕೊಂಡ ಮೇಲೆ, ತಮಗೆ ಗೊತ್ತಿದೆ ಅಧ್ಯಕ್ಷರೇ, ಆ ಕಾಲದಲ್ಲಿ ಇದು ಚರ್ಚೆಗೆ ಬಂದಾಗ ನಾವು ಅನೇಕ ಸಾರಿ ಕುಳಿತು ವಿಚಾರ ಮಾಡಿ ಕೊನೆಗೆ ಇದು ಕನಿಷ್ಟ ಎನ್ನತಕ್ಕಂತಹ ಕ್ಲಾಸನ್ನು ಆ ಕಾಲದಲ್ಲಿ ನಾವು ಹಾಕಿದ್ದೆವು. ಅದು ಹಾಗೆಯೇ ನಿಂತಿತು, ಮುಂದೆ ಘೋರ್ಪಡೆಯವರು ಅದನ್ನು ಕಾನೂನು ರೂಪದಲ್ಲಿ ತಂದರು. ನೀವು ಇದನ್ನು ಇನ್ನೊಂದು ಸಾರಿ ಯೋಚನೆ ಮಾಡಿ. ಇದರಲ್ಲಿ ಯಾರನ್ನೂ

ವಿರೋಧ ಮಾಡತಕ್ಕದ್ದು ಅಥವಾ ಅನ್ಯಾಯ ಮಾಡತಕ್ಕದ್ದು ಆಗುವುದಿಲ್ಲ. ಕೇವಲ ಪ್ರತಿಷ್ಠೆಯ ಪ್ರಶ್ನೆಯನ್ನಾಗಿ ನೀವು ಮಾಡಿಕೊಂಡು ಹೋಗಬೇಡಿ. ಇದರಲ್ಲಿ 'ಎ' ಕೆಟಗರಿಯಲ್ಲಿರುವವರು 'ಎ' ಕೆಟಗರಿಯಲ್ಲೇ ಬರುತ್ತಾರೆ. 'ಬಿ' ಕೆಟಗರಿಯಲ್ಲಿರುವವರು 'ಬಿ' ಕೆಟಗರಿಯಲ್ಲೇ ಬರುತ್ತಾರೆ. ಆದರೆ ಲಾಟರಿ ಸಿಸ್ಟಂನಲ್ಲಿ ಅನ್ಯಾಯವಾಗಿದೆ ಎಂದು ಏನು ಹೇಳುತ್ತಿದ್ದಾರೆ ಆ ಮಾತು .ಬೇರೆ. ನೀವು ಯಾವರೀತಿ ಕನ್ವಿನ್ಸ್ ಮಾಡುತ್ತೀರೋ ಮಾಡಿ. ಆದರೆ ಇದನ್ನು ಕನ್ವಿನ್ಸ್ ಮಾಡತಕ್ಕದ್ದು ಸಾಧ್ಯವಿಲ್ಲ. ಏಕೆಂದರೆ ಇದಕ್ಕೆ ಮಿನಿಮಂ ಸೇಫ್‌ಗಾರ್ಡ್ ಮಾಡುವಂಥ ಕ್ಲಾಸ್...

ಛೇರ್ಮನ್ : ಇದಕ್ಕೆ ಸರ್ಕಾರ ಏನು ಹೇಳುತ್ತದೋ ಕೇಳೋಣ. ಕೊನೆಯದಾಗಿ ಏನು ಆಗುತ್ತದೋ ನೋಡೋಣ.

ಶ್ರೀ ಎಂ.ಪಿ.ಪ್ರಕಾಶ್ : ಮಾನ್ಯ ಅಧ್ಯಕ್ಷರೇ, ಈಗಾಗಲೇ ಇದರ ಬಗ್ಗೆ ವಿವರವಾಗಿ ಚರ್ಚೆಯಾಗಿದೆ. ಈಗ ಇದರಲ್ಲಿ ಯಾವುದೇ ರಾಜಕೀಯವನ್ನು ಬೆರಸುವುದಾಗಲಿ, ಅಥವಾ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಕೊಟ್ಟಿರತಕ್ಕ ಕೆಲವು ಸೌಕರ್ಯಗಳನ್ನಾಗಲಿ, ಸೌಲಭ್ಯಗಳನ್ನಾಗಲಿ ಕಿತ್ತುಕೊಳ್ಳಬೇಕೆಂಬ ಉದ್ದೇಶವಿಲ್ಲ. ಮಾನ್ಯ ಖರ್ಗೆಯವರು ಹಿರಿಯ ಸಚಿವರಾಗಿದ್ದಾಗ ಅವರ ಸರ್ಕಾರದ ಕಾಲದಲ್ಲೇ ನಗರಪಾಲಿಕೆಗೆ ಸಂಬಂಧಪಟ್ಟ ಒಂದು ಕಾನೂನು ಇಲ್ಲಿ ಬಂತು. ಆ ಸಂದರ್ಭದಲ್ಲಿ ಇಂಥ ಕನಿಷ್ಠ ಮೀಸಲಾತಿಯನ್ನು ಕೊಡಲಿಲ್ಲ. ಅದಕ್ಕೆ ಒಂದು ತಾರ್ಕಿಕ ಕಾರಣ ಇತ್ತು. ಅದರಲ್ಲಿ ರಾಜಕೀಯಕಾರಣ ಇತ್ತು ಎಂದು ಅಲ್ಲ. ಆ ತಾರ್ಕಿಕ ಕಾರಣ ಏನೆಂದರೆ ಗ್ರಾಮ ಪಂಚಾಯಿತಿಗಳ ಚುನಾವಣೆಯನ್ನು ನಡೆಸಿದಂಥ ಹಿನ್ನೆಲೆಯ ಭರ್ತಿ ಆಗದೇ ಹೋದುದರಿಂದ ಆ ಕನಿಷ್ಠ ಮೀಸಲಾತಿಯನ್ನು ಕೊಟ್ಟಿದ್ದರಿಂದ ಆ ಜನಾಂಗ ಇಲ್ಲದೇ ಇರುವಂಥ ಕಡೆಯಲ್ಲಿ ಅನುಕೂಲ ಆಗದೇ ಇದ್ದಂಥ ಕಡೆಗಳಲ್ಲಿ ನಾಮ ಪತ್ರವನ್ನು ಸಲ್ಲಿಸಲು ಸಾಧ್ಯವಾಗದೇ ಹೋಗುವುದರಿಂದ ಒಂದಲ್ಲ ಎರಡುಸಾರಿ ಈ ರೀತಿ ಚುನಾವಣೆಯ ವೇಳಾ ಪಟ್ಟಿಯನ್ನು ಪ್ರಕಟಿಸಬೇಕಾದ ಅನಿವಾರ್ಯತೆ ಬಂದಾಗಲೂ ಕೂಡ ತುಂಬದೇ ಹೋಗಿರತಕ್ಕ ಸ್ಥಾನಗಳ ಅನುಭವದ ಹಿನ್ನೆಲೆಯಲ್ಲಿ ಅವರು ನಗರಪಾಲಿಕೆಯ ಬಿಲ್ಲನ್ನು ಈ ಸದನದಲ್ಲಿ ತಂದಂಥ ಸಂದರ್ಭದಲ್ಲಿ ಈ ಕನಿಷ್ಠ ಮೀಸಲಾತಿಯ ವಿಚಾರವನ್ನು ಅವರು ಕೈಬಿಟ್ಟರು. ಅದನ್ನು ಬಿಟ್ಟು ಬೇರೆ ಇಲ್ಲ. ಎರಡನೆಯದಾಗಿ ಅವರ ಅಡ್ವೋಕೇಟ್ ಜನರಲ್‌ರವರು ಅವರಿಗೆ ಕೊಟ್ಟಿರತಕ್ಕ ವಿಚಾರದಲ್ಲಿ ಕೂಡ ನಾವು ಕಳೆದಸಾರಿ ಈ ಸದನದಲ್ಲಿ ಚರ್ಚೆ ಮಾಡಿದ್ದೇವೆ. ಕಳೆದಬಾರಿ ಅವರ ಅಭಿಪ್ರಾಯವನ್ನು ಏನು ಅಭಿಪ್ರಾಯ ಕೊಟ್ಟಿದ್ದಾರೆ ಎಂಬುದನ್ನು ನಾವು ಹೇಳಿದ್ದೇವೆ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಯಾವ ಕೋರ್ಟಿನಲ್ಲಿ ಈ ಪ್ರೊವಿಷನ್ ಸ್ಟ್ರಾಕ್ ಡೌನ್ ಆಗಿದೆ, ಹೇಳಿ ನೋಡೋಣ. ಆ ಕಾನೂನನ್ನು ಮಾಡುವಾಗ ಅದೇ ಅಡ್ವೋಕೇಟ್ ಜನರಲ್‌ರವರು ಇದ್ದರು, ಅದೇ ಲಾ ಡಿಪಾರ್ಟ್‌ಮೆಂಟ್‌ಗೆ ಹೋಗಿ ಬಂದಿದೆ. ಆ ಪ್ರೊವಿಷನ್‌ನ್ನು ಎಲ್ಲಾದರೂ ಹೊಡೆದು ಹಾಕಿದ್ದಾರಾ? ಇವತ್ತು ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳಲ್ಲಿ ವೈಡರ್ ಸ್ಕೋಪ್ ಇದೆ.

ಶ್ರೀ ಎಂ.ಪಿ.ಪ್ರಕಾಶ್ : ಮಾನ್ಯ ಅಧ್ಯಕ್ಷರೆ, ಇದೇ ತರ್ಕವನ್ನು ನಾನು ಮುಂದುವರಿಸಿದರೆ ಈಗಲೂ ಕೂಡ ಶ್ರೇಷ್ಠ ನ್ಯಾಯಾಲಯದಲ್ಲಿ ಈ ಕಾನೂನನ್ನು ಯಾರೂ ಪ್ರತಿಭಟಿಸಲಿಲ್ಲ. ಶ್ರೇಷ್ಠ ನ್ಯಾಯಾಲಯ ಇದಕ್ಕಾಗಿ ಯಾವುದೇ ತಡೆಯಾಜ್ಞೆಯನ್ನೂ ಕೊಟ್ಟಿಲ್ಲ. ಒಂದು ವೇಳೆ ನಾವೇನಾದರೂ ಇದರಲ್ಲಿ ತಪ್ಪು ಮಾಡಿದ್ದರೆ, ಇದು ಅಸಿಂಧುವಾಗಿದ್ದರೆ ತಡೆಯಾಜ್ಞೆಯನ್ನು ಅವರು ಖಂಡಿತವಾಗಿಯೂ ಕೊಡುತ್ತಿದ್ದರು. ಮಾನ್ಯ ಖಾರ್ಗೆಯವರು ಇದರಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರತಕ್ಕದ್ದು ನಿಮ್ಮ ಕಾನೂನಿನ ಪ್ರಕಾರ ಪಾಪ್ಯುಲೇಷನ್ ಹೇಳುತ್ತಾರೆ.ಇಲ್ಲಿರತಕ್ಕ ಪಂಚಾಯಿತಿ ರಾಜ್ ಕಾನೂನಿನ ಕೆಳಗೆ ಪಾಪ್ಯುಲೇಷನ್ ಎಂದರೆ:

"Population means the population as ascertained at the last preceding census of which the relevant figures have been published."

ಎನ್ನತಕ್ಕ ಮಾತು ಇದ ಆಗ ಅಲ್ಲಿರತಕ್ಕ ಮೀಸಲಾತಿಯನ್ನು ತಾಲ್ಲೂಕು ಘಟಕವಾಗಿ, ಜಿಲ್ಲಾ ಘಟಕವಾಗಿ ತೆಗೆದುಕೊಂಡಿದ್ದೇವೆ. ಆ ತಾಲ್ಲೂಕು ಮತ್ತು ಜಿಲ್ಲಾ ಘಟಕದಲ್ಲಿ ಮೀಸಲಾತಿಯ ಪ್ರಮಾಣ ಆ ಜನಸಂಖ್ಯೆಗನುಗುಣವಾಗಿ ಇರತಕ್ಕ ಸ್ಥಾನಗಳ ಒಟ್ಟು ಸ್ಥಾನಗಳಿಗೆ ಅದು ಅನುಗುಣವಾಗಿದ್ದಿರ ಬೇಕು. ಆಗಿರಬೇಕು. ಒಟ್ಟು ಸ್ಥಾನಗಳ ಲೆಕ್ಕವನ್ನು ನೋಡಿದಾಗ ನೀವು ಹೇಳಿದಂತೆ ಬೇಕಾದಷ್ಟು ಜನಗಳಿದ್ದಾರೆ ಎಂದು ಇದೇ ಸೆನ್ಸಸ್ ಫಿಗರ್ಸ್‌ನಲ್ಲಿ ಕೂಡ ಇದೆ. ಮಾನ್ಯ ಸದಸ್ಯರಾದ ಡಿ. ಆರ್ ಪಾಟೀಲ್‌ರವರು ಮಾತನಾಡುತ್ತಾ ಧಾರವಾಡ ಮತ್ತು ಗದಗ ಬಹಳ ಅನ್ಯಾಯವಾಗಿದೆ ಎಂದು ಹೇಳುತ್ತಿದ್ದರು ಗದಗಿನಲ್ಲಿರತಕ್ಕದ್ದು 1991ರ ಜನಗಣತಿ ಪ್ರಕಾರ 1,40,093 ಜನಸಂಖ್ಯೆ. ಅದರಲ್ಲಿ ಪರಿಶಿಷ್ಟ ಜಾತಿ 21,423, ಪರಿಶಿಷ್ಟ ಪಂಗಡ 3397. ಇದು ಗದಗ್ ತಾಲ್ಲೂಕಿನ ಒಟ್ಟು ಸ್ಥಾನಗಳಲ್ಲಿ ಮೀಸಲಾತಿಗನುಗುಣವಾಗಿ ಜನಸಂಖ್ಯೆಗನುಗುಣವಾಗಿ ಇರಬೇಕಾಗುತ್ತದೆ. ಅದೇ ರೀತಿಯಾಗಿ ಕುಮಟಾದಲ್ಲಿ ಮತ್ತು ಬೇರೆ ಬೇರೆ ಪ್ರದೇಶಗಳಲ್ಲಿ ಕೇವಲ 15,3,6,361 ಈರೀತಿ ಇರುವುದರಿಂದ ಅಲ್ಲಿ ಸ್ಥಾನವನ್ನು ಕಲ್ಪಿಸಿಕೊಡುವುದಕ್ಕೆ ಆಗಿಲ್ಲ. ಒಟ್ಟಿನಲ್ಲಿ ಸ್ಥಾನಗಳು ಮಾತ್ರ ಶೇಕಡ 23ನ್ನು ಮೀರಿರುತ್ತದೆ. ಈ ಕಾನೂನಿನ ಹಿನ್ನೆಲೆಯಲ್ಲಿ ......

ಶ್ರೀ ಡಿ.ಆರ್.ಪಾಟೀಲ್ : ನೀವು ಈ ಕಾನೂನಿನಿಂದ ವಿತ್ ಡ್ರಾ ಮಾಡುವುದಕ್ಕೆ ಪೂರ್ವದಲ್ಲಿ ಗದಗ್‌ನಲ್ಲಿ ತಾಲೂಕು ಪಂಚಾಯಿತಿಯಲ್ಲಿ ಷೆಡ್ಯೂಲ್ಡ್ ಕ್ಯಾಸ್ಟ್‌ನವರಿಗೆ 3 ಸೀಟುಗಳಿದ್ದುವು. ಷೆಡ್ಯೂಲ್ಡ್ ಟ್ರೈಬ್‌ನವರಿಗೆ ಒಂದು ಸೀಟು ಇತ್ತು. ಇವರು ಆ ಪ್ರೊವಿಷನ್ ಅನ್ನು ಕಿತ್ತುಹಾಕಿದ ಮೇಲೆ ಅವು 2 ಸೀಟುಗಳಾದುವು. ಷೆಡ್ಯೂಲ್ಡ್ ಟ್ರೈಬ್‌ನವರಿಗೆ ಒಂದು ಸೀಟೂ ಇಲ್ಲ, ಪ್ರಾವಿಸೋವನ್ನು ಕಿತ್ತುಹಾಕಿದಮೇಲೆ ಇವರಿಗೆ ಏನು ಅನ್ಯಾಯವಾಗಿದೆ ಎಂದರೆ, 40 ಪರ್ಸೆಂಟ್ ತಾಲ್ಲೂಕು ಪಂಚಾಯತಿ ಸಮಿತಿಯಲ್ಲಿ ಷೆಡ್ಯೂಲ್ಡ್ ಟ್ರೈಬ್‌ನವರಿಗೆ ಒಂದೂ ಸೀಟೂ ಇಲ್ಲ. 1987 ರಲ್ಲಿ ಇವರು ಮಂಡಲ ಪಂಚಾಯಿತಿಗಳಲ್ಲಿ ಅಧಿಕಾರಿಗಳನ್ನು ಹಿಡಿಯಬೇಕೆಂಬ ದುರುದ್ದೇಶದಿಂದ ಒಂದು ಪರ್ಸೆಂಟ್‌ಗಿಂತ ಕೆಳಗೆ ಯಾವ ಜನಸಂಖ್ಯೆ ಇರುತ್ತದೆ ಅವರಲ್ಲಿ ಇಬ್ಬರನ್ನು ನಾಮಿನೇಟ್ ಮಾಡಬೇಕೆಂದು ಏನೋ ಒಂದು

ತಿದ್ದುಪಡಿಯನ್ನುತಂದರು. ಏನೇ ಆದರೂ ಆಗಲಿ ಕೆಳಗಿನವರಿಗೆ ಅವಕಾಶ ಸಿಕ್ಕಿತು ಎಂದು ನಾವು ಸಂತೋಷ ಪಟ್ಟಿದ್ದೇವು. ಆದರೆ ಇವತ್ತು ಆ ಉದ್ದೇಶ ಇಲ್ಲವಲ್ಲಾ. ಆಗ ರಾಜಕೀಯವಾಗಿ ಹಾಗೆ ಅನುಕೂಲವಾಯಿತು ಎಂದು ಹಾಗೆ ಮಾಡುವುದು, ಈಗ ರಾಜಕೀಯವಾಗಿ ಈ ರೀತಿ ಅನುಕೂಲ ಮಾಡಿಕೊಳ್ಳಬೇಕೆಂದು ಹೀಗೆ ಮಾಡುವುದು. ತಪ್ಪು ಇದು ಒಳ್ಳೆಯ ಕೆಲಸವಲ್ಲ. ಇದುವರೆಗೆ ನಮ್ಮ ದೇಶದ, ರಾಜಕೀಯ ಇತಿಹಾಸದಲ್ಲಿ....

ಛೇರ್ಮನ್ : ಇದುವರೆಗೆ ಎರಡನೇ ಸಾರಿ ಚರ್ಚೆಯಾಯಿತು.

ಶ್ರೀ. ಡಿ.ಆರ್. ಪಾಟೀಲ್ : ಇದುವರೆಗೆ ನಮ್ಮ ದೇಶದ ರಾಜಕೀಯ ಇತಿಹಾಸದಲ್ಲಿ ಕೊಟ್ಟಂಥ ಮೀಸಲಾತಿಯನ್ನು ಹಿಂದಕ್ಕೆ ತೆಗೆದುಕೊಂಡವರು ಯಾರಾದರೂ ಇದ್ದಾರೆಂದರೆ ನೀವು ಮಾತ್ರ. ಇದುವರೆಗೂ ಈ ರೀತಿಯ ಸೌಲಭ್ಯವನ್ನು ಕಸಿದುಕೊಳ್ಳುವ ಧೈರ್ಯವನ್ನು ಯಾರೂ ಮಾಡಿರಲಿಲ್ಲ. ಬಹುಶ : ಜನತಾದಳದ ಪಕ್ಷದ ವೇದಿಕೆಯಲ್ಲೂ ಇದನ್ನು ಚರ್ಚೆಮಾಡಿಲ್ಲ. ಮಾಡಿದ್ದರೆ. ಅಲ್ಲಿದ್ದಂಥ ಎಸ್‌ಸಿ;ಎಸ್‌ಟಿ ವರ್ಗದವರು ಸುಮ್ಮನೆ ಇರುತ್ತಿರಲಿಲ್ಲ. ಕ್ಯಾಬಿನೆಟ್‌ನಲ್ಲಿ ಮಾಡಿ ತರಾತುರಿಯಲ್ಲಿ ಇದನ್ನು ತಂದು ಕನ್‌ಫ್ಯೂಷನ್‌ನಲ್ಲಿ ಮಾಡಿರತಕ್ಕಂಥದ್ದು ಬಹಳ ಅನ್ಯಾಯ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಮಾನ್ಯ ಅಧ್ಯಕ್ಷರೆ, ಈಗ ನಾನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಮಾನ್ಯ ಮುಖ್ಯಮಂತ್ರಿವರು ಮೊನ್ನೆ ಹೇಳಿದರು. ಯಾರು ಎಚ್ಚರವಾಗಿದ್ದು ಮಲಗಿದವರಂತೆ ಸೋಗು ಮಾಡುತ್ತಾರೆ, ಅವರನ್ನು ಎಬ್ಬಿಸುವುದು ಬಹಳ ಕಷ್ಟ ಎಂದು. ಆ ಮಾತನ್ನು ನಾನು ಈಗ ಅವರಿಗೆ ಹೇಳಬೇಕಾಗಿದೆ. ಅವರಿಗೆ ಗೊತ್ತಿದ್ದರೂ ಕೂಡ ಮಿನಿಮಂ 15 ಪರ್ಸೆಂಟ್, ಮತ್ತು 3 ಪರ್ಸೆಂಟ್ ಇಟ್ಟಿರತಕ್ಕದ್ದು ತಪ್ಪಿಲ್ಲ. ಈಗಾಗಲೇ ಚುನಾವಣೆ ಆಗಿಹೋಗಿದೆ. ಮುಂದೆ ಅದು ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿಗೆ ಮುಂದುವರಿದರೂ ಕೂಡ ಅನ್ಯಾಯವಾಗುವುದಿಲ್ಲ ಎನ್ನತಕ್ಕ ಮಾತಿನ ಅರಿವು ಇದ್ದರೂ ಕೂಡ ಅವರು ಪುನಃ ಪುನಃ ಅದೇ ಮಾತನ್ನೇ ಹೇಳುತ್ತಿದ್ದಾರೆಂದರೆ ಇದರ ಅರ್ಥ ಏನೆಂದರೆ ಅವರು ಈ ವೀಕರ್ಸ್ ಸೆಕ್ಷನ್ ಜನರಿಗೆ ನ್ಯಾಯವನ್ನು ಕೊಡುವುದಕ್ಕೆ ತಯಾರಿಲ್ಲ ಎಂಬುದನ್ನು ತೋರಿಸುತ್ತದೆ. ಇದನ್ನು ವಾಪಸ್ಸು ತೆಗೆದುಕೊಂಡು ಸಮಗ್ರವಾದ ತಿದ್ದುಪಡಿಯನ್ನು ತರಬೇಕೆಂಬ ಬಗ್ಗೆ ಕೂಡ ಅವರು ಯೋಚನೆ ಮಾಡುತ್ತಿಲ್ಲ. ಆದ್ದರಿಂದ ನಾವು ಇದನ್ನು ಪ್ರತಿಭಟಿಸಿ ಸಭಾತ್ಯಾಗ ಮಾಡುತ್ತೇವೆ.

(ಈ ಸಂದರ್ಭದಲ್ಲಿ ಮಾನ್ಯ ಖರ್ಗೆಯವರು ಹಾಗೂ ಕಾಂಗ್ರೆಸ್ (ಐ) ಪಕ್ಷದ ಇತರ ಸದಸ್ಯರು ಸಭಾತ್ಯಾಗ ಮಾಡಿದರು)

ಛೇರ್ಮನ್ : ಪ್ರಸ್ತಾವ ಏನೆಂದರೆ :

''1995ನೇ ಸಾಲಿನ ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕ (ವಿಧಾನ ಪರಿಷತ್ತಿನಿಂದ ತಿರಸ್ಕೃತವಾಗಿರುವ) ವನ್ನು ಪುನರ್ ಪರ್ಯಾಲೋಚಿಸುವುದು''

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು.

ಖಂಡ ಖಂಡವಾಗಿ ವಿಧೇಯಕವನ್ನು ಪರ್ಯಾಲೋಚಿಸುವುದು

ಖಂಡ 2ರಿಂದ 11ರವರೆಗೆ ಎರಡೂ ಸೇರಿದಂತೆ

ಛೇರ್ಮನ್ : "ಖಂಡ 2 ರಿಂದ 11ರವರೆಗೆ, ಎರಡೂ ಸೇರಿದಂತೆ, ಈ ವಿಧೇಯಕದ ಅಂಗವಾಗಿರುತ್ತದೆ."

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು

(ಖಂಡ 2 ರಿಂದ 11ರವರೆಗೆ, ಎರಡೂ ಸೇರಿದಂತೆ, ವಿಧೇಯಕಕ್ಕೆ ಸೇರಿಸಲ್ಪಟ್ಟಿತು

ಖಂಡ 1 ಇತ್ಯಾದಿ :

ಛೇರ್ಮನ್ : ಪ್ರಸ್ತಾವ ಏನೆಂದರೆ :

"ಮೊದಲನೇ ಖಂಡ ದೀರ್ಘ ಶೀರ್ಷಿಕೆ ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸಂಹಿತ ಸೂತ್ರ ಸಂಹಿತೆ ವಿಧೇಯಕದ ಭಾಗವಾಗಿರುತ್ತದೆ"

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು

(ಮೊದಲನೇ ಖಂಡ ಧೀರ್ಘ ಶೀರ್ಷಿಕೆ ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸೂತ್ರ ಸಂಹಿತೆಗಳನ್ನು ವಿಧೇಯಕಕ್ಕೆ ಸೇರಿಸಲ್ಪಟ್ಟಿತು)

ಪ್ರಸ್ತಾವದ ಅಂಗೀಕಾರ

ಶ್ರೀ ಎಂ.ಪಿ.ಪ್ರಕಾಶ್ (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು) : ಮಾನ್ಯ ಅಧ್ಯಕ್ಷರೆ,

"1995ನೇ ಸಾಲಿನ ಕರ್ನಾಟಕ ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕ (ವಿಧಾನ ಪರಿಷತ್ತಿನಿಂದ ತಿರಸ್ಕೃತವಾಗಿರುವ) ವನ್ನು ಅಂಗೀಕರಿಸಬೇಕೆಂದು ಕೋರುತ್ತೇನೆ."

ಛೇರ್‌ಮಾನ್ : ಪ್ರಸ್ತಾವ ಏನೆಂದರೆ:

"1995ನೇ ಸಾಲಿನ ಕರ್ನಾಟಕ ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕ (ವಿಧಾನ ಸಭೆಯಿಂದ ತಿರಸ್ಕೃತವಾಗಿರುವ) ವನ್ನು ಅಂಗೀಕರಿಸುವುದು."

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು ಮತ್ತು ಮಸೂದೆಗೆ ಒಪ್ಪಿಗೆ ನೀಡಲ್ಪಟ್ಟಿತು

ಛೇರ್‌ಮಾನ್ : ಈಗ ಸಭೆಯನ್ನು ಮಧ್ಯಾಹ್ನ 3.15ಗಂಟೆ ವರೆಗೆ ಮುಂದೂಡುತ್ತಿದ್ದೇನೆ.

(ಸಭೆಯು ಮಧ್ಯಾಹ್ನ 2.10 ಗಂಟೆಗೆ ಮುಕ್ತಾಯಗೊಂಡು ಮತ್ತೆ 3.15ಗಂಟೆಗೆ ಸಮಾವೇಶಗೊಳ್ಳಲು ತೀರ್ಮಾನಿಸಿತು.)

(ಸಭೆಯು 3.20 ಗಂಟೆಗೆ ಮತ್ತೆ ಸಮಾವೇಶಗೊಂಡಿತು)

(ಮಾನ್ಯ ಅಧ್ಯಕ್ಷರು (ಶ್ರೀ ರಮೇಶ್ ಕುಮಾರ್) ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದರು)

ನಿಯಮ 351ರ ಮೇರೆಗೆ ಪ್ರಸ್ತಾಪಿಸಲಾದ ವಿಷಯಗಳು

**ವಿಷಯ : ಬಿಜಾಪುರ ಜಿಲ್ಲೆ ಬಾದಾಮಿ ತಾಲ್ಲೂಕಿನಲ್ಲಿನ ಸೀಮೆಎಣ್ಣೆ ಅಭಾವ.**

ಶ್ರೀ ಬಿ.ಬಿ.ಚಿಮ್ಮನಕಟ್ಟೆ (ಬಾದಾಮಿ) : ಮಾನ್ಯ ಅಧ್ಯಕ್ಷರೆ, ಬಿಜಾಪುರ ಜಿಲ್ಲೆ ಬಾದಾಮಿ ತಾಲ್ಲೂಕಿನಲ್ಲಿ ಹಾಗೂ ಗ್ರಾಮಗಳಲ್ಲಿ ಸುಮಾರು ಒಂದು ವರ್ಷದಿಂದ ವರ್ಷದಿಂದ ಸೀಮೆ ಎಣ್ಣೆ ವಿತರಣೆಯಾಗದೆ ಸಾರ್ವಜನಿಕರಿಗೆ ಬಹಳ ತೊಂದರೆಯಾಗಿದೆ. ಸೀಮೆ ಎಣ್ಣೆ ಡೀಲರ್ಸ್‌ಗಳು ಸಹ ಸಾರ್ವಜನಿಕರೊಂದಿಗೆ ಸರಿಯಾಗಿ

ವರ್ತಿಸುತ್ತಿಲ್ಲ. ಜೊತೆಗೆ ನಿಗದಿತ ವೇಳೆಯಲ್ಲಿ ಸೀಮೆ ಎಣ್ಣೆಯನ್ನು ವಿತರಿಸದೆ ಇರುವುದರಿಂದ ಸಾರ್ವಜನಿಕರಿಗೆ ಬಹಳ ತೊಂದರೆಯಾಗಿದೆ. ಆದ್ದರಿಂದ ನಿಯಮ 351ರ ಕೆಳಗೆ ಸರ್ಕಾರದ ಗಮನವನ್ನು ಸೆಳೆಯುತ್ತೇನೆ :

ಶ್ರೀ ಎಸ್.ಎಸ್.ಪಾಟೀಲ್ (ಸಹಕಾರಿ ಸಚಿವರು) : ಮಾನ್ಯ ಅಧ್ಯಕ್ಷರೇ, ಬಿಜಾಪುರ ಜಿಲ್ಲೆಗೆ ಬಿಡುಗಡೆ ಮಾಡುತ್ತಿರುವ ಸೀಮೆಎಣ್ಣೆ ಪ್ರಮಾಣದಲ್ಲಿ ಜಿಲ್ಲಾಧಿಕಾರಿಗಳು ಬಾದಾಮಿ ತಾಲ್ಲೂಕಿನ ಪಟ್ಟಣ ಪ್ರದೇಶದ ಕಾರ್ಡುದಾರರಿಗೆ ಕಳೆದ ಒಂದು ವರ್ಷದಿಂದ 7 ಲೀಟರಿನಂತೆ ಹಾಗೂ ಗ್ರಾಮಾಂತರ ಪ್ರದೇಶದ ಕಾರ್ಡುದಾರರಿಗೆ 3 ಲೀಟರಿನಂತೆ (ಪ್ರತಿ ಮಾಹೆ) ಸೀಮೆಎಣ್ಣೆ ಬಿಡುಗಡೆ. ಮಾಡುತ್ತಿದ್ದಾರೆ.

ತಾಲ್ಲೂಕಿಗೆ ಹಂಚಿಕೆ ಮಾಡಲಾದ ಸೀಮೆಎಣ್ಣೆಯನ್ನು ಚಿಲ್ಲರೆ ಮಾರಾಟಗಾರರು ಸಗಟು ಮಳಿಗೆಗಳಿಂದ ಎತ್ತುವಳಿ ಮಾಡಿ ಪಟ್ಟಣ: ಗ್ರಾಮಾಂತರ ಪ್ರದೇಶದ ಕಾರ್ಡುದಾರರಿಗೆ ನಿಗದಿಪಡಿಸಿದ ಪ್ರಮಾಣದಂತೆ ವಿತರಣೆ ಮಾಡುತ್ತಿದ್ದಾರೆ. ಆದರೆ ನೀಡುತ್ತಿರುವ ಪ್ರಮಾಣ ಸಾಕಾಗುವುದಿಲ್ಲವೆಂದು ಇನ್ನೂ ಹೆಚ್ಚಿಗೆ ನೀಡಬೇಕೆಂದು ಕಾರ್ಡುದಾರರ ಬೇಡಿಕೆಗೆ ಅನುಗುಣವಾಗಿ ಜಿಲ್ಲಾಧಿಕಾರಿಗಳು ಪ್ರಮಾಣ ಹೆಚ್ಚಿಸಲು ಬೇಡಿಕೆ ಸಲ್ಲಿಸಿರುತ್ತಾರೆ.

ರಾಜ್ಯದಲ್ಲಿ 98 ಲಕ್ಷ ಚೀಟಿದಾರರಿದ್ದು ರಾಜ್ಯದ ಬೇಡಿಕೆ 98,000 ಕಿ.ಲೀ.(ಮಾಹೆಯಾನ) ಆಗಿದೆ. ಆದರೆ ನಮ್ಮ ಬೇಡಿಕೆಗೆ ಎದುರಾಗಿ ಕೇಂದ್ರ ಸರ್ಕಾರ ಕೇವಲ,48,501 ಕಿ.ಲೀ. ಮಾತ್ರ ಹಂಚಿಕೆ ಮಾಡುತ್ತಿದೆ. (ಶೇಕಡಾ 50 ರಷ್ಟು ಮಾತ್ರ). ಗ್ರಾಮಾಂತರ : ನಗರ ಪಡಿತರ ಚೀಟಿದಾರರಿಗೆ ತಕ್ಕಷ್ಟು ಪ್ರಯಾಣದ ಸೀಮೆ ಎಣ್ಣೆ ವಿತರಿಸುವ ಉದ್ದೇಶದಿಂದ ಕನಿಷ್ಟ 75,000 ಚ ಕಿ.ಲೀ.ಸೀಮೆಎಣ್ಣೆಯನ್ನು ಹಂಚಿಕೆ ಮಾಡಬೇಕೆಂದು ಕೇಂದ್ರ ಸರ್ಕಾರವನ್ನು ಒತ್ತಾಯಿಸಲಾಗಿದೆ. ಆದರೆ ಕೇಂದ್ರ ಸರ್ಕಾರವು ಇದೂ ವರೆಗೂ ಹಂಚಿಕೆ ಪ್ರಮಾಣವನ್ನು ಹೆಚ್ಚಿಸಿಲ್ಲ.

ಪ್ರತಿ ಮಾಹೆ ವಿತರಣೆ ಮಾಡುತ್ತಿರುವ ಸೀಮೆಎಣ್ಣೆಯ ಬಗ್ಗೆ ಕಾರ್ಯ ನಿರ್ವಾಹಕ ಸಿಬ್ಬಂದಿಯು ಸಮರ್ಪಕವಾಗಿ ಹಂಚಿಕೆಯಾಗುವ ಬಗೆಗೆ ನಿಗಾವಹಿಸುತ್ತಿದ್ದು ಸಮರ್ಪಕಾಗಿ ವಿತರಿಸದ ಚಿಲ್ಲರೆ ಮಾರಾಟಗಾರರ ಮೇಲೆ ಪ್ರಕರಣಗಳನ್ನು ದಾಖಲು ಮಾಡಿರುತ್ತಾರೆ. ಆದರಂತೆ ಇದೂವರೆಗೂ 5 ಪ್ರಕರಣಗಳನ್ನು ದಾಖಲು ಮಾಡಿದ್ದು ಅದರಲ್ಲಿ ಒಂದು ಸೀಮೆಎಣ್ಣೆ ಲೈಸನ್ಸನ್ನು ರದ್ದುಪಡಿಸಲಾಗಿದೆ. 4 ಚಿಲ್ಲರೆ ಸೀಮೆಎಣ್ಣೆ ಲೈಸನ್ಸಗಳನ್ನು ಅಮಾನತ್ತಿನಲ್ಲಿಡಲಾಗಿದೆ.

ಸಾರ್ವಜನಿಕರಿಗೆ ಸೀಮೆಎಣ್ಣೆ ವಿತರಿಸುವಲ್ಲಿ ಯಾವುದೇ ತರದ ದೂರುಗಳಿಗೆ ಅವಕಾಶ ನೀಡದಂತೆ ಕ್ರಮವಹಿಸಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗುವುದು.

**ವಿಷಯ : ಉಡುಪಿ ತಾಲ್ಲೂಕಿನಲ್ಲಿ 1-4-94ರಂದು ಕಡಲ ದೋಣಿಯ ದುರಂತದಲ್ಲಿ ಮೃತಪಟ್ಟವರಿಗೆ ಪರಿಹಾರ.**

ಶ್ರೀ ವಸಂತ ವಿ.ಸಾಲಿಯಾನ (ಕಾಪು) : ಮಾನ್ಯ ಅಧ್ಯಕ್ಷರೇ, ಉಡುಪಿ ತಾಲ್ಲೂಕಿನ ಕಿಡಿಯೂರು ಗ್ರಾಮದ ಪಡುಕೆರೆ ಎಂಬಲ್ಲಿ ತಾರೀಖು 1-4-94ರಂದು

ಕಡಲ ದೋಣಿಯಲ್ಲಿ ಹೊಳೆ ದಾಟುತ್ತಿದ್ದ ಸಂದರ್ಭದಲ್ಲಿ ದೋಣಿ ದುರಂತದಿಂದ ಸುಲೋಚನ (ಸಂಜೀವ ಪೂಜಾರಿಯವರ ಮಗಳು), ಸುಲೋಚನ (ಕಮಲ ಪೂಜಾರಿಯವರ ಮಗಳು ಹಾಗೂ ದೇವಕಿ (ಜಗನ್ನಾಥ ಪಾಲರವರ ಗಳು) ಇವರುಗಳು ಮೃತಪಟ್ಟಿರುತ್ತಾರೆ. ಈ ದುರಂತದಲ್ಲಿ ಇತರೆ ಪ್ರಯಾಣಿಕರು ಪಾರಾಗಿದ್ದಾರೆ. ಈ ಬಗ್ಗೆ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಅಧಿಕಾರಿಗಳಿಗೆ ಎಲ್ಲಾ ವಿವರ ಹಾಗೂ ದಾಖಲೆಗಳನ್ನು ಸಲ್ಲಿಸಲಾಗಿದೆ. ಸಂತ್ರಸ್ತ ಕುಟುಂಬದವರು ತೀರಾ ಬಡವರಾಗಿದ್ದು ಇವರಿಗೆ ಯಾವೊಂದು ಪರಿಹಾರವನ್ನು ಸರ್ಕಾರದಿಂದ ದೊರಕಿರುವುದಿಲ್ಲ. ಇಂಥಹ ದುರಂತ ಬೇರೆ ಜಿಲ್ಲೆಯಲ್ಲಿ ನಡೆದಾಗ ಸಂತ್ರಸ್ತ ಕುಟುಂಬಕ್ಕೆ ತಲಾ ಒಂದು ಲಕ್ಷದಂತೆ ಪರಿಹಾರವನ್ನು ಈ ಹಿಂದಿನ ಸರ್ಕಾರ ನೀಡಿದೆ. ಈ ವಿಚಾರವನ್ನು ಸರ್ಕಾರ ಕೂಡಲೇ ಪರಿಶೀಲಿಸಿ ನೊಂದ ಕುಟುಂಬಗಳಿಗೆ ವಿಳಂಬವಿಲ್ಲದೆ ಪರಿಹಾರವನ್ನು ಮಂಜೂರು ಮಾಡುವಂತ ಸರ್ಕಾರವನ್ನು ಒತ್ತಾಯಿಸುತ್ತೇನೆ.

ಶ್ರೀ ಆರ್.ಎಲ್.ಜಾಲಪ್ಪ(ಕಂದಾಯ ಸಚಿವರು) ಮಾನ್ಯ ಅಧ್ಯಕ್ಷರೆ, ಮೃತಪಟ್ಟವರ ಹೆಸರುಗಳನ್ನು ಮಾನ್ಯ ಸದಸ್ಯರೇ ಹೇಳಿರುವುದರಿಂದ ಅದನ್ನು ಪುನ: ನಾನು ಹೇಳುವ ಅವಶ್ಯಕತೆ ಇಲ್ಲ. ದೋಣಿ ಚಾಲಕನಾಗಿದ್ದ ಯೋಗಿಶ್ ಪಾಂಡು ಕೆದಿಲಾಯ, 22 ವರ್ಷ ಅವನಿಗೆ, ಅವನ ನಿರ್ಲಕ್ಷ್ಯ ತನದಿಂದ ಈ ದುರಂತ ನಡೆದಿದೆಯೆಂದು ಈಗಾಗಲೇ ಪೋಲೀಸರು ಅವನ ಮೇಲೆ ಸೆಕ್ಷನ್ 280, 304 ಎ ಮೇಲೆ ಮೊಕದಮೆ ಹೂಡಿದ್ದಾರೆ. ಈ ಘಟನೆ ಪ್ರಕೃತಿ ವಿಕೋಪದ ಅಡಿಯಲ್ಲಿ ಬರುವುದಿಲ್ಲವಾದ್ದರಿಂದ ಅವನಿಗೆ ಯಾವುದೇ ರೀತಿಯ ಪರಿಹಾರ ಕೊಡುವುದಕ್ಕೆ ಸಾಧ್ಯವಿಲ್ಲ. ಅವನ ಮೇಲೆ ಪೋಲೀಸ್ ಕೇಸ್ ಇದೆ. ಅದರ ಮೇಲೆ ಕ್ರಮ ತೆಗೆದುಕೊಳ್ಳಬಹುದು.

**( ೯ ) ವಿಷಯ : ಬಿಜಾಪು ರನಗರದ ಕುಡಿಯುವ ನೀರಿನ ಸಮಸ್ಯೆಯಿಂದ ಜನರಿಗೆ ತೊಂದರೆ**

ಶ್ರೀ ಬಸವನಗೌಡ ಪಾಟೀಲ್ (ಬಸವನ ಬಾಗೇವಾಡಿ) : ಸನ್ಮಾನ್ಯ ಅಧ್ಯಕ್ಷರೇ, ವಿದ್ಯುತ್ ಅಭಾವ ಮತ್ತು ಕಡಿಮೆ ಒಲ್ಟೇಂ ಜ್‌ನಿಂದಾಗಿ ಬಿಜಾಪುರ ನಗರದ ಕುಡಿಯುವ ನೀರಿನ ವ್ಯವಸ್ಥೆಗೆ ತೀವ್ರತೊಂದರೆಯಾಗಿ ಐದಾರು ದಿನಗಳಿಗೊಮ್ಮೆ ನಗರದಲ್ಲಿ ನೀರು ಬರುವಂತಾಗಿದೆ. ಇದರಿಂದಾಗಿ ಸಾರ್ವಜನಿಕರಿಗೆ ಬಹಳ ತೊಂದರೆಯಾಗಿರುತ್ತದೆ. ಆದುದರಿಂದ ಮಾನ್ಯ ವಿದ್ಯುತ್ ಸಚಿವರು ಈ ಬಗ್ಗೆ ಸಂಬಂಧಪಟ್ಟ ಕೆ.ಇ.ಬಿ. ಅಧಿಕಾರಿಗಳಿಗೆ ಸೂಕ್ತ ನಿರ್ದೇಶನ ಕೊಟ್ಟು ತೊಂದರೆಯನ್ನು ನಿವಾರಿಸಬೇಕು ಹಾಗೂ ವಿಶೇಷವಾಗಿ ಪಂಪ್ ಹೌಸ್‌ಗಳಿಗೆ 24 ಗಂಟೆಗಳ ಕಾಲವೂ ನಿರಂತರವಾಗಿ ನೀರು ಸರಬರಾಜು ಮಾಡುವಂತೆ ಸೂಕ್ತ ಆದೇಶ ನೀಡಬೇಕೆಂದು ತಮ್ಮಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಆರ್.ಎಲ್.ಜಾಲಪ್ಪ : ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರು ಪ್ರಸ್ತಾಪಿಸಿದ ವಿಚಾರವನ್ನು ಮಾನ್ಯ ಸಚಿವರ ಗಮನಕ್ಕೆ ತಂದು ಅವರಿಗೆ ಉತ್ತರವನ್ನು ದೊರಕಿಸಿ ಕೊಡುತ್ತೇನೆ.

ಶ್ರೀ ಎ.ಟಿ.ರಾಮಸ್ವಾಮಿ : **(ಈ) ಅರಕಲ ಗೂಡು ತಾಲ್ಲೂಕಿನ ಕೋಣನೂರಿನಲ್ಲಿ ಮೀನುಗಾರರಿಗೆ ವಸತಿಗೃಹ ನಿರ್ವಹಣೆ :** ಮಾನ್ಯ ಅಧ್ಯಕ್ಷರೇ, ಅರಕಲಗೂಡು ತಾಲ್ಲೂಕು ಕೊಣನೂರು ಪಟ್ಟಣದಲ್ಲಿ ಮಿನುಗಾರರಿಗೆ ಮೀನುಗಾರಿಕೆ ಇಲಾಖೆಯ ವತಿಯಿಂದ ವಸತಿಗೃಹ ನಿರ್ಮಾಣ ಮಾಡುತ್ತೇವೆ ಎಂದು ಸುಮಾರು ಒಂದು ವರ್ಷದಿಂದ ಸಂಬಂಧಪಟ್ಟ ದಾಖಲೆಗಳನ್ನು ತೆಗೆದುಕೊಂಡಿದ್ದರೂ ಕೂಡ ಇನ್ನೂ ಕೂಡ ಮನೆಗಳನ್ನು ಕಟ್ಟಿ ಕೊಡದೇ ಇರುವುದರ ಬಗ್ಗೆ ಮಾನ್ಯ ಸಚಿವರ ಗಮನಸೆಳೆಯುತ್ತಾ ತುರ್ತಾಗಿ ವಸತಿಗಳನ್ನು ನಿರ್ಮಿಸಿ ಕೊಡಬೇಕೆಂದು ಮಾನ್ಯ ಸಚಿವರಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ಜಯಪ್ರಕಾಶ್ ಹೆಗ್ಡೆ (ಮೀನುಗಾರಿಕಾ ರಾಜ್ಯ ಸಚಿವರು) : ಮಾನ್ಯ ಅಧ್ಯಕ್ಷರೇ, ಅರಕಲಗೂಡು ತಾಲ್ಲೂಕಿನಲ್ಲಿರುವ ಕೋಣನೂರು ಪಟ್ಟಣದಲ್ಲಿನ ವಸತಿ ರಹಿತ ಮೀನುಗಾರರಿಗೆ ಮೀನುಗಾರಿಕಾ ಇಲಾಖೆಯ ವತಿಯಿಂದ ಕೇಂದ್ರ ಸರಕಾರದವರ ನೆರವಿನಿಂದ 38 ಮನೆಗಳನ್ನು ನಿರ್ಮಿಸಲು ದಿನಾಂಕ : 24-3-1995ರಂದು ಭಾರತ ಸರಕಾರವು ಮಂಜೂರಾತಿ ನೀಡಿ, ಕೇಂದ್ರದ ಪಾಲನ್ನು ಬಿಡುಗಡೆ ಮಾಡಿರುತ್ತದೆ. ಆರ್‌ಟಿವಿ ತಡವಾಗಿ ತಲುಪಿದ್ದರಿಂದ 1994-95ನೇ ಸಾಲಿನಲ್ಲಿ ರಾಜ್ಯ ಸರಕಾರವು ಮಂಜೂರಾತಿಯನ್ನು ನೀಡಲು ಸಾಧ್ಯವಾಗಲಿಲ್ಲ. ಆದ್ದರಿಂದ ಭಾರತ ಸರಕಾರದ ಪಾಲಿಗೆ ರಾಜ್ಯಸರ್ಕಾರದ ಪಾಲನ್ನು 1995-96ನೇ ಸಾಲಿನಲ್ಲಿ ಬಿಡುಗಡೆ ಮಾಡಿ ಕೋಣನೂರಲ್ಲಿ 38 ವಸತಿಗೃಹಗಳನ್ನು ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲು ಕ್ರಮ ತೆಗೆದುಕೊಳ್ಳಲಾಗುವುದು. 1994-95ನೇ ಸಾಲಿನಲ್ಲಿ ರಾಜ್ಯಸರಕಾರದಿಂದ ಒಟ್ಟು 645 ಮನೆಗಳನ್ನು ಕುಡಿಯುವ ನೀರಿನ ಸೌಲಭ್ಯವನ್ನು ಸುಮಾರು 2.3 ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಪ್ರಸ್ತಾವನೆಯನ್ನು ಕೇಂದ್ರ ಸರಕಾರಕ್ಕೆ ಸಲ್ಲಿಸಲಾಗಿತ್ತು. ಆದರೆ ಕೇಂದ್ರ ಸರಕಾರವು 1994-95ನೇ ಸಾಲಿನಲ್ಲಿ 62.55ಲಕ್ಷ ರೂಪಾಯಿಗಳನ್ನು ಮಾತ್ರ ಬಿಡುಗಡೆ ಮಾಡಿ 402 ಮನೆಗಳನ್ನು ಮತ್ತು 18 ಕೊಳವೆ ಬಾವಿಗಳನ್ನು ರಾಜ್ಯದ ಐದು ಜಿಲ್ಲೆಗಳಾದ ಮೈಸೂರು ಶಿವಮೊಗ್ಗ, ಬಿಜಾಪುರ ಮತ್ತು ಹಾಸನ ಜಿಲ್ಲೆಗಳ ಮತ್ತು ಬೆಳಗಾಂ ಜಿಲ್ಲೆಯ ಒಟ್ಟು 20 ಗ್ರಾಮಗಳಲ್ಲಿ ನಿರ್ಮಿಸಲು ಮಂಜೂರಾತಿ ನೀಡಿದ್ದು ವಿವರವನ್ನು ಈ ಕೆಳಗೆ ನೀಡಲಾಗಿದೆ.

ಮೈಸೂರು 40 ಮನೆಗಳು 2 ಕೊಳವೆಬಾವಿಗಳು

ಶಿವಮೊಗ್ಗ 20 ಮನೆಗಳು

ಬೆಳಗಾಂ 14 ಮನೆಗಳು 1 ಕೊಳವೆಬಾವಿ

ಸದಲಾಗ 25 ಮನೆಗಳು 1 ಕೊಳವೆಬಾವಿ

ಗೊರವನಕೊಳ್ಳ, ಸೋಮಪುರ, ಬಂಡಾರ ಹಳ್ಳಿ :

50 ಮನೆಗಳು 2 ಕೊಳವೆಬಾವಿ

ಬಿಜಾಪುರ (ಬರಗುಡಿ) 20 ಮನೆಗಳು 1 ಕೊಳವೆಬಾವಿ

ರಾಜರಾಮತೀರ್ಥ 40 ಮನೆಗಳು 2 ಕೊಳವೆಬಾವಿಗಳು

ಕೇಡಗಿ 20 ಮನೆಗಳು 1 ಕೊಳವೆಬಾವಿ

ಇಂಗಳಗೇರಿ 41ಮನೆಗಳು 2 ಕೊಳವೆಬಾವಿಗಳು

ಬಾವೂರು 22 ಮನೆಗಳು 1 ಕೊಳವೆಬಾವಿ

ಜಂಬರದಿನ್ನಿ 18 ಮನೆಗಳು 1 ಕೊಳವೆಬಾವಿ

ಹಾಸನ

ಜಗದಗೆರೆ

ಕನ್ನಾಪುರ,

ಚಿಕ್ಕಯರಗನಾಳು

ಕಂಕೇರಿ : ನಾಗರಕೆರೆ 50 ಮನೆಗಳು 4 ಕೊಳವೆಬಾವಿಗಳು

ಕೋಣನೂರಿನಲ್ಲಿ 38 ಮನೆಗಳು

ಒಟ್ಟು 402 ಮನೆಗಳು 18 ಕೊಳವೆಬಾವಿಗಳು. 1995-96ನೇ ಸಾಲಿನಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕೆ ಕೇಂದ್ರದ ಪಾಲು 110 ಲಕ್ಷಗಳನ್ನು ಸೇರಿದಂತೆ 220 ಲಕ್ಷಗಳ ಆಯವ್ಯಯವನ್ನು ಮಾಡಿ ಕೊಡಲಾಗಿದ್ದು 402 ಮನೆಗಳ ನಿರ್ಮಾಣಕ್ಕೆ ಒಟ್ಟು 123.10ರೂಪಾಯಿಗಳು ವೆಚ್ಚವಾಗಲಿದ್ದು ಇದನ್ನು ಪೂರ್ಣವಾಗಿ ಭರಿಸಲಾಗುವುದು. ಉಳಿದ 96.95ಲಕ್ಷಗಳನ್ನು ಹೊಸ ವಸತಿಗೃಹಗಳ ಮತ್ತು ಕೊಳವೆಬಾವಿಗಳ ಮತ್ತು ಸಮುದಾಯ ಭವನಗಳ ನಿರ್ಮಾಣಕ್ಕೆ ಮತ್ತು ಹಲವು ಹಿಂದಿನ ಪ್ರಕರಣಗಳ ಹೆಚ್ಚುವ ವೆಚ್ಚವನ್ನು ಭರಿಸಲಾಗುವುದು.

ಅಧ್ಯಕ್ಷರು : ಈಗ ರಾಜ್ಯಪಾಲರ ಭಾಷಣದ ಮೇಲಿನ ಮುಂದುವರಿದ ಚರ್ಚೆ.

ಶ್ರೀ ಹೆಚ್.ಎನ್. ನಂಜೇಗೌಡ (ಬಸವನಗುಡಿ) ಮಾನ್ಯ ಅಧ್ಯಕ್ಷರೇ, ಮಾನ್ಯ ರಾಜ್ಯಪಾಲರ ಭಾಷಣಕ್ಕೆ ಶ್ರೀಮಾನ್ ನಾಗೇಗೌಡರು ಮಂಡಿಸಿರತಕ್ಕಂಥ ವಂದನಾ ನಿರ್ಣಯ, ಅವರ ಮೇಲೆ ಚರ್ಚೆ. ಸಾಮಾನ್ಯವಾಗಿ ರಾಜ್ಯಪಾಲರ ಭಾಷಣ it is a policy document.

ಸರಕಾರ ನಡೆಸತಕ್ಕಂಥವರಿಗೆ ಈ ಪಾಲಿಸಿ ಡಾ.ಕ್ಯುಮೆಂಟ್ಸ್ ಎಂದೇನು ನಾವು ಹೇಳುತ್ತೇವೆ, ಇದಕ್ಕೆ ಇಟ್ಟುಕೊಳ್ಳಬೇಕಾದಂಥ, ಕೊಡಬಹುದಾದಂಥ ಪಾವಿತ್ರತೆಯನ್ನು ಇಟ್ಟುಕೊಂಡು ಕೊಡಬಹುದಾದಂಥ ಗೌರವವನ್ನು ಕೊಡುವುದಾದರೆ, ಈ ನಿರ್ಣಯವನ್ನು ಪಾಸ್ ಮಾಡಿಕೊಂಡು. ಇದರ ಆಧಾರದ ಮೇಲೆ ನಾವು ಬಜೆಟನ್ನು ಪಾಸ್ ಮಾಡಬೇಕು ಈ ಪಾಲಿಸಿ ಡಾಕ್ಯುಮೆಂಟ್‌ನ ಆಧಾರದ ಮೇಲೆ ಅವರ ಬಜೆಟ್ ಮಂಡನೆಯಾಗ ಬೇಕು. ಧಾಖಿಲಾತಿ ಹೋಗಲಿ ಎಂದು ನಾನು ಇದನ್ನು ಹೇಳುತ್ತಾ ಇದ್ದೇನೆ. ಬಜೆಟ್‌ನ್ನು ಆಗಲೇ ಪಾಸ್ ಮಾಡಿಕೊಂಡಿದ್ದೇವೆ, ರಾಜ್ಯಪಾಲರ ಭಾಷಣದ ಮೇಲೆ ವಂದನಾ ನಿರ್ಣಯವನ್ನು ಈಗ...

ಶ್ರೀ ಕೆ.ಎನ್.ನಾಗೇಗೌಡ : ಮಾನ್ಯ ಅಧ್ಯಕ್ಷರೇ, ಗವರ್ನರ್‌ರವರ ಒಂದು ಭಾಷಣ ಆಗಿದೆ. ಇದು ಹೊಸ ಸರಕಾರದ ಎರಡನೆಯ ರಾಜ್ಯಪಾಲರ ಭಾಷಣ. ಗವರ್ನರ್ ಭಾಷಣದಲ್ಲಿ ಪಾಲಿಸಿ ಮ್ಯಾಟರ್ಸ್‌ನ್ನು ಹೇಳಿ ಡಾಕ್ಯೂಮೆಂಟ್ಸ್‌ನ್ನು ಕೊಟ್ಟು ಆ ಮೇಲೆ ಬಜೆಟ್‌ನ್ನು ಇಟ್ಟು, ಆ ಮೇಲೆ ಇದನ್ನು ಮಂಡಿಸಿದ್ದೇವೆ...

ಶ್ರೀ ಹೆಚ್.ಎನ್.ನಂಜೇಗೌಡ: ಮಾನ್ಯ ಅಧ್ಯಕ್ಷರೇ, ನಾನು ಏನು ಹೇಳಲು ಇಚ್ಛೆ ಪಟ್ಟೆ ಅಂದರೆ, ಸರಕಾರದಲ್ಲಿ ಇಂಥಹ ವಿಚಾರಗಳ ಬಗ್ಗೆ ಎಚ್ಚರಿಕೆ ವಹಿಸಬೇಕು. ರಾಜ್ಯಪಾಲರ ಭಾಷಣ ಅಂದರೆ ಮಾನ್ಯ ವಾಟಾಳ್ ನಾಗರಾಜ್‌ರವರು ಹರಿಯ

ತಕ್ಕಂಥ ಪೇಪರ್ ಆಗಬಾರದು. ಪಾಲಿಸಿ ಡಾಕ್ಯುಮೆಂಟ್ ಆಗಬೇಕು. ಸರಕಾರ ಏನು ಮಾಡುತ್ತಿದೆ, ಯಾವ ದಿಕ್ಕಿಗೆ ಹೋಗುತ್ತಾ ಇದೆ, ಏನು ಮಾಡುತ್ತದೆ ಎಂಬುದನ್ನು ಅದರಲ್ಲಿ ಸೇರಿಸಬೇಕು. ಅದರ ಮೇಲೆ ನಿಮ್ಮ ಸರಕಾರದವರು ನಿರ್ಧರಿಸಿದ ಆಯವ್ಯಯಗಳನ್ನು ತಿಳಿಸಬೇಕು. ಖರ್ಚುವೆಚ್ಚಗಳನ್ನು ಮತ್ತು ಆದಾಯಗಳನ್ನು ರೂಪಿಸ-ಬೇಕಾದಂಥಾದ್ದು, ಏಕೆಂದರೆ ಆಧ್ಯತೆಗಳು ಬೇಕಲ್ಲ? ಆ ದೃಷ್ಟಿಯಿಂದ ನಾನು ಹೇಳಿದೆ. ದುರಾದೃಷ್ಟವಶಾತ್ ಇವರ ಸರಕಾರ ಇನ್ನೂ ಟೇಕ್ ಆಫ್ ಆಗಲಿಲ್ಲ. ಈಗಾಗಲೇ 100 ದಿನಗಳು ಆಗಿ ಹೋಯಿತು. ಪತ್ರಿಕೆಗಳಲ್ಲಿ ಓದಿದ್ದೇನೆ.,ನಿಮ್ಮ ಸರಕಾರ ಟೇಕ್‌ಆಫ್ ಮಾಡದಿದ್ದರೂ ಇವರ ಹೆಲಿಕಾಪ್ಟರ್‌ನ ಫ್ಲೈಟ್ ಊಟಕ್ಕಾಗಿ 50 ಸಾವಿರ ರೂಪಾಯಿಗಳನ್ನು ಖರ್ಚು ಮಾಡುತ್ತಾನೆ. ಅದು ಪತ್ರಿಕೆಯಲ್ಲಿ ಬಂದಿದೆ. ಅದಾದರೂ ಸಾಧನೆಯಾಗಿದೆ ನಾನು ಏತಕ್ಕೆ ಇದನ್ನು ಹೇಳುತ್ತಾ ಇದ್ದೇನೆ ಎಂದರೆ ಪ್ರಾರಂಭದಲ್ಲಿಯೇ ಎಷ್ಟು ಬೇಜವಾಬ್ದಾರಿಯಿಂದ ಇವರ ಸರಕಾರ ನಡೆದಿದೆ ಎಂಬುದಕ್ಕೆ ಇದೊಂದು ಉದಾಹರಣೆ. ಮೈಸೂರಿನಿಂದ ಫ್ಲೈಟ್ ಊಟಕ್ಕಾಗಿ ಬೆಂಗಳೂರಿಗೆ ಬಂದು ವಾಪಸ್ ಹೋದ ಅದಕ್ಕಾಗಿ 50 ಸಾವಿರ ರೂಪಾಯಿಗಳ ಖರ್ಚು ಎಂಬಿತ್ಯಾದಿ ವಿವರಗಳು ಪತ್ರಿಕೆಗಳಲ್ಲಿ ಬಂದಿತ್ತು. ಫ್ಲೈಟ್‌ನ ಊಟಕ್ಕಾಗಿ 50 ಸಾವಿರ ರೂಪಾಯಿಗಳನ್ನು ಖರ್ಚು ಮಾಡಿದ ಸರಕಾರವು ಅಂತೂ ಟೇಕ್‌ಆಫ್ ಆಗಲಿಲ್ಲ. ''ಕೃಷ್ಣಾ ಕಾವೇರಿಯ ಮೇಲಾಣೆ'' ಇದನ್ನು ಯಾರು ಹೇಳಿದರು, ಜಾಲಪ್ಪನವರೇ?

ಶ್ರೀ ಸಿ.ಬೈರೇಗೌಡ(ಕೃಷಿಸಚಿವರು) : ವಿದ್ಯಾರ್ಥಿಗಳಿಗೆ ಪ್ರಶ್ನೆ ಪತ್ರಿಕೆಯಲ್ಲಿ ಬರುವ ಹಾಗೆ ಯಾರು ಯಾರಿಗೆ ಯಾವ ಸಂದರ್ಭದಲ್ಲಿ ಎಂದು ಪ್ರಶ್ನೆ ಕೇಳಿದ ಹಾಗೆ ಇದೆ...

ಶ್ರೀ ಹೆಚ್.ಎನ್.ನಂಜೇಗೌಡ : ''ಕೃಷ್ಣಾ ಕಾವೇರಿಯ ಮೇಲಾಣೆ'' ಇದು ಚುನಾವಣಾ ಪ್ರಣಾಳಿಕೆ. ಪ್ರಣಾಳಿಕೆಯಲ್ಲಿಯೇ ಮೋಸ ಮಾಡತಕ್ಕಂಥ ಪದದಿಂದಲೇ ಪ್ರಾರಂಭ ಮಾಡಿದ್ದಾರೆ. ಇವರು ಕೃಷ್ಣಾಕ್ಕೆ ಮತ್ತು ಕಾವೇರಿಗೆ ಏನು ಮಾಡಿದ್ದಾರೆ ಅದು ಗೊತ್ತಾಗಬೇಕಾಗಿದೆ. ನಾನು ಇದನ್ನು ಏತಕ್ಕೆ ಹೇಳುತ್ತಿದ್ದೇನೆ ಎಂದರೆ ಚುನಾವಣೆ ನಡೆದು ಇವರು ಅಧಿಕಾರಕ್ಕೆ ಬಂದರು. ಎಂಥ ಸಂದರ್ಭದಲ್ಲಿ ಚುನಾವಣೆ ಬಂತು? ಸನ್ಮಾನ್ಯ ಖಾರ್ಗೆಯವರು ನಾನು ಹೇಳತಕ್ಕಂಥ ಮಾತುಗಳಿಗೆ ಸಿಟ್ಟಿಗೇಳುವುದಿಲ್ಲವೆಂದು ನಾನು ತಿಳಿದು ಕೊಂಡಿದ್ದೇನೆ. ಅವರು ಇವರು ಅಧಿಕಾರಕ್ಕೆ ಬರುವುದಕ್ಕೆ ಅನುವು ಮಾಡಿಕೊಟ್ಟರು. ಯಾವ ಪರಿಸ್ಥಿತಿಯಲ್ಲಿ ನಾವು ಚುನಾವಣೆಗೆ ಹೋದೆವು ಎಂಬುದನ್ನು ಸ್ವಲ್ಪ ವಿಶ್ಲೇಷಣೆ ಮಾಡಿಕೊಳ್ಳೋಣ. ಆಗ ಇದ್ದಂಥ ಪರಿಸ್ಥಿತಿ ಅಂದರೆ ರಾಜಕೀಯ ಅಸ್ಥಿರತೆ, ಆರ್ಥಿಕ ದಿವಾಳಿತನ, ಅಭಿವೃದ್ಧಿ ಕಾರ್ಯಗಳ ಸ್ಥಗಿತ, ಭ್ರಷ್ಟಾಚಾರ, collapse of the law and order situation ಇದನ್ನು ನೋಡಿ ದೇಶದ ಜನರು ಇವರಿಗೆ ಓಟು ಕೊಟ್ಟರು. ಇದರಲ್ಲಿ ಇವರು ಏನಾದರೂ ರಿಪೇರಿ ಮಾಡಿದ್ದಾರೋ? ರಾಜಕೀಯ ಅಸ್ಥಿರತೆ ಪ್ರಾರಂಭದ ದೆಸೆಯಲ್ಲಿಯೇ ಕಾಡುತ್ತಾ ಇದೆ. ಭ್ರಷ್ಟಾಚಾರ, ಅದೇನು ಅಂದರೆ ಇವರು ಪದೇಪದೇ ಹೇಳುತ್ತಿರುತ್ತಾರೆ . ನಾನು ಅವತ್ತೇ ಹೇಳಿದೆ, ಮೊಯಿಲಿಯವರು ಹಾಕಿಕೊಟ್ಟಂತಹ ಮಾರ್ಗದಲ್ಲಿ ನಾವು ಸಾಗುತ್ತೇವೆ ಎಂದು ಹೇಳಿಕೆ ಕೊಟ್ಟುಬಿಟ್ಟರೆ ನಾವಿಲ್ಲಿ ಹೇಳೋಕೆ ಹೋಗುವುದಿಲ್ಲ, ಅಯ್ಯೋ ಬಿಡಿ

IV.F.20

ಸಾರ್, ಇವೆಲ್ಲಾ ಹೇಳೋಕೆ ಹೋಗ್ತೀರಿ, ಅವರು ಹೇಗಿದ್ದರೂ ಮೊಯಿಲಿರವರು ಹೋದ ಹಾದಿಲೆ ಹೋಗ್ತಾರೆ ಎಂದು ಹೇಳುತ್ತೇವೆ; ಮುಂದೆ ಬರುತ್ತೇನೆ ಅದಕ್ಕೆ. ಅಧ್ಯಕ್ಷರೇ, ಈ ರಾಜಕಾರಣಗಳು ಅಂದರೆ ಅಂಗಡಿಗಳು ಇದ್ದ ಹಾಗೆ ಸಿಗರೇಟು ಬೇಕು, ಸಿಗರೇಟು ಅಂಗಡಿಗೆ ಹೋಗುತ್ತಾರೆ, ಕಾಫಿ ಕುಡಿಯಬೇಕು ಚಹಾ ಅಂಗಡಿಗೆ ಹೋಗುತ್ತಾರೆ, ವಿಸ್ಕಿ ಕುಡಿಯಬೇಕು ಬಾರ್‌ಗೆ ಹೋಗುತ್ತಾರೆ. ಬಟ್ಟೆ ತೆಗೆದುಕೊಳ್ಳಬೇಕು, ಜವಳಿ ಅಂಗಡಿಗೆ ಹೋಗುತ್ತಾರೆ, ಕೆಲವು ವ್ಯಕ್ತಿಗಳಿಗೆ ಕೆಲವು ರೂಢಿಯಾಗಿಬಿಟ್ಟಿರುತ್ತವೆ. ಆ ವ್ಯಕ್ತಿಗಳನ್ನು ಜನ ಗುರುತು ಮಾಡಿರುತ್ತಾರೆ, ಈ ಅಂಗಡಿ ಗುರುತು ಮಾಡುವ ಹಾಗೆ, ರಾಜಕೀಯದಲ್ಲಿರುವ ಮುಖಂಡರನ್ನೂ ಗುರುತು ಮಾಡಿರುತ್ತಾರೆ. ಪಾಟೀಳರು ಅವರ ಗ್ರಹಚಾರ ಚೆನ್ನಾಗಿ ಮುಖ್ಯಮಂತ್ರಿಗಳಾಗಿಬಿಟ್ಟರು, ಆಗ ಜನ ಏನು ನಿರೀಕ್ಷೆ ಮಾಡುತ್ತಾರೆ- ಕನ್ನಡರಾಜ್ಯ. ಹೆಗಡೆಯವರು ಮುಖ್ಯಮಂತ್ರಿಗಳಾದರೆ ಏನು ಮಾಡುತ್ತಾರೆ, ರಾಷ್ಟ್ರ ರಾಜಕಾರಣದಲ್ಲಿ ಓಡಾಡುತ್ತಾರೆ, ಕೇರಳಕ್ಕೆ ಹೋಗುತ್ತಾರೆ, ದಿಲ್ಲಿಗೆ ಹೋಗುತ್ತಾರೆ, ಕರ್ನಾಟಕದಲ್ಲಿ ಇರೋದಿಲ್ಲ, ಪ್ರತೀತಿ-ಜನ ಗುರುತು ಮಾಡಿರುವಂಥದು. ಮೊಯಿಲಿಯವರು ಅವರು ಹೇಳುತ್ತಾರೆ, ನನ್ನನ್ನು ಸುಳ್ಳುಗಳ ಸರಕಾರ ಎಂದು ಟೈಟ್ಲ್ ಇದೆ, ಸುಳ್ಳು ಹೇಳಿಕೊಂಡೇ ಕಾಲ ಕಳೆಯುತ್ತಾರೆ, ಗುರುತು ಮಾಡಿಬಿಟ್ಟಿದ್ದಾರೆ ಜನ ನಮ್ಮನ್ನು. ದೇವೇಗೌಡರನ್ನು ಹೇಗೆ ಗುರುತು ಮಾಡಿದರು? ನಿಮ್ಮ ಪಕ್ಷಕ್ಕೆ ಏನು ಸಹಾಯ ಆಯಿತು, ನೀವೇನು ಮಾಡಿದಿರಿ, ಬೇಕಲ್ಲಾ ಹೆಗಡೆಯವರು ಅಸೆಂಬ್ಲಿ ಚುನಾವಣೆಗೆ ನಿಲ್ಲಲಿಲ್ಲ. ಪತ್ರಿಕೆಯವರೆಲ್ಲ ಬರೆದರು, ದೇವೇಗೌಡರಿಗೆ ಲೈನ್ ಕ್ಲಿಯರ್ ಆಯ್ತು ಇವರೇ ಮುಖ್ಯಮಂತ್ರಿ ಮಣ್ಣಿನ ಮಗ ಬಂದಾಯ್ತು, ಕೊಟ್ಟರು ಜನ, ಕೋಲಾರದಿಂದ ಹೊರಟರೆ ಮಡಿಕೇರಿ ತಲುಪುವವರೆಗೆ ಒಂದೂ ಕಾಂಗ್ರೆಸ್ ಗೆಲ್ಲಲಿಲ್ಲ. ನಾವೇನೋ ಪಟ್ಟಣವಾಸದಿಂದ, ಸ್ವಲ್ಪ ಸರ್ವಸೆಂಟರ್ ಅಂತ ಅಲ್ಲಿ ಇಲ್ಲಿ ಬಂದಿರಿ. ಎಲ್ಲಾ ನೀವೇ ಬಂದಿರಿ. ಏಕೆ ಕೊಟ್ಟರು ಜನ? ಮಣ್ಣಿನ ಮಗ ಎಂದು ಕೊಟ್ಟರು ಅಲ್ಲವೇ? ದೇವೇಗೌಡರು ಮುಖ್ಯಮಂತ್ರಿಯಾಗುತ್ತಾರೆ ಎಂದು ಕೊಟ್ಟರು. ನೀವೇನು ಮಾಡಿದ್ದೀರಿ ಈಗ? ನಿಮ್ಮ ಆದ್ಯತೆಗಳೇನು? ಮಣ್ಣಿನ ಮಗನ ಸರ್ಕಾರ ಅಧ್ಯತೆಗಳೇನಿರಬೇಕು? ಇವತ್ತು ನೀರಾವರಿ ಬಗ್ಗೆ ಬರೆದಿದ್ದೀರಿ, ನಿಮ್ಮ ಪಾಲಿಸಿ ಡಾಕ್ಯುಮೆಂಟ್ ಎಂದು ಏನು ಬರೆದಿದ್ದೀರಿ, ಇದರಲ್ಲಿ ಏನೇನೂ ಇಲ್ಲ. ಏನೂ ಸಭೆಯ ಮುಂದೆ ಮಂಡಿಸಬೇಕು, ನಿಯಮಾವಳಿಗನುಸಾರ ಈ ರಾಜ್ಯಪಾಲರ ಭಾಷಣ ಇಲ್ಲದೆ ಏನೂ ಮಾಡುವುದಕ್ಕಾಗುವುದಿಲ್ಲ. ಜವಾಬ್ದಾರಿಯನ್ನು ಪೂರೈಸುವುದಕ್ಕೆ ಕೊಟ್ಟಂಥ ಡಾಕ್ಯುಮೆಂಟ್. ಪ್ರಾಮಾಣಿಕವಾಗಿ ಇದನ್ನು ನಾವು ಪಾಲಿಸಿ ಡಾಕ್ಯುಮೆಂಟಾಗಿ ಕೊಡುತ್ತೇವೆ ಎಂದು ಹೇಳಲೇ ಇಲ್ಲ. ನಿಮ್ಮ ಚುನಾವಣಾ ಪ್ರಣಾಳಿಕೆಯನ್ನು ಇದನ್ನು ಅಕ್ಕಪಕ್ಕದಲ್ಲಿಟ್ಟು ಓದಿದರೆ ಇದಕ್ಕೂ ಅದಕ್ಕೂ ಏನೇನೂ ಸಂಬಂಧ ಇಲ್ಲ. ಅದನ್ನು ಹೇಳುವುದಕ್ಕೆ ಹೋಗುವುದಿಲ್ಲ. ಏಕೆಂದರೆ ಚುನಾವಣಾ ಪ್ರಣಾಳಿಕೆಗಳು ಇತ್ತೀಚಿನ ವರ್ಷಗಳಲ್ಲಿ ಜನಕ್ಕೆ ಮೋಸ ಮಾಡತಕ್ಕಂಥ ಡಾಕ್ಯುಮೆಂಟ್ಸ್‌ಎಂದು ಪ್ರತೀತಿ ಆಗಿಬಿಟ್ಟಿದೆ. ನಾವು ಇದನ್ನು ಉದ್ದಕ್ಕೂ ನೋಡಿಕೊಂಡು ಬಂದಿದ್ದೇವೆ. ಬಹುಶಃ ಉತ್ತರ ಪ್ರದೇಶ, ಮಧ್ಯಪ್ರದೇಶ, ರಾಜಸ್ಥಾನ, ಹಿಮಾಚಲ ಪ್ರದೇಶ, ಈಗ ಗುಜರಾತ್ ಎಲ್ಲೆಲ್ಲಿ ಬಿಜೆಪಿ ಸರ್ಕಾರ ಬಂದಿದೆಯೋ ಚುನಾವಣಾ

ಪ್ರಣಾಳಿಕೆಗಳ ಬಗ್ಗೆ ಆದ್ಯತೆ ಕೊಟ್ಟು ಅದು ಪಾಲಿಸಿ ಡಾಕ್ಯುಮೆಂಟ್ ಚುನಾವಣಾ ಪ್ರಣಾಳಿಕೆ ಎಂದೇ ಹೇಳಿದರು. ಅದನ್ನೇ ರಾಜ್ಯಪಾಲರ ಭಾಷಣದ ಮೂಲಕ ಚಾಚೂತಪ್ಪದೆ ಹಾಕಿಕೊಂಡು ಆಯವ್ಯಯವನ್ನು ಕೂಡ ಅದರಂತೆಯೇ ರೂಢಿಸಿ ಮಾಡಿದ್ದು ಇರಲಿ. ನಿಮ್ಮ, ಮಣ್ಣಿನ ಮಕ್ಕಳ ಆಧ್ಯತೆ ಏನು ಇಂಟರ್‌ನ್ಯಾಷನಲ್ ಏರ್‌ಪೋರ್ಟ್ ಇದಕ್ಕೆ ಭಾರಿ ಅಧ್ಯತೆ ಇವರಿಗೆ. ಮೈಸೂರು- ಬೆಂಗಳೂರು ಎಕ್ಸ್‌ಪ್ರೆಸ್‌ವೇ, ಹೈವೇ ಪಾಪ, ನಮ್ಮ ಉಪಮುಖ್ಯಮಂತ್ರಿಗಳು ಹೇಳುತ್ತಿದ್ದರು, ಅವರಿಗೆ ತಮಾಷೆ, ಅವರು ಏನು ತಿಳಿದುಕೊಳ್ಳುತ್ತಾರೆ ಅಂದರೆ ಜನ ಇದರಿಂದ ಸಂತೋಷಪಡುತ್ತಾರೆ. ರೈತರ ಗಾಡಿ ಹೋಗುವುದಕ್ಕೆ ಬೇರೆ ರೋಡ್ ಇರುತ್ತವೆ, ಇದು ಫೈವ್‌ಸ್ಟಾರ್ ಕಲ್ಚರ್ ಹೋಗುವವರಿಗೆ. ಮಣ್ಣಿನ ಮಕ್ಕಳ ಅಧ್ಯತೆ ಏನಪ್ಪ ಅಂದರೆ ಫೈವ್‌ಸ್ಟಾರ್ ಕಲ್ಚರ್ ಜನ ತಿರುಗಾಡುವುದಕ್ಕೆ ಒಂದು ಹೈವೇ ಮಾಡುವುದು, ಆಮೇಲೆ ಬೆಂಗಳೂರು ಹಾಸನ ಮಂಗಳೂರು ಅದೊಂದು ಹೈವೇ. ರೈತರಿಗಾಗಿ ಇದೆಲ್ಲಾ ಮಾಡುತ್ತಿರುವುದು. ಆಮೇಲೆ ಕಾರ್ ತಯಾರಿಕಾ ಯೂನಿಟ್‌ಗೆ ಒಂದು ಎಂಓಯು ಇವರದು. ಮರ್ಸಿಡಿಸ್‌ದ್ದು, ರೈತರಿಗೆ ಬೇಕಲ್ಲಾ ಮರ್ಸಿಡಿಸ್ ಆಮೇಲೆ ಫುಡ್‌ಪ್ರೋಸೆಸಿಂಗ್ ಇಂಡಸ್ಟ್ರೀಸ್ ಏಕೆ ಅವನಿಗೆ ಕೆಚಪ್ ಬೇಕು, ಇದೂ ಮಣ್ಣಿನ ಮಗನಿಗೇ ಮಾಡಿರುವುದು.ಆಯಿತಲ್ಲಾ ಎಲ್ಲಕ್ಕಿಂತ ಪ್ರಾಮುಖ್ಯವಾದುದು ಕ್ರೀಡಾ ಸಮುಚ್ಚಯ. ಕ್ರೀಡಾ ಸಮುಚ್ಚಯಕ್ಕೆ ಮಾಡಿದ್ದೀರಲ್ಲಾ ನಿಮ್ಮ ಆದ್ಯತೆ ಏಕೆ ಹೇಳುತ್ತೇನೆಂದರೆ ಅಧ್ಯಕ್ಷರೇ ನಾನು ಕಂಡ ಹಾಗೆ after independence, single tender in Karnataka ಖರ್ಚು ಜಾಸ್ತಿಯಾಗಿರಬಹುದು, ಅಪ್ಪರ್‌ಕೃಷ್ಣಕ್ಕೆ ಆಗಿರಬಹುದು, ಹೀಗೆ ಸಿಂಗಲ್ ಟೆಂಡರ್ ಯಾವುದೂ ಮಾಡಿಲ್ಲ. ಈಗ ನೀವು ಕೋರಮಂಗಲದಲ್ಲಿ ಕಟ್ಟುತ್ತಿರುವ ಕ್ರೀಡಾ ಸಮುಚ್ಚಯ ಇದೆ ಸ್ವತಂತ್ರ ಬಂದ ಮೇಲೆ ನನಗೆ ನೆನಪಿರುವಂತೆ it is the largest single tender.ಇದಕ್ಕೆ ನೀವು ಅನುಸರಿಸಿದ ಮಾರ್ಗಗಳೇನು ಅಧ್ಯಕ್ಷರೇ, ನಾನೊಂದು ಪತ್ರ ಬರೆದಿದ್ದೆ ಮುಖ್ಯಮಂತ್ರಿಗಳಿಗೆ, ನಾನು ಅವರ ಮೇಲೆ ಆಪಾದನೆ ಹೊರಿಸುವುದಕ್ಕೆ ಹೋಗಿರಲಿಲ್ಲ. ನಾನು ಅವರಿಗೆ ನನಗಿದ್ದ ಕೆಲವು ಸಂಶಯಗಳನ್ನು ಕೇಳಿದೆ. ಏನು ನನ್ನ ಸಂಶಯಗಳು? 42.7 ಪರ್ಸೆಂಟ್ ಎಕ್ಸೆಸ್ ಕೊಡುತ್ತಾರೆ ಅಂದರೆ ಹತ್ತಿರ ಹತ್ತಿರ 112 ಕೋಟಿ ಎಕ್ಸೆಸ್ ದುಡ್ಡು ಹೇಗೆ ಬರುತ್ತದೆ, ಯಾರು ಕೊಡುತ್ತಾರೆ, ಸಾಲ ಎಲ್ಲಿಂದ ಬರುತ್ತದೆ, ಅದಿರಲಿ 112 ಕೋಟಿ ಎಕ್ಸಸ್ ಬರುತ್ತದೆ. ಟೆಂಡರ್ ನೋಟಿಫಿಕೇಷನ್ ಇನ್ನೂ ಪಬ್ಲಿಕಾಗಲಿಲ್ಲ. ಸಪ್ಲಿಮೆಂಟರಿ ಟೆಂಡರ್ ಏನಿತ್ತು ಒರಿಜಿನಲ್ ಟೆಂಡರ್ ನೋಟಿಫಿಕೇಷನ್ ಇನ್ನೂ ಪಬ್ಲಿಕಾಗಲಿಲ್ಲ. ಸಪ್ಲಿಮೆಂಟರಿ ಟೆಂಡರ್ ಏನಿತ್ತು ಒರಿಜಿನಲ್ ಟೆಂಡರ್ ನೋಟಿಫಿಕೇಷನ್ ಇನ್ನೂ ಪಬ್ಲಿಕಾಗಲಿಲ್ಲ. ಸಪ್ಲಿಮೆಂಟರಿ ಟೆಂಡರ್ ಏನಿತ್ತು ಒರಿಜಿನಲ್ ಟೆಂಡರ್ ಏನಿತ್ತು, ಟೆಂಡರ್ ಕ್ಲಾಸಸ್ ಏನಿದ್ದವು ಕ್ಲಾಸಸ್ ಅಂದರೆ ಯಾವುದು, ಬಡ್ಡಿ ಇಲ್ಲದೆ 24 ಕೋಟಿ ಕೊಟ್ಟಿರಿ ಅಂತ subject to correction ಸುಲಭ ದರದ ಬಡ್ಡಿಯಲ್ಲಿ ಇನ್ನು 12 ಕೋಟಿ ಕೊಟ್ಟಿರಿ ಅಂತ. ಇವೆಲ್ಲಾ ನೀವು ಕೊಡುತ್ತೇವೆ. ಎಂದು ಟೆಂಡರ್ ನೋಟಿಫಿಕೇಷನ್‌ನಲ್ಲಿ ಹಾಕಿದ್ದರೆ ಕಾಂಪಿಟಿಟೀವ್ ಟೆಂಡರ್ಸ್ ಬರುವುದು, ಬರುತ್ತಿರಲಿಲ್ಲವೇ? ಇವೆಲ್ಲಾ ಸವಲತ್ತು ಸಿಗುತ್ತದೆ ಅಂದಿದ್ದರೆ ಬೇಕಾದಷ್ಟು ಜನ

ಇರೋರು. ಬಹುಶಃ ನನಗೆ 34 ಕೋಟಿ ಕೊಟ್ಟು, ನೀನು ಆರ್ಗನೈಸ್ ಮಾಡು ಎಂದು ಹೇಳಿದ್ದರೆ ಒಂದೂವರೆ ವರ್ಷ ಎಂಎಲ್‌ಎಗಿರಿ ಬಿಟ್ಟು ನಾನೇ ಮಾಡಿ ಬಿಡುತ್ತಿದ್ದೆ. ಆದರೆ ಇವರು ಕೊಡುವುದಕ್ಕೆ ಕಾರಣವೇನು? 112 ಕೋಟಿ ಎಕ್ಸೆಸ್ ಕೊಡುತ್ತಿದ್ದೀರಲ್ಲಾ, ಮಣ್ಣಿನ ಮಕ್ಕಳ ಅದ್ಯತೆ ಇರುವ ಕೆಲಸ ಇದು ಅಪ್ಪರ್‌ಕೃಷ್ಣಕ್ಕೆ ನಾವು ಎಷ್ಟು ವೋಟ್ ಮಾಡಬೇಕು, ಕರೆಕ್ಟಾಗಿ ಹೇಳಿ ಅಂದರೆ ಉತ್ತರ ಇಲ್ಲ. ಸಾವಿರ ಕೋಟಿ ಕೊಡುತ್ತೇವೆ ಅಂದರು, what is the amount you have to vote out of the Consolidated Fund ಅಂದರೆ ಉತ್ತರವಿಲ್ಲ ಸರ್ಕಾರದಲ್ಲಿ. ಕೊನೆಗೆ 60 ಕೋಟಿ ಅಂತಾರೆ, 84 ಕೋಟಿ ಅಂತಾರೆ, 200 ಕೋಟಿ ಅಂತಾರೆ, ನಾವು ಹಿಂಡಿ ಹಿಂಡಿ ಹೋರಾಡಿ ಒಂದು ಉತ್ತರ ತೆಗೆದುಕೊಳ್ಳಬೇಕಾಯಿತು. ಕೊನೆಗೆ ಅದೂಸೇರಿ ಇದೂಸೇರಿ 500 ಎಂದು ಬಾಯಿಬಿಡಿಸಬೇಕಾದರೆ ಕಷ್ಟವಾಗಿ ಹೋಯಿತು. ಅದಿರಲಿ, ಇವರು ಎಷ್ಟರಮಟ್ಟಿಗೆ ಅದ್ಯತೆ ಕೊಟ್ಟಿದ್ದಾರೆ ನೀರಾವರಿಗೆ ಅಂದರೆ ಬಜೆಟ್‌ನಲ್ಲಿ ನಾವು ಎಷ್ಟು ವೋಟ್ ಮಾಡಬೇಕಾಗಿದೆ ಎಂಬುದೇ ಅವರಿಗೆ ನೆನಪಿಲ್ಲ. ಈ ಸಮುಚ್ಚಯಕ್ಕೆ ಎಷ್ಟು ಕೊಟ್ಟಿದ್ದೇವೆ ಅನ್ನುವುದು ನೆನಪಿದೆ, ಏಕೆಂದರೆ ಇದು ಮಣ್ಣಿನ ಮಕ್ಕಳ ಅಧ್ಯತೆ. ಅಪ್ಪರ್‌ಕೃಷ್ಣ ಮಣ್ಣಿನ ಮಕ್ಕಳ ಅಧ್ಯತೆ ಅಲ್ಲ ಅದು ನೆನಪಿರುವುದಿಲ್ಲ ಇವರಿಗೆ ಎಷ್ಟು ಕೇಳಿದ್ದೇವೆ ಎಷ್ಟು ವೋಟ್ ತೆಗೆದುಕೊಳ್ಳಬೇಕು ಅನ್ನುವುದು ಗೊತ್ತಿಲ್ಲ ಇವರಿಗೆ ಪಾಪ, ಕ್ರಿಡಾಸಮುಚ್ಚಯದ್ದು ನೆನಪಿದೆ. ಏನಂದಾರು ಜನ ನಮ್ಮನ್ನು? ಮಣ್ಣಿನಮಕ್ಕಳು ಎಂದು ವೋಟ್ ತೆಗೆದುಕೊಂಡು ಬಂದರಲ್ಲಾ ನಿಮ್ಮನ್ನು ನಂಬಿ ವೋಟ್ ಕೊಟ್ಟರಲ್ಲಾ, ಇವತ್ತು ಇವರ ಸರ್ಕಾರದ ಗತಿ ಏನಾಗುತ್ತದೆ ಅಧ್ಯಕ್ಷರೆ, ಅದಕ್ಕೇ ನಾನು ಹೇಳಿದ್ದು ಮೊದಲು, ಟೇಕಾಫ್ ಆಗಿಲ್ಲ, ಇನ್ನೂ ಈ ಸರ್ಕಾರ ರನ್‌ವೇನಲ್ಲೇ ಇದೆ. ಎಂದು. ಏನು ಜನಕ್ಕೆ ನೀವು ಭರವಸೆ ಕೊಟ್ಟಿರಿ ಅದನ್ನು ಇನ್ನೂ ನೀವು ತಲುಪಿಸಲಿಕ್ಕೇ ಆಗಲಿಲ್ಲ. ನಾನು ಪತ್ರ ಬರೆದದ್ದು ಇದರ ಬಗ್ಗೆ ಮುಗಿಸುತ್ತೀರಾ ಫೆಬ್ರವರಿಯಲ್ಲಿ? ಕೊಡುತ್ತೀರಾ ಅವರಿಗೆ ರೂಮುಗಳನ್ನು ಸಂಜಯಗಾಂಧಿ ಇದ್ದಾಗ ಒಂದಾಯಿತು, ಲೋಕಸಭೆಯಲ್ಲಿ ಒಂದು ಉತ್ತರ ಕೊಟ್ಟರು. ಏಷ್ಯನ್ ಗೇಂ ಆದಾಗ ಇವತ್ತು ಮೆರಿಡಿಯನ್ ಹೋಟೆಲ್ ಎಂದು ಒಂದು ಕಟ್ಟಿದ್ದ. ಆ ನೆಪ, ಏಷ್ಯನ್ ಗೇಂ ನೆಪ ಇಟ್ಟುಕೊಂಡು ಈ ಕಾಲದೊಳಗೇ ಆಗಬೇಕು, ಎಂದು ಕೊಟ್ಟುಬಿಟ್ಟರು ಜಮೀನನ್ನು. ಅವತ್ತು ಆ ಜಮೀನನ್ನು ಲೀಸಿಗೆ ಕೊಟ್ಟಿದ್ದರೆ ಗುಡ್‌ವಿಲ್ 15 ಕೋಟಿ ಕೊಡುವವರಿದ್ದರು. ಆಯಿತು ಸ್ವಾಮಿ, ಏಷ್ಯನ್ ಗೇಂ ಆಗಿ 7 ವರ್ಷಕ್ಕೆ ಮುಗಿಯಿತು ಹೋಟೆಲ್ ಇದಾಗುವುದೂ ಆದೇನೇ ಆ ಗೇಮ್ಸ್ ಹೊತ್ತಿಗೆ ನೀವೇನೂ ಕಟ್ಟುವುದಿಲ್ಲ, ಅದನ್ನು ನಾನು ಹೇಳಿದ್ದೇನೆ, ಕಟ್ಟುವುದಕ್ಕಾಗುವುದಿಲ್ಲ. ಎಲ್ಲಿ ಕಟ್ಟುತ್ತಿದ್ದೀರಿ ಹೋಗಲಿ, ಏನೋಪ್ಪ, ಮಣ್ಣಿನ ಮಕ್ಕಳು ಆದ್ಯತೆ ಬಿಟ್ಟರು, ಅಡ್ಡ ದಾರಿ ಹಿಡಿದರು ಅಪ್ಪರ್‌ಕೃಷ್ಣ ಮರೆತರು,ಕ್ರೀಡಾಸಮುಚ್ಚಯ ನೆನೆಸಿಕೊಂಡರು. ಹೋಗಲಿ ಯಾವುದಾದರೂ ಒಂದು ಘನ ಉದ್ದೇಶ ಇದೆಯೋ ಒಂದು ಹೆಸರಾಂತ ಸಮುಚ್ಚಯವನ್ನು ಕರ್ನಾಟಕದಲ್ಲಿ ನಾವು ನಿರ್ಮಿಸುತ್ತೇವೆ ಮಾದರಿಯಾಗಿ ಅನ್ನುವುದೇನಾದರೂ ಇದಯೋ? ಎಲ್ಲಿ ಮಾಡುತ್ತೀದ್ದೀರಿ? ಅವರು ಒಂದು ಡ್ರೈನ್ ವಾಟರ್ ಇದೆಯಲ್ಲಾ ಅದನ್ನು ಡೈವರ್ಟ್ ಮಾಡುತ್ತಾರಂತೆ !

**3.50 ಪಿ. ಎಂ**

ಇದು ನನ್ನದಲ್ಲ ಮಾತು ಹೌಸಿಂಗ್ ಬೋರ್ಡ್‌ನವರು ಹಾಕಿರುವ ನೋಟಿಫಿಕೇಷನ್ ಬಗ್ಗೆ ನಾನು ಹೇಳುತ್ತಿರುವುದು ದಕ್ಷಿಣದಲ್ಲಿರುವ ಸ್ಲಂನ್ನು ಷಿಫ್ಟ್ ಮಾಡುತ್ತಾರಂತೆ. ಮೂರು ಸಾವಿರ ಬೆಂಕಿ ಬಿದ್ದಾಯಿತು. ನಿಮ್ಮ ಈ ಗೇಮ್ಸ್ ಪ್ರಾರಂಭವಾಗುತ್ತದಲ್ಲಾ, ಆಕಸ್ಮಿಕವಾಗಿ ನಮಗೆ ಕಟ್ಟುತ್ತಾರಲ್ಲಾ ಎಂದು ನೋಡುವುದಕ್ಕೆ ಬರುತ್ತಾರಲ್ಲಾ, ವಾಸ ಇರುವುದಕ್ಕಲ್ಲ. ಅಲ್ಲಿ ಇರುವುದಕ್ಕಾಗುವುದಿಲ್ಲ. ಅಷ್ಟೊತ್ತಿಗೆ ಮುಗಿದಿರುವುದಿಲ್ಲ. ಅವರು ಬಂದ ದಿನದಿಂದಲೂ ಗುಡಿಸಲಿಗೆ ಬೆಂಕಿ ಬೀಳುತ್ತಿರುತ್ತದೆ. ಪುನಃ ನೀವೇನು ಅವರಿಗೆ ಆರ್‌ಸಿಸಿ ಕಟ್ಟುತ್ತೀರೇನು? ಅದು ಪಾಯಿಂಟ್ ಸೆಕೆಂಡರಿ ಆಯಿತು. ಪ್ರೈಮರಿ ಪಾಯಿಂಟ್ ಏನೆಂದರೆ ನೂರಾರು ಕೋಟಿ ರೂಪಾಯಿ ಯೋಜನೆ, 112 ಕೋಟಿ ರೂಪಾಯಿ ಎಕ್ಸೆಸ್ ಕೊಡುವ ಯೋಜನೆ, ಇದು ನಿಮ್ಮ ಆಧ್ಯತೆ ಯಾಗಬೇಕಿತ್ತೇ? ಜನರು ನಿಮ್ಮನ್ನು ಏನೆಂದಾರು ? ಇದು ನನ್ನ ಪ್ರಶ್ನೆ. ಜೊತೆಗೆ ಇದೇನು ಮನೆವಾರ್ತೆಯೇ? ಸರ್ಕಾರದಲ್ಲಿ ಅಧಿಕಾರಕ್ಕೆ ಬರುವ ಮುಖ್ಯಮಂತ್ರಿಗಳ ಮಂತ್ರಿಗಳ ಮನೆ ವಾರ್ತೆ ವ್ಯವಹಾರವೇ? Is it a private business of the Chief Minister or the Ministers? Why are you not giving the details? ಈಗ ಟೆಂಡರ್ ನೋಟೀಫಿಕೇಷನ್. ನಮ್ಮ ನಾಯಕರು ಏನು ಕೇಳಿದ್ದರು. ಕೆಲವು ದಾಖಲಾತಿಗಳನ್ನು ಕೇಳಿದರು. ನಿಮ್ಮ ಅಫಿಷಿಯಲ್ ಫೈಲ್ ನೋಟೀಂಗ್ ಹಾಕುತ್ತಾರಲ್ಲಾ, ಅದೂ ಕೇಳಲಿಲ್ಲ. ಅಂದರೆ ಸೆಕ್ರೆಟರಿ ನೋಟಿಂಗ್ ಹಾಕಿ, ಡೆಪ್ಯೂಟಿ ಸೆಕ್ರೆಟರಿ ಸೆಕ್ರೆಟರಿ ಎಂದು ಫಾರ್‌ವಾರ್ಡ್ ಮಾಡಿ ಅವನು ಮಂತ್ರಿಗಳಿಗೆ ಫಾರ್‌ವಾರ್ಡ್ ಮಾಡಿದ್ದನ್ನು ನಾವು ಕೇಳಿಲ್ಲ. ಟೆಂಡರ್ ನೋಟಿಫಿಕೇಷನ್, ಡೀಟೈಲ್ಡ್ ಎಸ್ಟಿಮೇಟ್, ಟೆಂಡರ್ ಕಂಡೀಷನ್ಸ್ ಏನು ಏನಾದರೂ ಬೇಕಲ್ಲಾ. ಏಕೆ ಕೊಡುವುದಿಲ್ಲ ಇದನ್ನು? ಏಕೆ ಗುಟ್ಟಿನಲ್ಲಿಡುತ್ತೀರಿ? ಇದು ಅನುಮಾನಕ್ಕೆ ಆಸ್ಪದವಾಗುವುದಿಲ್ಲವೇ? 112 ಕೋಟಿ ರೂಪಾಯಿ ಎಕ್ಸೆಸ್ ಕೊಡುತ್ತಿದ್ದೀರಿ, ಬಡ್ಡಿ ಇಲ್ಲವೇ 22ಕೋಟಿ ಅಡ್ವಾನ್ಸ್ ಕೊಡುತ್ತಿದ್ದೀರಿ. ಸುಲಭ ಬಡ್ಡಿ ದರದಲ್ಲಿ 12 ಕೋಟಿ ರೂಪಾಯಿ ಅಡ್ವಾನ್ಸ್ ಕೊಡುತ್ತಿದ್ದೀರಿ. ಈ ದಾಖಲಾತಿಗಳನ್ನು ಕೇಳಿದರೆ ಕೊಡುವುದಿಲ್ಲ ಇವುಗಳನ್ನು. ಎಸ್ಟಿಮೇಟ್ ಏನು ಎಂದರೆ ಹೇಳುವುದಿಲ್ಲ. ಅನುಮಾನ ಬರಬಾರದೇ? ನಾವು ಏನು ತಿಳಿದುಕೊಳ್ಳಬೇಕು, ಏನೋ ವ್ಯವಹಾರ ಮಾಡಿದ್ದಾರೆ ಗುಟ್ಟಿನಿಂದ, ಗುಟ್ಟಿನ ವ್ಯವಹಾರ ಏನು ಇರುವುದಕ್ಕೆ ಕಾರಣ ಹಣಕ್ಕೆ ಬದಲಾಯಿಸುವುದು. ಇದು circumstancial evidence ಎಂದು ಕರೆಯುತ್ತೇವೆ ನಾವು. ನಾವು ಏನು ಮಾಡೋಣ ನೀವು ಏನೂ ಕೊಡುವುದಿಲ್ಲವೇ? ಒರಿಜಿನಲ್ ಎಸ್ಟಿಮೇಟ್ ಏನಿತ್ತು, ಮಾಡಿಫೈ ಮಾಡಿದ್ದೀರಾ? ನಾನು ಹೋದಸಾರಿ ವಿಧಾನಸಭೆಯಲ್ಲಿ ಹೇಳಿದ್ದೆ. ಎಸ್ಟಿಮೇಟ್ ಅಪ್ರೀಷಿಯೇಟ್ ಮಾಡಿದ್ದಾರೆ. to oblige the contractor ಎನ್ನುವ ಅನುಮಾನ ಬಂದಿದೆ ಎನ್ನತಕ್ಕಂಥದ್ದು.

ಶ್ರೀ. ಪಿ.ಜಿ.ಆರ್.ಸಿಂಧ್ಯಾ (ಗೃಹಸಚಿವರು) : ಮಾನ್ಯ ಅಧ್ಯಕ್ಷರೇ, ನಾನು ಅಧಿಕಾರಕ್ಕೆ ಬಂದು ನೂರು ದಿನಗಳಾಗಿದೆ. ನಮ್ಮ ಕಾಲದಲ್ಲಿ ಇಲ್ಲಿ ಕ್ರೀಡಾ ಸಮುಚ್ಚಯ ಕಟ್ಟಬೇಕು ಎಂದು ಹೇಳಿ ತೀರ್ಮಾನ ತೆಗೆದುಕೊಂಡಿರುವ ವಿಚಾರವಲ್ಲ. ಕೇಂದ್ರಸರ್ಕಾರದಿಂದ ಇಲ್ಲಿ ಕ್ರೀಡೆಗಳಿಗೆ ಪ್ರೋತ್ಸಾಹವನ್ನು ಕೊಡುವ ದೃಷ್ಟಿಯಿಂದಾಗಿ

ಒಂದು ಕ್ರೀಡಾಕೂಟವನ್ನು ಒಲಂಪಿಕ್ಸ್ ನಡೆಸುತ್ತಾರೆ ಎಂದು ಹೇಳಿ ಆ ಸಂದರ್ಭದಲ್ಲಿ ತೆಗೆದುಕೊಂಡಿರುವುದು. ಮತ್ತೆ ನ್ಯಾಷನಲ್ ಗೇಮ್ಸ್, ಅಲ್ಲಿರುವ ಎಲ್ಲಾ ಗುಡಿಸಲುಗಳಿವರಿಗೂ ಪ್ಯಾರಲಲ್ ಆಗಿ ಮನೆಗಳನ್ನು, ಆರ್‌ಸಿಸಿ ಮನೆಗಳನ್ನು ಕಟ್ಟಿಕೊಡುತ್ತಿದ್ದೇವೆ. ಈಗ ಪಿ.ಎ.ಸಿ.ಛೇರ್ಮೆನ್ ತಾವೇ ಆಗುತ್ತೀರಿ. ತಾವು ಆಗುತ್ತೀರಾ ಇಲ್ಲ, ಯಡಿಯೂರಪ್ಪನವರು ಆಗುತ್ತಾರೆ, ಪಬ್ಲಿಕ್ ಅಕೌಂಟ್ಸ್ ಕಮಿಟಿ ಮುಂದೆ ಯಾವುದನ್ನು ಇರುವುದಕ್ಕಾಗುವುದಿಲ್ಲ ಎಂದು ಹೇಳುವುದಕ್ಕಾಗುತ್ತದೆ. ನಾವು ಏನು ಮಾಡಿದ್ದೇವೆ ಎಂದು ಹೇಳಿ ಪಿ.ಎ.ಸಿ ಅನ್ನು ಇವತ್ತೋ ನಾಳೆಯೋ ಮಾನ್ಯ ಅಧ್ಯಕ್ಷರು ರಚನೆ ಮಾಡುತ್ತಾರೆ. ಪಿ.ಎ.ಸಿ.ಕಮಿಟಿ ಮುಂದೆ ಎಲ್ಲಾ ಇಡಬಹುದಲ್ಲ. ಇದರ ಜೊತೆಗೆ ಸಬ್ಜೆಕ್ಟ್ ಕಮಿಟಿ ಎಂದು ಈಗ ಬೇರೆ ಮಾಡುತ್ತಿದ್ದಾರೆ. ಇದೇ ಸದನದಲ್ಲಿ ತಾವು ಆಗ ಸದಸ್ಯರಾಗಿರಲಿಲ್ಲ. ಪಾರ್ಲಿಮೆಂಟ್‌ನಲ್ಲಿ ಬಹಳ ಅನುಭವ ಇರತಕ್ಕಂಥದ್ದು ತಾವು ಆಗ ಸದಸ್ಯರಾಗಿರಲಿಲ್ಲ. ಪಾರ್ಲಿಮೆಂಟ್‌ನಲ್ಲಿ ಬಹಳ ಅನುಭವ ಇರತಕ್ಕಂಥದ್ದು. ಯಾವ ರೀತಿ ಪಾರ್ಲಿಮೆಂಟ್‌ನಲ್ಲಿ ಸಬ್ಜೆಕ್ಟ್ ಕಮಿಟಿ ಮಾಡಿದ್ದಾರೆ. ಹಾಗೆಯೇ ಸಬ್ಜೆಕ್ಟ್ ಕಮಿಟಿಗಳನ್ನು ಇಲ್ಲೂ ಸಹಿತ ನಾವು ಮಾಡುವುದು ಇದ್ದೇವೆ. ಯಾವುದನ್ನೂ ಬೇಕಾದರೂ ತರಿಸಿಕೊಳ್ಳಬಹುದು. ಇದರಲ್ಲಿ ಮುಚ್ಚಿಡುವಂಥದ್ದು ಏನಿದೆ ಸ್ವಾಮಿ?

ಶ್ರೀ ಹೆಚ್. ಎಸ್.ನಂಜೇಗೌಡ : ಮಾನ್ಯ ಮಂತ್ರಿಗಳಲ್ಲಿ ನಾನು ಕೇಳುವುದು ಏನೆಂದರೆ why not the government place it on the table of this House?

ಶ್ರೀ.ಸಿ. ಬೈರೇಗೌಡ (ಕೃಷಿಸಚಿವರು): ಮಾನ್ಯ ಅಧ್ಯಕ್ಷರೇ, ಟೆಂಡರ್ ನೋಟೀಫಿಕೇಷನ್‌ಗೆ ಬಗ್ಗೆ ಸ್ವಲ್ಪ ದಯವಿಟ್ಟು ಕೇಳಿ. ಏನೂ ಇಲ್ಲದೆ ಇರುವ ಕಡೆ ಗುಟ್ಟಾಗಿ ಬಿಡುವ ಪ್ರಯತ್ನ ತಾವು ಮಾಡುತ್ತಿದ್ದೀರಿ. ಆದರೆ ನಿಮಗೆ ಅಧಿಕಾರ ಇದೆ. ಟೆಂಡರ್ ನೋಟೀಫಿಕೇಷನ್ ಅದು ಪತ್ರಿಕೆಗಳಲ್ಲಿ ಬರುತ್ತದೆ. ಗುಟ್ಟಾಗಿ ನಡೆದಿರುವ ವ್ಯವಹಾರ ಏನೂ ಇಲ್ಲ. ಇದು ತಮಗೆ ಗೊತ್ತಿರುವಂಥದ್ದು. ತಾವೂ ಸಹ ಒಂದಾನೊಂದು ಕಾಲದಲ್ಲಿ ನೀರಾವರಿ ಮಂತ್ರಿಗಳಾಗಿ ಕೆಲಸಮಾಡಿದ್ದೀರಿ. ಟೆಂಡರ್ ನೋಟೀಫಿಕೇಷನ್ ಬೇಕು ಎಂದು ಕೇಳಿದರೆ ಅದು ನಿಮಗೆ ಸಿಗುವುದಿಲ್ಲವೇ? ಪತ್ರಿಕೆಯಲ್ಲಿ ಬರುವುದಿಲ್ಲವೇ? ಇದರಲ್ಲಿ ಗುಟ್ಟಾಗಿ ಮಾಡಿರುವ ವ್ಯವಹಾರಗಳೇನು.

ಶ್ರೀ ಹೆಚ್.ಎಸ್.ನಂಜೇಗೌಡ : ಟೆಂಡರ್ ನೋಟೀಫಿಕೇಷನನ್ನು ಓದದೇ ನಾನು ಮಾತನಾಡುತ್ತೇನೆಯೇ? ಪೇಪರ್‌ನಲ್ಲಿ ಬಂದಿರುವುದೇ? ಏಕೆ ಹಾಗೆ ಭಾವನೆ ಮಾಡುತ್ತಾರೆ. ಅದರಲ್ಲಿ ಹಾಕಿದ್ದೀರಾ? ಬಡ್ಡಿ ಇಲ್ಲದೆ ಇಷ್ಟು ಕೋಟಿ ಅಡ್ವಾನ್ಸ್ ಕೊಡುತ್ತೇವೆ. ಸುಲಭ ಬಡ್ಡಿ ದರದಲ್ಲಿ ಇಷ್ಟು ಕೋಟಿ ಅಡ್ವಾನ್ಸ್ ಕೊಡುತ್ತೇವೆ ಎಂದು ಹಾಕಿದ್ದೀರಾ? ನನಗೆ ಬಂದಿರುವುದರಲ್ಲಿ ಇರಲಿಲ್ಲ. ನಾನು ನೋಡಿದಂಥ ಪತ್ರಿಕಾಪ್ರಕಟಣೆಯಲ್ಲಿ ಹಾಕಿರಲಿಲ್ಲ. ಇರಲಿ ಅದು ಪ್ರಾಮುಖ್ಯವಲ್ಲ. ನನಗೆ ಪ್ರಾಮುಖ್ಯವಾದದ್ದು....

ಶ್ರೀ ಪಿ.ಜಿ.ಆರ್. ಸಿಂಧ್ಯ : ತಾವು ಏನು ಬೇಕಾದರೆ ಹೇಳಿ. ನಮ್ಮದು ಏನೂ ತಕರಾರು ಇಲ್ಲ. ನಾವು ಕೇಳುವುದು ಈ ಸರ್ಕಾರ ಏನೋ ಮುಚ್ಚಿಡುವುದಕ್ಕೆ ಪ್ರಯತ್ನ ಮಾಡುತ್ತಿದೆ ಎನ್ನುವ ವಿಚಾರವನ್ನು ಹೇಳುತ್ತಿದ್ದೀರಿ. ಪಿ.ಎ.ಸಿ.ಕಮಿಟಿ ನಿಮ್ಮ

ಮುಂದೆ ಇರುತ್ತದೆ. ಹೌಸಿಂಗ್ ಕಮಿಟಿ ಎಂದು ಬೇರೆ ಇದೆ. ಅದರ ಮುಂದುಗಡೆ ತೆಗೆದುಕೊಂಡು ಬನ್ನಿ. ಯಾರೂ ಬೇಡ ಎಂದು ಹೇಳುತ್ತಾರೆ ನಿಮಗೆ. ಏನು ಬೇಕಾದರೂ ಕೇಳಬಹುದಲ್ಲಾ ನೀವು ಮುಚ್ಚಿಡುವುದು ಏನಿದೆ ಸ್ವಾಮಿ ಅದರಲ್ಲಿ?

ಶ್ರೀ ಸಿ.ಬೈರೇಗೌಡ : ಅದರ ಬಗ್ಗೆ ಚರ್ಚೆಯೂ ನಡೆದಿದೆ. ಶಾಸಕರಸ್ಥಾನ ಮಾನದ ಬಗ್ಗೆ ಚರ್ಚೆಯೂ ನಡೆದಿದೆ. ಮಾನ್ಯ ಅಧ್ಯಕ್ಷರ ಕೊಠಡಿಯಲ್ಲೂ ಸಹಾ ಒಂದು ತೀರ್ಮಾನಕ್ಕೆ ಬಂದಿದ್ದು ಆಗಿದೆ. ಪುನಃ : ಮಾನ್ಯ ನಂಜೇಗೌಡರು....

ಶ್ರೀ ವಾಟಾಳ್ ನಾಗರಾಜ್ : ಏನು ತೀರ್ಮಾನಕ್ಕೆ ಬಂದರು? ಶಾಸಕರ ಸ್ಥಾನಮಾನಗಳ ಬಗ್ಗೆ ಅಲ್ಲಿ ಚರ್ಚೆಯಾಯಿತು. ನಿಜ.

ಶ್ರೀ ಸಿ.ಬೈರೇಗೌಡ : ತಾವು ಆ ಮಾತುಕತೆಯಲ್ಲಿ ಭಾಗವಹಿಸಿದ್ದಿರಿ ಎಂದು ಭಾವನೆ.

ಶ್ರೀ ವಾಟಾಳ್ ನಾಗರಾಜ್ : ಭಾವನೆಯೇನು? ನಾನು ಭಾಗವಹಿಸಿದ್ದೆ.

ಶ್ರೀ ಸಿ. ಬೈರೇಗೌಡ : ನಾನಂತೂ ಭಾಗವಹಿಸಿರಲಿಲ್ಲ. ನಿಮಗೆ ಗೊತ್ತಿದ್ದರೂ ಕೂಡ ನನ್ನನ್ನು ಏಕೆ ಕೇಳುತ್ತೀರಿ?

ಶ್ರೀ ವಾಟಾಳ್ ನಾಗರಾಜ್ : ಭಾಗವಹಿಸಿದ್ದುದು ನಿಜ. ಚರ್ಚೆಯಾದದ್ದು ನಿಜ. ಆದರೆ ತೀರ್ಮಾನವೇನಾಯಿತು. ಅದು ಇನ್ನೂ ಆಗಿಲ್ಲ. ಅಲ್ಲಿ ಸ್ವಲ್ಪ ಎಡವಿರುವುದು.

ಶ್ರೀ ಸಿ.ಬೈರೇಗೌಡ : ಕಾನೂನಿನ ಚೌಕಟ್ಟಿನಲ್ಲಿ ಮಾನ್ಯಮಂತ್ರಿಗಳು ಈ ಸದನದಲ್ಲಿ ಹೇಳಿಕೆ ಮಾಡಿರುವುದು ಕಾನೂನಿನ ಚೌಕಟ್ಟಿನಲ್ಲಿ ಶಾಸಕರಿಗೆ ಇರುವ ಸ್ಥಾನಮಾನವನ್ನು ಕೊಡುತ್ತೇವೆ ಎಂದು.

ಶ್ರೀ ಎಂ.ಶ್ರೀನಿವಾಸ್ : ಮಾನ್ಯ ಸದಸ್ಯರು ಕೋರಮಂಗಲದ ವಿಷಯ ಮಾತನಾಡುತ್ತಿದ್ದಾರೆ.

ಶ್ರೀ ಸಿ.ಬೈರೇಗೌಡ : ನೀವು ಕೋರಮಂಗಲದಲ್ಲಿ ಇದ್ದೀರಿ. ಮಾನ್ಯ ವಾಟಾಳ್ ನಾಗರಾಜ್‌ರವರು ಭಿನ್ನಮಂಗಲದಲ್ಲಿ ಇದ್ದಾರೆ.

ಶ್ರೀ ಎಂ.ಶ್ರೀನಿವಾಸ್ : ನಾನು ಇರುವ ಕ್ಷೇತ್ರ ಕೋರಮಂಗಲಕ್ಕೆ ಸೇರಿದ್ದುದು. ನಾನು ಏಕೆ ಅಲ್ಲಿಗೆ ಹೋಗಲಿ?

ಶ್ರೀ ವಾಟಾಳ್ ನಾಗರಾಜ್ : ಅವರು ನೀವು ಹೇಳಿದ್ದಕ್ಕೂ ಉತ್ತರ ಕೊಡುತ್ತಿಲ್ಲ. ಅವರು ಎಂಥದ್ದೋ ದಾರಿಗೆ ಹೋಗಿದ್ದಾರೆ. ಬೈರೇಗೌಡರು ನಂಜೇಗೌಡರಿಗೆ ಉತ್ತರ ಕೊಡಲಿಲ್ಲ. ನಂಜೇಗೌಡರು ಎತ್ತಿದ ಪ್ರಶ್ನೆ ಬೇರೆ. ಬೈರೇಗೌಡರು ತಾವು ಏನು ಹೇಳುತ್ತಿದ್ದೀರಿ, ಶಾಸಕರುಗಳ ಸ್ಥಾನಮಾನದ ಬಗ್ಗೆ ಶುರುಮಾಡಿದಿರಿ ನೀವು ನಾನು ಅದಕ್ಕೆ ಏನು ಹೇಳುತ್ತೇನೆ, ಶಾಸಕರ ಸ್ಥಾನಮಾನಗಳ ಬಗ್ಗೆ ಚರ್ಚೆಯಾಯಿತು. ಕಾನೂನಿನ ಚೌಕಟ್ಟು ಎಂದು ಎಲ್ಲಿ ಹೇಳಿದ್ದುದು ಗೊತ್ತೇನು? ಒಳಗಡೆ ಹೇಳುವುದು ಅಷ್ಟೆ. ಆ ಚೌಕಟ್ಟು ಏನು ಯಾವುದು ಮಾತನಾಡಲಿಲ್ಲ ಒಂದು. ಎರಡನೆಯದಾಗಿ ಈ ಸದನದಲ್ಲಿ ಮಾನ್ಯ ಮುಖ್ಯಮಂತ್ರಿಗಳು ನೇರವಾಗಿ ಶಾಸಕರಿಗೆ 20 ಅಂಶದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೊಟ್ಟು ಅವರ ಕಾರ್ಯಾಲಯವನ್ನು ತಹಶೀಲ್ದಾರ್ ಆಫೀಸಿನಲ್ಲಿ ಕೊಡುತ್ತೇನೆ ಎಂದು ಹೇಳಿದ್ದಾರೆ. ಆದರೆ ಇವತ್ತು ಅದಿಲ್ಲ. ಮತ್ತು

ವಿರೋಧ ಪಕ್ಷದ ನಾಯಕರಿಗೆ ಕೊಡಬೇಕಾದ ಸ್ಥಾನಮಾನಗಳ ಬಗ್ಗೆಯೂ ಸಹಾ ಹೇಳಿಲ್ಲ. ಕೇವಲ ಕಣ್ಣೊರೆಸುವ ತಂತ್ರವಾಗಿದೆ.

(ಗೊಂದಲ)

ಶ್ರೀ. ಆರ್.ಎಲ್. ಜಾಲಪ್ಪ : ರಾಜ್ಯಪಾಲರ ಭಾಷಣದ ಮೇಲೆ ಮಾತನಾಡಿ.

ಶ್ರೀ ವಾಟಾಳ್ ನಾಗರಾಜ್ : ನಾನೇನು ಮಾಜಿ ರಾಜ್ಯಪಾಲರ ಬಗ್ಗೆ ಮಾತನಾಡಿದನೇ?

ಶ್ರೀ ಬಿ.ಎಸ್.ಯಡಿಯೂರಪ್ಪ : ಮಾನ್ಯ ಅಧ್ಯಕ್ಷರೇ, ಬೈರೇಗೌಡರು ಮತ್ತೆ ಹಿರಿಯ ಸಚಿವರಾದಂಥ ಸಿಂಧ್ಯಾರವರು ಹೇಳಿದರು. ಇಲ್ಲಿ ತಾವು ಆ ಪತ್ರಿಕೆಯಲ್ಲಿ ನೋಟಿಫಿಕೇಷನ್ ಹೊರಡಿಸಿದ್ದೀರಾ. ತಾವು ತರಿಸಿ ನೋಡಿ. ನಾವು ಇಷ್ಟೇ ಹೇಳುವುದಕ್ಕೆ ಇಚ್ಛೆ ಪಡುವುದು, ಆ ಪತ್ರಿಕೆಯಲ್ಲಿ ಎ. ಕ್ಲಾಸ್ ಕಂಟ್ರಾಕ್ಟದಾರರು ಯಾರು ಬೇಕಾದರೂ ಟೆಂಡರ್ ಹಾಕಬಹುದು. ಎಂದು ಹೇಳಿದೆ. ಅದಾದಮೇಲೆ ತಾವು 50 ಕೋಟಿ ರೂಪಾಯಿ ಒಂದು ವರ್ಷದಲ್ಲಿ ಟರ್ನ್ ಓವರ್ ಆಗಿರಬೇಕು ಎಂದು ಹೇಳಿದಿರಿ. ಉದ್ದೇಶ ಆದಷ್ಟು ಬೇಗ ಅವನಿಗೆ ಕಟ್ಟುವಂಥ ಶಕ್ತಿ ಇರಬೇಕು ಎಂದು ಸನ್ಮಾನ್ಯ ಸಂಜೀಗೌಡರು ನಾವೇನು ಹೇಳುವುದಕ್ಕೆ ಇಚ್ಛೆಪಟ್ಟಿದ್ದೇವೆ ಎಂದರೆ ತಾವು ನೋಟಿಫಿಕೇಷನ್ ಹೊರಡಿಸುವಂಥ ಸಂದರ್ಭದಲ್ಲಿ ಸುಮಾರು 22-25 ಕೋಟಿ ರೂಪಾಯಿ ವಿತ್‌ಔಟ್ ಇಂಟರೆಸ್ಟ್ ಅಡ್ವಾನ್ಸ್ ಕೊಡುತ್ತೇವೆ ಎಂದು ಹೇಳುವುದಾಗಲಿ, 16 ಪರ್‌ಸೆಂಟ್‌ನಂತೆ 12 ಕೋಟಿ ರೂಪಾಯಿ ಅಡ್ವಾನ್ಸ್ ಕೊಡುತ್ತೇವೆ ಎಂದು ಹೇಳಿದ್ದರೆ ನೂರಾರು ಜನ ಕಂಟ್ರಾಕ್ಟದಾರರು ಬರುತ್ತಿದ್ದರು. ಏಕೆಂದರೆ ತಾವೇ ಹೇಳಬಹುದು, ಹಿಂದಿನ ಸರ್ಕಾರ ಮಾಡಿತು ಎಂದು. ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಹೈಪವರ್ ಕಮಿಟಿ ಮಾಡಿದ್ದುದು ಏಕೆ ಎಂದರೆ ಅಲ್ಲಿ ದುರುಪಯೋಗವಾಗಬಾರದು ಎಂದು. ನಾನು ಹೇಳುವುದಿಲ್ಲ. ಸನ್ಮಾನ್ಯ ಅಧ್ಯಕ್ಷರ ಕೊಠಡಿಗೆ ಬೇಕಾದರೆ ಬಂದರೆ ಕರ್ನಾಟಕದಲ್ಲಿರುವಂಥ ಯಾವುದೇ ದೊಡ್ಡದೊಡ್ಡ ಬಿಲ್ಡರ್ಸ್‌ನ್ನು ಕರೆದುಕೊಂಡು ಬನ್ನಿ. ಪರ್ ಸ್ಕ್ವೇರ್ ಫೀಟ್ ಇವತ್ತು 450 ರೂ.ಗೆ ನೀವು ಏನು ಸ್ಪೆಸಿಫಿಕೇಷನ್ ಹೇಳಿದ್ದೀರಿ. ಆ ರೀತಿ ಕಟ್ಟಿಕೊಡುತ್ತೇವೆ ಎಂದು ಮುಂದೆ ಬರುವುದಕ್ಕೆ ಹತ್ತಾರು ಜನ ಕಂಟ್ರಾಕ್ಟದಾರರು ಕರ್ನಾಟಕದವರು ಸಿದ್ಧವಿರಬೇಕಾದರೆ ಸುಮಾರು 800 ರೂ. ಒಂದು ಸ್ಕ್ವೇರ್ ಫೀಟ್ ಕಟ್ಟಿಕೊಡುವುದಕ್ಕೆ ನೀವು ದುಡ್ಡು ಕೊಡುತ್ತಿದ್ದೀರಲ್ಲಾ, ಇದು ಪೂರ್ಣವಾಗುವುದಿಲ್ಲ. ಕ್ರೀಡಾಪಟುಗಳು ಅಲ್ಲಿ ಬಂದು ಉಳಿಯುವುದಕ್ಕೂ ಸಾಧ್ಯವಿಲ್ಲ. ಈ ಕ್ರೀಡಾಪಟುಗಳ ಹೆಸರುಗಳಲ್ಲಿ ಈ ನೂರಾರು ಕೋಟಿ ರೂಪಾಯಿಗಳು ಗೋಲ್‌ಮಾಲ್ ಆಗುತ್ತಿದೆ ಎಂದು ಜನರು ಅನುಮಾನ ಪಡುವುದಕ್ಕೆ ಅವಕಾಶವಾಗಬಾರದು. ಕೆಲವು ದಾಖಲೆಗಳನ್ನು ಕೊಡಿ ಎಂದರೆ ಪಿಜಿಆರ್ ಸಿಂಧ್ಯಾರವರಂಥ ಹಿರಿಯ ಸಚಿವರು ಏನು ಹೇಳುತ್ತಾರೆ ಪಬ್ಲಿಕ್ ಅಕೌಂಟ್ಸ್ ಕಮಿಟಿಗೆ ಹೋಗಿ ಎನ್ನುತ್ತಾರೆ.

ಶ್ರೀ ಬಿ.ಎಸ್.ಯಡಿಯೂರಪ್ಪ (ಮುಂದು) : ಪಿಎಸಿಯಲ್ಲಿ ಏನು ಪದ್ಧತಿ ಇದೆ? ಆಡಿಟ್ ಆದ ಮೇಲೆ ಎರಡು ವರ್ಷದ ನಂತರದ ದಾಖಲೆಗಳನ್ನು ನಾವು ತರಿಸುತ್ತೇವೆ. ನಾವು ಸದನ ಪ್ರಾರಂಭ ಆದ ಮೊದಲನೆಯ ದಿವಸ ಇಲ್ಲಿ ಪ್ರಸ್ತಾಪ

ಮಾಡಿದಾಗ ಸನ್ಮಾನ್ಯ ಮುಖ್ಯಮಂತ್ರಿಳು ಇದರಲ್ಲಿ ಏನೂ ಗುಟ್ಟು ಇಲ್ಲ ಎನ್ನುವುದಾದರೆ ಇಲ್ಲಿ ಬೇಡ, ಸಭಾಧ್ಯಕ್ಷರ ಕೊಠಡಿಯಲ್ಲಿ ಕುಳಿತು ಮಾತನಾಡಿ ಏನು ಆಗಿದೆ ಎಂದು ಚರ್ಚೆ ಮಾಡಬಹುದಿತ್ತು. ಒಳಗಡೆ ಕುಳಿತುಕೊಂಡು 42 ಪರ್ಸೆಂಟ್ ಜಾಸ್ತಿ ಕೊಡುತ್ತಿರೆಂದರೆ ನಾನು ಇವತ್ತು ಛಾಲೆಂಜ್ ಮಾಡುತ್ತಿದ್ದೇನೆ. ಪರ್ ಸ್ಕೇರ್ ಫೀಟ್ 450 ರೂಪಾಯಿ ಕಟ್ಟಿಕೊಡುವುದಕ್ಕೆ ಜನ ಸಿದ್ಧರಿದ್ದಾರೆ ನೀವು ಅರ್ಧ ಭಾಗ ವಹಿಸಿಕೊಡುತ್ತೀರಾ? ಈ ಸದನದಲ್ಲಿ ಹೇಳಿಕೆ ಕೊಡುವಾಗ ಉತ್ತರ ಕೊಡುವಂತಹ ಸಂದರ್ಭದಲ್ಲಿ ಕ್ರೀಡಾ ಪಟುಗಳು ಬರುವುದರೊಳಗೆ ಮುಂದಿನ ವರ್ಷ ಫೆಬ್ರವರಿ ಒಳಗಾಗಿ ಕಟ್ಟಡ ಪೂರ್ತಿ ಮಾಡುತ್ತೇವೆ. ಕ್ರೀಡಾ ಪಟುಗಳನ್ನು ಅಲ್ಲಿಯೇ ಉಳಿಸಿಕೊಳ್ಳುತ್ತೇವೆ ಇಲ್ಲದಿದ್ದರೆ ನಾವು ಆ ನಿಮಿಷಕ್ಕೆ ರಾಜೀನಾಮೆ ಕೊಟ್ಟು ಹೊರಗಡೆ ಹೋಗುತ್ತೇವೆ ಎಂದು ಒಪ್ಪಿಕೊಳ್ಳಿ. ಅದನ್ನೇ ನಾವು ಮತ್ತು ಮಾನ್ಯ ನಂಜೇಗೌಡರು ಪತ್ರ ಬರದಿರುವಂತಹದು.

ಶ್ರೀ ಆರ್. ಎಲ್.ಜಾಲಪ್ಪ : ನಾನೂ ಕೂಡ ಪಿಡಬ್ಲ್ಯುಡಿ ಕಂಟ್ರಾಕ್ಟರ್ ಆಗಿದ್ದೆ ಮತ್ತು ಹತ್ತಾರು ಕೋಟಿ ರೂಪಾಯಿ ಕೆಲಸ ಮಾಡಿಸಿದ್ದೇನೆ.

ಶ್ರೀ ವಾಟಾಳ್ ನಾಗರಾಜ್ : ಯಾವ ಕಾಲದಲ್ಲಿ ಆಗಿದ್ದಿರಿ? 25 ವರ್ಷದ ಹಿಂದಿನ ಕಥೆ ಹೇಳುತ್ತಿದ್ದೀರಿ.

ಶ್ರೀ ಆರ್.ಎಲ್.ಜಾಲಪ್ಪ : 13ನೇ ಅವತಾರಕ್ಕೆ ಬರುವುದಕ್ಕೆ ಮೊದಲು. ಈ ಕೆಲಸ 40 ವಾರದೊಳಗೆ ಮುಗಿಯಬೇಕು. ಬಿಲ್ಡಿಂಗ್ಸ್ ಅನ್ನು ಯಾರೂ ಶೆಡ್ಯೂಲ್ ಆಫ್ ರೇಟ್ಸ್ ಮಾಡುವುದಿಲ್ಲ. 15,20 ಅಥವಾ 30 ಪರ್ಸೆಂಟ್ ಜಾಸ್ತಿ ಕೊಡಲೇಬೇಕಾಗುತ್ತದೆ. ಇದು ಮಾನ್ಯ ನಂಜೇಗೌಡರಿಗೂ ಗೊತ್ತಿದೆ. ಎಲ್ಲಾ ನಡೆಯುತ್ತಾ ಇರುವುದು ಅದೇ ತರಹ. ಬರೀ ಅರ್ಧ ವರ್ಕಿಗೆ 10 ಪರ್ಸೆಂಟ್ ಕಡಿಮೆ ಹಾಕುತ್ತಾರೆ. ಇದು ಟನಲ್ ವರ್ಕ್ ನಡೆಯುತ್ತಿದೆ. 10 ಪರ್ಸೆಂಟ್ ಕಡಿಮೆ ಮಾಡುತ್ತೇವೆ ಎಂದು ಒಪ್ಪಿಕೊಂಡಿದ್ದಾರೆ ಬಿಲ್ಡಿಂಗ್ ವರ್ಕ್ಸ್ ಅಷ್ಟು ಬೇಗ ಮುಗಿಸುವುದಕ್ಕೆ ಆಗುವುದಿಲ್ಲ ಮೊಬಿಲೈಸೇಷನ್ ಅಡ್ವಾನ್ಸ್ ಕೊಡದೇ ಇದ್ದರೆ ಯಾರೂ ಸಮಯಕ್ಕೆ ಸರಿಯಾಗಿ ಕೆಲಸ ಮಾಡುವುದಿಲ್ಲ. ಇದು ಪ್ರಾಕ್ಟಿಕಲ್ ಆಗಿ ಇರುವುದು.

ಶ್ರೀ ಬಿ.ಎಸ್.ಯಡಿಯೂರಪ್ಪ : ತಾವು ಸ್ಟೇಡಿಯಂ ಕಟ್ಟುತ್ತಿದ್ದೀರಿ, ಅದು ಅರ್ಥವಾಗುತ್ತದೆ. ಯಾರೋ ಐದಾರು ಸಾವಿರ ಜನ ಕ್ರೀಡಾ ಪಟುಗಳು ಉಳಿದು ಕೊಳ್ಳುವುದಕ್ಕೆ ಬೇರೆ ವ್ಯವಸ್ಥೆ ಇದ್ದಾಗ ಅಲ್ಲಿ ಹೋಗುವುದಕ್ಕೇ ಸರಿಯಾದ ರಸ್ತೆ ಇಲ್ಲ. ಅಲ್ಲಿ ಬಂದಂತಹ ಕ್ರೀಡಾ ಪಟುಗಳ ಗತಿ ಏನು ಆಗುತ್ತದೆ?

ಶ್ರೀ ಆರ್.ಎಲ್.ಜಾಲಪ್ಪ : ಕೇಂದ್ರ ಸರ್ಕಾರದಿಂದ ಬಂದಿರತಕ್ಕ ದುಡ್ಡು. ಆಮೇಲೆ ಮನೆಗಳು ಅವರು ಬಿಟ್ಟು ಹೋದ ತಕ್ಷಣ ಬೇರೆಯವರಿಗೆ ಅಲಾಟ್‌ಮೆಂಟ್ ಮಾಡುತ್ತೇವೆ.

ಶ್ರೀ ಬಿ.ಎಸ್.ಯಡಿಯೂರಪ್ಪ : ಅದನ್ನು ಶ್ರೀಮಂತರಿಗೆ ಕೊಡುತ್ತೀರಿ 25ಲಕ್ಷ 30 ಲಕ್ಷ ಕೊಟ್ಟು ಯಾರು ಬಡವ ಅಲ್ಲಿಗೆ ಬರುತ್ತಾನೆ?

ಶ್ರೀ ವಾಟಾಳ್ ನಾಗರಾಜ್ : ಆ ಕಟ್ಟಡ ಹೇಗೆ ಆಗಬಹುದು. ಎಲ್ಲಾದರೂ ಗಂಗಾರಾಂ ಕಟ್ಟಡ ಆದ ಹಾಗೆ ಆಗಬಹುದು. ಗಂಗಾರಾಂ ಕಟ್ಟಡ ಗೊತ್ತಿಲ್ಲ ನಿಮಗೆ

ಟೈಮ್‌ಗೆ ಸರಿಯಾಗಿ ನೀರು, ಸಿಮೆಂಟ್ ಸರಿಸರಿಯಾಗಿ ಹಾಕಿ ಹೆಚ್ಚು ಕಡಿಮೆ ಹಾಕಿ ಮುಗಿಸಿಬಿಡುತ್ತೀರಿ ನೀವು.

ಶ್ರೀ ಎಂ. ಶ್ರೀನಿವಾಸ್ : ಕೆರೆಯೊಳಗೆ ಕಟ್ಟುತ್ತಿದ್ದೀರಿ, ಗಂಗಾರಾಂ ಬಿಲ್ಡಿಂಗ್ ಆದ ಹಾಗೆ ಆಗುತ್ತದೆ ಎಂದು ಹೇಳಿದೆ.

ಶ್ರೀ ಕೆ.ಎನ್.ನಾಗೇಗೌಡ ಪ್ರೊಸೀಜರಲ್ ಮ್ಯಾಟರನ್ನು ಮಾನ್ಯ ಹಿರಿಯ ಸದಸ್ಯರಾದ ಶ್ರೀಮಾನ್ ನಂಜೇಗೌಡರು ಪ್ರಸ್ತಾಪ ಮಾಡಿದರು. ಡಾಕ್ಯುಮೆಂಟ್ಸ್ ಎಲ್ಲಾ ಹೌಸ್‌ನಲ್ಲಿ ಕೊಡಬೇಕು ಎನ್ನತಕ್ಕ ಒಂದು ಪ್ರೊಸೀಜರಲ್ ಮ್ಯಾಟರನ್ನು ಪ್ರಸ್ತಾಪ ಮಾಡಿದರು. ನನಗೆ ಗೊತ್ತಿರುವ ಪ್ರಕಾರ ಈ ಸಬ್ಜೆಕ್ಟ್ ಕಮಿಟಿಯನ್ನು ಮಾಡಿರುವಂತಹ ಉದ್ದೇಶ ಏನು? ಒಂದು ವರ್ಷದ ಹಿಂದೆ ಈ ವಿಷಯ ಸಮಿತಿ ರಚನೆ ಆಗಿದೆ ನಮ್ಮ ರಾಜ್ಯದಲ್ಲಿ ಇಂತಹ ಸಂದರ್ಭಗಳು ಬಂದಾಗ ನಾವೆಲ್ಲಾ ಪದೇ ಪದೇ ಫೈಲ್‌ಗಳು, ರೆಕಾರ್ಡ್ಸ್‌ಗಳಲ್ಲಿ ಕೊಡಿಸಿ ಎಂದು ಪ್ರಸ್ತಾಪ ಮಾಡುತ್ತಿದ್ದಾರೆ. ಈಗ ಪ್ರತಿ ಒಂದಕ್ಕೂ ಇಲ್ಲಿ ಚರ್ಚೆ ಮಾಡುತ್ತಿದ್ದೇವೆ. ಪ್ರತಿ ಒಂದು ರೆಕಾರ್ಡ್ಸ್ ನೋಡುವುದಕ್ಕೆ ಆಗುವುದಿಲ್ಲ ಆದುದರಿಂದ ಪಾರ್ಲಿಮೆಂಟ್ ಸಿಸ್ಟಂ ತರಹ ಸಬ್ಜೆಕ್ಟ್ ಕಮಿಟಿ ಮಾಡಿದರೆ ಎಲ್ಲಾ ರೆಕಾರ್ಡ್ಸ್ ಕಳುಹಿಸಬಹುದು ಎನ್ನುವ ಉದ್ದೇಶದಿಂದ ಸಬ್ಜೆಕ್ಟ್‌ಕಮಿಟಿ ಮಾಡಿರುವುದು. ಸಬ್ಜೆಕ್ಟ್ ಕಮಿಟಿ ಮಾಡಿದ ಮೇಲೂ ಅದೇ ಪ್ರೊಸೀಜರ್‌ಗೆ ಬರುವುದಾದರೆ ಈ ಕಮಿಟಿ ಏತಕ್ಕೆ ಬೇಕಾಗುತ್ತದೆ ಎಂದು ಕೇಳುತ್ತಿದ್ದೇನೆ.

ಶ್ರೀ ಎಚ್.ಎನ್.ನಂಜೇಗೌಡ : ಮಾನ್ಯ ಸಿಂಧ್ಯರವರು ಹೇಳಿದರು. ಇದು ನಾವು ತೆಗೆದುಕೊಂಡ ತೀರ್ಮಾನ ಅಲ್ಲ ಎಂದು. ಒಂದು ಕೆಲಸ ಮಾಡಿ ನಾನು ಪದೇ ಪದೇ ಹೇಳುವುದಕ್ಕೆ ಬೇಸರ. We are following the footprints of Hon'ble Mr. Moily ಎಂದು ಹೇಳಿ ಬಿಡಿ. ನಾವು ವಿಚಾರ ಎತ್ತುವುದಿಲ್ಲ. ಅವರು ಮಾಡಿದ್ದು ಕೆಟ್ಟಿದ್ದು ಎಲ್ಲವನ್ನೂ ಉಳಿಸಿಕೊಂಡು ಹೋಗಬೇಕು ಎಂದು ಇದಯೇ ಗಾದೆ ಹೇಳುತ್ತಾರಲ್ಲಾ ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಹೂವು ಮಣ್ಣಿನ ಮಕ್ಕಳ ರಾಜ್ಯದಲ್ಲಿ ಇವೆಲ್ಲಾ ಆಯಿತಲ್ಲಾ ಎಂಬುದು ನನ್ನ ಯೋಚನೆ. ಜೊತೆಗೆ ಅಲ್ಲಿ ಬೋರ್ಡ್ ಹಾಕುತ್ತಾರೆ, ಕೆಲವನ್ನು ನ್ಯಾಯಾಂಗ ಇಲಾಖೆಯ ಅಧಿಕಾರಿಗಳಿಗೆ, ಕೆಲವು ಇನ್ನೂ ಸ್ವಲ್ಪ ಅಧಿಕಾರಿಗಳಿಗೆ ರಿಸರ್ವ್ ಮಾಡಿಕೊಳ್ಳುವುದು ಫ್ಲಾಟ್‌ಗಳನ್ನು ಇಷ್ಟ ಬಂದವರಿಗೆ ಅಲಾಟ್ ಮಾಡುವುದಕ್ಕೆ ರಿಸರ್ವ್ ಮಾಡುವುದು. ಉಳಿದಿರುವುದನ್ನು ಸಾರ್ವತ್ರಿಕವಾಗಿ ಕೊಡುವುದು ಪೂನಾದಲ್ಲಿ ಹೋದ ವರ್ಷ ಮಾಡಿದ್ದಾರೆ. ನ್ಯಾಶನಲ್ ಹೈವೇನಲ್ಲಿ ಪೂನಾ ಬಿಟ್ಟು 18 ಕಿಲೋ ಮೀಟರ್‌ನಲ್ಲಿ ಮಾಡಿದ್ದರು. ನೀವು ಏತಕ್ಕೆ ಹೋಗಿ ಬಡವರು ವಾಸ ಮಾಡತಕ್ಕ ಪ್ರದೇಶದಲ್ಲಿ ಮಾಡುತ್ತಿದ್ದೀರಿ? ಬಡವರ ಸೈಕಾಲಜಿ ನಿಮಗೆ ಅರ್ಥ ಆಗುವುದಿಲ್ಲ.

ಶ್ರೀ ಸಿ. ಬೈರೇಗೌಡ : ನಾವು ಮಾಡಿದ್ದುದು ಅಲ್ಲ. ಹಿಂದಿನ ಸರ್ಕಾರ ತೀರ್ಮಾನ ತೆಗೆದುಕೊಂಡಿದ್ದುದು ದಯಮಾಡಿ ಕೇಳಿ...

(ಗೊಂದಲ)

ಶ್ರೀ. ಎಚ್.ಎನ್. ನಂಜೇಗೌಡ : ಒಂದು ರೆಸಲ್ಯೂಷನ್ ಮಾಡಿ ನಮ್ಮ ಮುಖ್ಯಮಂತ್ರಿಗಳು ವೀರಪ್ಪ ಮೊಯಿಲಿ ಎಂದು ಹೆಸರು ಬದಲಾವಣೆ ಮಾಡಿಕೊಳ್ಳಿ ನಾನು ಮಾತನಾಡುವುದಿಲ್ಲ.

ಶ್ರೀ ಸಿ. ಬೈರೇಗೌಡ : ನೀವು ಈ ತರಹ ಮಾತನಾಡುವುದು ಎಷ್ಟರಮಟ್ಟಿಗೆ ನಿಮಗೆ ಶೋಭೆಯನ್ನು ತರುತ್ತದೆ ಎಂದು ಹೇಳಲಾರೆ. ಏಕೆಂದರೆ ಇದನ್ನು ಹಿಂದಿನ ಸರ್ಕಾರ ಮಾಡಿದ್ದುದು ಮಂತ್ರಿಗಳು ಬದಲಾವಣೆ ಆದರೂ, ಸರ್ಕಾರ ಕಂಟಿನ್ಯೂಯಸ್ ಮಾಡಿ ಎನ್ನತಕ್ಕದ್ದು ಗೊತ್ತಿದ್ದರೂ ಸಹ ತಾವು ಹೀಗೆ ಮಾತನಾಡುತ್ತಿದ್ದೀರಿ.

ಶ್ರೀ ಎಚ್.ಎಸ್.ನಂಜೇಗೌಡ : ಈ ನೀರಾವರಿ ಯೋಜನೆಗಳಲ್ಲಿ ಕೆಲಸಗಳನ್ನು ಏಕೆ ನಿಲ್ಲಿಸಿದ್ದೀರಿ. ಸರ್ಕಾರ ಇದೆ ನಡೆಯುತ್ತಿದೆ, ಏಕೆ ನಿಲ್ಲಿಸಿದ್ದೀರಿ ಹೇಳಿ ಮತ್ತೆ?

ಶ್ರೀ ಸಿ.ಬೈರೇಗೌಡ : ಅಲ್ಲಿ ಅನೇಕ ದುರ್ವ್ಯವಹಾರ ನಡೆಯುತ್ತಿತ್ತು. ಅದನ್ನು ತಡೆಗಟ್ಟಬೇಕಾಗಿತ್ತು. ಕೋಟಿಗಟ್ಟಲೆ ಹಣ ಟೆಂಡರ್ ಇಲ್ಲದೇ ಡಿಪಾರ್ಟ್‌ಮೆಂಟಲ್ ವರ್ಕ್ ಎಂದು ಡಿಪಾರ್ಟ್‌ಮೆಂಟಿನ ಹೆಸರಿನಲ್ಲಿ ಅಧಿಕಾರಿಗಳು ಮಾಡುತ್ತಾ ಇರತಕ್ಕ ದುರ್ವ್ಯವಹಾರ ನಡೆಯುತ್ತಿತ್ತು. ಅದನ್ನು ನಿಲ್ಲಿಸುವುದಕ್ಕೋಸ್ಕರ ಪರೀಕ್ಷೆ ಮಾಡಿ ನೋಡಬೇಕು, ಅಲ್ಲಿ ಏನು ಆಗುತ್ತಿದೆ ಎಂದು ವಾಸ್ತವಾಂಶ ಏನು ಎನ್ನುವುದನ್ನು ತಿಳಿದುಕೊಳ್ಳುವುದಕ್ಕೆ ಅದನ್ನು ನಿಲ್ಲಿಸಿರತಕ್ಕದ್ದು.

ಶ್ರೀ ಎಂ. ಶ್ರೀನಿವಾಸ್ : ಮೂರು ತಿಂಗಳಲ್ಲಿ 100 ಕೋಟಿ ರೂಪಾಯಿ ಬೆಲೆ ಜಾಸ್ತಿ ಆಯಿತೆ?

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಪದೇ ಪದೇ ಜಾಲಪ್ಪನವರು, ಆಗಲೀ ಮಾನ್ಯ ಬೇರೇಗೌಡರೇ ಆಗಲಿ ಹಿಂದಿನ ಸರ್ಕಾರ ಮಾಡಿದೆ ಅದಕ್ಕೆ ನಾವು ಮುಂದುವರಿಸುತ್ತೇವೆ ಎಂದು ಹೇಳಿದ್ದಾರೆ. ನಾನು ಕೇಳುತ್ತೇನೆ. ಹಿಂದಿನ ಸರ್ಕಾರ ಮಾಡಿರತಕ್ಕ ಟೆಂಡರ್ ಸರಿಯಿಲ್ಲ ಎನಿಸಿದರೆ ಅಥವಾ ನಿಮಗೆ ಟೆಂಡರ್ ಕಾಲ್‌ಫರ್ ಮಾಡಿದಾಗ ಇದು ಎಕ್ಸಸ್ ಇದೆ, ನಾವು ಕೊಟ್ಟಿದ್ದನ್ನು ಕ್ಯಾನ್ಸಲ್ ಮಾಡುವುದಕ್ಕೆ ಅಡ್ಡಿ ಬರುವುದಿಲ್ಲ. ನೀವು ಈಗಾಗಲೇ ಮಾನ್ಯ ನಂಜೇಗೌಡರು ಹೇಳಿದ ಪೀಸ್ ವರ್ಕಗೆ ಕೆಲವು ಕಂಟ್ರಾಕ್ಟರ್‌ಗಳಿಂದ ಟೆಂಡರ್ ಕಾಲ್‌ಫಾರ್ ಮಾಡಿಯೇ ಆ ಕಂಟ್ರಾಕ್ಟರ್ಸ್‌ವರ್ಕ್ಸ್ ಮಾಡುತಿದ್ದದ್ದು. ಟೆಂಡರ್ ವರ್ಕ್ ಸ್ಲೋ ಮಾಡುತ್ತಿದ್ದಾರೆ. ಪೇಮೆಂಟ್ಸ್ ಎಕ್ಸಸ್ ಮಾಡಿದ್ದಾರೆ. ಕ್ಲೈಮ್ಸ್ ಎಕ್ಸಸ್ ಮಾಡಿದ್ದಾರೆ. ಇದು ಸರಿಯಿಲ್ಲ ಎಂದು ಅನೇಕ ಕಾರಣದಿಂದ ನೀವು ನಿಲ್ಲಿಸಿದ್ದೀರಿ ಇದಕ್ಕೆ ಮಾತ್ರ ಹಿಂದಿನ ಸರ್ಕಾರದಲ್ಲಿ ಮಾಡಿದ್ದು ಅದನ್ನು ಮುಂದುವರಿಸುತ್ತೇವೆ ಎಂದು ಹೇಳುತ್ತಿದ್ದೀರಿ. ನಿಮಗೆ ಮನಸ್ಸು ಇದ್ದರೆ ಅದನ್ನು ಕ್ಯಾನ್ಸಲ್ ಮಾಡಬಹುದಿತ್ತು, ಇಲ್ಲ ಎಂದರೆ ಸಮರ್ಥನೆ ಮಾಡಿಕೊಳ್ಳಿ. ಅವರೂ ಮಾಡಿದ್ದು ಸರಿ, ನಾವು ಮಾಡಿದ್ದೂ ಸರಿ ಎಂದು ಹೇಳಿಕೊಳ್ಳಿ. ಅವರು ಮಾಡಿದ್ದಾರೆ ಅದಕ್ಕೆ ನಾವು ಮುಂದುವರಿಸುತ್ತೇವೆ ಎಂದರೆ ಏನು ಅರ್ಥ?

ಶ್ರೀ ಬೈರೇಗೌಡ : ಹಿಂದೆ ಆಗಿರತಕ್ಕದ್ದು ತಾವು ಹೇಳಿದ ಮೇಲೆ ನಾವು ಮಾಡಿದ್ದು ಅಲ್ಲ ಎಂದು ನಾವು ಹೇಳಲೇಬೇಕಾಗುತ್ತದೆ. ನಾವು ಸ್ಥಳವನ್ನು ಅಲ್ಲಿ ಕೊಟ್ಟಿದ್ದೇವೆ. ಜಾಗವನ್ನು ನಾವು ಅಲ್ಲಿ ಸೆಲೆಕ್ಟ್ ಮಾಡಲಿಲ್ಲ. ರಾಷ್ಟ್ರೀಯ ಕ್ರೀಡೆಗಳನ್ನು ಕರ್ನಾಟಕದಲ್ಲಿ ನಡೆಸುತ್ತೇವೆ ಎಂದು ನಾವು ಒಪ್ಪಿಕೊಂಡಿದ್ದೇವೆಯೇ ಹಿಂದಿನ ಸರ್ಕಾರ ಮಾಡಿರತಕ್ಕದ್ದು.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ನಾವು ಒಪ್ಪಿಕೊಂಡು ಮಾಡಿದ್ದೇವೆ. ನಾವು ಒಪ್ಪಿಕೊಂಡು ಕೆಲಸ ಮಾಡುವುದಕ್ಕೆ ಸಿದ್ಧರಾಗಿದ್ದೇವೆ, ನೀವು ಮನಸ್ಸು ಇಲ್ಲ

ಎಂದರ ಬೇಡ ಎಂದು ಹೇಳಿ. ಇಲ್ಲ ಎಂದರ ಸಮರ್ಥನೆ ಮಾಡಿಕೊಳ್ಳಿ ನಾವು ಮಾಡಿದ್ದುದು ಸರಿ ಇದೆ ಎಂದು.

(ಗೊಂದಲ)

ಶ್ರೀ ಹೆಚ್. ಡಿ. ದೇವೇಗೌಡ : ರಾಷ್ಟ್ರೀಯ ಕ್ರೀಡಾ ಸಮುಚ್ಚಯ ಇಲ್ಲಿ ನಡೆಯಬೇಕು ಎಂದು ನಿರ್ಣಯ ಮಾಡಿದ್ದುದು ಯಾವುದೇ ಸರ್ಕಾರ ಇರಲಿ ನಾವು ಅದನ್ನು ಸ್ವಾಗತ ಮಾಡಿದ್ದೇವೆ. ನಿರ್ಣಯ ಏನು ಮಾಡಿದ್ದಾರೆ, ಅದಕ್ಕೆ ಜವಾಬ್ದಾರಿಯಿಂದ ಇದ್ದೇವೆ. ನಿಮ್ಮ ಮೇಲೆ ನಾನು ಭಾರ ಹಾಕುತ್ತಾ ಇಲ್ಲ.

ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ : ನೀವು ಇಲ್ಲದೇ ಇದ್ದಾಗ ಇಲ್ಲಿ ಚರ್ಚೆ ನಡೆಯುತ್ತಿತ್ತು.

ಶ್ರೀ ಹೆಚ್.ದೇವೇಗೌಡ : ಜವಾಬ್ದಾರಿ ತೆಗೆದುಕೊಂಡಿದ್ದೇವೆ. ನಿರ್ಣಯದ ಬಗ್ಗೆ ಸಂಶಯ ಇದ್ದರ ಈ ಸಭೆಯಲ್ಲಿ ಸಂಶಯ ನಿವಾರಣೆ ಮಾಡಬೇಕು. ಅಂತಹ ಸಂಶಯ ಇದ್ದರೆ ಹೇಳಿ ನಾನು ಅದನ್ನು ನಿವಾರಣೆ ಮಾಡುತ್ತೇನೆ. ನಾಳೆ ರಿಪ್ಲೈ ಕೊಡುತ್ತೇನೆ.

ಶ್ರೀ ಎಚ್.ಎನ್.ನಂಜೇಗೌಡ : ನಾನು ಏಕೆ ಹೇಳುತ್ತಿದ್ದೇನೆ ಎಂದರೆ ಈ ವರ್ಷವೇ ಕ್ರೀಡಾ ಕೂಡ ಇದೆಯಲ್ಲಾ ಇವರು ಏನು ತೀರ್ಮಾನ ಮಾಡಿದರು ಈ ವರ್ಷವೇ ನಡೆಸಬೇಕು ಎಂತಲ್ಲ. 2-3ವರ್ಷದಿಂದ ನಡೆದವು ಇದೆ. ತಮಿಳುನಾಡಿನಲ್ಲಿ ನಾವು ಈ ವರ್ಷ ನಡೆಸುವುದಿಲ್ಲ ಎಂದು ಹೇಳಿದರು. ಇದು ಏನೂ ಭಗವದ್ಗೀತೆ ಅಥವಾ ಬೈಬಲ್ ಅಲ್ಲ ಇಂತಹ ದಿವಸವೇ ಆಗಬೇಕು ಎಂದು ರಾಷ್ಟ್ರೀಯ ಕ್ರೀಡೆಗಳು. ನಾನು ಹೇಳುತ್ತಾ ಇರತಕ್ಕದ್ದು ಕರ್ನಾಟಕದಲ್ಲಿ ಇನ್ನು ಎರಡು ವರ್ಷ ನಿಧಾನ ಮಾಡಬಹುದಿತ್ತು. ನಾನು ಇಷ್ಟೇ ಹೇಳುತ್ತಿದ್ದೆ. ಒರಿಜಿನಲ್ ಟೆಂಡರ್ ನೋಟಿಫಿಕೇಷನ್ ಏನು ಇತ್ತು ಒರಿಜಿನಲ್ ಎಸ್ಟಿಮೇಟ್ ಏನು ಇತ್ತು, ಪ್ಲಾನ್ ಏನು ಇತ್ತು ಅದು ರಿವೈಸ್ ಆಯಿತೇ, ಟೆಂಡರ್ ನೋಟಿಫಿಕೇಷನ್ ರಿವೈಸ್ ಆಯಿತೇ, ಪತ್ರಿಕೆಯ ಹೇಳಿಕೆಯಲ್ಲಿ ನಾವು ಅಡ್ವಾನ್ಸ್ ಕೊಡುತ್ತೇವೆ ಎಂದು ಇಂಟರೆಸ್ಟ್ ಫ್ರೀ ಎಂದು ಇತ್ತೇ? ಸುಲಭ ದರದಲ್ಲಿ ಅಡ್ವಾನ್ಸ್ ಎಂದು ಇತ್ತಿಲ್ಲ. ಕಡತಗಳು ಎಂದರೆ ನಾನು ನಿಮ್ಮ ಫೈಲ್ ಆಗಲಿ ಅಥವಾ ನೋಟಿಂಗ್ಸ್ ಆಗಲಿ ಅಲ್ಲ ಕೇಳಿದ್ದುದು. ಇವನ್ನು ಈ ಸದನದಲ್ಲಿ ಮಂಡಿಸಿದ್ದರೆ ಚೆನ್ನಾಗಿತ್ತು ಎನ್ನತಕ್ಕ ಮಾತನ್ನು ಹೇಳಿದೆ. ನಾನು ಅದನ್ನು ಅಷ್ಟಕ್ಕೆ ನಿಲ್ಲಿಸುತ್ತೇನೆ. ನಾನು ಏಕೆ ಹೇಳಿದೆ ಎಂದರೆ ನಾನು ಆದ್ಯತೆಯ ಬಗ್ಗೆ ಮಾತನಾಡುತ್ತಿದ್ದೇನೆ ನಾನು ಏನು ಹೇಳಿದೆ ಎಂದರೆ ಮತ್ತೊಮ್ಮೆ ಸಭಾಧ್ಯಕ್ಷರ ಮುಖಾಂತರ ಹೇಳುತ್ತೇನೆ. ಮಾನ್ಯ ಹೆಗಡೆಯವರು ಎಲೆಕ್ಷನ್‌ಗೆ ನಿಲ್ಲಲಿಲ್ಲ ನಮ್ಮನ್ನು ಗುರುತು ಮಾಡುವವರು ಜನ. ನಮ್ಮ ವಾಟಾಳ್ ಅವರು ಕನ್ನಡಕ್ಕೆ ಹೋರಾಟ ಮಾಡುತ್ತಾರೆ. ಮಾನ್ಯ ಹೆಗಡೆಯವರು ರಾಷ್ಟ್ರ ರಾಜಕಾರಣಕ್ಕೆ ಹೋಗುತ್ತಾರೆ. ಅವರು ಇದ್ದರೆ ನೀರಾವರಿ ಮಾಡುತ್ತಾರೆ. ಸಾಮಾನ್ಯವಾಗಿ ರೈತರ ಕೆಲಸ ಮಾಡುತ್ತಾರೆ ಎಂದು ಜನ ಗುರುತು ಮಾಡಿಲ್ಲ. 'ದೇವೇಗೌಡರು ಮಣ್ಣಿನ ಮಗ, ಕೊಟ್ಟರು ಎಲ್ಲಾ ಮಕ್ಕಳು ಇವರಿಗೆ ಓಟನ್ನು ಮಣ್ಣಿನ ಮಕ್ಕಳಿಗೆ ಇದು ಆಧ್ಯತೆಯಾಯಿತಲ್ಲಾ, ಇಂಟರ್‌ನ್ಯಾಷನಲ್ ಏರಪೋರ್ಟ್ ಅದ್ಯತೆಯೂಯಿತದಲ್ಲಾ ಎಕ್ಸ್‌ಪ್ರಸ್ ಹೈವೇ ಅದ್ಯತೆಯಾಯಿತಲ್ಲಾ, ಫೈವ್

ಸ್ಟಾರ್ ಕಲ್ಚರ್‌ರವರಿಗೆ ಸಹಾಯ ಮಾಡುವುದೇ ಸರ್ಕಾರ ಆದ್ಯತೆ ಯಾಯಿತಲ್ಲವೆಂದು ನಾನು ಸರ್ಕಾರದ ಆದ್ಯತೆಯ ಬಗ್ಗೆ ತಲೆ ಕೆಡಿಸಿಕೊಂಡೆ, ಇರಲಿ ನಾನು ಶಿಕ್ಷಣ ನೀತಿ ಬಗ್ಗೆ ಗಂಭೀರವಾಗಿ ಹೇಳುತ್ತಿದ್ದೇನೆ. ನನಗೆ ಚಿಂತನೆ ಏನೆಂದರೆ, ಯಾವ ಸರ್ಕಾರವೇ ಬರಲಿ ಶಿಕ್ಷಣ ನೀತಿ ಬಗ್ಗೆ ಮಾತನಾಡುತ್ತದೆಯೇ ಹೊರತು ಏನೂ ಮಾಡುವುದಿಲ್ಲ. ಶಾಲೆಗೆ ಹೋಗುವ ಚಿಕ್ಕ ಮಕ್ಕಳ ಬಗ್ಗೆ ಹೇಳುವುದಾದರೆ, ಬಸವನಗುಡಿಯಲ್ಲಿರುವ ಕಾನ್ವೆಂಟ್‌ಗೆ ಹೋಗಲು ಮಕ್ಕಳು ಮಲ್ಲೇಶ್ವರಂನಿಂದ ಬರುತ್ತಾರೆ. ಮಲ್ಲೇಶ್ವರಂನಲ್ಲಿರುವ ಶಾಲೆಗೆ ಬಸವನಗುಡಿಯಿಂದ ಮಕ್ಕಳು ಹೋಗುತ್ತಾರೆ ತಬ್ಬಲಿ ಮಕ್ಕಳು ಸರ್ಕಾರಿ ಶಾಲೆಗೆ ಹೋಗುತ್ತಾರೆ. ಬೆಂಗಳೂರು ಮಹಾನಗರಪಾಲಿಕೆ ಪ್ರದೇಶದಲ್ಲಿ ಸರ್ಕಾರಿ ಶಾಲೆಗಳು ಯಾವಸ್ಥಿತಿಯಲ್ಲಿದೆಯೆಂದು ಯಾರಿಗೂ ಗೊತ್ತಾಗುವುದಿಲ್ಲ. ಸರ್ಕಾರಿ ಶಾಲೆಗಳು ಇನ್ನೇನು ಈಗಲೋ ಆಗಲೋ ಬೀಳುವಂಥ ಬಾಡಿಗೆ ಮನೆಯಲ್ಲಿ ನಡೆಯುತ್ತಿವೆ. ಕಾನ್ವೆಂಟ್‌ಗೆ ಹೋಗುವ ಮಕ್ಕಳಿಗೆ ಸುಪೀರಿಯಾರಿಟಿ ಕಾಂಪ್ಲೆಕ್ಸ್ ಇದ್ದರೆ ಸರ್ಕಾರಿ ಶಾಲೆಗೆ ಹೋಗುವ ಬಡ ಮಕ್ಕಳಿಗೆ ಇನ್‌ಫಿರಿಯಾರಿಟಿ ಕಾಂಪ್ಲೆಕ್ಸ್ ಇರುತ್ತದೆ. ಇನ್ನು ಈ ಸ್ಕೂಲಿನಲ್ಲಿ ಸೀಟ್ ಕೊಡಿಸಬೇಕಾದರಂತೂ ಅಸೆಂಬ್ಲಿ ಸೀಟ್ ತೆಗೆದುಕೊಂಡಷ್ಟೇ ಕಷ್ಟ. ಇದರ ಬಗ್ಗೆ ಏನಾದರೂ ಒಂದು ನೀತಿ ಮಾಡಿ. ಒಂದು ಪ್ರದೇಶದಲ್ಲಿ ಶಾಲೆ ಇದ್ದು ಅದರ ಸುತ್ತಮುತ್ತ ಒಂದು ಕಿಲೋಮೀಟರ್‌ನೊಳಗೆ ವಾಸಿಸುವಂಥ ಮಕ್ಕಳಿಗೆ ಮೊದಲ ಆದ್ಯತೆ ಇಟ್ಟು ನಂತರ ಬೇರೆಯವರ ಮಕ್ಕಳಿಗೆ ಸೀಟು ಕೊಡಲಾಗುವುದೆಂದು ನೀತಿ ಮಾಡಿ. ಇದರ ಬಗ್ಗೆ ಕಾನೂನು ಮಾಡುವುದಕ್ಕಾಗುವುದಿಲ್ಲವೇ? ಇದು ಬಹಳ ಸರಳವಾಗಿದ್ದು, ಇಲ್ಲದಿದ್ದರೆ ಜನರಿಗೆ ಹಿಂಸೆಯಾಗುತ್ತದೆ. ಇನ್ನು ಪ್ರೊಫೆಷನಲ್ ಎಜುಕೇಷನ್ ಇನ್‌ಸ್ಟಿಟ್ಯೂಷನ್‌ಗಳ ಬಗ್ಗೆ ಹೇಳುವುದಾದರೆ ಏನು ಮಾಡಿದ್ದೀರಿ? ಈಗ ನಾವು ಏನಾದರೂ ಹೇಳಿದರೆ ನೀವು ಆರ್ಟಿಕಲ್ 29,30 ಎನ್ನುತ್ತೀರಿ. ಯಾರೋ ಮಠಾಧಿಪತಿಗಳು ಭಿಕ್ಷೆ ಎತ್ತಿ ಒಂದು ಸಂಸ್ಥೆಯನ್ನು ಸ್ಥಾಪಿಸಿರುತ್ತಾರೆಂದಿಟ್ಟುಕೊಳ್ಳೋಣ. ಮೀಸಲಾತಿ ನೀತಿಗೆಂದು ಅವರ ಸಂಸ್ಥೆಗೆ ನೀವು ಕೈ ಹಾಕುತ್ತೀರಿ ರಿಸರ್ವೇಷನ್ ಪಾಲಿಸಿ ಎಂದು ಹೇಳಿ. ಈ ಮೈನಾರಿಟಿ ಇನ್‌ಸ್ಟಿಟ್ಯೂಷನ್ ಹೆಸರಿನಲ್ಲಿ, ನಾನೂ ರಾಜ್ಯಾಂಗವನ್ನು ಸ್ವಲ್ಪ ಓದಿದ್ದೇನೆ, ಇವರು ವ್ಯಾಪಾರ ಮಾಡುವುದಕ್ಕೆ ಮೆಡಿಕಲ್ ಇಂಜಿನಿಯರಿಂಗ್, ಡೆಂಟಲ್ ಕಾಲೇಜುಗಳನ್ನು ಮಾಡಿಕೊಳ್ಳಬಹುದೆಂದು ನಿಯಮವೇನಾದರೂ ಇದೆಯೇ? ಇದರ ಬಗ್ಗೆ ಏನಾದರೊಂದು ನೀತಿ ಇರಬೇಕಲ್ಲಾ, ಎಲ್ಲರಿಗೂ ಒಂದೇ ಕಾನೂನು ಬೇಕಲ್ಲಾ ನಾನು ಏಕೆ ಹೇಳುತ್ತಿದ್ದೇನೆಂದರೆ, ultimately equality of opportunity ಎಂದು ಹೇಳುತ್ತೇವೆ. ನೀವು ಸುಪ್ರಿಂ ಕೋರ್ಟ್ ತೀರ್ಮಾನವೆಂದು ಹೇಳುತ್ತಿದ್ದೀರಿ.

ಶ್ರೀ ಎಚ್.ಡಿ.ದೇವೇಗೌಡ : ಮಾನ್ಯ ನಂಜೇಗೌಡರು ಸಾಕಷ್ಟು ಅನುಭವಿ ಶಾಸಕರಾಗಿದ್ದಾರೆ. ನಾನು ಬೇರೆಯವರು ಮಾತನಾಡುವಾಗ ಸಾಮಾನ್ಯವಾಗಿ ಮಧ್ಯೆ ಪ್ರವೇಶಿಸುವುದಿಲ್ಲ. ಅದು ನನ್ನ ಹವ್ಯಾಸ. ನೀವು ಎಷ್ಟೇ ಹರಿತವಾಗಿ ಟೀಕಿಸಿದರೂ ಸ್ವಾಗತ ಮಾಡುವ ಸ್ವಭಾವವಿದೆ. ಈ ಸದನದಲ್ಲಿ ನಾನು ಬಹಳ ವರ್ಷ ಕುಳಿತು ನೋಡಿದ್ದೇನೆ. ಈ ಸಂದರ್ಭದಲ್ಲಿ ತಮ್ಮ ಗಮನಕ್ಕೆ ಒಂದು ವಿಷಯ ತರಲು ಇಷ್ಟಪಡುತ್ತೇನೆ. ಏನೆಂದರೆ ರಾಜ್ಯದಲ್ಲಿರುವ ಪ್ರೊಫೆಷನಲ್ ಕಾಲೇಜುಗಳಿಗೆ

ಪ್ರವೇಶಾವಕಾಶದ ಬಗ್ಗೆ ಇದೇ ಸದನದಲ್ಲಿ ಒಂದು ವಿಧೇಯಕವನ್ನು ಮಂಡಿಸುವ ಕುರಿತು ಸರ್ಕಾರ ತಯಾರಿ ನಡೆಸುತ್ತಿದೆ. ಈಗಾಗಲೇ ಕರಡು ವಿಧೇಯಕ ತಯಾರಿಸಲಾಗಿದೆ. ಆದರೆ ಅದನ್ನು ಸದನದ ಮುಂದೆ ತರುವುದಕ್ಕಿಂತ ಮುಂಚಿತವಾಗಿ ಎಲ್ಲಾ ರೀತಿಯ ಸಾಧಕ-ಭಾದಕಗಳನ್ನು ಯೋಚಿಸಿ, ಒಂದು ವೇಳೆ ಅದು ಕೋರ್ಟ್ ಮುಂದೆ ಹೋದರೆ, ಸ್ಕ್ರೂಟಿನಿ ಬಗ್ಗೆ ಯಾವುದೇ ರೀತಿಯ ಆತಂಕ ಬರಬಾರದೆನ್ನುವ ಕಾರಣಕ್ಕೆ ಕೆಲವು ಪರಿಣಿತರಿಂದ ಇದನ್ನು ಪುನರ್ ಪರಿಶೀಲಿಸಿ ಈ ಸದನದ ಮುಂದೆ ನಾಳಿದ್ದು, ಅಥವಾ ಸದನ ಮುಗಿಯುವುದರೊಳಗಾಗಿ ಸದರಿ ವಿಧೇಯಕ ಬರಬಹುದು. ಇಲ್ಲವೇ ಇನ್ನು 15-20 ದಿವಸದಲ್ಲಿ ಇದಕ್ಕೋಸ್ಕರ ವಿಶೇಷ ಸಭೆ ಕರೆದು ಆಗ ಸಭೆಯ ಮುಂದೆ ವಿಧೇಯಕವನ್ನು ಮಂಡಿಸುವವರಿದ್ದೇವೆ. ನೀವು ಹೇಳಿರುವ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಆ ವಿಧೇಯಕವನ್ನು ತರುತ್ತಿದ್ದೇವೆ. ಆ ಸಭೆ ತೆಗೆದಕೊಳ್ಳುವ ನಿರ್ಣಯಕ್ಕೆ ಬಹುಶಃ ನಿರ್ಣಯ ತೆಗೆದುಕೊಳ್ಳುವಾಗ ನೀವೆಲ್ಲರೂ ಒಂದೂಗೂಡಿ ಆಗಿರುವ ಅನಾಮಲೀಸ್, ಅನ್ಯಾಯವನ್ನು ಸರಿಪಡಿಸುವುದಕ್ಕೆ ನಿಮ್ಮ ಸಹಕಾರವನ್ನು ನಾನು ಬಯಸುತ್ತೇನೆ.

ಶ್ರೀ ಎಚ್.ಎಸ್.ನಂಜೇಗೌಡ : ತುಂಬಾ ಅಭಿನಂದನೆಗಳು. ಶಿಕ್ಷಣ ನೀತಿಯ ಬಗ್ಗೆ ಮಾತನಾಡಲು ಏಕೆ ವಿಷಯ ತೆಗೆದುಕೊಂಡೆನೆಂದರೆ, Equality of opportunity ಬಗ್ಗೆ ಬಾರಿ ಹೇಳುತ್ತಿದ್ದೇವೆ. What is the equality of opportunity? For whom? Equality of opportunity for unequals, you have not created equality of facilities. when there are no equality of facilities, equality in providing facilities, how can you have equality of opportunity? How can one complete with another ಗ್ರಾಮಾಂತರ ಪ್ರದೇಶದಲ್ಲಿರುವ ಶಾಲೆಗಳನ್ನು ನೋಡಿಲ್ಲವೇ? 5-6 ತರಗತಿಗಳಿಗೆ ಒಬ್ಬರೇ ಮಾಸ್ತರು ಪಾಠ ಹೇಳುತ್ತಿರುತ್ತಾರೆ, ಇನ್ನು ಕೆಲವು ಕಡೆ ಒಂದೇ ಕೊಠಡಿ.

ಒಬ್ಬರೇ ಉಪಾಧ್ಯಾಯರಿಗಿದ್ದಾರೆ, ಪಿಯುಸಿ ತೇರ್ಗಡೆಯಾದ ನಂತರ ಅದರಲ್ಲಿ ಶೇಕಡ 85ರಷ್ಟು ಅಂಕ ಗಳಿಸಿದ್ದರೂ ಪ್ರೊಫೆಷನಲ್ ಕಾಲೇಜುಗಳಲ್ಲಿ ಸೀಟು ಸಿಕ್ಕುವುದಿಲ್ಲ. ಅದೇ ಶೇಕಡ 50-55ರಷ್ಟು ಅಂಕ ಗಳಿಸಿದವರಿಗೆ ಸೀಟು ದಕ್ಕುತ್ತದೆ. ಏಕೆಂದರೆ ಕಾಮನ್ ಎಂಟ್ರೆನ್ಸ್ ಟೆಸ್ಟ್ ಇರುತ್ತದೆ. ಇದನ್ನು ತಾವು ನೋಡಿದ್ದೀರಾ? ವ್ಯಾಪಾರ ಮಾಡುವುದಕ್ಕೆ ಅದೊಂದು ದಾರಿ. ಪಿಯುಸಿಯಲ್ಲಿ ಎರಡು ವರ್ಷ ಕಷ್ಟಪಟ್ಟು ಓದಿ, ವಿದ್ಯಾಭ್ಯಾಸ ಮಾಡಿ ಪರೀಕ್ಷೆಯಲ್ಲಿ ಮೆರಿಟ್ ಬಂದಿರುವುದರ ಬಗ್ಗೆ ನಿಮಗೆ ವಿಶ್ವಾಸವಿಲ್ಲದೆ ಎಲ್ಲಿಯೋ ಕುಳಿತುಕೊಂಡು ಓದಿ ಒಂದೇ ದಿವಸದಲ್ಲಿ ಕಾಮನ್ ಎಂಟ್ರೆನ್ಸ್ ಟೆಸ್ಟ್‌ನಲ್ಲಿ ಪಾಲ್ಗೊಳ್ಳುವವನಿಗೆ ನೀವು ಸೀಟು ಕೊಡುತ್ತೀರೆಂದರೆ ಇದನ್ನು ಏಕೆ ಮಾಡಿದಿರಿ? ಇದನ್ನು ತಾವು ನಿಲ್ಲಿಸಬೇಕಾಗುತ್ತದೆ. ಇದು ನೀತಿಯ ವಿಷಯಕ್ಕೆ ಸಂಬಂಧಿಸಿದ್ದುದು. ನಾನು ಸರ್ಕಾರದಿಂದ ನಿರೀಕ್ಷಿಸುವುದೇನೆಂದರೆ, ಇದು ಮಣ್ಣಿನ ಮಗನ ಸರ್ಕಾರವೆಂದು ನಾನು ಮೊದಲೇ ಹೇಳಿದ್ದೇನೆ. ಗ್ರಾಮಾಂತರ ಪ್ರದೇಶದಲ್ಲಿರುವ ಶಾಲೆಗಳನ್ನು ಅಭಿವೃದ್ಧಿಪಡಿಸಲು ಏನು ಮಾಡುತ್ತೀರಿ?

(ಈ ಹಂತದಲ್ಲಿ ಸಭಾಧ್ಯಕ್ಷರ ಪೀಠವನ್ನು ಶ್ರೀ ಕೆ.ಎನ್.ನಾಗೇಗೌಡರು ಅಲಂಕರಿಸಿದರು)

ಶ್ರೀ ಜೆ.ಹೆಚ್. ಪಟೇಲ್ : ನಮ್ಮ ನಾಯಕರು ಮಣ್ಣಿನ ಮಕ್ಕಳು ಎಂಬುದು ಗೊತ್ತು. ಬಹಳ ಜನ ಹವಾದಲ್ಲಿರುತ್ತಾರಲ್ಲಾ ಅವರನ್ನು ನೋಡಿಕೊಳ್ಳುವುದಕ್ಕೆ ನಾವು.

ಶ್ರೀ ಎಚ್.ಡಿ.ದೇವೇಗೌಡ : ಈಗ ಗಂಭೀರವಾದ ವಿಷಯದ ಬಗ್ಗೆ ತಾವು ಚರ್ಚೆ ಮಾಡುತ್ತಿರುವುದನ್ನು ನಾನು ಸ್ವಾಗತಿಸುತ್ತೇನೆ. ಇಂತಹ ವಿಷಯಗಳೇ ಸದನದಲ್ಲಿ ಚರ್ಚೆಯಾಗಬೇಕು. ಗ್ರಾಮಾಂತರ ಪ್ರದೇಶದಲ್ಲಿರುವ ಶಾಲಾ ಪರಿಸರ ಮತ್ತು ಇಲ್ಲಿರುವ ಶಾಲಾ ಪರಿಸರದ ಬಗ್ಗೆ ಮಾತನಾಡುತ್ತಿದ್ದೀರಿ, ಅದು ಸರಿ ಇದೆ. ನಾನು ತಮ್ಮಲ್ಲಿ ವಿನಂತಿಸಿಕೊಳ್ಳುವುದೇನೆಂದರೆ , ನಿಮ್ಮಲ್ಲಿ ಅಪಾರವಾದ, ಅಳವಾದ ಅನುಭವವಿದೆ. ಇದನ್ನು ಓವರ್ ಕಮ್ ಮಾಡುವುದಕ್ಕೆ ಏನು ಮಾಡಬಹುದೆಂಬ ಸಲಹೆ ಕೊಟ್ಟರೆ ತುಂಬಾ ಒಳ್ಳೆಯದು. ಏಕೆಂದರೆ, ಕೃಷಿ ವಿಶ್ವವಿದ್ಯಾನಿಲಯದಲ್ಲಿ ವ್ಯವಸಾಯಗಾರರ ಮಕ್ಕಳಿಗೆಂದು ಶೇಕಡ 15ರಷ್ಟು ಮಾರ್ಕ್ಸ್ ಇಟ್ಟಿದ್ದೇವೆ. ಅದು ಈಗಿನಿಂದಲ್ಲ. ದಿವಂಗತ ದೇವರಾಜ ಅರಸುರವರ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇದೇ ರೀತಿ ಇಂಜಿನಿಯರಿಂಗ್, ಮೆಡಿಕಲ್ ಮತ್ತು ಡೆಂಟಲ್ ಕಾಲೇಜುಗಳಿಗೆ ಹಳ್ಳಿಯ ಮಕ್ಕಳನ್ನು ಸೇರಿಸುವುದಕ್ಕೆ ಅವರಿಗಾಗಿ ನಾವು ಶೇಕಡ 70 ರಷ್ಟು ಜನಸಂಖ್ಯೆ ಆಧಾರದ ಮೇಲೆ ಕೊಡಬೇಕೆಂದು ನಾನು ಘೋಷಿಸಿದ್ದೇನೆ. ಇದಕ್ಕೆ ಕೆಲವು ಕಾನೂನು ಪಂಡಿತರು ಬೇರೆ ಬೇರೆ ರೀತಿಯ ವ್ಯಾಖ್ಯಾನಗಳನ್ನು ಮಾಡುತ್ತಾರೆ. ಅದರ ಬಗ್ಗೆ ನಾನು ಹೇಳುವುದಿಲ್ಲ. ನಿಮ್ಮಿಂದ ಏನಾದರೂ ಬೆಳಕು ಚೆಲ್ಲುವುದಕ್ಕೆ ಸಾಧ್ಯವಿದ್ದರೆ ಹೇಳಿ ನಾನು ಸ್ವಾಗತಿಸುತ್ತೇನೆ. ಕಾಮನ್ ಎಂಟ್ರೆನ್ಸ್ ಟೆಸ್ಟ್‌ನಲ್ಲಿರುವ ಲೋಪ-ದೋಷ, ಅದನ್ನು ಮುಂದುವರಿಸಬೇಕೇ ಯಾವ ಮಾರ್ಗದಲ್ಲಿ ನಾವು ಮುಂದೆ ಹೋಗಬೇಕೆಂದು ನೀವು ಹೇಳಿದರೆ I am prepared to welcome it.

ಶ್ರೀ ಎಚ್.ಎನ್.ನಂಜೇಗೌಡ : ಕಾಮನ್ ಎಂಟ್ರೆನ್ಸ್ ಎಕ್ಸಾಮಿನೇಷನ್ ಅನ್ನು ತೆಗೆಯಬೇಕು. ಹುಡುಗರು ಎರಡು ವರ್ಷಗಳ ಕಾಲ ಎಲ್ಲಿಯೋ ಓದಿಕೊಂಡು ಬಂದು ನಂತರ ಕಾಮನ್ ಎಂಟ್ರೆನ್ಸ್ ಎಕ್ಸಾಮಿನೇಷನ್‌ನಲ್ಲಿ ಮೆರಿಟ್ ಬರುತ್ತಾರೆ. ನಾನು ನಂಬುವುದಿಲ್ಲ. ಅಲ್ಲಿ ಗೋಲ್‌ಮಾಲ್ ಮಾಡುತ್ತಾರೆ. ಏಕೆಂದರೆ, ನನ್ನ ಗಮನಕ್ಕೆ ಇಂತಹ ಅನೇಕ ಪ್ರಕರಣಗಳು ಬಂದಿವೆ. ಹೋದ ಸಾರಿ ಹೊರಗಿನ ರಾಜ್ಯದಿಂದ ಬಂದಂಥವರಿಗೆ ಕಾಮನ್ ಎಂಟ್ರೆನ್ಸ್ ಎಕ್ಸಾಮಿನೇಷನ್ ನಡೆಸುವ ಮ್ಯಾನೇಜ್‌ಮೆಂಟ್‌ನವರು ಸುಮಾರು ಐದು ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು ಅವರಿಗೆ ಯಾವ ಕಾಲೇಜಿನಲ್ಲಿ ಸೀಟು ಬೇಕೋ ಆ ಕಾಲೇಜಿನಲ್ಲಿ ಮ್ಯಾನೇಜ್ ಮಾಡಿ ಸೀಟು ಕೊಡಿಸಿದ್ದಾರೆ. ಅದರ ಬಗ್ಗೆ ಹೇಳುವುದಕ್ಕೆ ನಾನು ಹೋಗುವುದಿಲ್ಲ. ಅದನ್ನು ರದ್ದುಪಡಿಸಲೇಬೇಕು.ಪಿಯುಸಿ ಏಕೆ ಬೇಕು? ಪಿಯುಸಿಯಲ್ಲಿ ಅನುತ್ತೀರ್ಣರಾದವರನ್ನೂ ಕೂರಿಸಿ. ಪಿಯುಸಿಯಲ್ಲಿ ಮೆರಿಟ್ ಬಂದಿರುವುದನ್ನು ಗಮನಕ್ಕೆ ತೆಗೆದುಕೊಳ್ಳುವುದಿಲ್ಲವೆಂದರೆ if it is not testing criteria ಅದು ಏಕೆ ಬೇಕು? ಬೇಡ, ಅನುತ್ತೀರ್ಣರಾದವರನ್ನೂ ಕೂರಿಸಿ. ನಿಮಗೆ ಕಾಮನ್ ಎಂಟ್ರೆನ್ಸ್ ಟೆಸ್ಟ್ ಪ್ರಾಮುಖ್ಯವಾಗುವುದಾದರೆ ಉಳಿದವು ಬೇಡ. ಇಲ್ಲದೇ ಎರಡು ವರ್ಷಗಳ ಪಿಯುಸಿ ಪ್ರಾಮುಖ್ಯವೆನ್ನುವುದಾದರೆ ಮೊದಲು ಇದನ್ನು ತೆಗೆದು ಹಾಕಿ.

ಶ್ರೀ ಬಿ.ಎಸ್.ಯಡಿಯೂರಪ್ಪ : ಮುಖ್ಯಮಂತ್ರಿಗಳವರೇ ಇದರ ಬಗ್ಗೆ ಬಹಳ ಸಂಧರ್ಭಗಳಲ್ಲಿ ಕೇಳಿದ್ದರಿಂದ ತಾವು ಈ ಬಗ್ಗೆ ಕೆಲವರನ್ನು ಕರೆಯಿಸಿಕೊಂಡು ಗುಪ್ತವಾಗಿ ಮಾತನಾಡಿ. ಇವೊತ್ತು ಪಿಯುಸಿಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಮೆಡಿಕಲ್ ಇಂಜಿನಿಯರಿಂಗ್ ಸೀಟುಗಳನ್ನು ಕೊಡುತ್ತಿಲ್ಲ. ಅವರು ಬೇರೆ ಏನು ಎಕ್ಸಾಮಿನೇಷನ್ ಮಾಡಿ ಕಂಪ್ಯೂಟರ್‌ನಲ್ಲಿ ಫೀಡ್ ಮಾಡುತ್ತಿದಾರೆ. ಕಂಪ್ಯೂಟರ್‌ನಲ್ಲಿ ನಂಬರ್ ತೆಗೆದುಕೊಳ್ಳದಿರುವುದರಿಂದ ಹತ್ತಾರು ಸಾವಿರ ಲಕ್ಷಾಂತರ ರೂಪಾಯಿಗಳನ್ನು ತೆಗೆದುಕೊಂಡು ಅವರುಗಳನ್ನು ಪರೀಕ್ಷೆಗೆ ಕೂರಿಸಿ ನಂಬರ್ ಕೊಟ್ಟಿರುವ ನೂರಾರು ಪ್ರಕರಣಗಳ ಉದಾಹರಣೆ ಕೊಡುತ್ತೇನೆ. ಇದು ತಮ್ಮ ಗಮನಕ್ಕೂ ಬಂದಿರಬಹುದು. ಹೀಗೆ ದುರುಪಯೋಗವಾಗುತ್ತಿರುವುದರಿಂದ ಈ ಪದ್ಧತಿಯನ್ನು ಬದಲಾವಣೆ ಮಾಡಿ ನಿಜವಾಗಿ ಯಾರು ಮೆರಿಟ್ ವಿದ್ಯಾರ್ಥಿಗಳಿದ್ದಾರೋ ಅವರಿಗೆ ಅನುಕೂಲವಾಗುವಂತೆ ಮಾಡಬೇಕು, ಹಾಗೆಯೇ ಗ್ರಾಮೀಣ ಭಾಗದಿಂದ ಬಂದಂಥ ವಿದ್ಯಾರ್ಥಿಗಳಿಗೂ ಈ ದಿಸೆಯಲ್ಲಿ ಅನುಕೂಲವಾಗಬೇಕು.

ಶ್ರೀ ಎಚ್.ಎನ್.ನಂಜೇಗೌಡ : ನನ್ನ ಇನ್ನೊಂದು ವಿನಂತಿ ಏನೆಂದರೆ, ಈ ವಿಚಾರದಲ್ಲಿ ಚರ್ಚೆ ಮಾಡಿ ಸದನದಲ್ಲಿ ಬೆಳಕು ಚೆಲ್ಲಿ ಎಂದರೆ ಅದು ಬಹಳ ತಡವಾಗುತ್ತದೆ. ಇದಕ್ಕೊಂದು ವಿಶೇಷ ಸಭೆ ಕರೆದರೆ ಇದನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. If I remember correctly, Kenya or in some African country they have provided 73% of allocation in the budget for education. ಇನ್ನು ಬೆಂಗಳೂರು ಯುನಿವರ್ಸಿಟಿಯ ಬಗ್ಗೆ ನಾನು ಒಂದು ಪತ್ರವನ್ನು ಬರೆದಿದ್ದೇನೆ.

**4.20 ಪಿ.ಎಂ**

ಶ್ರೀ ಸಿ.ಬೈರೇಗೌಡ : ಅಧ್ಯಕ್ಷರೆ, ಅವರು ಮಣ್ಣಿನ ಮಕ್ಕಳು ಮಣ್ಣಿನ ಮಕ್ಕಳು ಎಂದು ಹಲವಾರು ಸಲ ಹೇಳಿದ್ದೀರಿ. ಅದಕ್ಕೆ ಅನುಸಾರವಾಗಿ ಶೇಕಡ 70 ಪರ್‌ಸೆಂಟ್ ಗ್ರಾಮಾಂತರ ಪ್ರದೇಶದಿಂದ ಬಂದಿರತಕ್ಕಂಥ ಅಭ್ಯರ್ಥಿಗಳಿಗೆ ಮೀಸಲಾತಿಯನ್ನಿರಬೇಕೆಂದು

ಘೋಷಣೆಯನ್ನು ಮುಖ್ಯಮಂತ್ರಿಗಳು ಮಾಡಲಿದ್ದಾರೆ. ಅದರ ಬಗ್ಗೆ ತಾವೇನು ಹೇಳ್ತೀರಿ ? ಏಕೆಂದರೆ ತಾವು ಗೆದ್ದುಬಂದಿರತಕ್ಕದ್ದು ಬಸವನಗುಡಿ ಕ್ಷೇತ್ರದಿಂದ. ಆದರೆ ಇಲ್ಲಿ ತಾವು ಮಣ್ಣಿನ ಮಕ್ಕಳೆಂದು ಮಾತನಾಡುತ್ತಿದ್ದೀರಿ.

ಶ್ರೀ ಹೆಚ್ ಎನ್. ನಂಜೇಗೌಡ : ಬಸವನಗುಡಿ ಕ್ಷೇತ್ರದಲ್ಲಿ ಯಾವ್ಯಾವ ವರ್ಗದ ಜನರಿದ್ದಾರೆಂದೇ ಅವರಿಗೆ ಗೊತ್ತಿಲ್ಲ. ಅಲ್ಲಿ ಮಧ್ಯಮವರ್ಗದ ಜನರೇ 80 ಪರ್‌ಸೆಂಟ್ ಇದ್ದಾರೆ. ಈ ಬೆಂಗಳೂರು ಯುನಿವರ್ಸಿಟಿ ಅಫೇರ್ಸ್ ಏನಿದೆ, ತಾವು ರಾಜ್ಯಪಾಲರ ಭಾಷಣದಲ್ಲಿ ಉತ್ತರವನ್ನು ಹೇಳವಾಗ ಅದನ್ನು ನೆನಸಿಕೊಂಡು judicial probe ಯಾವಾಗ ಮಾಡುತ್ತೀರಿ ಎಂಬುದನ್ನು ಹೇಳಬೇಕಾಗುತ್ತದೆ. ಇನ್ನು ಮೀಸಲಾತಿಯ ಪಾಲಿಸಿ. ಬಹುಶಃ ಜೆಹೆಚ್. ಪಟೇಲರು ಇದನ್ನು ಒಪ್ಪುತ್ತಾರೆ, ಅದು ಅವರಿಗೆ ಗೊತ್ತಿದೆ. ಈ ಮೀಸಲಾತಿ ಎಂದರೆ ಏನು ? ಅದು ಒಂದು ರೀತಿ ಔಷಧಿ, ಟಾನಿಕ್. ಬ್ಯಾಕ್‌ವರ್ಡ್‌ನೆಸ್ ಎಂದರೆ ಏನು ? ಕಾಯಿಲೆ. It

is a social disease. ಆ ಕಾಯಿಲೆಯನ್ನು ವಾಸಿ ಮಾಡಲು ಔಷಧಿಯನ್ನೋ, ಟಾನಿಕ್‌ನ್ನೋ ಕೊಡುತ್ತೇವೆ. ಈ ಕಾಯಿಲೆ ಒಂದು ಸಮಯದಲ್ಲಿ ವಾಸಿಯಾಗಬೇಕಲ್ಲವೇ ? ಈಗ ಏನಾಗುತ್ತಿದೆ ಎಂದರೆ ಆರೋಗ್ಯವಾಗಿರುವವನೇ ಟಾನಿಕ್‌ನ್ನು ಕುಡಿಯುತ್ತಿದ್ದಾನೆ. ಅನಾರೋಗ್ಯವಾಗಿರುವವನಿಗೆ ಔಷಧಿಯೂ ಇಲ್ಲ, ಟಾನಿಕ್ ಸಹ ಇಲ್ಲ. ಆರೋಗ್ಯವಾಗಿರುವ ದಷ್ಟಪುಷ್ಟವಾಗಿರುವವನು ಔಷಧಿ, ಟಾನಿಕ್ ಎಲ್ಲವನ್ನೂ ಕುಡಿದು ಇನ್ನೂ ವೃದ್ಧಿಯಾಗುತ್ತಿದ್ದಾನೆ. ಈ ಮೀಸಲಾತಿ ಪಾಲಿಸಿ ಎಂದರೆ if it is a disease, it is a social disease, it should end.

ವಾಸಿಯಾಗದಿರುವ ಕಾಯಿಲೆಯಾದರೆ, ಅದು ಕ್ಯಾನ್ಸರ್ ಆದಂತೆ, ಅದಕ್ಕೆ ನಾವು ಔಷಧಿಯನ್ನೇ ಕೊಡಬೇಕಾಗಿಲ್ಲ. ನಾವು ಔಷಧಿಯನ್ನು ಕೊಡುವುದು ವಾಸಿಯಾಗತಕ್ಕ ಕಾಯಿಲೆಗೆ. ಈ ಮೀಸಲಾತಿಯ ಬಗ್ಗೆ ತಾವು ಏನಾದರೂ ಪಾಲಿಸಿಯನ್ನು ಮಾಡಬೇಕು.

within certain time-frame, atleast let it come from Karnataka.

ಏಕೆಂದರೆ ರಾಜ್ಯಂಗದಲ್ಲಿ including seats to the Lok Sabha and Assemblies ಟೈಮ್ ಫ್ರೇಮೇ ಇಟ್ಟಿದ್ದರು, ನಾವು ನಮಗೆ ಅನುಕೂಲವಾಗುತ್ತದೆ, ಆಗುತ್ತದೆಂದು ಎಲ್ಲಾ ಮೀಸಲಾತಿಯನ್ನು ಅನಂತ ಕಾಲದವರೆಗೆ ಇಟ್ಟುಕೊಂಡು ಹೋಗುವುದು ಆರೋಗ್ಯವಂತ ಸಮಾಜದ ಲಕ್ಷಣವಲ್ಲ. ಇದು ನನ್ನ ಖಚಿತವಾದ ಅಭಿಪ್ರಾಯ. ನಾನು ಇದರ ಬಗ್ಗೆ ನಂಬಿಸಿ ಹೇಳುವುದಿಲ್ಲ. ಬೇಕಾದರೆ ಇದರ ಬಗ್ಗೆ ಗಂಟೆಗಟ್ಟಲೆ ನಾನು ಮಾತನಾಡಬಲ್ಲೆ. ಆದರೆ ಮೀಸಲಾತಿಯು ಸರಿಯಾದವರಿಗೆ ಸಿಕ್ಕಬೇಕು. ಯಾರು ಮೀಸಲಾತಿಯನ್ನು ಪಡೆಯಬೇಕೆಂದಿದ್ದಾರೋ ಅವರಿಗೆ ಸಿಗಬೇಕು. ಬೇಕಾದರೆ ನೀವು ಕುಳಿತು ಚರ್ಚೆ ಮಾಡಿ. ಇದರ ಬಗ್ಗೆ ಒಂದು ದಿನದಲ್ಲಿ ಮಾತನಾಡಲು ಆಗುವುದಿಲ್ಲ. ಕಾಂಪ್ರಹೆನ್‌ಸೀವ್ ಆಗಿ ನಿಮ್ಮದೊಂದು ಮೀಸಲಾತಿಯ ಪಾಲಿಸಿಯಾಗಬೇಕು, ಹಾಗೆಯೇ ಎಜ್ಯುಕೇಷನ್ ಪಾಲಿಸಿ ಕಾಂಪ್ರಹೆನ್‌ಸೀವ್ ಆಗಿ ಆಗಬೇಕು. ಇವೆರಡು ಪಾಲಿಸಿಯನ್ನು ತಮ್ಮದೇ ಆದಂಥ, ಕರ್ನಾಟಕದಿಂದಲೇ ಪ್ರಾರಂಭವಾಗುವಲ್ಲಿ ಕಾರ್ಯಪ್ರವೃತ್ತರಾಗಬೇಕೆಂಬುದು ನನ್ನ ಅನಿಸಿಕೆ. ಇನ್ನು ನಿಮ್ಮ ಅಜೆಂಡಾದಲ್ಲಿ first priority should have been streamlining the administration.

ತಾವು ಬೇಜಾರು ಮಾಡಿಕೊಳ್ಳಬೇಡಿ, ಇಲ್ಲಿ ಸರ್ಕಾರ ಬದಲಾವಣೆಯಾಗಿದೆ, ಇಲ್ಲೊಂದು ಸರ್ಕಾರವಿದೆ ಎನ್ನತಕ್ಕ ಭಾವನೆಯೇ ಜನರಲ್ಲಿ ಇನ್ನೂ ಬಂದಿಲ್ಲ. I am sorry ; nobody is happy. Neither your Ministers are happy nor your MLAs nor MLAs this side ; nor bureaucrats are happy nor people are happy.

ನಾನು ಇದನ್ನು ವಾದಕ್ಕೆ ಹೇಳುತ್ತಿಲ್ಲ, ಏನೋ ಒಂದು ವಾತಾವರಣ ಬಂದಿದೆ. ಒಂದು ಸರ್ಕಾರ ಬಂದಿದೆ, ಏನೋ ಕೆಲಸ ಮಾಡುತ್ತಿದೆ ಟೇಕ್‌ಆಫ್ ಆಗಿದೆ ಎನ್ನತಕ್ಕ

ಬಾವನೆಯೇ ಬರುತ್ತಿಲ್ಲ. ಅದಕ್ಕೆ ನಾನೇನು ಅಂದುಕೊಂಡೆ ಎಂದರೆ ನಿಮ್ಮ Your first priority should have been streamling the administration.

ನಾನೇಕೆ ಹೇಳುತ್ತೇನೆಂದರೆ, ನಮ್ಮಲ್ಲಿ expenditure incidental to administration.

ಪ್ಲಾನ್, ನಾನ್‌ಪ್ಲಾನ್ ಎಕ್ಸಪಂಡಿಚರ್ ಅಪ್ಪನ್ನು ನಾವು ಯೋಚನೆ ಮಾಡಿ ಹೇಳಲು ಆಗುವುದಿಲ್ಲ. ಅದನ್ನು ತಾವು ಹೇಳಬೇಕು. ಪ್ಲಾನ್ ಎಕ್ಸ್‌ಪೆಂಡಿಚರ್‌ನಲ್ಲಿ ವರ್ಕ್ ಚಾರ್ಜ್ ಎಸಾಟಬ್ಲಿಷಮೆಂಟ್ ಎಕ್ಸ್‌ಪೆಂಡಿಚರ್ ಇರುತ್ತದೆ. So expenditure incidental to administration starting from chaprasi to Secretary, and burning of fuel ಎಲ್ಲಾ ಸೇರಿ ನಾವೇನು ಖರ್ಚು ಮಾಡುತ್ತಿದ್ದೇವೆ, ಅಭಿವೃದ್ಧಿ ಕಾರ್ಯಗಳಿಗೆ ಏನು ಉಳಿಯುತ್ತದೆ ಎಂಬುದನ್ನು ಲೆಕ್ಕ ಹಾಕಬೇಕು. ಏಕೆಂದರೆ ಇವತ್ತು ಅಧಿಕಾರಿಗಳಿಗೆ ವರ್ಕ್ ಲೋಡೇ ಇಲ್ಲ.

ಒಂದು ಉದಾಹರಣೆಯನ್ನು ಕೊಡುತ್ತೇನೆ, ತಮ್ಮಲ್ಲಿ ಎಷ್ಟು ಜನರು ಮುಖ್ಯ ಇಂಜಿನಿಯರ್‌ಗಳಿದ್ದಾರೆ ? ಒಬ್ಬರು ಮುಖ್ಯ ಇಂಜಿನಿಯರ್‌ಗೆ ಇಷ್ಟು ಕೋಟಿ ಕೆಲಸ ವರ್ಕ್ ಲೋಡ್ ಎಂದು ಇರಬೇಡವೇ ? ವರ್ಕ್ ಲೋಡ್ ಇಲ್ಲದೆಯೇ ಆ ಹುದ್ದೆಗಳನ್ನೇಕೆ ಸೃಷ್ಟಿ ಮಾಡಿದಿರಿ ? ಮಾನ್ಯ ಮುಖ್ಯಮಂತ್ರಿಗಳಾದ ದೇವೇಗೌಡರು ಹೆಗಡೆಯವರ ಕಾಲದಲ್ಲೇ ಸಾಕಷ್ಟು ಇದನ್ನು ಮಂಜೂರು ಮಾಡಿದರು. ಒಬ್ಬರು ಡಿಜಿಪಿ ಇದ್ದರು, ಈಗ ಎಷ್ಟು ಡಿಜಿಪಿ ಮಾಡಿದ್ದೀರಿ ? ಒಬ್ಬರು ಮುಖ್ಯಕಾರ್ಯದರ್ಶಿ ಇದ್ದರು, ಈಗ ಎಷ್ಟು ಜನ ಸರಿಸಮಾನವಾದ ಹುದ್ದೆಗಳನ್ನು ಕ್ರಿಯೇಟ್ ಮಾಡಿದಿರಿ? ಇದಕ್ಕೇನಾದರೂ ಒಂದು ಲೆಕ್ಕ ಬೇಕಲ್ಲವೇ ? ಆಡಳಿತದಲ್ಲಿ ಬಿಗಿ ಬರಬೇಕಾದರೆ ಇದನ್ನು ಲೆಕ್ಕ ಮಾಡಬೇಕು. ಎಲ್ಲರನ್ನೂ ಸಮಾನವಾಗಿ ಹಾಕಿದರೆ ಅನಂತರ ಅವರವರಲ್ಲಿಯೇ ಜಗಳವಾಗುತ್ತದೆ. ಆ ರೀತಿ ತಾವು ಎಷ್ಟು ಹುದ್ದೆಗಳನ್ನು ಸೃಷ್ಟಿ ಮಾಡುವುದು ? ಇನ್ನೊಂದು ವಿಪರ್ಯಾಸ ಸಿಓಡಿಯಲ್ಲಾಗಿದೆ ನಾವು ಎಲ್ಲದ್ದಕ್ಕೂ ಸಿಓಡಿ ವಿಚಾರಣೆಯೆಂದು ಹೇಳುತ್ತೇವೆ. ಇಲ್ಲಿ ಏನಾಗಿದೆ ಎಂದರೆ, ಡಿಜಿಪಿ ಒಬ್ಬರು, ಅಡಿಷನಲ್ ಡಿಜಿಪಿ ಒಬ್ಬರು, ಡಿಐಜಿ ಒಬ್ಬರು, ಎಸ್‌ಪಿ, 7, ಡಿವೈಎಸ್‌ಪಿ 18, ಇಲ್ಲಿಯವರೆಗೆ ಟೇಬಲ್ ವರ್ಕ್ ಜಾಸ್ತಿ ಇರುತ್ತದೆ. ಇನ್ನು ಫೀಲ್ಡ್ ವರ್ಕ್ ಇದೆಯಲ್ಲಾ ಇಲ್ಲಿ ಸರ್ಕಲ್ ಇನ್ಸ್‌ಪೆಕ್ಟರ್ 80, ಸಬ್‌ಇನ್ಸ್‌ಪೆಕ್ಟರ್ 30, ಪೇದೆಗಳು 60, ಪೇದೆಗಳಿಗಿಂತ ಸರ್ಕಲ್ ಇನ್ಸ್‌ಪೆಕ್ಟರ್ ಜಾಸ್ತಿ ಇದ್ದಾರೆ. ನಾನು ಏಕೆ ಇದನ್ನು ಹೇಳುತ್ತಿದ್ದೇನೆಂದರೆ ತಾವು ಸಿಓಡಿಯನ್ನು ಪರಿಶೀಲನೆ ಮಾಡಬೇಕು. ಗೃಹ ಸಚಿವರು ನನ್ನ ಅಂಕಿಅಂಶಗಳನ್ನು ಒಪ್ಪಿಕೊಂಡಿದ್ದಾರೆ. ತಮಗೆ ಬೇಡವಾದವರನ್ನು ಅಲ್ಲಿಗೆ ಹಾಕತಕ್ಕ ಸ್ಥಳ ಇದಾಗಿದೆ. ಆ ರೀತಿ ಸಿಓಡಿ ಆಗಬಾರದು. ಇಂದು ಸಿಓಡಿ ಎಂದರೆ ನಿರಾಶ್ರಿತರನ್ನು ತೆಗೆದುಕೊಂಡು ಇರಿಸತಕ್ಕ ಸ್ಥಳವಾಗಿದೆ. 30 ಸರ್ಕಲ್ ಇನ್ಸ್‌ಪೆಕ್ಟರ್ 80 ಪೇದೆಗಳನ್ನು ಮಾಡಿರುವುದು ಇದರಿಂದ. ನಮ್ಮ ಮಂತ್ರಿಮಂಡಲದಂತಾಗುತ್ತದೆ. ಅನಂತರ ಇನ್ನೊಂದು ವಿಚಾರದ ಬಗ್ಗೆ ಹೇಳುವುದಾದರೆ COD must be an effective organisation in the govern-

ment. Then it is noticed that Industries Commissioner is the Chairman of TESCOK, Karnataka Industrial Areas Development Board, Centre for Enterpreneurs Development, Dharwad, KS & DL, etc.

ಎಲ್ಲವನ್ನೂ ಇಲ್ಲಿ ಓದುವುದಕ್ಕೆ ಹೋಗುವುದಿಲ್ಲ, 9 ಕ್ಕೆ ಅಧ್ಯಕ್ಷರನ್ನಾಗಿ, ಇನ್ನೊಂದು 8ಕ್ಕೆ ನಿರ್ದೇಶಕರನ್ನಾಗಿ ಮಾಡಿದ್ದೀರಿ. ಏತಕ್ಕಾಗಿ ಒಬ್ಬರು ಕೈಗಾರಿಕೆ ಕಮಿಷನರ್‌ರವರನ್ನು ಅಷ್ಟೊಂದು ಕಡೆ ಹಾಕುತ್ತೀರಿ ? ಇಲ್ಲಿ ಆ ಕಮೀಷನರ್‌ರವರು ಕುಳಿತು ಕೊಂಡು ಅಲ್ಲಿನ ಕೆಲಸಗಳನ್ನು ಮಾಡಲು ಸಾಧ್ಯವೇ ? ಅಲ್ಲಿನ ಸಭೆಗಳಿಗೆ ಹೊಗಬೇಕಲ್ಲವೇ ? ಇವರು ಇದೆ ಕೇಳಿಕೊಂಡು ಈ ಬೋರ್ಡ್‌ಗಳ ಸಭೆ ನಡೆಯಬೇಕಲ್ಲಾ ?

ಶ್ರೀ ಆರ್. ವಿ. ದೇಶಪಾಂಡೆ : ಬಹಳಷ್ಟು ಕಡೆ ಆ ರೀತಿ ನಾನ್ ಅಫಿಷಿಯಲ್ ಇದ್ದರು. ಆದರೆ ಸರ್ಕಾರ ಬಂದಮೇಲೆ ಅವರು ರಾಜೀನಾಮೆ ಕೊಟ್ಟ ಮೇಲೆ interim arrangement ನಿಂದ ಆ ರೀತಿಯಾಗಿದೆ. ನಾವು ಬಂದಮೇಲೆ ಎರಡುಮೂರು ಕಡೆ ಅದನ್ನು ವಿತ್‌ಡ್ರಾ ಮಾಡಿ ಬೇರೆ ಅಧಿಕಾರಿಗಳನ್ನು ಹಾಕಿದ್ದೇವೆ, ಇದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

ಶ್ರೀ ಹೆಚ್‌ಎನ್ ನಂಜೇಗೌಡ : ನಾನ್ ಅಫಿಷಿಯಲ್ ಇದ್ದರೂ ಸಹ ಕೈಗಾರಿಕಾ ಕಮೀಷನರ್‌ರವರನ್ನು ಹತ್ತು ಹನ್ನೆರಡು ಕಡೆಗಳಲ್ಲಿ ಹಾಕಿದ್ದಿರಿ. ಹಣಕಾಸು ಕಮೀಷನರ್‌ರವರನ್ನು ಕೆಲವು ಕಡೆಗಳಲ್ಲಿ ಹಾಕಿದ್ದಿರಿ. ನಾನು ಏಕೆ ಇದನ್ನು ಹೇಳುತ್ತಿದ್ದೇನೆಂದರೆ for the development of our State,. the key posts in government are the industries commissioner and the finance commissionér.

ಇವರುಗಳಿಗೆ ದಿನಕ್ಕೆ 24 ಗಂಟೆಗಳ ಕಾಲ ಸಿನ್‌ಸಿಯರ್ ಆಗಿ ಕೆಲಸ ಮಾಡಿದರೂ ಸಹ ಸಮಯ ಸಾಕಾಗುವುದಿಲ್ಲ. ಆದ್ದರಿಂದ ಇಲ್ಲಿರುವವರನ್ನು ಇಂಥ ಬೋರ್ಡ್‌ಗಳಿಗೆ ex-officio ಛೇರ್ಮನ್‌ಗಳನ್ನಾಗಿ ಮಾಡುವುದು ಬೇಡ ಎಂದು ಹೇಳುವುದಕ್ಕೆ ಈ ರೀತಿ ಹೇಳಿದ್ದೇನೆ. ಇನ್ನು ಅಧಿಕಾರಿಗಳ ಬಗ್ಗೆ ಹೇಳುವುದಾದರೆ, ಹಿಂದಿನ ಸರ್ಕಾರದಲ್ಲಿ pick and choose and then punish ಎನ್ನತಕ್ಕ ಪಾಲಿಸಿ ಇತ್ತು.

ತಮಗೆ ಬೇಕಾದಂಥವರನ್ನು ಲೋಕಾಯುಕ್ತದಿಂದ ವಿಚಾರಣೆ ಮಾಡಿಸುತ್ತಿದ್ದರು. ಲೋಕಾಯುಕ್ತ ಬ್ಯೂರೋ ಆಫ್ ಇನ್‌ವೆಸ್ಟಿಗೇಷನ್ ಯಾವುದೇ ಕೈಕೆಳಗಡೆ ಕೆಲಸ ಮಾಡತಕ್ಕದಲ್ಲ. ಆ್ಯಂಟಿ ಕರಪ್‌ಷನ್ ಆ್ಯಕ್ಟ್‌ನ ಅಡಿಯಲ್ಲಿ ಅದು ಇಂಡಿಪೆಂಡೆಂಟ್ ಆಗಿ ಕೆಲಸ ಮಾಡಬಹುದು. ಅವರಿಗೆ ಬೇಕಾದವರ ಮೇಲೆ ಲೋಕಾಯುಕ್ತದ ಮೂಲಕ ರೈಡ್ ಮಾಡಿಸುವುದು. ಬೇಕು ಬೇಕಾದವರಿಗೆ ಸಸ್ ಪೆಂಡ್ ಮಾಡಿದರು, ಬೇಕಾದವರನ್ನು ಹಾಗೆಯೇ ಇಟ್ಟುಕೊಂಡರು. ನಾನು ಏಕೆ ಇದನ್ನು ಹೇಳುತ್ತಿದ್ದೇನೆಂದರೆ, ತಾವು ರಾಜ್ಯಪಾಲರ ಭಾಷಣದ ಮೇಲೆ ಉತ್ತರವನ್ನು ಕೊಡುವಾಗ ಇದುವರೆಗೆ ಎಷ್ಟು ಜನರ ಮೇಲೆ ಲೋಕಾಯುಕ್ತದ ಮೂಲಕ ರೈಡ್ ಮಾಡಿಸಿದ್ದೀರಿ

ಎಂಬುದನ್ನು ಹೇಳಬೇಕಾಗುತ್ತದೆ. ಉದಾಹರಣೆಗೆ ಹೌಸಿಂಗ್ ಬೋರ್ಡ್‌ನಲ್ಲಿ ಸಿಓಡಿ ಯಿಂದ ವಿಚಾರಣೆಯಾಯಿತು. ನನಗೆ ತಿಳಿದಿರುವ ಮಟ್ಟಿಗೆ ಸಿಓಡಿ ಯವರು ವಿಚಾರಣೆ ಮಾಡಿ they have indicted the Chairman, the Commissioner and the Chief Engineer.

ಆದರೆ ಅದರ ಬಗ್ಗೆ ಕ್ರಮ ತೆಗೆದುಕೊಳ್ಳಲೇ ಇಲ್ಲ. ನಾನು ಆಗಲೇ ಹೇಳಿದೆ ಅಲ್ಲಿ ಅಪರಾಧವನ್ನು ಮಾಡಿದವರಿಗೆ ಬಹುಮಾನ ಕೊಟ್ಟರು, ಅಲ್ಲಿನ ಛೇರ್ಮನ್‌ನ್ನು ಮಂತ್ರಿಯನ್ನಾಗಿ ಮಾಡಿದರು, ಅದರ ಸದಸ್ಯರಲ್ಲಿ ಯಾರನ್ನು ಸಹ ಸಸ್‌ಪೆಂಡ್ ಮಾಡಲಿಲ್ಲ. ಯಾರೊಬ್ಬರನ್ನೂ ಶಿಕ್ಷಿಸಲಿಲ್ಲ. ಯಾರೋ ಹತ್ತು ಕೆ.ಜಿ. ರಾಗಿಯನ್ನಿಟ್ಟು ಕೊಂಡಿದ್ದರು, ಯಾರೋ ಹತ್ತು ವರ್ಷಗಳ ಹಿಂದೆ ಒಂದು ಸೈಟನ್ನು ಮಾಡಿಕೊಂಡು ಮನೆಯನ್ನು ಕಟ್ಟಿದ್ದಾರೆ ಅದರ ಈಗಿನ ಬೆಲೆ ಜಾಸ್ತಿ ಇದೆ, his asset is disproportionate to his known source of income ಎಂದು ಹೇಳಿ ಸಸ್‌ಪೆಂಡ್ ಮಾಡುತ್ತೀರಲ್ಲಾ ಇದು ಸರಿಯೇ ?

ಇದು ಅಧಿಕಾರಿಗಳ ಬಗ್ಗೆ ಈ ಸರ್ಕಾರ ಹೇಗೆ ನಡೆದುಕೊಳ್ಳುತ್ತದೆ ಎಂಬುದನ್ನು ತೋರಿಸುತ್ತದೆ. ಏಕೆಂದರೆ ಸರ್ಕಾರ ಅಂದರೆ ಮಂತ್ರಿಗಳ ಸರ್ಕಾರ. All officers are subordinate to them. That is the Government business rules in our set up.

ನಿಮ್ಮ ಸರ್ಕಾರದ ನೀತಿ ಏನು ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ ಹಾಕುತ್ತೀರೋ ಅಥವಾ ಎಲ್ಲರಿಗೂ ತಕ್ಕಡಿ ಸಮಾನವಾಗಿ ಹಿಡಿಯುತ್ತೀರೋ? ಇದು ನಮಗೆ ಗೊತ್ತಾಗಬೇಕು. ನನ್ನ ಅನಿಸಿಕೆ ಪ್ರಕಾರ ನಿಮಗೆ ಇದು ಪ್ರಥಮ ಆದ್ಯತೆ ಆಗಬೇಕಾಗಿತ್ತು. That is where you creat the morale among officers.

ಮೊದಲನೆಯದಾಗಿ ರಿಸರ್ವೇಷನ್ ಪಾಲಿಸಿ ಬಗ್ಗೆ ಹೇಳುವಾಗ ಸುಪ್ರೀಂ ಕೋರ್ಟ್‌ನ ಒಂದು ತೀರ್ಮಾನ ಇದೆ. ಆ ತೀರ್ಮಾನ ಬಂದ ಮೇಲೂ ಪ್ರಮೋಷನಲ್ ವೇಕೆನ್ಸಿಯಲ್ಲಿ ರಿಸರ್ವೇಷನ್ ಮಾಡುತ್ತಿದ್ದೀರಿ. ಎಂಟ್ರೀ ಪಾಯಿಂಟ್‌ನಲ್ಲಿ ಏನಾದರೂ ನೀವು ರಿಸರ್ವೇಷನ್ ಮಾಡಿಕೊಳ್ಳಿ. ನೀವು ಪ್ರಮೋಷನ್ ವೇಕೆನ್ಸೀಸ್‌ನಲ್ಲಿ ರಿಸರ್ವೇಷನ್ ಮಾಡಿದರೆ there will be demoralisation. For example, ಪೋಲಿಸ್ ಇಲಾಖೆ ಅಲ್ಲಿ ಇಲ್ಲಿ ಯಾವನೋ ಸಲ್ಯೂಟ ಹೊಡೆಯುತ್ತಾ ಇರುತ್ತಾನೆ. ಅವನು ಮೇಲೆ ಕುಳಿತುಕೊಂಡರೆ Where will be the morale of subordinate officers ?

ಸುಪ್ರೀಂ ಕೋರ್ಟ್ ತೀರ್ಮಾನ ಕೊಟ್ಟರೆ ಎಂಟ್ರೀಪಾಯಿಂಟ್‌ನಲ್ಲಿ ಬೇಕಿದ್ದರೆ ರಿಸರ್ವೇಷನ್ ಜಾಸ್ತಿ ಮಾಡಿ For entry point reservation I don't come in the way because they are all equal and either superiority or inferiority complex will not be there. But, in promotional reservation,

ನೀವು ಜರಪ್ ಕೊಡುವುದಕ್ಕೆ ಹೋದರೆ ತಾಪತ್ರಯ ಆಗುತ್ತದೆ. ಇದನ್ನು ಸ್ವಲ್ಪ ಯೋಚನೆ ಮಾಡುವುದು ಸೂಕ್ತ. ಅಧ್ಯಕ್ಷರೇ, ಅವತ್ತು ನಮ್ಮ ಮಾನ್ಯ ಮುಖ್ಯ ಮಂತ್ರಿಗಳು ಉತ್ತರಿಸಿದರು. ಈಗ ನಮ್ಮ ಉಪ ಮುಖ್ಯ ಮಂತ್ರಿಗಳು ಇದ್ದಾರೆ. ಅವತ್ತು ಅವರು ಕೆಂಡದ ಉಂಡೆ ಆಗಿದ್ದರು. ನನಗೆ ಗಾಬರಿ ಆಗಿ ಹೋಯಿತು. ಆದರೆ ಇವತ್ತು ಅವರು ಐಸ್ ಕ್ಯೂಬ್ ಆಗಿದ್ದಾರೆ. ಸಮಾಧಾನವಾಯಿತು ಎಂದು ಏಕೆ ಹೇಳುತ್ತೇನೆ ಅಂದರೆ ಅಧ್ಯಕ್ಷರೆ, ಆವತ್ತು ಮುಖ್ಯ-ಮಂತ್ರಿಗಳ ಉತ್ತರ ಹೇಗೆ ಇತ್ತು ಎಂದರೆ ನಾನೇನೋ ದೂರು ಕೊಟ್ಟೆ. ಕೊನೆಗೆ ಶ್ರೀ ಹೆಚ್. ಪಾಟೀಲರ ಹತ್ತಿರ ದೂರು ಕೊಟ್ಟು ಬಿಡಪ್ಪ, he has committed a theft, but he is not a theft, he has committed a robbery, but he is not a robber he has committed a murder, but he is not a murderer. ಈ ಲೆಕ್ಕಕ್ಕೆ ಉತ್ತರ ಕೊಟ್ಟು ಬಿಟ್ಟರಿ ಏಕೆಂದರೆ ಅವತ್ತು ಎರಡು ಆಪಾದನೆಗಳನ್ನು ಪ್ರಾಮುಖ್ಯವಾಗಿ ಮಾಡಿದ್ದೆವು, ಅದರಲ್ಲಿ ಅವರು ಒಂದು ಆಪಾದನೆಯನ್ನಂತೂ ನಿರಾಕರಣೆ ಮಾಡಿದರು. ಅದು ಅವರ ಓಪೀನಿಯನ್. ಇರ್ರೆಗ್ಯುಲರ್ ಅಲ್ಲ ಎಂದು ಹೇಳಿದರು. ನಾನು ಏನು ಹೇಳಿದೆ, ಸೆಕ್ಷನ್ 13ರ ಪ್ರಕಾರ ಆ್ಯಂಟಿಕರಫ್ಷನ್ ಆ್ಯಕ್ಟ್ ಪ್ರಕಾರ ಯಾವುದೋ ಒಂದು ಕೋಟಿ ಹಣ ಮಂಜೂರು ಮಾಡಿದರು, ಅದಕ್ಕೆ ಬಳುವಳಿಯಾಗಿ ಒಂದು ಅಪಾರ್ಟ್‌ಮೆಂಟ್ ತೆಗೆದುಕೊಂಡರು ಅನ್ನುವ ಅರ್ಥದಲ್ಲಿನಾನು ಹೇಳಿದೆ. ಅದಕ್ಕೆ ದಾಖಲಾತಿಗಳನ್ನೆಲ್ಲಾ ಒದಗಿಸಿದೆ ಆ ಡೇಟ್ ಅನ್ನು ಮುಖ್ಯಮಂತ್ರಿಗಳು ಕನ್‌ಫರ್ಮ್ ಮಾಡಿದರು ತಮ್ಮ ಉತ್ತರದಲ್ಲಿ ಒಂದು ವ್ಯತ್ಯಾಸ ಹೇಳಿದರು ಅಂದರೆ ನಾನು ........

ಶ್ರೀ ಹೆಚ್ ಡಿ. ದೇವೇಗೌಡ : ಒಂದೇ ಒಂದು ವಿಷಯ ಮಾನ್ಯ ನಂಜೇಗೌಡರಲ್ಲಿ ವಿನಂತಿ ಮಾಡುತ್ತೇನೆ. ನಾನು ಏನು ಹೇಳಿದ್ದೇನೆ ಹೇಳಿರತಕ್ಕಂಥಾದ್ದು ನನ್ನಲ್ಲಿ ಇರತಕ್ಕಂಥ'ದ್ದು ಎಲ್ಲಾ ಅಂಕಿ ಅಂಶಗಳ ಆದಾರದ ಮೇಲೆ ಹೇಳಿರತಕ್ಕಂಥದ್ದು. ಒಂದು ಕೋಟಿ ಸಾಲ ಕೊಟ್ಟಿದ್ದು ಅಪರಾಧ ಎಂದು ಹೇಳಿ ನೀವು ಏನು ತಿಳಿದುಕೊಂಡಿದ್ದೀರಿ ಅದಕ್ಕೇ ನಿಮ್ಮನ್ನೇ ಮೊದಲು ಸ್ಪಷ್ಟೀಕರಣ ಕೇಳುತ್ತೇನೆ. ಅದು ಇದ್ದುದೇ ಆ ಜಾಗದಲ್ಲಿ ಉದ್ಯೋಗ ಮಾಡುವವರಿಗೆ ಸಾಲ ಕೊಡುವುದಕ್ಕೆ and in turn quid pro quo ಸೈಟ್ ತೆಗೆದುಕೊಂಡು ಆ ಮನೆಯನ್ನು ತೆಗೆದುಕೊಂಡರು ಎಂಬ ವಾದ. ಆರು ವರ್ಷ, 7 ವರ್ಷವಾದ ಮೇಲೆ ಅವರು ಒಂದು ಅಪಾರ್ಟ್‌ಮೆಂಟನ್ನು ಅವರ ಸಂಬಂಧಿಕರು ಯಾರೋ ಒಬ್ಬರು ತೆದೆದುಕೊಂಡಿದ್ದಾರೆ. ಅದನ್ನು ಈ ಸದನದಲ್ಲಿ ಹೇಳಿದ್ದೇನೆ. ಹಣವನ್ನು ಅವರಿಗೆ ಏನೂ ಕೊಡಲಿಲ್ಲ. ಚೆಕ್ ಬುಕ್ ಹಣವನ್ನು ಬಾಂಬೆಗೆ ಹೋಗಿ ಮಂಜೂರಾದ ಆರುತಿಂಗಳು 8 ತಿಂಗಳು ಮೇಲೆ ಆ ಕಂಪನಿಗೆ ಸಪ್ಲೇ ಮಾಡುವ ಯೋಗ್ಯತೆ ಇದೆಯೇ ಎಂಬುದನ್ನು ನೋಡಿ ಅದು ಅಷ್ಟೇ ಅಲ್ಲ ಹಣ ಕೊಟ್ಟಿರತಕ್ಕಂಥದ್ದು ಪಂಜಾಬ್ ನ್ಯಾಷನಲ್ ಬ್ಯಾಂಕಿಗೆ ಅದನ್ನು ಹೇಳಿದ್ದೇನೆ. ಇದರಲ್ಲಿ ಅಪರಾಧವಾಗಿದೆ ಎಂಬುದು ನನಗಂತೂ ಅರ್ಥವಾಗುತ್ತಿಲ್ಲ. ಹಾಗಿದ್ದರೆ ನನಗೆ ನೀವು ಏನು ಹೇಳಿದಿರಿ ಅಪರಾಧವಾಗಿದೆ ಎಂದು ಏನು ಅಪರಾಧವಾಗಿದೆ ಎಂಬ ಬಗ್ಗೆ ಇಲ್ಲಿ ನೇರವಾಗಿ

ಚರ್ಚೆ ಮಾಡಿ ಬಿಡೋಣ ಅಲೆಗ್ಸಾಂಡರ್‌ರವರ ಬಗ್ಗೆ ಸಾಯಂಕಾಲ ಕ್ಯಾಬಿನೆಟ್ ಆಗುತ್ತದೆ ಮಧ್ಯಾಹ್ನ ಚೆಕ್ ಕೊಡುತ್ತಾರೆ ರೀಇನ್‌ಸ್ಟೇಟ್ ಮಾಡಿ ಎಂದು ಸಭೆಯಲ್ಲಿ ಹೇಳುತ್ತೀರಿ. ಆದರೆ ಇಲ್ಲಿ ಹೇಳುತ್ತೀರಿ ಇಲ್ಲಿ ಯಾವುದೋ ಚೀಫ್ ಸೆಕ್ರೆಟರಿ ಬಗ್ಗೆ. Now, I am prepared for a discussion if that its the case, ಆರ್ಗ್ಯುಮೆಂಟ್‌ಗೆ ಹೋಗಬೇಕೆಂದಿದ್ದರೆ ಒಬ್ಬ ಚೀಫ್ ಸೆಕ್ರೆಟರಿ ಮಧ್ಯಾಹ್ನ ಕ್ಯಾಬಿನೆಟ್ ಡಿಸಿಷನ್ ಆಗುತ್ತದೆ, ಸಾಯಂಕಾಲ ಚೆಕ್ ಕೊಡುತ್ತಾರೆ ಅವರ ಸಸ್ಪೆನ್‌ಷನ್ ರಿವೋಕ್ ಮಾಡಬೇಕೆಂದು ಈ ಸದನದಲ್ಲಿ ಒಂದು ಕಡೆಯಿಂದ ಆರ್ಗ್ಯುಮೆಂಟ್ ಮಾಡುತ್ತೀರಿ. ಇನ್ನೊಂದು ಕಡೆ ಯಾರೋ ಒಂದು ಕೋಟಿ ರೂಪಾಯಿ ಸಾಲ ಕೊಟ್ಟಿದ್ದಾರೆ ಸಾಲ ಕೊಡುವುದಕ್ಕೆ ಆ ಮನುಷ್ಯ ಇರುವುದು ಅಲ್ಲಿ. ಸಾಲ ಕೊಡುವಾಗ ಏನಾದರೂ ಕಮಿಷನ್ ತೆಗೆದುಕೊಂಡಿದ್ದಾನೋ ಅಥವಾ ಯಾವನೋ ಅಪಾರ್ಟ್‌ಮೆಂಟ್ ಕಟ್ಟುತ್ತಾನೆ ಎಂದು ಹೇಳಿದಾಗ ಅದಕ್ಕಾಗಿ ದುಡ್ಡು ಕೊಟ್ಟು ತೆಗೆದುಕೊಂಡರೆ ಅದು ಒಂದು ಅಪರಾಧ ಆಗುವುದಾದರೆ ನಾನು ಹೇಳುತ್ತೇನೆ.

It is not a sin, That is my view. I am going to stand by it.

ಶ್ರೀ. ಹೆಚ್. ಎಸ್. ನಂಜೇಗೌಡ : ನೀವು ಅವತ್ತೇ ಹೇಳಿ ಬಿಟ್ಟಿರಿ ಅದು ನಿಮ್ಮ ಅಭಿಪ್ರಾಯ ಎಂದು ನನ್ನ ಅಭಿಪ್ರಾಯ ನಾನು ಹೇಳುತ್ತೇನೆ. A dependent unmarried girl if she enters into an agreement by paying Rs. 1.5 lakhs advance ......

Sri H. D. Deve Gowda : She is not a dependent girl ; she has attained majority .....

ಶ್ರೀ ಹೆಚ್.ಎಸ್. ನಂಜೇಗೌಡ : ನಾನು ಮೈನರ್ ಎಂದು ಹೇಳಲಿಲ್ಲ ನಾನು ಅವತ್ತೇ ಹೇಳಿದೆ 21 ವರ್ಷ ಎಂದು ಇವತ್ತೂ ಅದನ್ನೇ ರಿಪೀಟ್ ಮಾಡುತ್ತೇನೆ. ಅದು ನಿಮ್ಮ ಅಭಿಪ್ರಾಯ, ನಾನು ಹೇಳುತ್ತೇನೆ ಏಕೆಂದರೆ ಮೂರು ಲಕ್ಷಕ್ಕೆ ಒಂದೊಂದು ಫ್ಲಾಟ್ ಅಂದರೆ ಅಪಾರ್ಟ್‌ಮೆಂಟ್, ಮೂರುಬೆಡ್ ರೂಮಿದ್ದು ಸಿಕ್ಕುವುದಾದರೆ 30 ಫ್ಲಾಟ್ ಕೊಂಡು ಕೊಳ್ಳೋಣ. ನಮ್ಮ ಶಾಸಕರಲ್ಲಿ ಬಹಳ ಜನ ಫ್ಲಾಟ್ ತೆಗೆದು ಕೊಳ್ಳುವವರಿದ್ದಾರೆ.

ಶ್ರೀ ಹೆಚ್. ಡಿ. ದೇವೇಗೌಡ : 10 ವರ್ಷಗಳ ಹಿಂದೆ 7,000 ರೂ. ಗಳು ಇದ್ದುದ್ದು ಈಗ 70,000 ರೂ. ಗಳು ಆಗಿದೆ. ಅದು ಬೇರೆ ವಿಷಯ. 10 ವರ್ಷಗಳಲ್ಲಿ 32 ಸಾವಿರ ಇದ್ದುದು ಮೂರು ಲಕ್ಷ ಆಗಿದೆ.

ಚೇರ್ಮನ್ : ಈ ವಿಷಯ ಈಗಾಗಲೇ ಈ ಸದನದಲ್ಲಿ ಚರ್ಚೆಯಾಗಿದೆ. ಅದಕ್ಕೆ ಸರ್ಕಾರದಿಂದ ಉತ್ತರ ಕೊಟ್ಟಿದ್ದಾರೆ. ನಮ್ಮ ನಿಯಮಾವಳಿಗಳ ಪ್ರಕಾರ ಒಂದು ಅಧಿವೇಶನದ ಒಳಗಡೆ ಒಂದೇ ವಿಚಾರ ಎರಡು ಸಾರಿ ಚರ್ಚೆ ಮಾಡುವುದಕ್ಕೆ ಬರುವುದಿಲ್ಲ. ಸಾಕಷ್ಟು ಡೀಟೈಲ್ಸ್ ಆಗಿ ಚರ್ಚೆಯಾಗಿದೆ. ಅದಕ್ಕೆ ರಿಪ್ಲೆ ಕೂಡ ಆಗಿದೆ. ಮಾನ್ಯ ಹಿರಿಯ ಸದಸ್ಯರಾದ ನಂಜೇಗೌಡರು ನಮ್ಮೆಲ್ಲರಿಗೂ ಸಹ ತಿಳುವಳಿಕೆ ಕೊಡುವ ಸ್ಥಿತಿಯಲ್ಲಿರತಕ್ಕಂತಹವರು ಆ ವಿಚಾರ ಬಿಟ್ಟು ಮುಂದಕ್ಕೆ ಹೋಗುತ್ತಾರೆ,

ಇನ್ನೂ ದೊಡ್ಡ ದೊಡ್ಡ ವಿಚಾರಗಳು ಇವೆ ಅವುಗಳಿಗೆ ಹೋಗುತ್ತಾರೆ ಎಂದು ನಾನು ಭಾವಿಸುತ್ತೇನೆ.

ಶ್ರೀ ಹೆಚ್. ಎನ್. ನಂಜೇಗೌಡ : ಅದು ಆಯಿತು ಏಕೆಂದರೆ ಅಧ್ಯಕ್ಷರೆ, ಒಂದು ಒಬ್ಬ ಅಧಿಕಾರಿ ಮಕ್ಕಳ ಹೆಸರಿನ ಮೇಲೆ ಆಸ್ತಿ ಮಾಡಬೇಕೆಂದರೆ ಪರ್ಮಿಷನ್ ತೆಗೆದುಕೊಳ್ಳಬೇಕು. ಅವೆಲ್ಲಾ ಪ್ರೊಸೀಜರ್ ಇರುತ್ತವೆ, ಅದಿಲ್ಲದೆ ಇರುವುದಕ್ಕೆ ಇಷ್ಟೊಂದು ರಗಳೆ . ನಾನು ಹೇಳುತ್ತೇನೆ.

It attracts section 13.

ಅವರು ಏನೂ ಇಲ್ಲ ಅದು ರೆಗ್ಯುಲರ್ ಎಂದು ಹೇಳಿಕೊಳ್ಳುತ್ತಾರೆ, ಅದು ಅವರ ಅಭಿಪ್ರಾಯ. ಇದು ನನ್ನ ಅಭಿಪ್ರಾಯ. ಇದು ಅಧ್ಯಕ್ಷರೇ, ಈ ಸಿ.ಎ. ಸೈಟಿನ ಬಗ್ಗೆ ಒಂದು ಮಾತು ಹೇಳುತ್ತೇನೆ. ಅದರಲ್ಲಿ ಮುಖ್ಯ ಮಂತ್ರಿಗಳು ಉತ್ತರ ಕೊಟ್ಟರು ಶ್ರೀ ಹೆಚ್ ಎನ್. ನಂಜೇಗೌಡ : ಇದರಲ್ಲಿ ಅಧ್ಯಕ್ಷರೇ ಒಂದು

ಶ್ರೀ ಆರ್.ವಿ. ದೇಶಪಾಂಡೆ : ಅಧ್ಯಕ್ಷರೆ, ಈ ಸದನದಲ್ಲಿ ಅನೇಕ ವಿಷಯಗಳನ್ನು ಚರ್ಚೆ ಮಾಡಿದ್ದೇವೆ. ಅದರಲ್ಲಿ ಏನಾದರೂ ಹೊಸ ಪಾಯಿಂಟ್‌ಗಳು ಇರುವುದಾದರೆ ಇಲ್ಲಿ ಯಾರೂ ಅಡ್ಡಿ ಮಾಡುವುದಕ್ಕೆ ಬರುವುದಿಲ್ಲ. ಅದರಿಂದ ಇದರ ಬಗ್ಗೆ ಏನಾದರೂ ತಾವು ಉತ್ತರ ಕೊಡುವ ಸಂದರ್ಭ ಬರುತ್ತದೆ ಆಗ ಉತ್ತರ ಕೊಡಿ. ಅವರು ಏನು ವಿವರವಾಗಿ ಹೇಳುವುದಕ್ಕೆ ನಿಂತಿದ್ದಾರೆ ಅದನ್ನು ಹೇಳುವುದಕ್ಕೆ ಈ ಸದನದಲ್ಲಿ ಅವಕಾಶ ಇದೆ. ನೀವು ಇನ್ನೂ ಅನೇಕ ವಿಷಯಗಳ ಬಗ್ಗೆ ನಮಗೆ ಏನು ಸಂಶಯ ಇದೆ ಅದನ್ನು ಪ್ರಸ್ತಾಪ ಮಾಡುವ ಪ್ರಯತ್ನವನ್ನು ತಮ್ಮ ಮೂಲಕ ಮಾಡುತ್ತಿದ್ದಾರೆ. ನೀವು ಅದು ಸರಿಯೆಂದು ಸಾಬೀತು ಮಾಡಿಕೊಳ್ಳುವುದಕ್ಕೆ ಹೊರಟರೆ ನಮ್ಮದು ಏನೂ ಅಭ್ಯಂತರವಿಲ್ಲ. ವಿವರವಾಗಿ ಅವರು ಹೇಳುವುದಕ್ಕೆ ಅವಕಾಶ ಕೊಡಿ. ನೋಡೋಣ.

ಶ್ರೀ ಜೆ.ಹೆಚ್ ಪಟೇಲ್ : ಅಧ್ಯಕ್ಷರೆ, ಅವರು ಶಿಕ್ಷಣದ ಬಗ್ಗೆ ನಮ್ಮ ಪ್ರೈಯಾರಿಟೀಸ್ ಬಗ್ಗೆ ಹೇಳುವಾಗ ನಾವು ಅತ್ಯಂತ ಗಮನ ಇಟ್ಟುಕೊಂಡು ಕೇಳಿದ್ದೇವೆ. ಅವರು ಬಹಳ ವಿಚಾರಿಗಳು ನಿಜ, ಸರಿ ನಾವು ಯಾವುದಕ್ಕೆ ಪ್ರೈಯಾರಿಟಿ ಕೊಡಬೇಕು ಈ 47 ವರ್ಷಗಳಲ್ಲಿ ಅದಕ್ಕೆ ಹೋಗಲಿಲ್ಲ ಅದಕ್ಕೋಸ್ಕರ ಈ ಸ್ಥಿತಿಯಲ್ಲಿದ್ದೇವೆ. ವ್ಯವಸ್ಥೆ ಬಗ್ಗೆ ಹೇಳೋಣ, ಅದು ಬಿಟ್ಟು ಇಲ್ಲಿ ರೂಲ್ಸ್‌ಗೆ ವಿರುದ್ಧವಾಗಿ ಈ ಸದನದ ಸದಸ್ಯರು ಅಲ್ಲದೇ ಇರತಕ್ಕಂಥ ಸರ್ಕಾರೀ ಅಧಿಕಾರಿಯೇ ಇರಬಹುದು, ಈ ಸರ್ಕಾರದಲ್ಲಿ ಇರಬಹುದು ತನ್ನನ್ನು ತಾನು ಸಸ್ಪೆಂಡ್ ಮಾಡಿಕೊಳ್ಳಲಿಕ್ಕೆ ಆಗದೆ ಇರತಕ್ಕಂಥವರ ಬಗ್ಗೆ ಬಳಸಿ ಹೀಗೆ ಮಾಡಿ ಹಾಗೆ ಮಾಡಿ ಹೆಸರು ಹಾಗೂ ಅವರ ಹುದ್ದೆ ಬಗ್ಗೆ ಮಾತನಾಡಬಾರದು ಎಂಬ ನಿಯಮ. ಅವರು ಆ ಬಗ್ಗೆ ಯಾವುದೇ ರೀತಿ ವಿಚಾರಣೆ ಮಾಡಿಕೊಳ್ಳುವುದಕ್ಕೆ ಬೇರೆ ಈ ಸದನ ಬಿಟ್ಟು ಹೊರಗೆ ಏನು ಮಾಡಿಕೊಳ್ಳುವುದಕ್ಕೆ ಸದನದ ಸಭಾ ನಾಯಕರು ಒಪ್ಪಿ ಕೊಂಡಲ್ಲಿ ವಿಚಾರ ಮಾಡುವುದಾದರೆ ಮಾಡಲಿ, ಆದರೆ ಪ್ರಸ್ತಾಪ ಮಾಡುವುದು ಬೇಡ.

ಶ್ರೀ. ಹೆಚ್. ಎನ್. ನಂಜೇಗೌಡ : ಅಧ್ಯಕ್ಷರೇ, ನಾನು ಏಕೆ ಹೇಳುತ್ತೇನೆ ಅಂದರೆ ..... they have talked about the corruption. They

have told that they would repair the BDA. ಏಕೆ ಹೇಳುತ್ತೇವೆ ಎಂದರೆ ಇದು ನೋಡಿ, ಇದು ಉತ್ತಾರಾರ್ಧ. ನಾನು ಹೇಳಿದುದ್ದು ಉತ್ತರಾರ್ಧ, ಅವರು ಉತ್ತರ ಕೊಟ್ಟಿದ್ದು ಉತ್ತರಾರ್ಧ. ಪೂವಾರ್ಧ ಬೇರೆ ಇದೆ. ಆ ಪೂವಾರ್ಧ ತಿಳಿದುಕೊಳ್ಳಬೇಕಲ್ಲಾ !

Otherwise, there would be a feeling that the records are not straight. Sir, I am referring to the proceedings of the BDA meeting held on 2/12/1985, page No. 13, Subject No. 951-Reallotment of 8 sites in Sy. No. 82/2 of saneguruvanhalli village in favour of Smt. H.K. Lalithamma and others - " The request of Smt. H.K. Lalithamma and others for reallotment of 8 sites in their favour in Sy. No. 82/2 of Saneguruvahalli measuring 1 acre 10 guntas was considered and resolved as follows. ಕೊಡಬೇಕು ಎಂದು ಮಾಡಿಕೊಂಡರು. ಇರಲಿ, ಇದು ನಡೆದುಕೊಳ್ಳಲಿ, ಏತಕ್ಕೆ ಈ ರೆಸಲ್ಯೂಷನ್ ಬೇಕಾಯಿತು ? ಈ ರೆಸಲ್ಯೂಷನ್ ಮಾಡಿದರು ಇದನ್ನು ಏಕೆ ಮಾಡಿದರು? ಇದು ಏನಾಯಿತು, ಅಧ್ಯಕ್ಷರೆ, ಜುಲೈ, 1974 ಲಲಿತಮ್ಮನವರ ತಾಯಿ ಸಿದ್ದಲಿಂಗಮ್ಮನವರು 1 ಎಕರೆ 24 ಗುಂಟೆ ಪ್ರದೇಶ ಕೊಂಡುಕೊಳ್ಳುತ್ತಾರೆ. ಆಗಸ್ಟ್ 74 ಒಂದೇ ತಿಂಗಳು, ಒಂದು ಗೃಹನಿರ್ಮಾಣ ಸೊಸೈಟಿಯವರಿಗೆ ಕ್ರಯ ಪತ್ರ ಮಾಡಿಕೊಡುತ್ತಾರೆ. ಸೇಲ್ ಅಗ್ರಿಮೆಂಟ್ ಮಾಡಿಕೊಡುತ್ತಾರೆ. ಆ ಅಗ್ರಿಮೆಂಟ್‌ನಲ್ಲಿ ಇವರಿಗೆ 9 ಸೈಟ್ ಕೊಡಬೇಕು ಉಳಿದ 13 ಸೈಟ್‌ನ ಅವರು ಮಾರಾಟ ಮಾಡಿಕೊಳ್ಳಬೇಕು. ಸೊಸೈಟಿಯುವರು ಪಾಪ ಡೆವಲಪ್ ಮಾಡುತ್ತಾರೆ, ರೋಡ್ ಮಾಡುತ್ತಾರೆ, ನೀರಿನ ಸಪ್ಲೈ ಎಲ್ಲಾ ಮಾಡುತ್ತಾರೆ. ಸೈಟ್ ಫಾರಂ ಮಾಡುತ್ತಾರೆ, ನೀರಿನ ಸಪ್ಲೈ ಎಲ್ಲಾ ಮಾಡುತ್ತಾರೆ, ಸೈಟ್ ಫಾರಂ ಮಡುತ್ತಾರೆ, ಆಯಿತು. ಇಷ್ಟಾದಮೇಲೆ ಇವರಿಗೆ ಸೈಟ್ ಕ್ರಯ ಮಾಡಿಕೊಡುತ್ತಾರೆ. ಉಳಿದವರಿಗೆ 13 ಸೈಟ್ ಕ್ರಯ ಮಾಡಿಕೊಡುತ್ತಾರೆ . ಸಬ್ ರಿಜಿಸ್ಟ್ರಾರ್ ಆಫೀಸ್‌ನಲ್ಲಿ ರಿಜಿಸ್ಟ್ರಾರ್ ಆಗುತ್ತದೆ. ಇಷ್ಟಕ್ಕೇ ನಿಲ್ಲುವುದಿಲ್ಲ. ಬಿಡಿಎನಿಂದ ಎನ್‌ಓಸಿ ಕೊಡಿಸುತ್ತಾರೆ. ಎನ್‌ಓಸಿನೂ ಕೊಟ್ಟರು ಬಿಡಿಎನವರು. ಅದೆಲ್ಲಾ ದಾಖಲಾತಿಗಳು ಇದ್ದಾವೆ. ಏಕೆಂದರೆ ಸದನದ ಸಮಯವನ್ನು ನಂಜೇಗೌಡರು ಹೆಚ್ಚಿಗೆ ತೆಗೆದುಕೊಳ್ಳುತ್ತಾರೆ. ಅನಿಸಿಕೊಳ್ಳುವುದು ಬೇಡ ಎಂದು ಹೇಳಿ, ಆ ದಾಖಾಲಾತಿಗಳು ನನ್ನ ಹತ್ತಿರ ಇದೆ. ಬೇಕು ಎಂದರೆ ಇಡುತ್ತೇನೆ ನಾನು.

**4.20 ಪಿ. ಎಂ.**

ಶ್ರೀ ಹೆಚ್.ಡಿ. ದೇವೇಗೌಡ : ಈಗ 85ರಲ್ಲಿ ಯಾರೋ 8 ಸೈಟ್ ಎಂದು ಯಾರೋದೋ ಹೆಸರು ಹೇಳಿದಿರಿ. ಈ ಸದನದಲ್ಲಿ ಅವರ ಹೆಸರನ್ನು ಸದಸ್ಯರ ಹೆಸರನ್ನು ತೆಗೆಯುವುದಕ್ಕೆ ಹೋಗುವುದಿಲ್ಲ ನಾನು, the allegation on that day when I was not here is only against the

Chief Secretary, if my memory goes correct. I do not know whether he was Chairman of the BDA or not in 1985. ಲಕ್ಷಮ್ಮ ಕಾಳಮ್ಮ ತಿಮ್ಮಮ್ಮ 85ರಲ್ಲಿ ಒಂದು 500 ಟ್ರಾನ್ಸ್‌ಕ್ಷನ್ ಆಗಿದೆ. ಒಟ್ಟು 5 ಸಾವಿರ ಟ್ರಾನ್ಸ್‌ಕ್ಷನ್ ಆಗಿರಬಹುದು. 90ರಿಂದ 95ವರೆಗೆ ಒಂದು 10 ಸಾವಿರ ಟಾನ್ಸ್‌ಕ್ಷನ್ ಆಗಿರಬಹುದು ಡಿ ನೋಟೀಫಿಕೇಷನ್, ರೀ ನೋಟ್ಫಿಫಿಕೇಷನ್ ಸೈಟನ್ನು ಯಾರು ಯಾರಿಗೋ ....

The only issue which is lurking in the mind of the hon. Member is ನಾನು ಪೂರ್ವಾರ್ಧ ಹೇಳಿದ್ದೇನೆ ಪಶ್ಚಿಮಾರ್ಧ ಹೇಳಲಿಲ್ಲ ಎಂದು ಹೇಳಿದ್ದುದು. only against the Chief Secretary. We will talk the facts straight. ಈಗ ಅಲ್ಲಿ ಎಷ್ಟು ಜನಕ್ಕೆ 85ರಲ್ಲಿ ಕೊಟ್ಟಿದ್ದಾರೆ, 95ರಲ್ಲಿ 92ರಲ್ಲಿ ಕೊಟ್ಟಿದ್ದಾರೆ. ಯಾರ್‍ಯಾರು, ಅದರ ಬಗ್ಗೆ ನನಗೆ ನೋಟೀಸ್ ಕೊಟ್ಟು ಇಂತಿಂಥ ವಿಷಯದಲ್ಲಿ ನೀವು ಎಲ್ಲಾ ಮಾಹಿತಿ ತರಿಸಬೇಕು ಎಂದು ಹೇಳಿದರೆ ನಾನು ತರಿಸುತ್ತೇನೆ. ಏಕೆಂದರೆ ಪ್ರೊಸಿಜರ್ ಇದೆ ಇಲ್ಲಿ. ಅವರೇನೂ ಹೊಸಬರಲ್ಲ, ಹಳಬರು, ಅನುಭವಿ ಶಾಸಕರು ಇದ್ದಾರೆ, ಈಗ ಆ ವರ್ಷ ನಡೆದಿರತಕ್ಕಂಥ ವಿಚಾರದಲ್ಲಿ ತಿಮ್ಮಮ್ಮ, ಲಲಿತಮ್ಮ ಎಂದು ಹೆಸರು ಹೇಳಿದ್ದೀರಿ. ಅವರ ಮನಸ್ಸಿನಲ್ಲಿ ಚೀಫ್ ಸೆಕ್ರೆಟರಿಯವರು ಇದನ್ನು ಮಾಡಿದ್ದಾರೆ ಎನ್ನತಕ್ಕಂಥದ್ದನ್ನು ಪೂರ್ವಾರ್ಧ ಹೇಳಿ ದೇವೇಗೌಡರು ಡಿಫೆಂಡ್ ಮಾಡಿದರು. ಉತ್ತರಾರ್ಧ ಹೇಳಲಿಲ್ಲ ಎಂದು ಏನು ಹೇಳಿದ್ದಾರಲ್ಲಾ, ಅದರ ಬಗ್ಗೆ 85ರಲ್ಲಿ ಚೀಫ್ ಸೆಕ್ರೆಟರಿ ರೋಲ್ ಏನಾದರೂ ಇತ್ತೇ ಆ ಚೀಫ್ ಸೆಕ್ರೆಟರಿ ಅಲ್ಲಿ ಏನಾದರೂ ಬಿಡಿಎ ಚೇರ್‌ಮನ್ ಆಗಿದ್ದರೋ ಮೆಂಬರ್ ಆಗಿದ್ದರೋ ಏನು ಆಗಿದ್ದರು ? What is the purpose of the allegation taking the name of somebody. If he wants to make an allegation about a person who is not member of this House, let the hon. Member give a notice to the Speaker about the nature of allegation and let one copy be sent to me. Then I am prepared to go according to the rules. We will discuss it. Sir, Rule 328 - procedure regarding allegations against a person is very very clear. ನಿಮ್ಮ ಮನಸ್ಸಿನಲ್ಲಿ ಏನಿದೆ ಎನ್ನತಕ್ಕಂಥಾದ್ದು 85ರಲ್ಲಿ ಯಾರ ಪಾತ್ರ ಏನಿತ್ತು ಎನ್ನುವುದರ ಬಗ್ಗೆ ನಿಮ್ಮದು ಏನು ಅಲಿಗೇಷನ್ ಇದೆ ಅದನ್ನು ಬರೆದು ಸ್ಪೀಕರ್‌ಗೆ ಕಳುಹಿಸಿ ನನಗೂ ಒಂದು ಕಾಪಿ ಕಳುಹಿಸಿ. I will be ready to answer on the floor of the House according to the procedure. ಅಲ್ಲ, ಅದು ಇಲ್ಲದೆ ಇದ್ದರೆ ಕಷ್ಟವಾಗುತ್ತದೆ. ಇವತ್ತು ತಾವು ಲಕ್ಷಮ್ಮನದು ಹೇಳಬಹುದು, ನಾಳೆ ಇನ್ನೊಬ್ಬರ ಹೆಸರು ಹೇಳಬಹುದು.

Sri. H.N. Nanjegowda : Sir, I am sorry. I am not alleging against Lalithamma, Lakshamamma. Why should the Chief Minister presume that I am alleging.

Sri. H.D. Devegowda : Then what is that you are telling. I do not know what he is telling.

Sri. H.N. Nanjegowda : Why do you presume that I am alleging ? Should I not talk about the BDA ? Is it not within my purview.

Sri. H.D. Devegowda : I am unable to understand ಅವತ್ತು ನಾನು ಅಲಿಗೇಷನ್ ಮಾಡಿದೆ, ಅವರು ಈ ರೀತಿ ಉತ್ತರ ಕೊಟ್ಟರು, ಆದರೆ ಉತ್ತಾರಾರ್ಧ ಹೇಳಿದರು, ಪೂರ್ವಾರ್ಧ ಹೇಳಲಿಲ್ಲ. ಇವತ್ತು ಆ ಪೂರ್ವಾರ್ಧ ನಾನು ಹೇಳಿ, ಸಭೆಗೆ ಮತ್ತೆ ಸಬ್‌ಸ್ಟಾನಷಿಯೇಟ್ ಮಾಡುತ್ತೇನೆ ಎನ್ನುವ ಧಾಟಿಯಲ್ಲಿ ತೆಗೆದುಕೊಂಡು ಹೋಗುತ್ತಿದ್ದಾರೆ. ಯಾವ ವಿಷಯದ ಬಗ್ಗೆ ಚರ್ಚೆಯಾಗಿದೆ. ಸದನದಲ್ಲಿ ನಾನು ಉತ್ತರ ಕೊಟ್ಟೆ, ಚರ್ಚೆಯಾದಾಗ ನಾನು ಇರಲಿಲ್ಲ, ಅವತ್ತು ಅದೇ ವಿಷಯದ ಬಗ್ಗೆ ಪುನಃ ಇವತ್ತು ಬೆಳಕು ಚೆಲ್ಲುವುದಕ್ಕೆ ಹೊರಟ್ಟಿದ್ದೀರಿ. ನನಗ ಸಂತೋಷ I cannot shut out him but let him adopt this procedure

Mr. Chairman : I am bringing to your notice Rule 331 Irrelevance or repetition -

"The speaker, after having called the attention of the House to the conduct of member who persists in irrelevance or in tedious repetition either of his own arguments or of the arguments used by other members in debate, may direct him to discontinue his speech".

This is the provision under rule 331.

ವಿರೋಧ ಪಕ್ಷದ ನಾಯಕರೇ, ದಯವಿಟ್ಟು ಒಂದು ನಿಮಿಷ ಕುಳಿತುಕೊಳ್ಳಿ. 331 ರೂಲ್ಸ್ ಪ್ರಕಾರವಾಗಿ ಇಂತಹ ಡಿಬೇಟ್‌ನಲ್ಲಿ ರಿಪಿಟೇಷನ್ ಬಂದರೆ ಈ ರೀತಿ ಎಂದು 331ರಲ್ಲಿ ಸ್ಪಷ್ಟವಾಗಿದೆ. ಆದರಿಂದ ನಾನು ಸೀನಿಯರ್ ಮೆಂಬರ್ ಗಮನಕ್ಕೆ ತರುತ್ತೇನೆ. ಈ 331 ಗಮನದಲ್ಲಿ ಇಟ್ಟುಕೊಂಡು ಅವರು ಸ್ಪೀಚ್ ಕಂಟಿನ್ಯೂ ಮಾಡಲಿ, ಅಷ್ಟೇ ಇನ್ನೇನೂ ಇಲ್ಲ.

Sri. H.N. Nanjegowda : I am not making an allegation against Lalithamma. I am not making an allegation against Siddalingamma. My effort is, suppose an officer is insubordinate, suppose an officer fabricates evidence ......

Sri. H.D. Devegowda : I am sorry What is this ?

ಶ್ರೀ. ಜೆ. ಹೆಚ್. ಪಾಟೀಲ್: ಇದು ಬಹಳ ಅತೀಯಾಯಿತು ಮಾನ್ಯ ಅಧ್ಯಕ್ಷರೇ, ನಾನು ಹಾಗಾದರೆ ಇವರ ಹೆಸರು ಹೇಳಿದೆ, 3 ಸಲ ಲೋಕಸಭಾ

ಸದಸ್ಯರಾಗಿದ್ದರು, ಹಿಂದೆ ಇರಿಗೇಷನ್ ಮಂತ್ರಿಯಾಗಿದ್ದರು ಎಂದು ಯಾರೋ ಒಬ್ಬರು ಹೇಳಿಕೆ ತೆಗೆದುಕೊಂಡದ್ದು ಒಂದು ಸಾರಿ ನಾನು ಅವರಿಗೆ ಅವಮಾನ ಆಗತಕ್ಕಂಥ ವಿಷಯವನ್ನು ಸದನದಲ್ಲಿ ಹೇಳಿ ಅದು ರೆಕಾರ್ಡ್‌ಗೆ ಹೋಗಿ ಅಮೇಲೆ ನಾನು ಏನೂ ಹೇಳಲಿಲ್ಲ ಎಂದು ಹೇಳುವುದಕ್ಕೆ ಆಗುತ್ತದೆಯೇ ಪ್ರತಿ ದಿನ ಇದೇ ಕೆಲಸ, ಆಗಲೂ ಈಗಲೂ ಇದೇ ಕೆಲಸ. ಯಾರನ್ನೋ ಮನಸ್ಸಿನಲ್ಲಿ ಇಟ್ಟುಕೊಂಡು ಸುತ್ತಿಬಳಸಿ ಆ ಅಮ್ಮನನ್ನು ಹುಡುಕಿ ಈ ಅಮ್ಮನನ್ನು ಹುಡುಕಿ, ಇವರು ಒಂದು ದೊಡ್ಡ ಬಿಡಿಎ ಕೇಸ್ ಮಾಡುತ್ತಿದ್ದಾರೆ. ಅಂತಹ ವಿಷಯಗಳನ್ನು ಬರೆಯಿರಿ. ನಿಮಗೆ ಪ್ರೊಸೀಜರ್ ಗೊತ್ತಿದೆ. ಬರೆಯಿರಿ ಸ್ಪೀಕರಗೆ. ಇಂತಹವರ ಮೇಲೆ ನನಗೆ ಚಾರ್ಜಸ್ ಇದ್ದಾವೆ ಈ ಡಾಕ್ಯುಮೆಂಟ್ಸ್ ಇದ್ದಾವೆ ಎಂದು. ಅದನ್ನು ಸಭಾನಾಯಕರಿಗೆ ಕಳುಹಿಸಲಿ, ನಾವು ಅದಕ್ಕೆ ಏನು ಶಿಕ್ಷೆ ಕೊಡಬೇಕೋ ......

ಶ್ರೀ ವಿ. ಸೋಮಣ್ಣ : ಅಧ್ಯಕ್ಷರೆ, ಏನಿದು ಒಂದೇ ವಿಚಾರವನ್ನೇ ಹೇಳಿದ್ದೇ, ಹೇಳಿಕೊಂಡು ಹೋದರೆ ಹೇಗೆ ? ನಂಜೇಗೌಡರ ಹಿರಿಯ ಸದಸ್ಯರು ಇದ್ದಾರೆ.

**4.50. ಪಿ.ಎಂ**

Sri. H.N. Nanjegowda : Sir, if the Chief Minister misleads this House.

Sri. H.D. Devegowda : Sir, I am not misleading. Let me be plain. Sir, particularly on any type of allegations a Member of this House wants to make, I cannot curtail. However, the only thing is that certain procedure has to be adopted. Sir, in the very same House, the Speakers have given rulings on several occasions. I am only quoting the rulings given in the very same House by the Hon. Speakers. "Members should not mention the names or make an allegation against any person who is not present in the House; names of officers are not allowed to be given out in the House ; names of persons should not be dragged when they are not present to defend themselves in the House". I am not quoting the rule. These are the Rulings and observations by the Chair. "Names of the persons should not be dragged in when they are not present to defend themselves in the House. Names of the outsider should not be mentioned in the House, in connection with any insinuation or defamatory statement." These are the rulings given by

the Hon. Speaker in the very same house. As the senior Member Sri. Khargeji said, the rules of procedure that has been laid down in the very same house to make an allegation ; He has to write to the speaker first and then they copy of the allegation has to be passed on to the Government i.e. either to the chief minister or to the (ಸಭಾಧ್ಯಕ್ಷರು ಪೀಠವನ್ನಲಂಕರಿಸಿದರು) concerned Minister who is going to reply about the allegation that is going to be levelled against any officer or anybody. (ಸಭಾಧ್ಯಕ್ಷರು ಪೀಠವನ್ನಲಂಕರಿಸಿದರು) Unless we know the allegation earlier, it is very difficult for us to answer. That is all what I want to submit. Your predecessor in the chair just now mentioned Rull 331. However, again I am drawing the attention to rule 328 about the procedure regarding allegations against a person. He is a seasoned parliamentarian. Now, the only thing is, if he wants to make further allegations, let him give it in writing to the Hon.Speakar and copy passed on to the Government so that the Government will be ready to answer those allegations. Till such time Sir, I request you not to allow those allegations to be made.

Sri. H.N.Nanjegowda: I am not a person to make any allegation. I have not made any allegations. I would like to know from the Hon.Chief Minister - Have I made any allegation? Sir, I have submitted a Charge-sheet with evidence. It is not an allegation.

Sri. H.D.Devegowda: I went only ruling as to whether it is charge-sheet or allegation or FIR. I do not want to be guided by the Hon.Member. I want to be guided by the Chair. The Hon.Speaker has to be guided by the Rules of procedure of the House. I leave it to you Sir.

Sri.H.N.Nanjegowda: Sir, I read that Resolution. The Government should function under rule of law.

Mr. Speaker: You have mentioned about this matter sufficiently on previous occasion. If there is more infor-

mation with you, I would just request you to come forth with the information to be so that we can always have the matter examined. Nobody is wanting to avoid an investigation into these things nor the Chair is interested in avoiding an investigation into this. The only object is, should we, time and again, make a reference to someone who is not present in the House to defend himself or herself. You are a very senior Member of this House. I do not think that it is fair that I should bring these things to your notice. We hold you in very high esteem. It is with that background I am appealing. You have already once spoken sufficiently about these things. If there is more information forthcoming to support the references already made......

Sri H.N.Nanjegowda: Sir, why I am at a loss to understand is, this is the Government Order. This is reconveyance of land by the BDA - Implementation regarding - This is dated 09/05/1996 - Hud 26 MNX 86(P) Dt.09/05/1986. To, The Commissioner, Bangalore Development Authority, dated 09/05/1986. This Board Resolution dated 02/12/1985.

Sri J.H.Patel: Sir, this was in pursuance of an High Court Order, the copy of which we do not have. ಹೈ ಕೋರ್ಟ್ ಆರ್ಡರ್ ಆಯಿತು : ಜಸ್ಟೀಸ್ ವೆಂಕಟರಾಮಯ್ಯನವರ ಆಜ್ಞೆಯ ಮೇರೆಗೆ ಅದು ರಿ ಅಲಾಟ್ ಆಯಿತು. ಅದು ನಮಗೂ ಗೊತ್ತಿಲ್ಲ, ತಮಗೂ ಗೊತ್ತಿಲ್ಲ. ಸರ್ಕಾರದಿಂದ ಆಗಿರತಕ್ಕಂಥ ಬಿ ಡಿ ಎ ಇರಲಿ ಸಿ ಒ ಡಿ ಇರಲಿ ಮತ್ತೊಂದು ಕಡೆ ಇರಲಿ ಆಗಿರತಕ್ಕಂಥ ದೋಷವನ್ನು ತಿದ್ದುವಂತಹ ದೃಷ್ಟಿಯಿಂದ ಹೇಳುವುದಕ್ಕೆ ನಮ್ಮ ಅಭ್ಯಂತರವೇನೂ ಇಲ್ಲ. ಆದರೆ ಅದನ್ನು ಸದನದ ಗಮನಕ್ಕೆ ತರಬೇಕಾದರೆ ಮೊದಲು ಪ್ರೊಸಿಜರ್ ಇದೆ. ಅದನ್ನು ಬಿಟ್ಟು ನಾನು ಹೇಗಾದರೂ ಬಂದು ಬಿಡುತ್ತೇನೆ ಅಸೆಂಬ್ಲಿಯೊಳಗೆ ಅಂದರೆ ಅದು ಹಾಗಲ್ಲ. ಅವರು ಅಸೆಂಬ್ಲಿಯೊಳಗೆ ಬರಬೇಕಾದರೆ ಅವರು ಗೆದ್ದೇ ಬರಬೇಕು. ನಾನೇಕೆ ಬರಬಾರದು ಎಂದು ಬಾಗಿಲು ತೆಗೆದುಕೊಂಡು ಬಂದುಬಿಟ್ಟರೆ ಏನು ಮಾಡುವುದಕ್ಕೆ ಆಗುತ್ತದೆ? ಯಾರೋ ತಿಳಿಯದೆ ಹಾಗೆ ಮಾಡಬಹುದು. ತಾವು ಸದನದ ಸದಸ್ಯರಾಗಿ ಅನುಸರಿಸಬೇಕಾದಂತಹ ಪುಸ್ತಕವನ್ನು ತಾವೇ ಒಪ್ಪಿಕೊಂಡಿದ್ದೀರಿ. ಕಾನ್ಸ್ಟಿಟ್ಯೂಷನ್ ಒಪ್ಪಿಕೊಂಡಿದ್ದಿರೋ ಹಾಗೆ 327 ಓದಿ ಎಂದರೆ ಓದಿದ್ದೇವೆ ಎನ್ನುವುದು, ಮತ್ತೆ

ನೋಡಿ ವೆಂಕಟಮ್ಮ, ವೆಂಕಟಮ್ಮನ ಅಮ್ಮ ಲಕ್ಷ್ಮಮ್ಮ ಏಕೆ ಹಾಗೆ, ತಾವು ಬರೆಯಿರಿ.

Sri H.N.Nanjegowda : I do not want the Deputy Chief Minister or the Chief Minister to treat the subject in such a light manner.

Sri J.H.Patel: Not at all.

Sri H.N.Nanjegowda : Then your Chief Minister could say that it was the ancestral property of that lady and that is why it was given. Why 8 sites were given earlier? Why there was a Board Resolution? There should be a background for it.

Sri H.D.Devegowda : Sir, ಅವರು ನ್ಯಾಷನಲ್ ಗೇಮ್ಸ್ ಬಗ್ಗೆ ಮಾತನಾಡಿದಾಗ I own the responsibility. But here is a case which he wants to refer for an event that took place in 1985 or 1986. I do not know. Atlest the Government has to be well aware of the entire events that took place in 1985 and for that, he should send a copy of the allegation he wants to raise or he wants to make well in advance in accordance with the rules of the very same House and then you can fix a time, the allegation can be levelled and the Government is prepared to answer.

ಶ್ರೀ ಬಿ.ಎಸ್. ಯಡಿಯೂರಪ್ಪ : ಮಾನ್ಯ ಅಧ್ಯಕ್ಷರೆ, ಇಲ್ಲಿ ಯಾವುದೇ ಅಲಿಗೇಷನ್ ಅನ್ನು ಹೊಸದಾಗಿ ನಂಜೇಗೌಡರು ಮಾಡುತ್ತಿಲ್ಲ. ಹಿಂದೆ ನಡೆದಂತಹ ಚರ್ಚೆಯ ಸಂದರ್ಭದಲ್ಲಿ ಮುಖ್ಯಮಂತ್ರಿಗಳು ಹೇಳಿದ್ದಕ್ಕೆ ಸಂಬಂಧಪಟ್ಟಂತೆ ಯಾವ ಕೆಲವು ಮಾಹಿತಿಗಳು ಇವೆ ಇದ್ದಾವೆ ಅದನ್ನು ರೆಫರ್ ಮಾಡುತ್ತಾರೆಯೇ ಹೊರತು ಯಾರ ಬಗ್ಗೆಯೂ ಛಾರ್ಜ್ ಮಾಡುತ್ತಾ ಇಲ್ಲ. ಯಾರನ್ನೂ ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತಿಲ್ಲ. ಏನು ಆಗಿದೆ ಎಂಬುದನ್ನು ಹೇಳಬೇಕಾದರೆ ಇವತ್ತಿನ ಘಟನೆಯನ್ನು ಹೇಳಬೇಕಾದರೆ ಹತ್ತಾರು ವರ್ಷಗಳ ಬ್ಯಾಕ್‌ಗ್ರೌಂಡ್ ಏನಿದೆ ಅದನ್ನು ಹೇಳಬೇಕಾಗುತ್ತದೆ. ನಿಮ್ಮ ರೂಲ್ ಪ್ರಕಾರ ತಾವು ತಡೆ ಹಿಡಿಯಬಹುದು. ತಾವು ಕೇಳಿ ನಂತರ ಇದು ಬರುತ್ತೋ ಬರುವುದಿಲ್ಲವೋ ಎನ್ನುವುದನ್ನು ಅವರು ಏನು ಹೇಳುತ್ತಾರೋ ಅದನ್ನು ಪೂರ್ತಿ ಕೇಳಿ. ಇನ್ನೂ ಅವರು ಪೂರ್ತಿ ಹೇಳಿಲ್ಲ.

(ಗೊಂದಲ)

ಶ್ರೀ ಜೆ.ಹೆಚ್.ಪಾಟೀಲ್ : ಪೂರ್ತಿ ಹೇಳುವುದಕ್ಕೂ ಪ್ರೊಸಿಜರ್ ಇದೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ಹಾಗಾದರೆ ಈ ಸದನದಲ್ಲಿ ಕಾರ್ಯಕಲಾಪಗಳನ್ನೇ ಮಾಡುವುದಕ್ಕೆ ಆಗುವುದಿಲ್ಲ.

Sri H.D. Devegowda : It is not an allegation. It is a charge sheet. Charge sheet against whom?

Sri.H.N. Nanjegowda : It have made it already.

Sri H.D. Devegowda : That is the issue before me. It is against a Government officer who served this Government in a highest capacity. On behalf of that officer, the Government is prepared to reply for the charges he is going to make. But let him frame the charges and send the copy to you and comply with the rules. You fix the time.

Sri.H.N. Nanjegowda : I am not making charges.

Sri H.D. Devegowda : Sir, then what else is he doing?

ಶ್ರೀ ಎಂ. ನಾರಾಯಣಸ್ವಾಮಿ : ಮಾನ್ಯ ಅಧ್ಯಕ್ಷರೇ, ನನ್ನ ವಿನಂತಿ ಇಷ್ಟೇ, ಮಾನ್ಯ ರಾಜ್ಯಪಾಲರ ಬಾಷಣದ ಮೇಲೆ ನಡೆಯುತ್ತಾ ಇದೆ. ಚರ್ಚೆ ಯಾವ ಕಡೆ ಹೋಗುತ್ತಿದೆ. ಅದು ದಾರಿ ತಪ್ಪುತ್ತಿದೆ ಎಂದು ನನಗನಿಸುತ್ತಿದೆ. ಅವರು ಡೀಟೈಲಾಗಿ ಚರ್ಚೆ ಮಾಡುತ್ತಿದ್ದಾರೆ. ನೋಟೀಸ್ ಕೊಡಬೇಕಾಗುತ್ತದೆ. ರಾಜ್ಯಪಾಲರ ಭಾಷಣದ ಮೇಲೆ ಚರ್ಚೆಯಾಗಲಿ ಇವತ್ತು, ಇಲಾಖೆಯಲ್ಲಿ ಏನು ಏರುಪೇರಾಗಿದೆ ಎನ್ನತಕ್ಕಂಥ ಮಾತನ್ನು ಹೇಳಲಿ, ಡೀಟೈಲಾಗಿ ಹೋಗುವುದು ಬೇಡವೆಂಬುದು ನನ್ನ ಅನಿಸಿಕೆ.

ಶ್ರೀ ಹೆಚ್.ಎನ್.ನಂಜೇಗೌಡ : ಇಲ್ಲಿ ಅಮಾಯಕ ಜನರು ಸಿಕ್ಕಿದರೆ ಸರ್ಕಾರ ಏನು ಬೇಕಾದರೂ ಮಾಡಬಹುದು.

ಅಧ್ಯಕ್ಷರು : ಸನ್ಮಾನ್ಯ ಸಭಾನಾಯಕರು ಯಾವ ಅನುಮಾನಕ್ಕೂ ಅವಕಾಶ ಇಲ್ಲದೆ ಹೇಳಿದರು.ನೀವು ಕ್ರೀಡಾ ಸಮುಚ್ಚಯದ ವಿಚಾರ ಹೇಳಿದ್ದೀರಿ. ಅದು ಈಗಿನ ವಿಚಾರ ನಾನು ಸಂಪೂರ್ಣ ಹೊಣೆ ಹೊತ್ತಿದ್ದೇನೆ. ನಾನು ಅದಕ್ಕೆ ಜವಾಬ್ದಾರ ಅದಕ್ಕೆ ನಾನು ಉತ್ತರ ಕೊಡುತ್ತೇನೆ. ಇದು ಹಿಂದಿನ ಘಟನೆ ಕುರಿತು ಪ್ರಸ್ತಾಪ ತಾವು ಮಾಡಿದ್ದೀರಿ. ನಾನು ಎಲ್ಲಾ ಗ್ರಂಥ ಓದಿಕೊಂಡು ಕುಳಿತಿರುವುದಿಲ್ಲ. ಏಕಾಏಕಿ ನೀವು ಪ್ರಸ್ತಾಪ ಮಾಡಿದಾಗ ನನ್ನ ಹತ್ತಿರ ಏನೂ ದಾಖಲೆಗಳು ಇರುವುದಿಲ್ಲ. ದಯಮಾಡಿ ತಾವು ಏನು ಸಂಭಂಧಿಸಿದ್ದನ್ನು ಪ್ರಸ್ತಾಪ ಮಾಡುವವರಿದ್ದೀರಿ, ಅದರ ಸೂಚನೆಯನ್ನು ನನಗೆ ಕೊಟ್ಟರೆ ನಾನು ತಯಾರಾಗಿ ಬರಬಹುದು. ಈ ರೀತಿ ಮಾಡತಕ್ಕಂಥದ್ದು ಬೇಡ. ಇದು ತಮಗೆಲ್ಲಾ ಗೊತ್ತಿಲ್ಲದಂತಹ ವಿಷಯವೇನಲ್ಲ. ತಾಂತ್ರಿಕತೆಯ ಬಗ್ಗೆ ದೊಡ್ಡದನ್ನಾಗಿ ಮಾಡಿಕೊಂಡು ನಾವು ಚರ್ಚೆ ಮಾಡಿಕೊಂಡು ಇಲ್ಲಿ ನಮ್ಮ ನೈಪುಣ್ಯತೆಯನ್ನು ಪ್ರದರ್ಶನ ಮಾಡಿಕೊಳ್ಳುವುದು ಬೇಡ. ಸಾರ್ವಜನಿಕ ಮಹತ್ವದ ದೃಷ್ಟಿಯಿಂದ ಈ ವಿಷಯ ಬಹಳ ಮಹತ್ವವಾದುದು ಎಂದರೆ ತಮ್ಮನ್ನು ಮಾತನಾಡಲು ಅವಕಾಶ ಮಾಡಿಕೊಡಬಾರದು ಎನ್ನತಕ್ಕಂಥ ಉದ್ದೇಶ ಯಾರದ್ದೂ

ಇಲ್ಲ. ನಾನು ತಮಗೆ ಏನು ಹೇಳುತ್ತೇನೆ, ಇಲ್ಲಿ 327 ಬಹಳ ಕ್ಲಿಯರಾಗಿ ಇದೆ. I will read that.

"refer to Government officials by name"

ಎಕ್ಸಪ್ಲೇಷನ್‌ನಲ್ಲಿ ರೂಲ್ 327ರಲ್ಲಿ ರೋಮನ್ ಅಂಕಿಗಳಲ್ಲಿ ಹಾಕಿದ್ದಾರೆ. 11 ಆದಮೇಲೆ 12ನೆಯದನ್ನು ನೋಡಿ

"make any reference to the strangers, in any, of the galleries". "refer to Government officials"

ನಾನು ಏನು ಹೇಳುತ್ತೇನೆಂದರೆ, sufficiently you have made a reference, to all these things by now. It is not an order. It is an appeal. In the good interest of the State.

ಒಂದು ಒಳ್ಳೆಯ ಟ್ರೆಡಿಷನ್ ಮಾಡುವುದಕ್ಕೋಸ್ಕರ ತಾವು ದಯಮಾಡಿ ತಮ್ಮ ಹತ್ತಿರ ಏನೇನು ಇದೆ you can confide in the Speaker ಯಾವ ರೀತಿಯ ವಿಚಾರಣೆಗಳು ನಿಮಗೆ ಬೇಕಾಗಿದ್ದರೂ ಕೂಡ ಸಂಬಂಧಿಸಿದ ವಿಚಾರದಲ್ಲಿ ಮಾಡಿಸಿಕೊಡುವುದಕ್ಕೆ ನಾನು ತಯಾರಾಗಿದ್ದೇನೆ ಅಥವಾ ತಾವು ದಾಖಲೆಗಳನ್ನು ತೆಗೆದುಕೊಂಡು ಬಂದರೆ ಅವರನ್ನೂ ಕರೆಯುತ್ತೇನೆ ಒಟ್ಟಿಗೆ ಅಲ್ಲಿ ಕುಳಿತು ಚರ್ಚೆ ಮಾಡೋಣ. How far it would be fair to discuss the conduct of a person who occupies the highest position in the beaurocracy. See, all of us are part of the system. It is wish that intention Iam making a very humble submission to you. Kindly understand that pain behind this. It is not to avoid somebody from being properly placed before the people. I am not over anxious to defend somebody who has committed a mistake. The object is as simple as this. Please examine this aspect. You are a very senior member. We are proud of your presence in this very House. Even before we could qualify ourselves to cast out votes, you were a member of this House.

ಸದನದಲ್ಲಿ ತಮ್ಮಂಥ ಸೀನಿಯರ್ಸ್ ಯಾರಿದ್ದೀರಿ, you guide us to conduct this House. It is with that background Iam appealing you.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಅಧ್ಯಕ್ಷರೇ, ನಮಗೆ ಇದು ಅರ್ಥವಾಗುವುದಿಲ್ಲ, ಏಕೆಂದರೆ, ರೂಲ್ 327 ಸಬ್‌ಕ್ಲಾಸ್ 12ರಲ್ಲಿ ಯಾರೂ ಕೂಡ ರೆಫರ್ ಮಾಡಬಾರದು ಅನ್ನುವಂಥ "refer to Government officials by name" ಆದರೆ ಅವರು ಒಂದು ಕಾಲದಲ್ಲಿ ರೆಫರ್ ಮಾಡಿಬಿಟ್ಟರು, ಆಗ

ಸರ್ಕಾರದವರು ಸುಮ್ಮನೆ ಕುಳಿತಿದ್ದರು, ಹೆಸರು ತೆಗೆದುಕೊಂಡು ಅಲಿಗೇಷನ್ ಮಾಡಿ ಎಲ್ಲಾ ಹೇಳಿದರೂ ಕೂಡ ಆಗ ಇದರ ಬಗ್ಗೆ ಏನೂ ಚಕಾರ ಶಬ್ದವನ್ನು ಎತ್ತಲಿಲ್ಲ. ಅದು ಆದಮೇಲೆ ಮರುದಿನ ಬಂದು ಡಿಫೆಂಡ್ ಮಾಡಿಕೊಂಡಿರಿ, ಅದು ಸರಿಯಲ್ಲ... ಆದರೆ ಈ ಒಂದು ರೂಲ್ 327 ಸಬ್‌ಕ್ಲಾಸ್ 12 ರ. ಕೆಳಗೆ ಇದು ಸರಿಯಲ್ಲ ಎಂದು ಹೇಳಲಿಲ್ಲ ಇದು ಒಂದು. ಎರಡನೆಯದು 331 ಕೆಳಗೆ ನಾಗೇಗೌಡರು ಕೂಡ ಹೇಳಿದರು ಅದು "irrelevant" ಪ್ರಶ್ನೆ ಬರುವುದಿಲ್ಲ ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುವಾಗ ಅವರು ಮಾತನಾಡುತ್ತಾರೆ.

Sri.H.N. Nanjegowda : It is repetition.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಮೊದಲು ಒಂದು ರೂಲಿಂಗ್ ಕೊಟ್ಟುಬಿಡಿ ಇಲ್ಲ ಮಾತನಾಡುವುದು ಬೇಡ ಅಂದರೆ ಇಲ್ಲಿಗೆ ಸ್ಟಾಪ್ ಆಗೋಣ. ಪದೇ ಪದೇ ಅದೇ ರೂಲ್ ಹೇಳುವುದು, ಸರ್ಕಾರದವರೂ ಅದನ್ನೇ ಹೇಳುವುದು ಅವರು ಆ ರೆಫರೆನ್ಸ್ ಮಾಡಿ ಹೆಸರಿನಿಂದ ಹೇಳಬೇಕಾದರೆ ನೋಟಿಸನ್ನು ಕೊಟ್ಟೇ ಯಾವ ರೀತಿಯಾಗಿ "Explanation" ನಲ್ಲಿ ಇದೆ,

"The words "person" in high authority" means persons whose conduct can only be discussed on a substantive motion drawn in proper terms under the Constitution or such other person whose conduct or such other person whose conduct in the opinion of the speaker should be discussed on a substantive motion drawn up in terms to be approved by him" In that "refer to Government officials by name" ಬರೆದಿದ್ದಾರೆ. ಇದು ಪದೇ ಪದೇ ಅದೇ ಎಂದು ಆಗಿಬಿಡುತ್ತದೆ. ಆಮೇಲೆ ನಮಗೆ ಅಟ್‌ಲಿಸ್ಟ್ ಇದೆ ಸರಿನೋ ಏನೋ ಒಂದು ಸಾರಿ ರೆಫರ್ ಮಾಡಿದ್ದನ್ನು ಹಾಗೆಯೇ ಕಂಟಿನ್ಯೂ ಮಾಡುವುದು ಸರಿನೋ ಎನ್ನತಕ್ಕಂಥ ಸಂಶಯ ಬರುತ್ತದೆ.

ಶ್ರೀ ಬಿ.ಎಸ್.ಯೂಡಿಯೂರಪ್ಪ : ಅಧ್ಯಕ್ಷರೇ, ತಾವೊಂದು ರೂಲಿಂಗ್ ಕೊಡಬೇಕು, ಇದೇ ಸದನದಲ್ಲಿ ತಾವೇ ಆ ಪೀಠದಲ್ಲಿ ಕುಳಿತಿದ್ದಾಗ ಇಲ್ಲಿ ಚರ್ಚೆಯಾದಂಥ ಸಂದರ್ಭದಲ್ಲಿ ಹಾಸನದ ಒಬ್ಬ ಜಿಲ್ಲಾಧಿಕಾರಿಯ ಹೆಸರನ್ನು ಸದನದಲ್ಲಿ ತಾವೇ ಹೇಳಿದಿರಿ, ಆಗ ರೂಲ್ ಇರಲಿಲ್ಲವೇ? ಹಾಸನದ ವಿಚಾರವು ಚರ್ಚೆಗೆ ಬಂದಾಗ ನಾವು ಪದೇ ಪದೇ ಅವರ ಹೆಸರನ್ನು ಕೇಳಿದಾಗ ಒಬ್ಬ ಪ್ರಾಮಾಣಿಕ ಜಿಲ್ಲಾಧಿಕಾರಿಯ ಹೆಸರನ್ನು ತಾವು ಹೇಳಿದಿರಿ, ಅವರು ಯೋಗ್ಯರು ಎಂದು ಹೇಳುವ ಸಂದರ್ಭದಲ್ಲಿ ತಾವು ಅವರ ಹೆಸರನ್ನು ರೇಫರ್ ಮಾಡಲಿಲ್ಲ. ಅಧಿಕಾರಿ ತನ್ನ ಕರ್ತವ್ಯವನ್ನು ನಿರ್ವಹಿಸಲಿಲ್ಲ ಎನ್ನುವ ಸಂದರ್ಭದಲ್ಲಿ ಅವರ ಹೆಸರನ್ನು ಹೇಳಿದಾಗ, ಇಲ್ಲಿ ಇನ್ನೊಬ್ಬ ಸದಸ್ಯರು ಪ್ರಸ್ತಾಪ ಮಾಡುವುದು ಬೇಡವೇ? ಹಾಗಾದರೆ ಒಂದು ರೂಲ್ ಮಾಡಿ, ಯಾವ ಅಧಿಕಾರಿ ಯಾವ ಮಟ್ಟದವರೆಗೆ ಇಲ್ಲಿ ಪ್ರಸ್ತಾಪ ಮಾಡಬಹುದು, ಯಾವ ಮಟ್ಟದವರೆಗೆ ನಾವು ಇಲ್ಲಿ ಪ್ರಸ್ತಾಪ ಮಾಡಬಾರದು, ಆ

ಬಗ್ಗೆ ಸನ್ಮಾನ್ಯ ಅಧ್ಯಕ್ಷರು ಒಂದು ರೂಲಿಂಗ್ ಕೊಡಬೇಕಾಗುತ್ತದೆ. ತಾವು ಮುಖ್ಯಮಂತ್ರಿಗಳಾಗಿ ಅವತ್ತು ಆ ಅಧಿಕಾರಿಯ ಹೆಸರನ್ನು ಪ್ರಸ್ತಾಪ ಮಾಡಿದಾಗ ಚೆನ್ನಾಗಿತ್ತು, ನಾನು ಏನನ್ನು ಹೇಳುವುದಕ್ಕೆ ಹೊರಟಿನೆಂದರೆ ನಂಜೇಗೌಡರು ಆ ಕೆಲಸ ಮಾಡುತ್ತಿಲ್ಲ. ಅವರೂ ಇನ್ನೂ ಸಹ ಯಾವುದೋ ಬಿ.ಡಿ.ಎ.ರೆಸಲ್ಯೂಷನ್ ತೆಗೆದುಕೊಂಡು ಏನಾಗಿದೆ ಎಂಬುದನ್ನು ಪ್ರಸ್ತಾಪ ಮಾಡುತ್ತಿರಬೇಕಾದರೆ ಮುಂದೆ ಅವರೇನೋ ಹೇಳಬಹುದು ಎಂದು ಊಹೆ ಮಾಡಿಕೊಳ್ಳುವಂಥದ್ದು ಈ ಸಂದರ್ಭದಲ್ಲಿ ಅಗತ್ಯ ಇಲ್ಲ ಎಂದು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ತಾವು ಡಿಬೇಟ್ ನಡೆದಿರುವುದನ್ನು ತೆಗೆದು ನೋಡಿ. ಇದುವರೆಗೆ ಅನೇಕ ಚರ್ಚೆಗಳಾಗಿವೆ ಅನೇಕ ಸಂದರ್ಭದಲ್ಲಿ ಕೆಲವು ಹೆಸರುಗಳನ್ನು ಹೇಳುವಂಥ ವಿಶೇಷ ಸಂದರ್ಭ ಬಂದಾಗ ನೀವು ಯಾವುದೇ ಭಾಷಣವನ್ನು ತೆಗೆದುನೋಡಿದಾಗ ಇದು ಆಗಿದೆ. ಈ ರೂಲ್ಸ್‌ನ್ನೆಲ್ಲಾ ಏಕೆ ಮಾಡಿಕೊಂಡಿದ್ದೇವೆ. ಆ ಚೌಕಟ್ಟನ್ನು ಮೀರಿಹೋಗಬಾರದು ಎಂದು. ನನಗೆ ಗೊತ್ತಿರುವ ಪ್ರಕಾರ ಅವರು ಏನು ಮಾತನಾಡಿದ್ದಾರೆ ಎಂಬುದನ್ನು ತೆಗೆದುನೋಡಿ ಆ ಚೌಕಟ್ಟನ್ನು ಮೀರಿ ನಂಜೇಗೌಡರು ಇದುವರೆಗೂ ಒಂದು ಶಬ್ದ ಮಾತನಾಡಿಲ್ಲ.

ಅಧ್ಯಕ್ಷರು : ಸನ್ಮಾನ್ಯ ಸಭಾ ನಾಯಕರು ಸದನದಲ್ಲಿ ಹಾಸನ ಜಿಲ್ಲಾಧಿಕಾರಿಯ ಹೆಸರನ್ನು ಹೇಳುವಾಗ ಅವರ ಮೇಲೆ ಯಾವುದೇ ಅಲಿಗೇಷನ್ ಮಾಡುತ್ತಾ ಹೇಳಲಿಲ್ಲ. ಯಾವ ಯಾವ ಸಂದರ್ಭದಲ್ಲಿ ಯಾರ ಯಾರ ಹೆಸರನ್ನು ನಾವು ಇಲ್ಲಿ ಬಳಕೆ ಮಾಡತಕ್ಕಂಥದ್ದು ನಾವೆಲ್ಲರೂ ಕೂಡ ಜ್ಞಾಪಕ ಇಟ್ಟುಕೊಂಡಿದ್ದೇವೆ. ಸನ್ಮಾನ್ಯ ಖರ್ಗೆಯವರು ರೂಲಿಂಗ್ ಕೊಡಿ ಎಂದು ಹೇಳಿದರು, ತಾವು ಹೇಳಿದಿರಿ, ರೂಲಿಂಗ್ ಕೊಡತಕ್ಕಂಥದ್ದು ಬೇರೆ, Using authority is different and making an appeal is different.

ಶ್ರೀ ಬಿ.ಎಸ್.ಯಡಿಯೂರಪ್ಪ : ತಾವು ಕ್ಷಮಿಸಬೇಕು, ತಮ್ಮ ಮಾತನ್ನು ಮೀರಿ ನಾನು ಮುಂದೆ ಹೋಗುವುದಿಲ್ಲ. ಕೋರ್ಟ್ ಆರ್ಡರ್‌ನ್ನು ಅವರು ಇಂಪ್ಲಿಮೆಂಟ್ ಮಾಡಲಿಲ್ಲ, ಅವರು ತಮ್ಮ ಕರ್ತವ್ಯವನ್ನು ನಿರ್ವಹಿಸಿಲ್ಲ ಎಂಬ ಸಂದರ್ಭದಲ್ಲಿ ಹಾಸನದ ಜಿಲ್ಲಾಧಿಕಾರಿಯ ಹೆಸರು ಬಂತು, ತಾವು ದಾಖಲೆಗಳನ್ನು ತೆಗೆದುನೋಡಿ.

ಅಧ್ಯಕ್ಷರು: ಆ ಸಂದರ್ಭ, ತಮ್ಮ ಆಡಳಿತ ಯಾವ ದಿಕ್ಕಿನಲ್ಲಿ ಸಾಗುತ್ತದೆ, ತಾವು ಯಾವ ರೀತಿ ಕೆಲಸ ಮಾಡುತ್ತೀರಿ ಎಂದು ಉಲ್ಲೇಖ ಮಾಡತಕ್ಕಂಥ ಸಂದರ್ಭದಲ್ಲಿ ಹೀಗೆಲ್ಲಾ ಆಗುತ್ತಿತ್ತು. ಅದಕ್ಕೆ ಅವಕಾಶವನ್ನು ಕೊಡುವುದಿಲ್ಲ ಎಂದು ಹೇಳಿದರಷ್ಟೆ. ನಾನು ತಮಗೆ ಏನು ಹೇಳುತ್ತೇನೆಂದರೆ either we go by the procedure, that is you serve copies of all these things to me and then we intimate the concerned person.

Sri.H.N. Nanjegowda : Sir, the other day when I raised this issue, you may be well remembered that under the rules I was not expected to reveal the matter to others. But I was duty-bound to submit the copies of the documents for authentication and for your verifica-

tion. I did that of course, you are not expected to reveal that to the House. I did my duty correctly constitutionally and as per the rules. Today because the Hon'ble Chief Minister told the House the other day that because the property was their own property and a decision was taken to reconvey the property. That was the essence of all this. ಇವರ ನಾಯಕರಾದ ರಾಮಕೃಷ್ಣ ಹೆಗಡೆಯವರು ಒಮ್ಮೆ ಹೇಳಿದ್ದರು. ಸೀಟಿನಲ್ಲಿ ಕೂರುವ ವಿಷಯಕ್ಕೆ ಸಂಬಂಧಪಟ್ಟಹಾಗೆ ನಾನು ಅದನ್ನು ಹೇಳುವುದಕ್ಕೆ ಹೋಗುವುದಿಲ್ಲ, ಎಲ್ಲರೂ ರೆಫರ್ ಮಾಡುತ್ತಾರೆ, ಪಾಪ ಅವರ ಒದ್ದಾಟವನ್ನು ನಾನು ನೋಡಲಾರೆ; ಆದ್ದರಿಂದ ಇವರು ಹೇಳಿದ್ದರಿಂದ ಅಧ್ಯಕ್ಷರೆ, ಏನಾಗಿದೆ ಎಂದು ನಾನು ತಿಳಿಸಬೇಕಲ್ಲಾ ; ಏಕೆಂದರೆ ಇದು 74-75ರಲ್ಲಿ ಶುರವಾದದ್ದು 85ರವರೆಗೆ ಏನೂ ಇರುವುದಿಲ್ಲ. 85ರಲ್ಲಿ ಹೊಸದಾಗಿ ಶುರುವಾಗುತ್ತದೆ. ಪುನಃ ಮಲಗಿಕೊಳ್ಳುತ್ತದೆ.

ಶ್ರೀ ಹೆಚ್.ಡಿ.ದೇವೇಗೌಡ : ನಿಮ್ಮ ಹತ್ತಿರ ಏನು ಚಾರ್ಜಸ್ ಇದೆ ಎಂದು ಹೇಳಿದರೆ ಅದಕ್ಕೆ ಸಂಬಧಪಟ್ಟ ಹಾಗೆ ದಾಖಲೆಗಳನ್ನು ನಾವು ತರಿಸಬೇಕಲ್ಲಾ, ಅದನ್ನು ನೋಡದೆ ನಾನು ಹೇಗೆ • ಹೇಳಲಿ? 74ರಲ್ಲಿ ಏನಾಗಿದೆ ಎಂದು ನಾನು ಹೇಗೆ ಹೇಳುವುದಕ್ಕಾಗುತ್ತದೆ? ದಯಮಾಡಿ ನೀವು ಚಾರ್ಜ್‌ಸ್ ಕೊಡಿ; ಚರ್ಚೆ ಮಾಡಿ ನನ್ನದೇನೂ ತಕರಾರಿಲ್ಲ.

ಶ್ರೀ ಹೆಚ್.ಎನ್.ನಂಜೇಗೌಡ : ತಮಗೆ ಎಲ್ಲಾ ವಿವರಗಳನ್ನು ಕೊಟ್ಟು ನಾಳೆ ಪುನಃ ಇದರ ಬಗ್ಗೆ ಚರ್ಚೆಯನ್ನು ಶುರಮಾಡುತ್ತೇನೆ.

ಶ್ರೀ ಜೆ.ಎಚ್.ಪಟೇಲ್ : ಯಾರು ಅಧಿಕಾರದಲ್ಲಿ ಇದ್ದಾಗ ಆ ರೀತಿ ಆಗಿದೆ ಎಂಬುದನ್ನು ಐಡೆಂಟಿಫೈ ಮಾಡಿದ್ದೀರಿ, ಅದೇ ತರಹ ತಮಗೇನಾದರೂ ಯಾರ ಭಗ್ಗೆ ಅವರು, ಅವರ ಹಿಂದಿದ್ದವರು, ಅವರ ಹಿಂದಿನವರು, ಅಂತಹದ್ದು ಏನಾದರೂ ಇದ್ದರೆ ಹೇಳಿ. ಅವಶ್ಯಕ ಇದ್ದರೆ, ಮಾನ್ಯ ಅಧ್ಯಕ್ಷರು ಅಪ್ಪಣೆ ಕೊಟ್ಟರೆ, ಶಿಕ್ಷಾರ್ಹರು ಯಾರಿದ್ದರೂ ಶಿಕ್ಷೆ ಮಾಡೋಣ. ತಾವು ತೀರ್ಮಾನ ಮಾಜಿ, ನಾವು ಇದ್ದೆಕ್ಕೇನೂ ಅಡ್ಡಿಬರುವುದಿಲ್ಲ, ತಪ್ಪು ಮಾಡಿದವರನ್ನು ಉಳಿಸಿಕೊಳ್ಳುವುದಿಲ್ಲ, ವಿನಾಕಾರಣ ತಪ್ಪುಮಾಡದವರ ಮೇಲೆ ಗೂಬೆ ಕೂರಿಸುವುದಕ್ಕೆ ಹೊರಟಿರುವುದು ಸರಿಯಲ್ಲ.

ಶ್ರೀ ಹೆಚ್.ಎನ್.ನಂಜೇಗೌಡ : ವಿನಾಕಾರಣ ಮಾಡುವಂತವನಲ್ಲ, ನಾನು ಸರಿಕಂಡಂಥದ್ದನ್ನೇ ಮಾಡುತ್ತಿರುವುದು; 85ರವರೆಗೆ ಈ ವಿಚಾರದಲ್ಲಿ ಏನೂ ಇರುವುದಿಲ್ಲ, ಪುನಃ ಅಲ್ಲಿಂದ 92ರವರೆಗೆ ಏನು ಇರುವುದಿಲ್ಲ, ಇದು ತಮಗೆ ಗೊತ್ತಾಗುತ್ತದೆ.

ಯಾರ ಯಾರ ಕಾಲದಲ್ಲಿ ಎಷ್ಟೆಷ್ಟು ಸೈಟು ಕೊಟ್ಟಿದ್ದಾರೆ, ಏನೇನು ಮಾಡಿದ್ದಾರೆ, ನಾನು ಯಾವುದೂ ಸುರುಳಿ ಬಿಚಿಲ್ಲ.

ಅಧ್ಯಕ್ಷರು : ಸನ್ಮಾನ್ಯ ನಂಜೇಗೌಡರೇ, ಮಾನ್ಯ ಉಪಮುಖ್ಯಮಂತ್ರಿಗಳು ಹೇಳಿದ್ದು ಅವರ ಅಭಿಪ್ರಾಯವಾಗುತ್ತದೆ. ತಾವು ವಿನಾಕಾರಣ ಮಾತನಾಡುತ್ತಿದ್ದೀರಿ,

ಜವಾಬ್ದಾರಿ ಇಲ್ಲದೇ ಮಾತನಾಡುತ್ತಿದ್ದೀರಿ, ಆ ರೀತಿಯ ಯಾವ ವ್ಯಾಖ್ಯಾನವನ್ನೂ ನಾನು ಮಾಡುತ್ತಿಲ್ಲ. ತಮ್ಮಲ್ಲಿ ನಾನು ಇಷ್ಟೇ ವಿನಂತಿ ಮಾಡುತ್ತಿದ್ದೇನೆ. ದಯಮಾಡಿ ನನ್ನನ್ನು ವಿಶ್ವಾಸಕ್ಕೆ ತೆಗೆದುಕೊಂಡು ನಿಮಲ್ಲಿರತಕ್ಕ ಮಾಹಿತಿಯನ್ನೆಲ್ಲಾ ನನಗೆ ಕೊಟ್ಟು, ನನ್ನ ಕಛೇರಿಯಲ್ಲಿ ಕುಳಿತು, ಸಭಾನಾಯಕರ ಜೊತೆ ನಾವು ಚರ್ಚೆ ಮಾಡುವುದಾದರೂ ಆಗಬಹುದು. ಇದರಲ್ಲಿ ತನಿಖೆ ಆಗಬಾರದು, ವಿಷಯ ಹೊರಗೆ ಬರಬಾರದು, ತಪ್ಪಿತಸ್ಥರನ್ನು ರಕ್ಷಣೆ ಮಾಡಬೇಕು ಈ ರೀತಿಯ ಯಾವ ದುರದ್ದೇಶವೂ ಯಾರಲ್ಲಿಯೂ ಇಲ್ಲ. ಈ ಸದನ ಯಾವ ವಿಷಯವನ್ನೂ ಈ ರೀತಿಯ ಗಂಭೀರವಾದಂತಹ ಆರೋಪಗಳು ಬಂದಾಗ ಮುಚ್ಚಿಡುವುದಕ್ಕೆ ತಯಾರಾಗಿಲ್ಲ. ಆ ರೀತಿ ಕಳಂಕ ಹೊತ್ತುಕೊಳ್ಳುವುದಕ್ಕೆ ನಾನು ತಯಾರಿಲ್ಲ. ತಾವು ದಯಮಾಡಿ ನನ್ನನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಿ. ನೀವು ಈಗಾಗಲೇ ಇದನ್ನು ಪ್ರಸ್ತಾಪ ಮಾಡಿದ್ದೀರಿ. ಇದಕ್ಕೆ ಸಂಬಂಧಪಟ್ಟ ಹಾಗೆ ಇನ್ನೂ ಹೆಚ್ಚಿನ ಮಾಹಿತಿ ತಮ್ಮ ಹತ್ತಿರ ಇದ್ದರೆ ಅದನ್ನು ನನ್ನ ಕಡೆ ಒದಗಿಸಿ ಕೊಟ್ಟರೆ ಅನುಕೂಲವಾಗುತ್ತದೆ. ತಾವು ಮಾತುಕತೆ ಮುಖಾಂತರ ಏನು ಒತ್ತಾಯ ಮಾಡುತ್ತೀರಿ ಯಾವ ರೀತಿ ತನಿಖೆ ಆಗಬೇಕೆಂದು ಕೇಳುತ್ತಿರಿ ಅದಕ್ಕೆ ಸಂಬಂಧಪಟ್ಟವರು ಜವಾಬು ಕೊಡುತ್ತಾರೆ. ಅಥವಾ ಕಾನೂನು ಪ್ರಕಾರ ನಾನು ಇಲ್ಲೇ ಪ್ರಸ್ತಾಪ ಮಾಡಬೇಕು, ನಾನು ಅಲ್ಲಿ ಬಂದು ಮಾತನಾಡುವುದಿಲ್ಲ ಎಂದು ಹೇಳಿದರೆ, ಅದಕ್ಕೆ ಯಾವ ರೀತಿ ಮಾಡಬೇಕು ಅನ್ನುವುದರ ಬಗ್ಗೆ ತಮ್ಮ ಸಲಹೆಯನ್ನೂ ಪಡೆದುಕೊಳ್ಳುತ್ತೇನೆ. ನನಗೂ ಸಹಿತ ಸ್ವಲ್ಪ ಸಮಯ ಸಿಕ್ಕಿದಂತಾಗುತ್ತದೆ. ದಯಮಾಡಿ ಮುಂದಕ್ಕೆ ಹೋಗೋಣ. We will try to get over this crisis. It is my appeal to you.

ಶ್ರೀ ಹೆಚ್.ಎನ್.ನಂಜೇಗೌಡ : ಮಾನ್ಯ ಅಧ್ಯಕ್ಷರೇ, ಆ ವಿಷಯವನ್ನು ಅಲ್ಲಿಗೆ ನಿಲ್ಲಿಸುತ್ತೇನೆ, ತಮ್ಮ ಸೂಚನೆಯ ಮೇರೆಗೆ ಸರ್ಕಾರದ ಗಮನವನ್ನು ಬೆಂಗಳೂರು ಸುತ್ತಮುತ್ತ ಸೆಳೆಯುತ್ತೇನೆ. ಇಲ್ಲಿ ಇವರು ಎಂ.ಓ.ಯು.ಗೆ ಸೈನ್ ಮಾಡಿದ ಮೇಲೆ ಏನಾಗಿದೆ. ವಾಸ್ತವವಾಗಿ ಭೂಮಿ ರೇಟು ಜಾಸ್ತಿಯಾಗಿದೆ. ಸ್ಥಳೀಯರು ವ್ಯಾಪಾರ ಮಾಡತಕ್ಕ ಕಾಲದಲ್ಲಿ, ಯಾರೋ ಒಬ್ಬ ಬಡವ ಒಂದು ಅರ್ಧ ಎಕರೆ ಜಮೀನು ತೆಗೆದುಕೊಳ್ಳಬೇಕು ಎಂದರೆ ಸ್ಟ್ಯಾಂಪ್ ಡ್ಯೂಟಿ ಏರಿಸಬೇಕು ನೀವು, ನಮಗೆ ಗೊತ್ತಿದೆ. ಏಕಪಕ್ಷೀಯವಾಗಿ ಇತಿಮಿತಿ ಇಲ್ಲದೇ ಏರಿಸಿದ್ದೀರಿ ಯಾವುದೋ ಒಂದು ರಿಜಿಸ್ಟ್ರೇಷನ್‌ಗೆ 10 ಸಾವಿರ ಖರ್ಚಾದರೆ, ಇವರು ಅಧಿಕಾರಿಗಳು ಅಲ್ಲಿಗೆ ಹೋಗುವುದು, ನಿಂತುಕೊಳ್ಳುವುದು, 1 ಲಕ್ಷ, 2 ಲಕ್ಷ ಎಂದು ಯದ್ವಾತದ್ವಾ ಮಾಡಿರತಕ್ಕದ್ದು ನಮ್ಮ ಗಮನಕ್ಕೆ ಬಂದಿದೆ. ಇದನ್ನು ತಾವು ಪರಿಶೀಲಿಸಬೇಕು. 1995ನೇ ಇಸವಿ ಜನವರಿಯಲ್ಲಿ 225 ಇದ್ದುದ್ದು ಮಾರ್ಚ್‌ನಲ್ಲಿ ಚದುರ ಅಡಿಗೆ 550 ಆಗಿದೆ, ಇವರು ಹಾಕಿರತಕ್ಕದ್ದು. ಖುಷ್ಕಿ ಜಮೀನಿಗೆ 1995ನೇ ಇಸವಿ ಜನವರಿಯಲ್ಲಿ ಒಂದು ಎಕರೆಗೆ 1 ಲಕ್ಷ 52 ಸಾವಿರ ಇದ್ದುದ್ದು, ಫೆಬ್ರವರಿಯಲ್ಲಿ 1 ಲಕ್ಷ 82 ಸಾವಿರ ಇವರು ಹಾಕಿರುವುದು. ಮಾರ್ಚ್‌ನಲ್ಲಿ 7 ಲಕ್ಷ ಆಗಿದೆ. ಇದು ಮಲ್ಲತ್ ಹಳ್ಳಿಯಲ್ಲಿ ಆಗಿದೆ. ಇದಕ್ಕೆ ಏತಕ್ಕೆ ಹೇಳುತ್ತೇನೆ ಎಂದರೆ, 1 ಲಕ್ಷ 52 ಸಾವಿರ ಇದ್ದುದ್ದು 7 ಲಕ್ಷ ರೂಪಾಯಿ ಸ್ಟ್ಯಾಂಪ್‌ಡ್ಯೂಟಿ ಮಾಡಿ ಬಿಟ್ಟರೆ ಜನಸಾಮಾನ್ಯರು

ವ್ಯವಹಾರ ಮಾಡತಕ್ಕ ಕಾಲದಲ್ಲಿ ಕಷ್ಟವಾಗುತ್ತದೆ. ನಾನೇನು ಹೇಳುತ್ತೇನೆ ಎಂದರೆ ಇದಕ್ಕೆ ಸೈಂಟಿಫಿಕ್ ಆಗಿ ಏನಾದರೂ ಆಗಬೇಕಲ್ಲಾ.

ಶ್ರೀ ಆರ್.ಎಲ್.ಜಾಲಪ್ಪ : ನಾವು ಅದನ್ನು ವೈಜ್ಞಾನಿಕವಾಗಿಯೇ ಮಾಡಿಸುತ್ತೇವೆ. ಆದರೆ ಎರಡು ವರ್ಷದಿಂದ ಜಮೀನು ಬೆಲೆ ಏನಾಗಿದೆ ಎನ್ನುವುದನ್ನು ತಾವು ಯೋಚನೆ ಮಾಡಬೇಕು. ತಮಗೆ ಏನು ಅನುಭವ ಸಾಲದು ಅಂತಲ್ಲ. ಸುತ್ತಮುತ್ತ ಮೂರು ವರ್ಷಗಳ ಹಿಂದೆ 1 1/2 ಲಕ್ಷ ರೂಪಾಯಿಗಳು ಇದ್ದುದ್ದು 10 ಲಕ್ಷ ರೂಪಾಯಿ ಆಗಿದೆ. ಅದರಲ್ಲೂ ಬೆಂಗಳೂರು ಸುತ್ತಮುತ್ತ ಇವತ್ತು ಚಿನ್ನಕ್ಕಿಂತ ಜಾಸ್ತಿ ಬೆಲೆ ಜಮೀನಿಗೆ ಬರುತ್ತಿದೆ. ಇಂಟರ್‌ನ್ಯಾಷನಲ್ ಏರ್‌ಪೋರ್ಟ್ ಮಾಡುತ್ತೇವೆ ಎಂದ ಮೇಲೆ 25 ಲಕ್ಷ ರೂಪಾಯಿ ಆಗಿದೆ ಎಕರೆ ಒಂದಕ್ಕೆ ಇದನ್ನೆಲ್ಲಾ ನಾವು ಹೋಗಿ ನೋಡಿಕೊಂಡು ಬಂದು ಹಾಕಿದ್ದೇವೆ. ಅನಾಮಲಿಸ್ ಏನಾದರೂ ಇದ್ದರೆ ನಾವು ಸರಿ ಮಾಡುತ್ತೇವೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ತಾವು ಯಾರು ದೊಡ್ಡ ಪ್ರಮಾಣದಲ್ಲಿ ಮಾಡಲಿಕ್ಕೆ ಹೊರಟಿದ್ದಾರೆ ಅವರಿಗೆ ನಿರ್ಬಂಧವನ್ನು ಹಾಕಬಹುದು. ಕಳೆದ ಆರು ತಿಂಗಳಲ್ಲಿ 1 ಲಕ್ಷ 2 ಲಕ್ಷ 8 ಲಕ್ಷ ಆದರೆ ಅದಕ್ಕೆ ತಾವು ಏನು ಹೇಳುತ್ತೀರಿ? ಇದ್ದರಿಂದ ಸಾಮಾನ್ಯ ರೈತನಿಗೆ ಲಾಭವಾಗುವುದಿಲ್ಲ. ಇದಕ್ಕೋಸ್ಕರ ಯಾವುದೇ ಎಲ್ಲೋ ಏನೋ ನಡೆಯುತ್ತಿದೆ ಎಂದು ಇಟ್ಟುಕೊಂಡು ಹೇಳಿ, ಅದರ ಆಧಾರದ ಮೇಲೆ ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ಸಾಮಾನ್ಯ ವ್ಯಕ್ತಿ ರಿಜಿಸ್ಟ್ರೇಷನ್‌ಗೆ ಹೋದಾಗ ಅಪಾರವಾದ ಕಿರುಕುಳವನ್ನು ಇಂದು ಅನುಭವಿಸುತ್ತಿದ್ದಾನೆ. ಅದಕ್ಕೆ ಲಿಮಿಟೇಷನ್ ಹಾಕಿ. ಇಷ್ಟು ಎಕರೆಗೆ ಮೇಲೆ ನೀವು ಏನಾದರೂ ಮಾಡಿಕೊಳ್ಳಿ ಎಂದು. ಆದರೆ ಸಾಮಾನ್ಯ ಜನರ ವಹಿವಾಟುಗಳು ಆಗದಂಥ ಪರಿಸ್ಥಿತಿಯನ್ನು ದೂರ ಮಾಡಿ. 30-40 ಅಡಿ ಅಳತೆಯ ಸೈಟುಗಳ ವಿಚಾರದಲ್ಲಿ ನಿಮಗೆ ನೂರಾರು ಉದಾಹರಣೆಗಳನ್ನು ಕೊಡುತ್ತೇನೆ 25 ರಿಂದ 30 ಸಾವಿರ ರೂಪಾಯಿಗಳಿಗೆ ಸಿಗುವಂಥ ಸೈಟು ಡ್ಯೂಟಿ ಆಧಾರದ ಮೇಲೆ ಸಾಮಾನ್ಯ ವ್ಯಕ್ತಿಗಳು 1 1/2 ರಿಂದ 2 ಲಕ್ಷ ರೂಪಾಯಿಗಳನ್ನು ಕೊಟ್ಟು ಆ ಸೈಟನ್ನು ಗ್ರಾಮೀಣ ಪ್ರದೇಶಗಳಲ್ಲಿ ಬೆಂಗಳೂರು ಸತ್ತಮುತ್ತ ಕೊಂಡುಕೊಳ್ಳುವ ದುಸ್ಥಿತಿಗೆ ನಾವು ತಂದಿದ್ದೇವೆ. ದಯಮಾಡಿ ಅದನ್ನು ಪರಿಶೀಲನೆ ಮಾಡಿ ಚಿಂತನೆ ಮಾಡಿ. ಇದು ಹೌದು ಎಂದು ನಿಮಗೆ ಮನರಿಕೆ ಆದರೆ ಆದರಲ್ಲಿ ಏನಾದರೂ ಬದಲಾವಣೆ ತರುವಂತಹ ಪ್ರಾಮಾಣಿಕ ಪ್ರಯತ್ನ ಮಾಡಿ.

ಶ್ರೀ ಹೆಚ್.ಎನ್.ನಂಜೇಗೌಡ : ಮಾನ್ಯ ಅಧ್ಯಕ್ಷರೇ,. ಇನ್ನು ಬೆಂಗಳೂರು ಪಟ್ಟಣಕ್ಕೆ ಸಂಬಂಧಪಟ್ಟ ಹಾಗೆ ಹೇಳುತ್ತೇನೆ. ಕನಿಷ್ಠ ಸೌಲಭ್ಯಗಳು ಇವತ್ತಿನ ದಿವಸ ಬೆಂಗಳೂರಿನಲ್ಲಿ ಸಿಗುತ್ತಿವೆ ಎಂದು ಹೇಳತಕ್ಕ ಜನ ಶೇಕಡ 15ರಷ್ಟು ಮಾತ್ರ ಸಿಗಬಹುದು. ಇನ್ನುಳಿದ ಶೇಕಡ 85ರಷ್ಟು ಜನ ಕನಿಷ್ಟ ಸೌಲಭ್ಯಗಳಿಂದ ವಂಚಿತರಾಗಿರತಕ್ಕದ್ದು ಕಂಡು ಬರುತ್ತಿದೆ. ಜನಗಳು ಕೊಡತಕ್ಕ ಟ್ಯಾಕ್ಸ್‌ಗಳನ್ನು ಕೊಡುತ್ತಿದ್ದಾರೆ. ಒಂದು ರಸ್ತೆ ಅಸ್ಫಾಲ್‌ಟಿಂಗ್ ಆಗಬೇಕು. ಎಲ್ಲಿ ಮಧ್ಯಮ ವರ್ಗದವರು ಕಡಿಮೆ ವರ್ಗದವರು ಅದಕ್ಕಿಂತ ಕೆಳಮಟ್ಟದವರು ಬಡಬಗ್ಗರು ವಾಸ ಮಾಡುತ್ತಾರೋ ಆ ಪ್ರದೇಶಗಳನ್ನು ತಿರುಗಿ ನೋಡತಕ್ಕ ಪರಿಪಾಠ ಇಲ್ಲ. ನಾನು

ನಿಮಗೆ ಮೊದಲೇ ಹೇಳಿದ್ದೇನೆ. ಆಡಳಿತವನ್ನು ಸುಸ್ಥಿತಿಗೆ ತರಲು ನೀವು ಆದ್ಯ ಗಮನ ನೀಡಬೇಕು. ನಿಮ್ಮ ಕಾರ್ಪೊರೇಷನ್ ಅಧಿಕಾರಿಗಳಾಗಲೀ ಜಲ ಮಂಡಳಿ ಅಧಿಕಾರಿಗಳಾಗಲೀ ಸರ್‌ಪ್ರೈಸ್ ವಿಸಿಟ್ ಕೊಡತಕ್ಕ ಹವ್ಯಾಸ ಇಟ್ಟುಕೊಂಡಿಲ್ಲ. ಛೇರ್ಮನ್‌ರಿಂದ ಹಿಡಿದು ಚೀಫ್ ಇಂಜಿನಿಯರ್ ಜೆ.ಇ.ವರೆಗೆ ಸರ್‌ಪ್ರೈಸ್ ವಿಸಿಟ್ ಕೊಡತಕ್ಕ ಪರಿಪಾಠ ಇಲ್ಲ. ಇವತ್ತು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್ ಬಿಟ್ಟರೆ ಅವರ ಮೇಲಿನ ಅಧಿಕಾರಿಗಳು ಯಾರೂ ಸರ್‌ಪ್ರೈಸ್ ವಿಸಿಟ್ ಕೊಡುತ್ತಿಲ್ಲ. ಜಿಲ್ಲಾಧಿಕಾರಿಗಳಂತೂ ಒಂದು ಸ್ಥಳ ನೋಡುವುದಕ್ಕೂ ಹೋಗುವುದಿಲ್ಲ. ಕಾರ್ಪೊರೇಷನ್ ಕಮೀಷನರ್‌ರವರಂತೂ ತಮ್ಮ ಆಫೀಸ್ ಬಿಟ್ಟು ಅಲ್ಲಾಡುವುದಿಲ್ಲ. ಎಲ್ಲಾದರೂ ಸಮಾರಂಭ ಇದ್ದರೆ, ಅಡಿಗಲ್ಲು ಇಡುವುದಿದ್ದರೆ ಅಲ್ಲಿಗೆ ಹೋಗತಕ್ಕ ಪರಿಪಾಠ ಇದೆ. ಈ ರೀತಿ ಆಗಬಾರದು. ಈ ಸದನದಲ್ಲಿರುವ, ಬೆಂಗಳೂರಿನಿಂದ ಬಂದಿರತಕ್ಕ ಸದಸ್ಯರಿಗೆಲ್ಲಾ ಈ ರೀತಿಯ ಅನುಭವ ಆಗ್ತಿದೆ. ಕಸದ ತೊಟ್ಟಿ ಕ್ಲೀನ್ ಮಾಡಿಸುವ ವ್ಯವಸ್ಥೆ ಇಲ್ಲ. ಅದಕ್ಕೂ ಜನ ಎಂ.ಎಲ್.ಎ.ಗಳ ಹತ್ತಿರ ಬರುತ್ತಾರೆ. ಇವತ್ತು ಆ ಸ್ಥಿತಿ ಇದೆ. ಇಡೀ ವ್ಯವಸ್ಥೆಯೇ ಕುಸಿದು ಬಿದ್ದಿದೆ. ಹೆಲ್ತ್ ಇನ್ಸ್‌ಪೆಕ್ಟರ್‌ರವರು ಏನು ಮಾಡುತ್ತಾರೆ. 20 ಜನ ಕೆಲಸಗಾರರು ಇರುವ ಕಡೆ 5 ಜನ ಮಾತ್ರ ಕೆಲಸಕ್ಕೆ ಬರುತ್ತಾರೆ. ಉಳಿದವರು ಸಂಬಳ ತೆಗೆದುಕೊಂಡು ಮನೆಯಲ್ಲಿರುತ್ತಾರೆ. ಮನೆಗಳಲ್ಲಿ ಇರುವವರಿಗೇ ಸಂಬಳ ಕೊಡುತ್ತಾರೆ. ಇದನ್ನು ತಾವು ತುರ್ತಾಗಿ ಏನ್‌ಕ್ವೈರಿ ಮಾಡಿಸಿ. ನೀವು ಯಾವ ರೀತಿ ಮಾಡಿಸುತ್ತೀರೋ ನನಗೆ ಗೊತ್ತಿಲ್ಲ. ಯಾರ್‍ಯಾರು ಕೆಲಸಕ್ಕೆ ಬರದೇ ಮನೆಯಲ್ಲೇ ಇದ್ದುಕೊಂಡು ಸಂಬಳ ತೆಗೆದುಕೊಳ್ಳುತ್ತಿರುತ್ತಾರೆ, ಅಂತಹವರನ್ನು ಕೆಲಸದಿಂದ ಡಿಸ್ಮಿಸ್ ಮಾಡಿ ಹೊಸದಾಗಿ ನೇಮಕ ಮಾಡಿಕೊಳ್ಳಿ. ನಮ್ಮ ಬೆಂಗಳೂರು ಸಿಟಿಯನ್ನು ಕ್ಲೀನಾಗಿ ಇಟ್ಟುಕೊಳ್ಳುವುದಕ್ಕೆ ಅವಕಾಶ ಮಾಡಿ ಕೊಡಿ. ಇನ್ನು ಕುಡಿಯುವ ನೀರಿನ ಅಭಾವವನ್ನು ನೀಗಿಸುವುದಕ್ಕೋಸ್ಕರ ಅಲ್ಪ ಸ್ವಲ್ಪ ಕಾರ್ಯಕ್ರಮಗಳನ್ನು ತಾವು ಕೈಗೊಳ್ಳುತ್ತೀದ್ದೀರಿ. ಇಲ್ಲ ಎಂದು ನಾನು ಹೇಳುವುದಿಲ್ಲ. ಆದರೆ ಇದು ಸಾಲದು. ಇವತ್ತು ಏನಾಗಿದೆ ಎಂದರೆ ಐಡೆಂಟಿಫೈ ಮಾಡುವುದಕ್ಕೆ ನಮ್ಮಂತಹವರೇ ಹೋಗಬೇಕಾಗಿದೆ. ತಾವೇ ವಾಲೆಂಟರಿಲಿ ಮಾಡುವವರು ಯಾರೂ ಇಲ್ಲ. Then why they are meant for? They should examine the problems of the people. ಎಲ್ಲಿ ಕುಡಿಯುವ ನೀರಿನ ಅಭಾವ ಇದೆ ಅಲ್ಲಿ ಅದನ್ನು ನೀಗಲು ಕಾರ್ಯಕ್ರಮಗಳನ್ನು ಹಾಕಿಕೊಳ್ಳತಕ್ಕ ವ್ಯವಸ್ಥೆ ಮಾಡಬೇಕು. ಅವತ್ತು ನಮ್ಮ ಮಂತ್ರಿಗಳಾದ ಮಾನ್ಯ ರೋಷನ್ ಬೇಗ್‌ರವರ ಹತ್ತಿರ ಮಾತನಾಡುತ್ತಿದ್ದೆ. ಒಮ್ಮೆ ಎರಡು ಬ್ಯಾಚ್ ಜಯನಗರ ಷಾಪಿಂಗ್ ಕಾಂಪ್ಲೆಕ್ಸ್ ಬಳಿ ಸತ್ಯಾಗ್ರಹ ಕುಳಿತಿದ್ದರು. ಒಂದು ಬ್ಯಾಚ್ ಅಂತೂ ವಾರಗಟ್ಟಲೆ ಕುಳಿತಿರುತ್ತೇವೆ. ಎಂದರು. ಆಗ ನಾನೇ ಹೋಗಿ ನಿಮ್ಮ ಸಮಸ್ಯೆ ಏನು ಏತಕ್ಕೆ ಸತ್ಯಾಗ್ರಹ ಮಾಡುತ್ತೀರಿ ಎಂದು ವಿಚಾರಿಸಿದೆ. ಅಲ್ಲಿ ಏನಾಗಿದೆ ಎಂದರೆ ಜಯನಗರ ಕಾಂಪ್ಲೆಕ್ಸ್ ಹತ್ತಿರ ಒಂದು ಭಾಗದಲ್ಲಿ ಸ್ವಲ್ಪ ಸ್ಥಳ ಇದೆ. ಅದು ಯಾರಿಗಾದರೂ ಸೇರಿರಲಿ ಅದು ಯಾರಿಗೆ ಸೇರಿದ್ದು ಎನ್ನುವ ವಿಚಾರಕ್ಕೆ ನಾನು ಹೋಗುವುದಿಲ್ಲ. ಅಲ್ಲಿ ರೋಡ್ ಏನಾಗಿದೆ ಎಂದರೆ ಸುಂದರವಾದ ಮನುಷ್ಯನ ಮುಖದಲ್ಲಿ ಮೂಗನ್ನು

ಕುಯ್ದುದಂತಾಗಿದೆ. ಅಲ್ಲಿನ ರಸ್ತೆಯನ್ನು ಅಗಲ ಮಾಡಲಿಕ್ಕೆ ಆಗಿಲ್ಲ. ಅದೊಂದು ಸಾರ್ವಜನಿಕರ ಕೆಲಸ. ಈಗ ಬಿ.ವಿ.ಕೆ. ಐಯ್ಯಂಗಾರ್ ರೋಡ್ ದೊಡ್ಡದು ಮಾಡಿದರು. ಅಲ್ಲಿದ್ದ ಗಣಪತಿ ದೇವಾಸ್ಥಾನವನ್ನು ಒಡೆದುಕೊಂಡು ಹಾಕಿ ರಸ್ತೆ ಅಗಲ ಮಾಡಿದರು. ಅದರಲ್ಲಿ ಅವರದ್ದು ಇವರದ್ದು ಎಂದಿಲ್ಲ. ನಾನು ಮಾನ್ಯ ರೋಷನ್ ಬೇಗ್‌ರವರಲ್ಲಿ ಹೇಳಿದೆ. ರೋಡನ್ನು ಅಗಲ ಮಾಡದೇ ಹೋದರೆ ತುಂಬಾ ಕಷ್ಟವಾಗುತ್ತದೆ. ಅಲ್ಲಿ ವರ್ಷಕ್ಕೆ 4-5 ಸಾವುಗಳು ಆಗುತ್ತವೆ. 50 ಅಪಘಾತಗಳಾಗುತ್ತವೆ. ಅಘಘಾತಗಳಾಗಿ ಸಂಜಯಗಾಂಧಿ ಆಸ್ಪತ್ರೆಗೆ ಗಾಯಾಳುಗಳನ್ನು ಸೇರಿಸತಕ್ಕ ಪರಿಸ್ಥಿತಿ ಇದೆ. ಕಾರ್ಪೋರೇಷನ್ ಈ ರಸ್ತೆಯನ್ನು ಅಗಲ ಮಾಡುವುದು ಕೇವಲ ಅರ್ಧ ದಿನದ ಕೆಲಸ. ಅದನ್ನು ಮಾಡುವುದಕ್ಕೆ ಅವಕಾಶ ಮಾಡಿ ಕೊಡಬೇಕೆಂದು ನಾನು ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ. ಇವತ್ತು ನಾನು ಸ್ವಲ್ಪ ಕಡಿಮೆ ಮಾತನಾಡಿದರೂ ಸಮಯ ಸ್ವಲ್ಪ ಜಾಸ್ತಿನೇ ಆಯಿತು. ಇಲ್ಲಿ ಮಾತನಾಡಲು ಅವಕಾಶ ಮಾಡಿಕೊಟ್ಟ ಸಭಾಧ್ಯಕ್ಷರನ್ನು ವಂದಿಸುತ್ತೇನೆ. ತಾವು ಕೇಳಿರುವ ಮಾಹಿತಿಗಳನ್ನು ದಾಖಲಾತಿಗಳನ್ನು ತಮಗೆ ಕೊಡುತ್ತೇನೆ ಎಂದು ತಮ್ಮಲ್ಲಿ ವಿನಂತಿಸಿಕೊಂಡು ನನ್ನ ಮಾತುಗಳನ್ನು ಮುಗಿಸುತ್ತೇನೆ.

**5.20 ಪಿಎಂ**

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ಸಭೆಯನ್ನು ಎಷ್ಟು ಸಮಯದವರೆಗೆ ನಡೆಸುತ್ತೀರಿ?

ಅಧ್ಯಕ್ಷರು : ಏಳೂವರೆ ಗಂಟೆಯವರೆಗೆ

ಶ್ರೀ ವಾಟಾಳ್ ನಾಗರಾಜ್ : ಖಾಸಗೀ ನಿರ್ಣಯವನ್ನು ತಾವು ಏಳೂವರೆಗಿಂತ ಮೊದಲು ತೆಗೆದುಕೊಳ್ಳಬೇಕು. ಇಲ್ಲದಿದ್ದರೆ ಅಪಾಯಕ್ಕೆ ಸಿಕ್ಕಿಹಾಕಿಕೊಳ್ಳುತ್ತೇವೆ.

ಅಧ್ಯಕ್ಷರು : ಏಳು ಗಂಟೆಗೆ ತೆಗೆದುಕೊಳ್ಳುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ತಾವು ತಪ್ಪು ತಿಳಿದುಕೊಳ್ಳಬಾರದು. ತಮ್ಮಲ್ಲಿ ಒಂದು ಮನವಿ ಮಾಡಿಕೊಳ್ಳುತ್ತೇನೆ. ಈ ಖಾಸಗೀ ಸದಸ್ಯರ ನಿರ್ಣಯದ ಬಗ್ಗೆ...

ಶ್ರೀ ಆರ್.ಎಲ್.ಜಾಲಪ್ಪ : ಏಳುವರೆ ಗಂಟೆಯ ಮೇಲೆ ತೆಗೆದುಕೊಳ್ಳಬಾರದು ಎಂದು ಅವರು ಹೇಳುತ್ತಿದ್ದಾರೆ. ಇದು ಸರಿಯೇ? ಇಲ್ಲಿ ಏನು ಬೀರ್ ಶಾಪ್ ಇದೆಯೋ?

ಶ್ರೀ ವಾಟಾಳ್ ನಾಗರಾಜ್ : ಇವೊತ್ತು ಈ ಖಾಸಗೀ ನಿರ್ಣಯಕ್ಕೆ ಏನು ಮಹತ್ವ ಇದೆ ಎಂಬುದನ್ನು ಯೋಚನೆ ಮಾಡಬೇಕು. ಇದರ ಬಗ್ಗೆ ನಾವು ನೀವು ಮಾತನಾಡೋಣ. ನನ್ನ ನಿರ್ಣಯದ ಬಗ್ಗೆ ಬಿಡಿ; ಆದರೆ ಖಾಸಗೀ ಸದಸ್ಯರ ನಿರ್ಣಯದ ಬಗ್ಗೆ ನಾವು ಏನಾದರೂ ಚರ್ಚೆ ಮಾಡುವುದಕ್ಕೆ ಅವಕಾಶ ಇದೆಯೇ ಎಂದು ತಮ್ಮನ್ನು ಕೇಳುತ್ತಿದ್ದೇನೆ. ನಿಮ್ಮ ಬಗ್ಗೆ ನನ್ನ ತಕರಾರು ಇಲ್ಲ. ನೀವು ಏನು ಹೇಳುತ್ತೀರಿ ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ನೀವು ಹೇಳಿದ ಮಾರ್ಗದರ್ಶನದ ಪ್ರಕಾರ ನಡೆಯುತ್ತೇನೆ. ಇಂತಹ ಬಹಳ ಅಮೂಲ್ಯವಾದ ವಿಷಯವನ್ನು ಕೊನೆಯ ಘಳಿಗೆಯಲ್ಲಿ ತೆಗೆದುಕೊಂಡರೆ ಹೇಗೆ?

ಶ್ರೀ ಕೆ.ಎಸ್.ಈಶ್ವರಪ್ಪ : ಈ ಮಧ್ಯಪಾನದ ಬಗ್ಗೆ ಪಟೇಲರು ಏನು ನಿರ್ಣಯ ಮಾಡುತ್ತಾರೆ ಹಾಗೆ ಮಾಡೋಣ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಪಟೇಲರನ್ನು ಕೇಳಿದರೆ ಬಹಳ ಕಷ್ಟ.

ಶ್ರೀ ಜೆ.ಎಚ್.ಪಟೇಲ್ : ವಾಟಾಳ್ ನಾಗರಾಜ್‌ರವರ ವಿಷಯ ಬಹಳ ಗಹನವಾದುದು. ಈ ಆಲ್ಕೋಹಾಲ್ ಬಗ್ಗೆ ಜನರ ಅಟಿಟ್ಯೂಡ್ ಹೇಗೆ ಇದೆ ಎಂದರೆ ಸಾಮಾನ್ಯವಾಗಿ ಕುಡಿಯದೇ ಇರುವವನು ಶ್ರೀರಾಮ, ಕುಡಿಯುವವರೆಲ್ಲರೂ ರಾವಣ, ಆದಕ್ಕಾಗಿ ಈ ವಿಷಯ ಚರ್ಚೆ ಆಗಬೇಕೆಂದು ನಾನು ಇಚ್ಛೆಪಡುತ್ತೇನೆ. ಬಹಳ ಸೆಟ್ಯಾರಿಕಲ್ ಏನು ಅಂದರೆ, ಅಲ್ಲಿ ಬರೆಯುವ ನಮ್ಮ ಜರ್ನಲಿಸ್ಟ್ ಕುಡಿಯದೇ ಇದ್ದವನನ್ನು ದೊಡ್ಡವನೆಂದು ತೋರಿಸುವುದು. ಇಂತಹ ಮಹನೀಯರು ಕುಡಿಯುವುದಿಲ್ಲ, ಸಿಗರೇಟ್ ಸೇದುವುದಿಲ್ಲ ಎಂದು ಬರೆಯುತ್ತಾರೆ. ಆದರೆ ಅವರಷ್ಟು ಕುಡುಕರು ಯಾರೂ ಇಲ್ಲ. ಆದರೆ ಅಪರೂಪ, ಎಲ್ಲೋ ಬೆರಳೆಣಿಸುವಷ್ಟು ಕುಡಿಯದವರು ಇದ್ದಾರೆ. ನಾನೇ ಸ್ವತಃ ಟಿ.ಎಸ್.ರಾಮಚಂದ್ರರಾಯರ ಕಾಲದಿಂದ ನೋಡಿದ್ದೇನೆ. ಅವರ ಮನಸ್ಸಿನಲ್ಲಿ ಏನು ಮ್ಯಾಲಿಸ್ ಇದೆ ಅಂದರೆ, ಕುಡಿಯುವವರ ಬಗ್ಗೆ ಅವರದ್ದೇ ಒಂದು ವರ್ಣನೆ ಇದೆ. ಆದ್ದರಿಂದ ಈ ವಿಷಯ ಚರ್ಚೆಯಾಗಬೇಕು. ನಮ್ಮದು ಯಾವುದೇ ರೀತಿಯ ಅಭ್ಯಂತರ ಇಲ್ಲ. ಏಳುವರೆಗೆ ಬಾ ಎಂದರೆ ಬರುತ್ತೇವೆ. ಆದರೆ ಇಲ್ಲಿ ಸಮಯದ ಪ್ರಶ್ನೆ ಬಹಳ ಮುಖ್ಯವಾದುದು.

ಶ್ರೀ ವಾಟಾಳ್ ನಾಗರಾಜ್ : ನನ್ನ ನಿರ್ಣಯಕ್ಕೆ ಬಹುತೇಕ ಯಾರಿಂದಲೂ ಬೆಂಬಲ ಸಿಗುವುದಿಲ್ಲ.

ಶ್ರೀ ಎಲ್. ಶಿವರಾಮೇ ಗೌಡ : ಯಾರು ಇಲ್ಲ ಎಂದು ಹೇಳಬೇಡಿ ಬೆಂಬಲ ಕೊಡವವರು ಬಹಳ ಜನ ಇದ್ದಾರೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಎಲ್ಲಾ ಮಹಿಳೆಯರ ಬೆಂಬಲ ಇದೆ.

ಶ್ರೀ ವಾಟಾಳ್ ನಾಗರಾಜ್ : ಪಟೇಲರು ಹೇಳಿದ್ದನ್ನು ನಾನು ಮನಸ್ಸಿನಲ್ಲಿ ಇಟ್ಟು ಕೊಂಡಿದ್ದೇನೆ. ಇದು ಬಹಳ ಬೇಗೆ ಚರ್ಚೆ ಆಗಬೇಕೆಂದು ಆಗಲೇ ಹೇಳಿದ್ದೇನೆ. ಏಳೂವರೆ, ಆದಮೇಲೆ ಅವರಿಗೆ ಹಿತವಲ್ಲ. ನನ್ನ ಬಾಷಣ ಆ ಸಂದರ್ಭದಲ್ಲಿ ಹಿತಕರವಾಗುವುದಿಲ್ಲ. ಅಧಿಕಾರಿಗಳ ಬಗ್ಗೆ ಗೌರವ ಅದು ಬಿಟ್ಟು ಬಿಡೋಣ. ನಮ್ಮ ಸದಸ್ಯರಿಗೂ ಹಿತ ಇರುವುದಿಲ್ಲ. ಗ್ಯಾಲರಿಯಲ್ಲಿ ಇರುವವರಿಗೂ ಹಿತ ಇರುವುದಿಲ್ಲ ಸದಸ್ಯರಲ್ಲಿದ್ದ ಬಹಳ ಜನರಿಗೆ ಹಿತ ಇರುವುದಿಲ್ಲ. ಆದುದರಿಂದ ಎಲ್ಲರಿಗೂ ಹಿತವಾಗಿರುವಾಗಲೇ ಸ್ವಲ್ಪ ಚರ್ಚೆ ಮಾಡೋಣ. ನನ್ನ ಭಾಷಣದ ಸೇವನೆಯನ್ನು ಮಾಡಿ ರುಚಿ ತೆಗೆದುಕೊಳ್ಳಲಿ. ನನಗೆ ನಿಮಗೆ ಇದರ ಅಭ್ಯಾಸ ಇಲ್ಲ. ನಿಮಗೆ ಅದರ ವಾಸನೆ ಇಲ್ಲ ಎಂಬುದು ನನಗೆ ಗೊತ್ತು. ನಮ್ಮಿಬ್ಬರಿಗೂ ಚಿಂತೆ ಇಲ್ಲ. ಏಳೂವರೆ ಆಗಲಿ ಒಂಭತ್ತಾಗಲಿ ನಾವು ಚರ್ಚೆ ಮಾಡಬಹುದು ಆದರೆ ನಮ್ಮಿಬ್ಬರನ್ನು ಬಿಟ್ಟರೆ ಯಾರೂ ಇರುವುದಿಲ್ಲ.

ಶ್ರೀ ಬಿ.ಎಸ್.ಯೂಡಿಯೂರಪ್ಪ : ನಾಳೆ ಇಡೀ ರಾಜ್ಯದಲ್ಲಿ ರೇಷ್ಮೇ ವ್ಯಾಪಾರಿಗಳು ಬಂದ್ ಆಚರಿಸಲಿದ್ದಾರೆ. ಇದರ ಬಗ್ಗೆ ರೇಷ್ಮೇ ಸಚಿವರಿಂದ ಸದನದಲ್ಲಿ ಒಂದು ಹೇಳಿಕೆಯನ್ನು ಕೊಡಿಸಬೇಕು.

ಅಧ್ಯಕ್ಷರು : ನಿಮ್ಮ ಸದುದ್ದೇಶವನ್ನು ನಾನು ಅರ್ಥ ಮಾಡಿಕೊಂಡಿದ್ದೇನೆ. ಇವೊತ್ತು ಅಪಾಯ ಶುರು ಆಗುವುದಕ್ಕೆ ಮೊದಲೇ ಈ ವಿಯವನ್ನು ಚರ್ಚೆಗೆ ತೆಗೆದುಕೊಳ್ಳುವುದಕ್ಕೆ ವ್ಯವಸ್ಥೆ ಮಾಡೋಣ. ಉಪಮುಖ್ಯಮಂತ್ರಿಗಳು, ಜಾಲಪ್ಪನವರು ಎಷ್ಟು ಹೊತ್ತಿಗೆ ಬೇಕಾದರೂ ಮಾತನಾಡೋಣ ಎಂದು ಹೇಳಿದ್ದಾರೆ. ಆದರೆ ಏಳುವರೆಗಂಟೆಯ ಮೇಲೆ ಆ ವಿಷಯುವನ್ನು ಅವರ ಜೊತೆಯಲ್ಲಿ ತೆಗೆದುಕೊಳ್ಳಲು ನಾಮ ತಯಾರು ಇಲ್ಲ.

ಶ್ರೀ ವಾಟಾಳ್ ನಾಗರಾಜ್ : ಈ ವಿಚಾರದ ಚರ್ಚೆಯಲ್ಲಿ ಅವರು ಇಲ್ಲವಿದ್ದರೆ ಅದರಲ್ಲಿ ಸ್ವಾರಸ್ಯ ಇರುವುದಿಲ್ಲ.

ಅಧ್ಯಕ್ಷರು : ನಮಗೆ ಎಲ್ಲಿಯವರಗೆ ಧೈರ್ಯ ಇರುತ್ತದೆ ಅಲ್ಲಿಯವರೆಗೆ ಏನೂ ಆಗುವುದಿಲ್ಲ. ಆ ಸಮಯದಲ್ಲಿ ಅವರನ್ನು ಕೂಡಿಸಿಕೊಂಡು ಚರ್ಚೆ ಮಾಡೋಣ. ಈಗ ರೇಷ್ಮೆ ಸಚಿವರು ಒಂದು ಹೇಳಿಕೆಯನ್ನು ಮಾಡುತ್ತಾರೆ.

## ಸಚಿವರ ಹೇಳಿಕೆ

### ವಿಷಯ : ರೇಷ್ಮೆ ವ್ಯಾಪಾರಿಗಳ ಉದ್ದೇಶಿತ ಮುಷ್ಕರದ ಬಗ್ಗೆ.

* ಶ್ರೀ ಡಿ. ನಾಗರಾಜಯ್ಯ (ರೇಷ್ಮೆ ಸಚಿವರು) : ನಾನು ಬೆಳಿಗ್ಗೆ ಮಾತನಾಡಿದಾಗ ಈ ವಿಷಯದ ಬಗ್ಗೆ ಅವರೊಡನೆ ಕುಳಿತುಕೊಂಡು ಚರ್ಚೆ ಮಾಡಿ, ತೀರ್ಮಾನವನ್ನು ತೆಗೆದು ಕೊಳ್ಳೋಣ ಎಂದು ಹೇಳಿದ್ದೆ. ಈ ವಿಷಯದ ಬಗ್ಗೆ ಚಿಂತನೆಯನ್ನು ಮಾಡಬೇಕಾದರೆ ಮುಖ್ಯಮಂತ್ರಿಗಳು, ಫೈನಾನ್ಸ್ ಮಿನಿಸ್ಟರ್, ಇರಬೇಕು. ಅಗ ನಮ್ಮ ವಿರೋಧ ಪಕ್ಷದವರು ಎಲ್ಲರೂ ಸೇರಿ ತೀರ್ಮಾನ ತೆಗೆದುಕೊಳ್ಳಬಹುದು. ಆದ್ದರಿಂದ ಈಗ ಯಾವುದೇ ಸ್ಟೇಟ್‌ಮೆಂಟ್ ಮಾಡಲು ಆಗುವುದಿಲ್ಲ.

ಅಧ್ಯಕ್ಷರು : ನಾಳೆ ಬಂದ್ ಅಚರಿಸುವುದು ಬೇಡ ಎಂದು ಅಪೀಲ್ ಮಾಡಿಕೊಳ್ಳಿ.

ಶ್ರೀ ಡಿ. ನಾಗರಾಜಯ್ಯ : ಈ ಬಂದ್ ಮಾಡಲು ಯಾರು ಪ್ರಯತ್ನ ಮಾಡುತ್ತಿದ್ದಾರೆ. ಅವರಿಗೆ ನಾನು ರಿಕ್ವೆಸ್ಟ್ ಮಾಡಿಕೊಳ್ಳುತ್ತಿದ್ದೇನೆ ನಾಳೆ ಮಾಡಬೇಕೆಂದಿರುವ ಬಂದನ್ನು ನಿಲ್ಲಿಸಿ. ನಾವು ಚರ್ಚೆ ಮಾಡಿದ ನಂತರ ನಮ್ಮ ತೀರ್ಮಾನ ಏನು ಎಂಬುದನ್ನು ನೋಡಿ, ಆ ತೀರ್ಮಾನ ಸಮಾಧಾನಕರವಾಗಿಲ್ಲದಿದ್ದರೆ ಅವರು ಯೋಗ್ಯವಾದ ತೀರ್ಮಾನ ತೆಗೆದುಕೊಳ್ಳಲಿ. ಆದ್ದರಿಂದ ನಾಳೆ ನಡೆಯಲಿರುವ ಬಂದ್‌ನ್ನು ಕೈ ಬಿಡಬೇಕೆಂದು ಸಂಬಂಧಪಟ್ಟವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ತಾವು ಅ ಮುಖಂಡರನ್ನು ಕರೆಯಿಸಿ ಈಗಲೇ ಮಾತನಾಡಿಸಿ ನಾಳೆ ಬಂದ್ ಆಚರಣೆ ಇರುವುದರಿಂದ ನೀವು ಸಂಬಂಧಪಟ್ಟವರನ್ನು ಕರೆಯಿಸಿ ನಾವು ಅದರ ಬಗ್ಗೆ ಚರ್ಚೆ ಮಾಡುತ್ತೇವೆ. ನೀವು ಬಂದ್‌ನ್ನು ಆಚರಣೆ ಮಾಡಬೇಡಿ ಎಂದು ಹೇಳುವುದು ಸೌಜನ್ಯ............

ಶ್ರೀ ಡಿ. ನಾಗರಾಜಯ್ಯ : ನಾನು ಈ ಸದನದ ಮೂಲಕ ಮನವಿ ಮಾಡಿಕೊಂಡಿದ್ದೇನೆ.

ಶ್ರೀ ವಾಟಾಳ್ ನಾಗರಾಜ್ : ಇಲ್ಲಿ ಮನವಿ ಮಾಡಿಕೊಂಡಿದ್ದೀರಿ. ಅದು ಸರಿ. ನೀವು ಸೌಜನ್ಯಕ್ಕಾದರೂ ಅವರನ್ನು ಕರೆಸಿ ಮಾತನಾಡಿ.

ಶ್ರೀ ಎಲ್.ಆರ್. ಶಿವರಾಮೇಗೌಡ (ನಾಗಮಂಗಲ) : ಸನ್ಮಾನ್ಯ ಅಧ್ಯಕ್ಷರೇ ಸನ್ಮಾನ್ಯ ರಾಜ್ಯಪಾಲರ ಭಾಷಣಕ್ಕೆ ನನ್ನ ಬೆಂಬಲವನ್ನು ಸೂಚಿಸಿ ......

ಶ್ರೀ ವಾಟಾಳ್ ನಾಗರಾಜ್ : ಶಿವರಾಮೇಗೌಡರು ರಾಜ್ಯಪಾಲರ ಭಾಷಣಕ್ಕೆ ಬೆಂಬಲವನ್ನು ಸೂಚಿಸುತ್ತಿದ್ದಾರೆ, ಅವರು ನಿಮ್ಮ ಪಕ್ಷದ ಸಹ ಸದಸ್ಯರೇ ? ಇದರ ಬಗ್ಗೆ ಇವೊತ್ತು ತೀರ್ಮಾನ ಆಗಬೇಕು.

ಶ್ರೀ ಎಲ್. ಆರ್. ಶಿವರಾಮೇಗೌಡ : ಇದನ್ನು ವಿರೋಧ ಮಾಡಬೇಕು ಎಂದು ಏನೂ ಇಲ್ಲ.

ಶ್ರೀ ವಾಟಾಳ್ ನಾಗರಾಜ್ : ಶ್ರೀ ಶಿವನಂಜಪ್ಪನವರನ್ನು ಶಿವನೇ ಕಾಪಾಡಬೇಕು. ಶಿವನಂಜಪ್ಪನವರ ಒಕ್ಕೂಟ ಎಲ್ಲಾ ಒಡೆದು ಚಿದ್ರ ಆಗಿ ಹೋಗಿದೆ. ಅವರು ಈಗ ರಾಜ್ಯಪಾಲರ ಭಾಷಣಕ್ಕೆ ಸ್ವಾಗತ ಮಾಡುತ್ತಿದ್ದಾರೆ. ಇದನ್ನು ಹೇಳಿದ ಮೇಲೆ ಇನ್ನು ಏನು ಉಳಿದಿದೆ ? ಶಿವನಂಜಪ್ಪನವರನ್ನು ದೇವರೇ ಕಾಪಾಡಬೇಕು.

ಶ್ರೀ ಎಲ್.ಆರ್. ಶಿವರಾಮೇಗೌಡ : ರಾಜ್ಯಪಾಲರು ಮಾಡಿರತಕ್ಕಂಥ ಭಾಷಣ ಸರಿಯಾಗಿದ್ದರೆ ಸರಿ ಇದೆ ಎಂದು ಹೇಳಬೇಕು. ಸರಿ ಇಲ್ಲದಿದ್ದರೆ ಸರಿ ಇಲ್ಲ ಎಂದು ಹೇಳಬೇಕು. ಇದನ್ನು ನಾವು ರೂಪಿಸಿಕೊಳ್ಳಬೇಕು. ಒಂದು ಸರ್ಕಾರ ಅಸ್ತಿತ್ವಕ್ಕೆ ಬಂದ ಮೇಲೆ ಆ ಸರ್ಕಾರಕ್ಕೆ ಅರು ತಿಂಗಳ ಕಾಲಾವಕಾಶ ಕೊಡಬೇಕು. ಎಂದು ಹಿರಿಯ ಸದಸ್ಯರು ಮಾತನಾಡಿದ್ದಾರೆ. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಾವು ವಿರೋಧ ಪಕ್ಷದಲ್ಲಿ ಇದ್ದ ತಕ್ಷಣ ಸರ್ಕಾರ ಏನು ಮಾಡಿದರೂ ತಪ್ಪು ಎಂದು ಹೇಳುವುದು ಸರಿಯಲ್ಲ. ತಪ್ಪು ಮಾಡಿದರೆ ತಪ್ಪು ಎಂದೂ, ಸರಿ ಮಾಡಿದರೆ ಸರಿ ಎಂದೂ ಹೇಳಬೇಕಾಗುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಅವರು ಖಂಡಿತ ವಿರೋಧಪಕ್ಷದವರಲ್ಲ. ಅದು ಸಾಧ್ಯವಿಲ್ಲ.

ಶ್ರೀ ಎಲ್.ಅರ್. ಶಿವರಾಮೇಗೌಡ : ನಾನು ವಿರೋಧ ಪಕ್ಷ ಅಥವಾ ಆಳುವ ಪಕ್ಷ ಎಂಬುದು ಜನ ತೀರ್ಮಾನ ಮಾಡಿ ಇಲ್ಲಿಗೆ ಕಳುಹಿಸಿದ್ದಾರೆ. ನಾನೇನು ಈ ಸದನಕ್ಕೆ ಹೊಸಬನಲ್ಲ. ಈಗ ಎರಡನೇ ಸಾರಿ ಬಂದಿದ್ದೇನೆ. ತಾವು ಸಹ ಪಕ್ಷೇತರರಾಗಿ, ವೈಯಕ್ತಿಕವಾಗಿ ಈ ರಾಜ್ಯದಲ್ಲಿ ಒಂದು ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದೀರಿ.

ಶ್ರೀ ವಾಟಾಳ್ ನಾಗರಾಜ್ : ನೀವು ಬಂದಿರುವುದು ನನಗೆ ಬಹಳ ಸಂತೋಷ. ನೀವು ಬರದೇ ಇದ್ದರೆ ನನಗೆ ಬಹಳ ನೋವಾಗುತ್ತಿತ್ತು. ನಿಮಗೆ ಏನಾಗುತ್ತದೆ ಎಂಬುದನ್ನು ನಾನು ಕಾಯುತ್ತಿದ್ದೆ. ನೀವು ಬಂದ ಮೇಲೆ ನನಗೆ ಸಂತೋಷವಾಯಿತು ಆದರೆ ಈಗ ನಿಮ್ಮ ದಿಕ್ಕು ...

ಶ್ರೀ ಎಲ್.ಆರ್. ಶಿವರಾಮೇಗೌಡ : ಸರ್ಕಾರ ಸರಿಯಾಗಿ ಕೆಲಸ ಮಾಡಿದರೆ ಅದಕ್ಕೆ ಕೈ ಜೋಡಿಸುತ್ತೇನೆ. ಸರಿಯಾಗಿ ಮಾಡದಿದ್ದರೆ, ತಪ್ಪು ಮಾಡಿದಿರಿ ಎಂದು ಹೇಳುತ್ತೇನೆ. ಅದು ನನ್ನ ಕರ್ತವ್ಯ ಆ ಕೆಲಸವನ್ನು ನಾನು ಮಾಡುತ್ತಿದ್ದೇನೆ. ಈಗ ರಾಜ್ಯಪಾಲರ ಭಾಷಣದಲ್ಲಿ ಜನಸಾಮಾನ್ಯರಿಗೆ ಬಹಳಷ್ಟು ಕಾರ್ಯಕ್ರಮಗಳನ್ನು ಹೇಳಿದ್ದಾರೆ. ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆದು ಸರ್ಕಾರಕ್ಕೆ ಒಳ್ಳೆಯ ಹೆಸರು

ಬರಬೇಕಾದರೆ ಮಂತ್ರಿ ಮಂಡಲ ಬಹಳ ಬಿಗಿಯಾಗಿ ಇರಬೇಕು. ಮುಂದಿನ ಸಾಲಿನಲ್ಲಿ, ಎರಡನೇ ಸಾಲಿನಲ್ಲಿ ಅಥವಾ ಮೂರನೇ ಸಾಲಿನಲ್ಲಿ ಕುಳಿತುಕೊಂಡು ಕೆಲವು ಮಂತ್ರಿಗಳು ಚೆನ್ನಾಗಿ ಕೆಲಸ ಮಾಡಿದರೆ ಸಾಕಾಗುವುದಿಲ್ಲ. ಇಡೀ ರಾಜ್ಯದ ಮಂತ್ರಿಮಂಡಲದಲ್ಲಿ ಇರತಕ್ಕ ಎಲ್ಲಾ ಮಂತ್ರಿಗಳು ಒಂದು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸುವುದರಲ್ಲಿ ಪಾಲ್ಗೊಳ್ಳಬೇಕು.

ಸರ್ಕಾರ ಅಧಿಕಾರಕ್ಕೆ ಬಂದು ಈಗಾಗಲೇ ನಾಲ್ಕು ತಿಂಗಳಾಗಿವೆ. ಯಾವುದಾದರೂ ಒಂದು ಫೈಲ್‌ಗೆ ಸಹಿಯನ್ನು ಮಾಡುವುದಕ್ಕೆ ಕೆಲವು ಮಂತ್ರಿಗಳು ಗಡಗಡ ನಡುಗುತ್ತಾರೆ ಎನ್ನತಕ್ಕ ಪರಿಸ್ಥಿತಿಯನ್ನು ನಾವು ಇವೊತ್ತು ನೋಡುತ್ತಾ ಇದ್ದೇವೆ. ಒಂದು ಫೈಲ್ ಸಹಿಗೆ ಹೋದರೆ ಸಹಿ ಮಾಡುವುದಕ್ಕೆ ಹೆದರುತ್ತಾರೆ, ಏನಾಗುತ್ತದೆಯೋ ಏನೋ, ಸಹಿ ಮಾಡಿದರೆ ಎಂದು ಹೆದರುತ್ತಾರೆ. ಅವರ ಇಲಾಖೆಗೆ ಸಂಬಂಧಪಟ್ಟಂತೆ ಜನಪದ ಕಾರ್ಯಕ್ರಮಗಳು ಯಾವುದಾದರೂ ಇದ್ದರೆ ಅದಕ್ಕೆ ಸಂಬಂಧಪಟ್ಟಂತೆ ನಿರ್ಧಾಕ್ಷಿಣ್ಯವಾಗಿ ಕ್ರಮವನ್ನು ತೆಗೆದುಕೊಳ್ಳತಕ್ಕಂಥ ವಿಚಾರದಲ್ಲಿ ಮಂತ್ರಿಗಳು ಕಾರ್ಯೋನ್ಮುಖರಾಗಬೇಕು. ಈ ರೀತಿ ಮಾಡಿದರೆ ಸರ್ಕಾರಕ್ಕೆ ಒಳ್ಳೆಯ ಹೆಸರು ಬರುತ್ತದೆ ಎಂಬುದನ್ನು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ. ನಾನು ರಾಜಕಾರಣಕ್ಕೆ ಬಂದಮೇಲೆ ಆರೇಳು ಸರ್ಕಾರಗಳನ್ನು ನೋಡಿದ್ದೇನೆ. ದೇವರಾಜ ಅರಸುರವರ ಮಂತ್ರಿಮಂಡಲ ನೋಡಿದ್ದೇವೆ. ಎಷ್ಟೋ ಜನಪದ ಕಾರ್ಯಕ್ರಮಗಳನ್ನು ಅವರು ಅಚ್ಚುಕಟ್ಟಾಗಿ ಈ ರಾಜ್ಯದಲ್ಲಿ ಮಾಡಿ ಶ್ರೀಸಾಮಾನ್ಯರು ತುಳಿತಕ್ಕೆ ಒಳಗಾಗಿದ್ದವರನ್ನು ಮೇಲಕ್ಕೆ ಎತ್ತಿದ್ದನ್ನು ನೋಡಿದ್ದೇವೆ. ಗುಂಡರಾಯರ ಕಾಲದಲ್ಲಿ ಬಹಳ ಎಫಿಷಿಯನ್ಸಿ ಇರುವ ಮಂತ್ರಿಮಂಡಲವನ್ನು ನಾನು ನೋಡಿದ್ದೇವು. ರಾಮಕೃಷ್ಣಹೆಗಡೆಯವರು ಮತ್ತು ಬೊಮ್ಮಾಯಿರವರ ಕಾಲದಲ್ಲಿ ಬಹಳ ಎಫಿಷಿಯನ್ಸಿ ಇದ್ದರೂ ಸಹಿತ ಕಿತ್ತಾಟದಲ್ಲಿ ಆ ಸರ್ಕಾರಗಳು ಹೋಗಿದ್ದನ್ನೂ ಸಹಿತ ನಾವು ನೋಡಿದ್ದೇವೆ. ವೀರೇಂದ್ರ ಪಾಟೀಲರ ಸರ್ಕಾರದಲ್ಲಿ ನಾವು ಹೆಚ್ಚಿಗೆ ಏನನ್ನೂ ನಿರೀಕ್ಷಣೆ ಮಾಡಲಿಕ್ಕೆ ಆಗಲಿಲ್ಲ. ಎರಡು ವರ್ಷಗಳ ಕಾಲದಲ್ಲಿ ಬಂಗಾರಪ್ಪನವರ ಕಾಲದಲ್ಲಿ ಇವೊತ್ತು ಜನಸಾಮಾನ್ಯರಿಗೆ ಬೇಕಾಗಿರತಕ್ಕಂಥ ಆಶ್ರಯ, ಆರಾಧನ ಮತ್ತು ವಿಶ್ವ ಯೋಜನೆಗಳನ್ನು ತಂದು ಜನಪದ ಕಾರ್ಯಕ್ರಮಗಳನ್ನು ತಂದು ಎರಡು ವರ್ಷಗಳಲ್ಲಿ ಭೇಷ್ ಅನ್ನಿಸಿಕೊಂಡಿದ್ದನ್ನು ನಾವು ನೋಡಿದ್ದೇವೆ. ಆದರೆ ಅವರ ತರುವಾಯ ಬಂದಂಥ ಮೊಯಿಲಿಯವರ ಸರ್ಕಾರ ಎರಡು ವರ್ಷಗಳಲ್ಲಿ ಬರೀ ಸೇಡಿನ ರಾಜಕೀಯ ಮಾಡಿ ರಾಜ್ಯದ ಅಭಿವೃದ್ಧಿಯನ್ನು ಕುಂಠಿತ ಮಾಡಿದ್ದನ್ನು ನಾವು ನೋಡಿದ್ದೇವೆ.

(ಗೊಂದಲ)

ಶ್ರೀ. ಎಲ್.ಆರ್. ಶಿವರಾಮೇಗೌಡ : ಆ ಮಂತ್ರಿ ಮಂಡಲ ಸರಿಯಿಲ್ಲ ಎನ್ನತಕ್ಕ ಮಾತನ್ನು ಅವತ್ತೇ ಹೇಳಿದ್ದೇವೆ. ಈ ಸೇಡಿನಿಂದಲೇ ನೀವು ಇವೊತ್ತು 35 ಕ್ಕೆ ಬಂದಿದ್ದು.

ಶ್ರೀ ರಾಮಲಿಂಗಾರೆಡ್ಡಿ : ಕಳೆದ ಎರಡು ವರ್ಷಗಳಲ್ಲಿ ಅಭಿವೃದ್ಧಿಯಾದಷ್ಟು ಯಾವಾಗಲೂ ಆಗಿಲ್ಲ. ನೀವೇ ಹಾಡಿ ಹೊಗಳುತ್ತಿದ್ದಿರಿ. ಗೆಲ್ಲುವುದು, ಸೋಲುವುದು

35 ಸೀಟು ಬರುವುದು, 15 ಸೀಟು ಬರುವುದು ಇಷ್ಯೂಗಳ ಮೇಲೆ ಹೋಗಿ ಬಿಡುತ್ತದೆ. ಅದಕ್ಕೆ ನಾನಾ ಕಾರಣಗಳು ಇರುತ್ತವೆ. ಅವೊತ್ತು ನೀವೇ ವೀರಪ್ಪ ಮೊಯಿಲಿಯವರ ಸರ್ಕಾರವನ್ನು ಹೊಗಳುತ್ತಿದ್ದೀರಿ. ಆದರೆ ಈಗ ಏಕೆ ಈ ರೀತಿ ಮಾತನಾಡುತ್ತಿದ್ದೀರಿ ?

ಶ್ರೀ ಎಲ್. ಆರ್. ಶಿವರಾಮೇಗೌಡ : ಬಂಗಾರಪ್ಪನವರ ಕಾಲದಲ್ಲಿ ಅನ್ಯಾಯವಾಗಿದೆ ಎಂದು ಹೇಳಿದರೆ ರಾಜ್ಯದ ಜನತೆ ಯಾರೂ ಒಪ್ಪುವುದಿಲ್ಲ. ಮೊಯಿಲಿಯವರ ಕಾಲದಲ್ಲಿ ಪ್ರತಿ ಹಂತದಲ್ಲೂ ಸಹಿತ ಏನು ಅನ್ಯಾಯವಾಯಿತು ಎಂದು ವಿರೋಧ ಪಕ್ಷದವರು ಹೇಳುತ್ತಾರೆ. ಅದು ಅಕ್ಷರಶಃ ನಿಜ ಎನ್ನತಕ್ಕದ್ದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ಇವೊತ್ತು ನೀವು 35ಕ್ಕೆ ಹೋಗಬೇಕಾದರೆ ಅವರ ಆಡಳಿತವೇ ಮೂಲ ಕಾರಣ ಎಂಬುದನ್ನು ನೀವು ಒಪ್ಪಿಕೊಳ್ಳಬೇಕಾಗುತ್ತದೆ. ಈ ಒಂದು ಸೇಡು ತೀರಿಸುವುದಕ್ಕೋಸ್ಕರ, ಈ ಒಂದು ರಾಜ್ಯದ ಅಭಿವೃದ್ಧಿ ಕೆಲಸ ಕುಂಠಿತವಾಗಲು, ಅವರೇ ಕಾರಣರಾಗಿರುತ್ತಾರೆ. ಇವೊತ್ತು ದೇವೇಗೌಡರ ಪಕ್ಷ ಅಧಿಕಾರಕ್ಕೆ ಬಂದಿದೆ. ಇವೊತ್ತು ನಮ್ಮ ರಾಜ್ಯದ ಜನ, ದೇವೇಗೌಡರನ್ನು ಒಬ್ಬ ಮಣ್ಣಿನ ಮಗ, ಬಡ ಬೋರೇಗೌಡರ ಮಗ, ರಾಜ್ಯದಲ್ಲಿ 5 ವರ್ಷ ಅಧಿಕಾರ ನಡೆಸಲಿ ಎಂದು ಹೇಳಿರತಕ್ಕಂಥ ಮಾತನ್ನು ನಾವು ಸಹಿತ ಹೇಳಿ 5 ವರ್ಷ ಈ ಸರ್ಕಾರ ಜನಪರ ಕಾರ್ಯಕ್ರಮಗಳನ್ನು ಮಾಡಲಿ ಎಂಬುದು ನಮ್ಮ ಆಸೆ. ಬೆಳೆಯುವ ಪೈರು ಮೊಳಕೆಯಲ್ಲಿ ಎಂದು ಹೇಳುವ ಹಾಗೆ ಈಗಾಗಲೇ ಮೂರು ರೀತಿಯಲ್ಲಿ ಜನ ಮೆಚ್ಚತಕ್ಕಂಥ ಕೆಲಸವನ್ನು ಮಾಡಿದ್ದಾರೆ. ಗ್ರಾಮಾಂತರ ಪ್ರದೇಶದ ರೈತಾಪಿ ಜನಗಳಿಗೆ ನೇರವಾಗಿ ಸ್ಪಂದಿಸತಕ್ಕಂಥ ಮೂರು ಕೆಲಸವನ್ನು ಈಗಾಗಲೇ ಮಾಡಿದ್ದೀರಿ. ಒಂದು ಬಡ್ಡಿ ಮನ್ನಾ ಮಾಡತಕ್ಕಂಥ ವಿಚಾರ ಸನ್ಮಾನ್ಯ ಬಿ.ಜೆ.ಪಿ. ಸದಸ್ಯರು ಇವೊತ್ತು ಯಾರೂ ಇಲ್ಲ. ಈ ಒಂದು ಬಾವಿಯೊಳಕ್ಕೆ ಮೂರು ಸಾರಿ ಅವರು ಬಂದರು ಈ ಬಡ್ಡಿ ಮನ್ನಾ ಮಾಡಬೇಕು ಮಾಡಬೇಕು ಎಂದು ಹೇಳಿಕೊಂಡು. ಸಂಪೂರ್ಣ ಬಡ್ಡಿ ಮನ್ನಾ ಮಾಡುವುದಕ್ಕೆ ಆರ್ಥಿಕ ಪರಿಸ್ಥಿತಿ ಚೆನ್ನಾಗಿದೆಯೋ ಇಲ್ಲವೋ ಎನ್ನುವುದು ಪ್ರಶ್ನೆಯಲ್ಲ. ಆದರೆ ಇದರಲ್ಲಿ ಒಂದು ಹೆಜ್ಜೆಯನ್ನು ಮುಂದಿಟ್ಟು ರೈತರಿಗೆ ಬಡ್ಡಿ ಮನ್ನಾ ಮಾಡತಕ್ಕಂಥ ವಿಚಾರದಲ್ಲಿ ಅವರು ತೆಗೆದುಕೊಂಡಿರತಕ್ಕಂಥ ಒಂದು ಕಾರ್ಯಕ್ರಮವನ್ನು ನಾವು ರೈತರ ಪರವಾಗಿ ಸ್ವಾಗತ ಮಾಡಬೇಕಾಗುತ್ತದೆ.

ಒಬ್ಬರು ಮಾನ್ಯ ಸದಸ್ಯರು : ಪ್ರಾಥಮಿಕ ಸಹಕಾರಿ ಸಂಘಗಳ ಸಾಲಕ್ಕೆ ಬಡ್ಡಿಯನ್ನು ಮಾಡಿದೆ ಎಂದು ಹೇಳುತ್ತಾರೆ. ಯಾವುದೇ ಪ್ರಾಥಮಿಕ ಸಹಕಾರಿ ಸಂಘಗಳಲ್ಲಿ ಈಗ ಸಾಲಗಳು ಉಳಿದಿಲ್ಲ. ಸಹಕಾರಿ ಸಂಘಗಳ ಪರಿಸ್ಥಿತಿ ಹೇಗಿದೆ ಎಂದು ಹೇಳಿದರೆ ಕೇವಲ ಪಡಿತರ ಸಾಮಾನುಗಳನ್ನು ಹಂಚುವಂಥ ಪರಿಸ್ಥಿತಿ ಬಂದಿರುವುದರಿಂದ ಸಹಕಾರಿ ಸಂಘಗಳಲ್ಲಿ ಇರತಕ್ಕ ರೈತರ ಸಾಲ ಬಹಳ ಕಡಿಮೆ. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್‌ಗೆ ಕೊಡಬೇಕಾಗಿತ್ತು. ಆದರೆ ಇವರ ನಿಯಮಾವಳಿಯನ್ನು ಮಾಡಿದ್ದರಿಂದ ರೈತರಿಗೆ ಅದರಲ್ಲೂ ಕೂಡ ಲಾಭ ಸಿಗುತ್ತಿಲ್ಲ.

ಶ್ರೀ.ಎಲ್.ಆರ್.ಶಿವರಾಮೇಗೌಡ :- ಅಕ್ಕಿ ಯೋಜನೆ ಸುಮಾರು 135 ಕೋಟಿ ರೂಪಾಯಿ ವೆಚ್ಚದಲ್ಲಿ ಬಡವರಿಗೆ ಅಕ್ಕಿಯನ್ನು ಹಂಚತಕ್ಕಂಥ ಕಾರ್ಯಕ್ರಮ ಒಂದನ್ನು ಇವೊತ್ತು ಹಾಕಿಕೊಂಡಿದ್ದಾರೆ. ನಮ್ಮ ಗ್ರಾಮಾಂತರ ಪ್ರದೇಶದಲ್ಲಿ ಹಬ್ಬದಲ್ಲಿ ಅನ್ನ ಉಣ್ಣತಕ್ಕಂಥ ಒಂದು ನಾಣ್ಣುಡಿಯನ್ನು ತಾವು ಕೇಳುತ್ತೀರಿ. ಇವೊತ್ತು ಅಂತಹ ಒಂದು ಪರಿಸ್ಥಿತಿಯಲ್ಲಿ ಬಡತನದ ಕೆಳಗಡೆ ಇರತಕ್ಕಂಥ ರೈತಾಪಿ ವರ್ಗ ಇವೊತ್ತು ಅನ್ನ ಉಣ್ಣತಕ್ಕಂಥ ಒಂದು ಸೌಭಾಗ್ಯವನ್ನು ಈ ಸರಕಾರ ವಾರದಲ್ಲಿ ನಾಲ್ಕು ದಿವಸವಾದರೂ ಊಟ ಮಾಡತಕ್ಕಂಥ ಅವಕಾಶವನ್ನು ಮಾಡಿರುವುದನ್ನು ನಾವು ಸ್ವಾಗತ ಮಾಡಬೇಕಾಗುತ್ತದೆ. ಆದರೆ ಒಂದು ಎಚ್ಚರಿಕೆಯನ್ನು ಈ ಇಲಾಖೆಗೆ ನಾನು ಈ ಸಂದರ್ಭದಲ್ಲಿ ಕೊಡಬೇಕಾಗುತ್ತದೆ. ಇವೊತ್ತು ಏನು ನೀವು ಈ ಅಕ್ಕಿ, ಜೋಳ, ರಾಗಿ, ಇವುಗಳಿಗೆ ಸಬ್ಸಿಡಿ ಕೊಡುತ್ತೇವೆ ಎಂದು ಹೋಗುತ್ತಿರೋ ಇದು ಸಮರ್ಪಕವಾಗಿ ವಿವರಣೆ ಆಗಬೇಕು. ಈಗ ಇರತಕ್ಕಂಥ ವ್ಯವಸ್ಥೆಯಲ್ಲಿ ಏನು ನೀವು ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಣೆ ಮಾಡುತ್ತೇವೆ ಎಂದು ಹೇಳುತ್ತೀರೋ ಅದು ಸಮರ್ಪಕವಾಗಿ ವಿತರಣೆ ಆಗಲಿಕ್ಕೆ ಸಾಧ್ಯವಿಲ್ಲ. ಇವೊತ್ತು ಹಳ್ಳಿಗಳಲ್ಲಿ ಈ ನ್ಯಾಯ ಬೆಲೆ ಅಂಗಡಿಗಳನ್ನು ಅನ್ಯಾಯ ಬೆಲೆ ಅಂಗಡಿಗಳು ಎನ್ನುತ್ತಾರೆ. ಇವೊತ್ತು ಏನು ಈ ಅನ್ಯಾಯ ಬೆಲೆ ಅಂಗಡಿ ಎಂದು ನಾಣ್ಣುಡಿ ಮಾಡಿದ್ದಾರೆ ಜನ, ಇದಕ್ಕೆ ಕಡಿವಾಣ ಹಾಕಬೇಕು. ಇದಕ್ಕೆ ಲಂಗು ಲಗಾಮು ಇಲ್ಲ. ಇವೊತ್ತು ತಾಲ್ಲೂಕು ಹೆಡ್ ಕ್ವಾರ್ಟರನ್‌ಲ್ಲಿ ತೆಗೆದುಕೊಂಡು ಹೋಗತಕ್ಕಂಥ ಒಬ್ಬ ನ್ಯಾಯ ಬೆಲೆ ಅಂಗಡಿ ಮಾಲೀಕ ಎಲ್ಲವನ್ನೂ ಅಲ್ಲೇ ಸಂಪೂರ್ಣ ಮಾರಾಟ ಮಾಡಿ ಯಾವುದು ಹೆಚ್ಚು ಬೆಲೆಗೆ ಹೋಗುವುದಿಲ್ಲವೋ ಅಂಥವುಗಳನ್ನು ಮಾತ್ರ ಹಳ್ಳಿಗಳಿಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡುತ್ತಾನೆ. ಇಂಥಹ ಪರಿಸ್ಥಿತಿಯನ್ನು ನೋಡುತ್ತಿದ್ದೇವೆ. ಅದಕ್ಕೆ ನಾನು ಸರ್ಕಾರಕ್ಕೆ ನಾನು ವಿನಂತಿ ಮಾಡಿ ಈ ಮೂಲಕ ಒತ್ತಾಯ ಮಾಡುತ್ತೇನೆ. ಇವೊತ್ತು ನೀವು ನ್ಯಾಯ ಬೆಲೆ ಅಂಗಡಿಗಳ ಮುಖಾಂತರ ವಿತರಣೆ ಮಾಡತಕ್ಕಂಥದ್ದರಲ್ಲಿ ಸರ್ಕಾರಕ್ಕೆ ಒಳ್ಳೆಯ ಹೆಸರು ಬರಬೇಕಾಗಿದ್ದರೆ ಜಿಲ್ಲಾಧಿಕಾರಿ ಒಂದು ತಾಲ್ಲೂಕಿಲ್ಲಿ ಕನಿಷ್ಟಪಕ್ಷ 5 ನ್ಯಾಯ ಬೆಲೆ ಅಂಗಡಿಗಳನ್ನು ಒಂದು ತಿಂಗಳಿಗೆ ಅಬ್‌ಜಕ್ಟ್ ಆಗಿ ಇನ್ಸ್‌ಪೆಕ್ಟ್ ಮಾಡಿ ಸರ್ಕಾರಕ್ಕೆ ವರದಿ ಮಾಡಿ ಯಾರು ತಪ್ಪಿತಸ್ಥರು ಇರುತ್ತಾರೋ ಅಂಥವರ ಮೇಲೆ ಕ್ರಮ ತೆಗೆದುಕೊಳ್ಳಬೇಕು ಎನ್ನುವಂಥದ್ದನ್ನು ನಾನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಷ್ಟಪಡುತ್ತೇನೆ.

ಆಮೇಲೆ ಹೇಮಾವತಿ ನಾಲಾ ಕೆಲಸವನ್ನು ನಿಲ್ಲಿಸಿರತಕ್ಕಂಥ ವಿಚಾರದಲ್ಲಿ ಸಾಕಷ್ಟು ಚರ್ಚೆಯಾಯಿತು. ನಾನು ಮೊಯಿಲಿಯವರ ಸರ್ಕಾರ ಅಧಿಕಾರದಲ್ಲಿದ್ದಾಗ ಅಂದಿನ ನೀರಾವರಿ ಮಂತ್ರಿಗಳಿಗೆ ಒಂದು ಪತ್ರವನ್ನು ಬರೆದು ನಾಗಮಂಗಲ ತಾಲ್ಲೂಕು ಯಡಿಯೂರು, ಕುಣಿಗಲ್, ತುರುವೇಕೆರೆ ಭಾಗಗಳಲ್ಲಿ ಏನು ಕೆಲಸ ನಡೆದಿದೆ ಅಲ್ಲಿ ಕೋಟ್ಯಾಂತರ ರೂಪಾಯಿ ಹಣವನ್ನು ಲೂಟಿ ಮಾಡಿದ್ದಾರೆ. ಇವೊತ್ತು ಅಲ್ಲಿ ಡಿಪಾರ್ಟ್‌ಮೆಂಟನಲ್ಲಿ ಕೆಲಸ ಕೊಡುತ್ತೇವೆ ಎಂದು ಹೇಳಿ ಅಲ್ಲಿ ಗುತ್ತಿಗೆದಾರರು ಮತ್ತು ಇಂಜಿನಿಯರುಗಳು ಕೋಟ್ಯಾಂತರ ರೂಪಾಯಿ ಹಣವನ್ನು ಲೂಟಿ ಮಾಡಿದ್ದಾರೆ. ಯಾರೂ ಹೇಳುವವರು ಕೇಳುವವರು ಇಲ್ಲದೇ ಇವೊತ್ತು ದುಡ್ಡನ್ನು ನುಂಗಿ ಹಾಕಿದರು.

ದೇವೇಗೌಡರು ನಿಲುವಿಗೆ ನಾನು ಸ್ವಾಗತ ಮಾಡುತ್ತೇನೆ. ಏಕೆಂದರೆ ಅಧಿಕಾರಕ್ಕೆ ಬಂದಾಗ ಪ್ರಪ್ರಥಮವಾಗಿ ನಾನಾ ಕೆಲಸವನ್ನು ನಿಲ್ಲಿಸಿ ತನಿಖೆಗಾಗಿ ಆಜ್ಞೆ ಮಾಡಿಲ್ಲ ದಯವಿಟ್ಟು ತನಿಖೆಗೆ ಆಜ್ಞೆಯನ್ನು ಮಾಡಬೇಕು. ನಾಗಮಂಗಲ ತಾಲ್ಲೂಕು ಒಂದರಲ್ಲೇ ಆರು ಸಾವಿರ ನಾಲೆ ಒಡೆದುಹೋಗಿದೆ. ನಾವು ಜಿಲ್ಲಾ ಪಂಚಾಯತಿ ಸಭೆಯಲ್ಲಿ ಅಂದಿನ ನೀರಾವರಿ ಮಂತ್ರಿಗಳಿಗೆ ಪತ್ರ ಬರೆದೆವು. ನೀವು ಇದನ್ನು ತನಿಖೆ ಮಾಡಿಸಬೇಕು. ಯಾರು ತಪ್ಪಿತಸ್ಥರು ಇದ್ದಾರೋ ಅವರ ಮೇಲೆ ಮತ್ತು ಯಾರು ನಾಲೆ ಒಡೆದು ಹೋಗಿರುವುದಕ್ಕೆ ಭಾಗಿಯಾಗಿದ್ದಾರೋ ಅವರ ಮೇಲೆ ಕ್ರಮ ತೆಗೆದುಕೊಳ್ಳಬೇಕು ಎನ್ನುವುದನ್ನೂ ಸಹಿತ ಹೇಳಿದ್ದೇವೆ. ಇವೊತ್ತು ಟೆಂಡರ್ ಕರೆದು ಕೆಲಸ ಕೊಡಬೇಕು ಎಂಬ ತೀರ್ಮಾನ ಬಹಳ ಚೆನ್ನಾಗಿ ಹೇಳಿದ್ದೀರಿ. ಇವೊತ್ತು ಟೆಂಡರ್ ಕರೆಯದೇ ಹೋದರೆ ಆ ಕೆಲಸದಲ್ಲಿ ಅಕೌಂಟಬಿಲಿಟಿ ಸಿಗುವುದಿಲ್ಲ. ಲೆಕ್ಕ ಸಿಗುವುದಿಲ್ಲ. ಇದರಲ್ಲಿ ಕೆಲಸ ಒಂದು ಬೇಗ ಆಗುತ್ತದೆ ಎನ್ನುವುದು ಒಂದನ್ನು ಬಿಟ್ಟರೆ, ಕೆಲಸಕ್ಕೆ ಯಾವ ಲೆಕ್ಕಾಚಾರವೂ ಇರುವುದಿಲ್ಲ ಈ ಟೆಂಡರ್ ಕರೆಯದೇ ಹೋದರೆ. ಈಗಾಗಲೇ ಎಲ್ಲಾ ಕಂಟ್ರಾಕ್ಟರ್‌ಗಳು ವಿಧಾನಸೌಧವನ್ನು ಸುತ್ತುತ್ತಾ ಇದ್ದಾರೆ, ಟೆಂಡರ್ ವ್ಯವಸ್ಥೆ ಬೇರೆ ಡಿಪಾರ್ಟ್‌ಮೆಂಟ್ ಮೂಲಕ ಕೊಡಬೇಕು ಎನ್ನತಕ್ಕಂಥದ್ದನ್ನು ಹೇಳಿ ಸಚಿವರ ಮನೆ ಬಾಗಿಲ ಹತ್ತಿರ ಲೋಕೋಪಯೋಗಿ ಸಚಿವರ ಮನೆಯ ಬಾಗಿಲ ಹತ್ತಿರ, ನೀರಾವರಿ ಸಚಿವರ ಮನೆಯ ಬಾಗಿಲ ಹತ್ತಿರ ಕುಳಿತ್ತಿದ್ದಾರೆ. ನೀವು ಇದಕ್ಕೆ ತಲೆಬಾಗಬಾರದು, ಟೆಂಡರ್ ಕರೆಯುತಕ್ಕಂಥ ವಿಚಾರದಲ್ಲಿ ನಿಮ್ಮ ನಿಲುವು ಬದಲಾಗಬಾರದು ಎಂದು ಸರ್ಕಾರಕ್ಕೆ ಒತ್ತಾಯ ಮಾಡುವುದಕ್ಕೆ ಇಚ್ಛೆಪಡುತ್ತೇನೆ. ಇವೊತ್ತು ಒಬ್ಬೊಬ್ಬ ಇಂಜಿನಿಯರ್ ಹೇಮಾವತಿ ನಾಲೆಯಲ್ಲಿ ಲೂಟಿ ಮಾಡಿ 50 ಲಕ್ಷ ರೂಪಾಯಿಯ ಒಂದು ಮನೆಯನ್ನು ಕಟ್ಟಿರತಕ್ಕಂಥ ಒಂದು ದಾಖಲೆ ಇದೆ. ಈ ಒಂದೆ ಎರಡೂವರೆ ವರ್ಷಗಳಲ್ಲಿ ಹೇಮಾವತಿ ನಾಲೆಯಲ್ಲಿ ಏನು ಕೆಲಸ ನಡೆದಿದೆ ಆ ಕರ್ಮಕಾಂಡದ ಸಂಪೂರ್ಣ ಪರಿಚಯವನ್ನು ಮಾಡಿಸಬೇಕು ಎಂದು ಹೇಳಿ ಈ ಮೂಲಕ ಸರ್ಕಾರವನ್ನು ಒತ್ತಾಯ ಮಾಡುತ್ತೇನೆ. ಹಾಗೇಯೇ. ಏನು ನೀವು 11ನೇ ತಾರಿಖು ಕೆಲಸ ಪ್ರಾರಂಭ ಮಾಡುತ್ತೇವೆ ಎಂದು ಹೇಳಿದ್ದೀರಿ ಅದು ಸಂಪೂರ್ಣ ಸ್ವಾಗತ ಮಾಡತಕ್ಕಂಥ ವಿಚಾರ. ಆದರೆ ಟೆಂಡರ್ ಮೂಲಕವಲ್ಲದೇ ಬೇರೆ ಯಾವುದೇ ರೀತಿಯಲ್ಲೂ ಮಾಡಬಾರದು ಎಂಬ ಸರ್ಕಾರವನ್ನು ನಾನು ಒತ್ತಾಯ ಮಾಡುತ್ತೇನೆ. ಈ ವರ್ಗಾವಣೆ ವಿಚಾರ, ಇವೊತ್ತು ಈ ಸದನ ಮುಗಿದ ಮೇಲೆ ಈ ವರ್ಗಾವಣೆ ಶುರುವಾಗುತ್ತದೆ. ಯಾವ ಶಾಸಕರೂ ಹೊರಗಡೆ ತಿರುಗಾಡುವ ಹಾಗಿಲ್ಲ, ಎದುರುಗಡೆ ಡೈರಕ್ಟಾಗಿ ಕುಳಿತುಕೊಳ್ಳುತ್ತಾರೆ, ವರ್ಷವೆಲ್ಲಾ ಕೆಲವರು ಲೂಟಿ ಹೊಡೆಯುತ್ತಾರೆ. ಒಳ್ಳೊಳ್ಳೆ ಜಾಗಕ್ಕೋಸ್ಕರ ಎಲ್ಲಾ ವಿಧಾನಸೌಧದ ಬಾಗಿಲಲ್ಲಿ, ಎಲ್ಲಾ. ಮಂತ್ರಿಗಳ ಬಾಗಿಲಲ್ಲಿ, ಕಛೇರಿಗಳ ಮುಂದೆ ಸುತ್ತಿ ಎಲ್ಲಾ ಒಳ್ಳೊಳ್ಳೆ ಜಾಗವನ್ನು ಸೆಲೆಕ್ಟ್ ಮಾಡುವುದಕ್ಕೆ ಬರುತ್ತಾರೆ. ನಾನು ಹೇಳುತ್ತೇನೆ. ಇವೊತ್ತು ದೇವೇಗೌಡರ ಸರ್ಕಾರ ಇದಕ್ಕೆ ಒಂದು ಹೊಸ ಕಾರ್ಯಕ್ರಮವನ್ನು ರೂಪಿಸಿ, ವರ್ಗಾವಣೆ ನೀತಿಯನ್ನು ರೂಪಿಸಬೇಕು, ವರ್ಗಾವಣೆ ನೀತಿಯನ್ನು ರೂಪಿಸದೇ ಹೋದರೆ ಇವೊತ್ತು ಸರ್ಕಾರಕ್ಕೆ ಕೆಟ್ಟ ಹೆಸರು ಕಟ್ಟಿಟ್ಟ ಬುತ್ತಿ. ಇವೊತ್ತು ವಿರೇಂದ್ರ ಪಾಟೀಲರು ಈ ಸದನದಲ್ಲಿ

ಕ್ಷಮೆ ಯಾಚನೆ ಮಾಡಿದ್ದರು. ಈ ವರ್ಗಾವಣೆ ಪಿಡುಗು ಏಕೆ ಬರುತ್ತದೋ ಎಂಬ ಒಂದು ಮಾತನ್ನು ಹೇಳಿದ್ದರು. ಇವೊತ್ತು ಯಾರು ಜಿಲ್ಲಾ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ ಎಫಿಷಿಯಂಟ್ ಆಗಿ ಕೆಲಸ ಮಾಡುತ್ತಾರೋ, ಅವರನ್ನು ಅಲ್ಲೇ ಇರಿಸಬೇಕು. ಅವನು ಜನಹಿತ ಕೆಲಸವನ್ನು ಮಾಡದೇ ಇದ್ದರೆ ಅವನನ್ನು ಬದಲಾಯಿಸತಕ್ಕಂಥ ಕೆಲಸವನ್ನು ಮಾಡಬೇಕು ಎಂದು ಹೇಳಿ, ವರ್ಗಾವಣೆ ರೂಪಿಸಿ ಹೊಸ ಕಾಯಕಲ್ಪಕ್ಕೆ ಎಡೆಮಾಡಿಕೊಡಬೇಕು ಎಂದು ಹೇಳುತ್ತೇನೆ. ಇನ್ನು ಪೋಲಿಸ್ ಇಲಾಖೆಯ ಬಗ್ಗೆ ಹೇಳುವುದಾದರೆ, ಸ್ವಾತಂತ್ರ್ಯ ಬಂದಮೇಲೆ ಎಲ್ಲರೂ ಈ ರಾಜ್ಯವನ್ನು ಆಳಿದರು. ಇವತ್ತು ಈ ಪೋಲಿಸ್ ಇಲಾಖೆಗೆ ಒಳ್ಳೆಯ ಶಕ್ತಿ ಮತ್ತು ಯುಕ್ತಿ ಇರತಕ್ಕ ಮಂತ್ರಿಗಳನ್ನಾಗಿ ಮಾನ್ಯ ಸಿಂಧ್ಯರವರನ್ನು ಮಾನ್ಯ ದೇವೇಗೌಡರು ಮಾಡಿದ್ದಾರೆ. ನಾನಂತೂ ಅವರು ಗೃಹಮಂತ್ರಿಯಾಗಿ ಅವರು ಸಕ್ಸಸ್ ಆಗಬಹುದು, ಆಗಲಿ ಎಂದು ನಾನು ಹಾರೈಕೆ ಮಾಡುತ್ತೇನೆ. ಆದರೆ ಇದು ಬಹಳ ಪ್ರಮುಖವಾದ ಇಲಾಖೆ. ನಮ್ಮ ರಾಜ್ಯದ ಜನಸಂಖ್ಯೆಗನುಗುಣವಾಗಿ ಹೇಳುವುದಾದರೆ 1600 ಪೋಲಿಸ್ ಸ್ಟೇಷನ್‌ಗಳು ಬೇಕಾಗುತ್ತದೆ. ಇವತ್ತು ನಮ್ಮಲ್ಲಿರತಕ್ಕ ಪೋಲಿಸ್ ಠಾಣೆಗಳು ಎಂದರೆ 760 ಇವೆ. 1600 ಪೋಲಿಸ್ ಸ್ಟೇಷನ್‌ಗಳ ಅವಶ್ಯಕತೆ ಇರುವ ಕಡೆಯಲ್ಲಿ 700 ಪೋಲಿಸ್ ಠಾಣೆಗಳ ಪೋಲಿಸರು ಈ ರಾಜ್ಯವನ್ನು ನಿಯಂತ್ರಣ ಮಾಡಬೇಕು. 340 ಪೋಲಿಸ್ ಸ್ಟೇಷನ್‌ಗಳಲ್ಲಿ 20 ಜನ ಪೋಲಿಸ್ ಪೇದೆಗಳಿದ್ದಾರೆ. 360 ಪೋಲಿಸ್ ಸ್ಟೇಷನ್‌ಗಳಲ್ಲಿ ಕೇವಲ 4-4 ಜನರಂತೆ ಕಾನ್‌ಸ್ಟೇಬಲ್‌ಗಳಿದ್ದಾರೆ. ನಮ್ಮಲ್ಲಿ ಬೆಳ್ಳೂರು ಬಡಿಗನೂರು ಇನ್ನೊಂದು ನಾಗಮಂಗಲ ಈ 3 ಪೋಲಿಸ್ ಸ್ಟೇಷನ್‌ಗಳಿವೆ. ನಾಗಮಂಗಲ ಎಂಬುದು ತಾಲ್ಲೂಕು ಅಲ್ಲಿಯ ಸ್ಟೇಷನ್‌ನಲ್ಲಿ ಕೇವಲ 8 ಜನ ಪೋಲಿಸರು ಇದ್ದಾರೆ. ಅಲ್ಲಿ ಏನಾದರೂ ಒಂದು ಸಣ್ಣ ಗಲಾಟೆಯಾದರೂ ನೀವು ಬೇರೆಕಡೆಯಿಂದ ಪೋಲಿಸರನ್ನು ಕರೆಸಬೇಕು. ಮಾನ್ಯ ಗರುಡಾಚಾರ್‌ರವರು ಡಿ.ಜಿ.ಪಿ. ಆಗಿದ್ದಾಗ ನಾನು ಅವರ ಹತ್ತಿರ ಹೋಗಿ ಸ್ವಾಮಿ, ನೀವು ನಾಗಮಂಗಲ ತಾಲ್ಲೂಕಿನ ಬಂಡಿಗನೂರಿನವರು, ನೀವು ಇಷ್ಟು ದೊಡ್ಡ ಹುದ್ದೆಯಲ್ಲಿದ್ದೀರಿ, ಏನಾದರೂ ಮಾಡಿ ಅಲ್ಲಿಗೆ ಒಂದು ಪೋಲಿಸ್‌ಸ್ಟೇಷನ್ ಕೊಡಬೇಕೆಂದು ಕೇಳಿದಾಗ ಒಳ್ಳೆಯ ಒಂದು ಪೋಲಿಸ್‌ಸ್ಟೇಷನ್‌ನ್ನು ಸರ್ಕಾರದಿಂದ ಮಂಜೂರು ಮಾಡಿಸಿಕೊಡುತ್ತೇನೆಂದು ಹೇಳಿ ಮಂಜೂರು ಮಾಡಿಸಿದರು. ಅಲ್ಲಿಗೆ 28 ಜನ ಪೋಲಿಸರು ಬಂಡಿಗನೂರು ಸ್ಟೇಷನ್‌ನಲ್ಲಿದ್ದಾರೆ. ನಾಗಮಂಗಲ ತಾಲ್ಲೂಕು ಕೇಂದ್ರದಲ್ಲಿ ಕೇವಲ 8 ಜನ ಪೋಲಿಸರು ಇದ್ದಾರೆ. ಈ ಒಂದು ವ್ಯತ್ಯಾಸವನ್ನು ಬಗೆಹರಿಸಬೇಕು. ಇವೊತ್ತು ಮಹರಾಷ್ಟ್ರದಲ್ಲಿ 500 ಜನರಿಗೆ ಒಬ್ಬ ಕಾನ್‌ಸ್ಟೇಬಲ್‌ನ ರೀತಿಯಲ್ಲಿ ಕೆಲಸಮಾಡುತ್ತಿದ್ದಾರೆ. ಕರ್ನಾಟಕದಲ್ಲಿ 1400 ಜನರಿಗೆ ಒಬ್ಬರಂತೆ ಕಾನ್‌ಸೆಟ್‌ಬಲ್‌ಗಳು ಕೆಲಸಮಾಡುತ್ತಿದ್ದಾರೆ. ಈ ವ್ಯತ್ಯಾಸವನ್ನು ಬೇರೆ ರಾಜ್ಯಗಳಿಗೆ ಹೋಲಿಕೆ ಮಾಡಿ ಸರಿಪಡಿಸಬೇಕು. ಇಡೀ ರಾಜ್ಯದಲ್ಲಿ ಇರತಕ್ಕವರು 50 ಸಾವಿರ ಪೋಲಿಸ್ ಕಾನ್‌ಸ್ಟೇಬಲ್‌ಗಳು. ಇಷ್ಟು ಜನ ಏನೇನೂ ಸಾಲದು. ಜನರು ಏನಾದರೂ ಹೆಚ್ಚು ಸಂಖ್ಯೆಯಲ್ಲಿ ಬಂದು ಪ್ರತಿಭಟನೆಯನ್ನು ಮಾಡಿದರೆ ನಿಮ್ಮ ಹತ್ತಿರ ಇರತಕ್ಕ ಪೋಲಿಸ್ ಫೋರ್ಸ್ ಏನೇನೂ ಸಾಲುವುದಿಲ್ಲ. 1 ಲಕ್ಷ ಜನರು ಈ ಬೆಂಗಳೂರನ್ನು

ಮುತ್ತಿಗೆ ಹಾಕುತ್ತೇವೆಂದು ಬಂದರೆ ನೀವು ಹೊರರಾಜ್ಯದಿಂದ ಪೋಲಿಸರನ್ನು ತರಿಸಬೇಕೇ ಹೊರತು ನಿಮ್ಮಲ್ಲಿರತಕ್ಕ ಪೋಲಿಸ್ ಏನೇನೂ ಸಾಲುವುದಿಲ್ಲ ಎಂದು ಹೇಳಬೇಕಾಗುತ್ತದೆ. ಬಿಹಾರದಲ್ಲಿ ಮುಖ್ಯಮಂತ್ರಿಯಾಗಿರತಕ್ಕ ನಿಮ್ಮ ಲಲ್ಲೂ ಪ್ರಸಾದ್‌ರವರು ಅಧಿಕಾರಕ್ಕೆ ಬಂದಕೂಡಲೇ 20 ಸಾವಿರ ಪೋಲಿಸ್ ಕಾನ್‌ಸ್ಟೇಬಲ್‌ಗಳನ್ನು ಏಕಕಾಲದಲ್ಲಿ ತೆಗೆದುಕೊಳ್ಳುತ್ತಿದ್ದಾರೆ. ಈಗ ನಾವು 5 ಸಾವಿರ ಜನರನ್ನು ತೆಗೆದುಕೊಳ್ಳುತ್ತೇವೆಂದು ಹೇಳಿದ್ದೀರಿ. ಇನ್ನೂ ಹೆಚ್ಚು ಜನರನ್ನು ತೆಗೆದುಕೊಂಡು ಈ ಪೋಲಿಸ್ ಇಲಾಖೆಯನ್ನು ಬಲಪಡಿಸಬೇಕೆಂದು ಹೇಳಬಯಸುತ್ತೇನೆ. ಇವತ್ತು ಎಲ್ಲಾದರೂ ರೌಡಿಗಳ ಹಾವಳಿಯಾದರೆ, ಎಲ್ಲಾದರೂ ಕೋಮು ಗಲಭೆಯಾದರೆ, ಯಾರಾದರೂ ಹೆಣ್ಣುಮಕ್ಕಳನ್ನು ಚುಡಾಯಿಸಿದರೆ, ರಾಮಜ್ಯೋತಿ ಬಂದರೆ, ಇಟ್ಟಿಗೆ ಬಂದರೆ ಹೆಣವನ್ನು ಏನಾದರೂ ಮೆರವಣಿಗೆ ತೆಗೆದುಕೊಂಡು ಬರುತ್ತೇವೆ ಎಂದು ಯಾರಾದರೂ ಹೇಳಿದರೆ ಇಲ್ಲಿರತಕ್ಕ 50 ಸಾವಿರ ಪೋಲೀಸರೂ ಅಲ್ಲಿಗೆ ಹೋಗಬೇಕು. ಅನಂತರ ಯಾವ ಪೋಲೀಸರೂ ಇಲ್ಲ. ಈ ಪರಿಸ್ಥಿತಿಯನ್ನು ನಾವು ನೋಡುತ್ತಿರುವುದರಿಂದ ಈ ಇಲಾಖೆಗೆ ಕಾಯಕಲ್ಪ ಆಗಬೇಕಾದರೆ ನೀವು ಪೋಲೀಸ್ ಇಲಾಖೆಯ ಬಲವರ್ಧನೆ ಮಾಡಬೇಕು. ಮಾನ್ಯ ಬಂಗಾರಪ್ಪನವರು ಮುಖ್ಯ ಮಂತ್ರಿ ಆಗಿದ್ದಾಗ ಒಂದು ಮಾಸ್ಟರ್ ಪ್ಲಾನ್‌ನ್ನು ಮಾಡಿದ್ದರು. ಹೆಚ್ಚು ಪೋಲಿಸ್ ಸ್ಟೇಷನ್‌ಗಳಾಗಬೇಕೆಂದು ಮಾನ್ಯ ಬಂಗಾರಪ್ಪನವರು ಇಲ್ಲಿ ಒಂದು ಬಿಲ್‌ನ್ನು ತಂದರು. 135 ಕೋಟಿ ರೂಗಳ ವೆಚ್ಚದಲ್ಲಿ ಈ ಪೋಲಿಸ್ ಇಲಾಖೆಗೆ ಒಂದು ಹೊಸ ಚಾಲನೆಯನ್ನು ಕೊಡಬೇಕು, ಹೆಚ್ಚು ಪೋಲಿಸ್ ಸ್ಟೇಷನ್‌ಗಳು ಆಗಬೇಕು, ಹೆಚ್ಚು ಪೋಲಿಸ್ ಕಾನ್‌ಸ್ಟೇಬಲ್‌ಗಳನ್ನು ತೆಗೆದುಕೊಳ್ಳಬೇಕು ಎಂದು ಮಾಡಿದ್ದರು. ನೀವು ಕೇವಲ ಹೆಚ್ಚು ಡಿ. ಜಿ.ಪಿ.ಗಳನ್ನು ಈ ಬೆಂಗಳೂರಿನಲ್ಲಿ ಮಾಡಿದರೆ ಅದರಿಂದ ಏನೇನೂ ಆಗುವುದಿಲ್ಲ. ಐ.ಜಿ.ಪಿ.ಗಳಿಗೆ ಆಫೀಸ್‌ನ್ನು ಕೊಟ್ಟುಕೂಡಿಸಿದರೆ ಏನೂ ಪ್ರಯೋಜನವಾಗುವುದಿಲ್ಲ. ಪೋಲಿಸ್ ಸ್ಟೇಷನ್‌ಗಳಲ್ಲಿ ಕಾನ್‌ಸ್ಟೇಬಲ್‌ಗಳು ಹೆಚ್ಚಾಗಬೇಕು. ಸಬ್ ಇನ್‌ಸ್ಪೆಕ್ಟರ್‌ಗಳು ಹೆಚ್ಚಾಗಬೇಕು. ಇವತ್ತು ನೀವು ಪ್ರೊಮೋಷನ್ ಕೊಟ್ಟು ಸಬ್‌ಇನ್‌ಸ್ಪೆಕ್ಟರ್‌ಗಳನ್ನು ಹಳ್ಳಿಗಳಿಗೆ ಹಾಕುತ್ತೀರಿ. ಅಲ್ಲಿ ಅವರು ಪೋಲಿಸ್‌ಸ್ಟೇಷನ್‌ಗಳನ್ನು ನಡೆಸುವುದನ್ನು ನೋಡಿದರೆ ಚಿಂತಾಜನಕವಾಗಿರುತ್ತದೆ. ಇದರ ಬಗ್ಗೆ ಮೊದಲು ನೀವು ಕ್ರಮತೆಗೆದುಕೊಳ್ಳಬೇಕು. ಅಂತರಾಷ್ಟ್ರೀಯ ಮಟ್ಟದಲ್ಲಿ ನಮ್ಮ ರಾಜ್ಯವನ್ನು ಜದ್ ಜೋನ್ ಎಂದು ಕರೆಯುತ್ತಾರೆ. ಮಾಜಿ ರಾಷ್ಟ್ರಪತಿಗಳು ಈ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಪಿ.ಸಿ.ಅಲೆಕ್ಸಾಂಡರ್‌ರವರು ಈ ಊರಿನಲ್ಲಿ ವಾಸಮಾಡುತ್ತಿದ್ದಾರೆ. ಡಾ॥ರಾಜಾರಾಮಣ್ಣನವರು ಇಲ್ಲಿ ವಾಸಮಾಡುತ್ತಿದ್ದಾರೆ ಇಲ್ಲಿ ಟೆರರಿಸ್ಟ್‌ಗಳ ಹಾವಳಿ, ಎಲ್.ಟಿ.ಟಿ.ಗಳ ಹಾವಳಿ ಇಲ್ಲ, ಯಾವುದೇ ಅಶಾಂತಿಗೆ ಒಳಗಾಗತಕ್ಕ ರಾಜ್ಯ ಇದಲ್ಲ, ಈ ರಾಜ್ಯದಲ್ಲಿ ನಾವು ಶಾಂತವಾಗಿರಬಹುದೆಂದು ತೀರ್ಮಾನ ಮಾಡಿ ಅವರೆಲ್ಲಾರೂ ಇಲ್ಲೇ ಇದ್ದಾರೆ. ಅವರಿಗೆಲ್ಲಾ ಈ 50 ಸಾವಿರ ಪೋಲೀಸರ ಪೈಕಿಯೇ ರಕ್ಷಣೆ ಕೊಡಬೇಕು. ಸೆಕ್ಯೂರಿಟಿ ಕೊಡಬೇಕು. ಆದ್ದರಿಂದ ಈ ಪೋಲಿಸ್ ಇಲಾಖೆಯನ್ನು ಬಲಪಡಿಸಿ ಇದಕ್ಕೆ ಕಾಯಕಲ್ಪಮಾಡಬೇಕೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ಇನ್ನು ಫೈರ್ ಸ್ಟೇಷನ್ ಬಗ್ಗೆ ಹೇಳುವುದಾದರೆ, ನಿಮ್ಮ ಬಜೆಟ್‌ನಲ್ಲಿ ಆಗಲಿ, ಮಾನ್ಯರಾಜ್ಯಪಾಲರ ಭಾಷಣದಲ್ಲಿ ಆಗಲಿ ಈ ಫೈರ್ ಸ್ಟೇಷನ್ ಬಗ್ಗೆ ಹೆಚ್ಚು ಹಣವನ್ನು ಒದಗಿಸಿರುವುದನ್ನು ನಾವು ಕಾಣುತ್ತಿಲ್ಲ. ನಮ್ಮ ರಾಜ್ಯದಲ್ಲಿ 100 ಫೈರ್‌ಸ್ಟೇಷನ್‌ಗಳಿವೆ. ತಮಿಳ್ನಾಡಿನಲ್ಲಿ 280 ಫೈರ್ ಸ್ಟೇಷನ್‌ಗಳಿವೆ. ಕೇರಳದಲ್ಲಿ 250 ಫೈರ್ ಸ್ಟೇಷನ್‌ಗಳಿವೆ, ತಮಗೆ ಹೇಳುವುದಾದರೆ ಒಂದೊಂದು ತಾಲೂಕಿಗೆ ಒಂದೊಂದು ಫೈರ್ ಸ್ಟೇಷನ್‌ಗಳಿರಬೇಕು. ಇಡೀ ಮಂಡ್ಯ ಜಿಲ್ಲೆಯಲ್ಲಿ ಮಂಡ್ಯವನ್ನು ಬಿಟ್ಟರೆ ಬೇರೆ ಎಲ್ಲೂ ಕೂಡ ಒಂದೇ ಒಂದು ಫೈರ್ ಸ್ಟೇಷನ್ ಇಲ್ಲ. ತಾವು ಉತ್ತರ ಕೊಡುವ ಸಂದರ್ಭದಲ್ಲಿ ತಮ್ಮ ಸಬ್ ಡಿವಿಜನ್‌ಗೆ ಕೆ.ಆರ್.ಪೇಟೆ, ಪಾಂಡವಪುರ ಅಥವಾ ನಾಗಮಂಗಲಕ್ಕೆ ಒಂದು ಫೈರ್ ಸ್ಟೇಷನ್‌ನ್ನು ಮಂಜೂರು ಮಾಡುತ್ತೇವೆಂಬ ಮಾತನ್ನು ತಾವು ಹೇಳಬೇಕೆಂದು ಕೇಳಿಕೊಳ್ಳುತ್ತೇನೆ. ನಾನು ಏತಕ್ಕೆ ಹೇಳುತ್ತಿದ್ದೇನೆಂದರೆ, ನಮ್ಮಲ್ಲಿ ಎಲ್ಲಾದರೂ ಬೆಂಕಿ ಬಿದ್ದರೆ ಚಾಮರಾಜ ನಗರ ತಾಲ್ಲೂಕಿನಿಂದ ಫೈರ್ ಫೋರ್ಸ್‌ನ್ನು ತರಿಸಬೇಕಾಗುತ್ತದೆ. ಅಥವಾ ಹಾಸನದಿಂದ ಇಲ್ಲವೇ ತುಮಕೂರಿನಿಂದ ತರಿಸಬೇಕು. ತುಮಕೂರಿನಿಂದ ಬರುವುದರೊಳಗೆ ನಮ್ಮಲ್ಲಿ ಎಲ್ಲವೂ ಉರಿದು ಹೋಗಿರುತ್ತದೆ. ಏನೇನೂ ಉಳಿದಿರುವುದಿಲ್ಲ. ನಿಮ್ಮ ಚಾಮರಾಜ ನಗರಕ್ಕೆ ಮಾತ್ರ (ವಾಟಾಳ್‌ರವರನ್ನು ಉದ್ದೇಶಿಸಿ) ಗಲಾಟೆ ಮಾಡಿ ಮಾಡಿಸಿ ಕೊಂಡುಬಿಡುತ್ತೀರಿ. ನಮ್ಮಕಡೆಗೂ ಮಾಡುವಂತೆ ತಾವು ಹೇಳಬೇಕು. ಪ್ರತಿಯೊಂದು ತಾಲ್ಲೂಕಿಗೂ ಒಂದೊಂದು ಫೈರ್ ಸ್ಟೇಷನ್ ಮಂಜೂರು ಮಾಡಬೇಕು.

ಅಧ್ಯಕ್ಷರು : ಎಲ್ಲಿ ಬೆಂಕಿ ಅನಾಹುತಗಳು ಹೆಚ್ಚಾಗಿ ಆಗಿದ್ದಾಗೆ ಆಗುತ್ತಿರುತ್ತವೆ, ಎಲ್ಲಿ ಸಮೀಪದಲ್ಲಿ ಫೈರ್ ಸ್ಟೇಷನ್ ಇರುವುದಿಲ್ಲ, ಅಂಥ ಕಡೆ ಪ್ರಾಧಾನ್ಯತೆಯಮೇಲೆ ಮಾಡುತ್ತಾರೆ. ತಾಲ್ಲೂಕಿಗೆ ಒಂದೊಂದು ಫೈರ್ ಸ್ಟೇಷನ್‌ನಂತೆ ಕೊಡುತ್ತಾರೆಯೇ?

ಶ್ರೀ ವಾಟಾಳ್ ನಾಗರಾಜ್ : ಫೈರ್ ಸ್ಟೇಷನ್ ಎಂದರೆ ನ್ಯಾಯಬೆಲೆ ಅಂಗಡಿಗಳು ಇದ್ದಂತೆ ಎಂದು ತಿಳಿದುಕೊಂಡಿರಬಹುದು. ಅಗ್ನಿಶಾಮಕದಳಗಳು ನ್ಯಾಯಬೆಲೆ ಅಂಗಡಿಗಳು ಎಂದು ತಿಳಿದುಕೊಂಡು ಇವರು ಕೇಳುತ್ತಿದ್ದಾರೆ.

ಶ್ರೀ ಎಲ್.ಆರ್.ಶಿವರಾಮೇಗೌಡ : ಈ ರಾಜ್ಯದಲ್ಲಿ 135 ತಾಲೂಕುಗಳು ಸತತ ಬರಗಾಲದಿಂದ ನರಳುತ್ತಿವೆ. ಅದರ ಅರ್ಥ ಕುಡಿಯುವ ನೀರಿನ ಅಭಾವ. ಕುಡಿಯುವ ನೀರಿಗೆ ಅಭಾವ ಇದೆ ಎಂದರೆ....

ಶ್ರೀ ವಾಟಾಳ್ ನಾಗರಾಜ್ : ಬರಗಾಲಕ್ಕೂ ಅಗ್ನಿ ಶಾಮಕದಳಕ್ಕೂ ಏನು ಸಂಬಂಧ?

ಶ್ರೀ ಎಲ್.ಆರ್. ಶಿವರಾಮೇಗೌಡ : ಸ್ವಾಮಿ, ನಾನು ಈ ಅಧಿವೇಶನದಲ್ಲೇ ಮಾತನಾಡಿಲ್ಲ. ನನಗೆ ಏಕೆ ಹೀಗೆ ತೊಂದರೆ ಕೊಡುತ್ತಿದ್ದೀರಿ? ನಮ್ಮ ತಾಲ್ಲೂಕಿನಲ್ಲಿ ಒಂದು ಬಿಂದಿಗೆ ನೀರೂ ಕೂಡ ಕುಡಿಯುವುದಕ್ಕೆ ಸಿಕ್ಕುವುದಿಲ್ಲ. ಎಲ್ಲಾದರೂ ದೂರ ಹೋಗಿ ಒಂದು ಗುಡಿಸಲನ್ನು ಕಟ್ಟಿಕೊಂಡರೂ ಅಲ್ಲೂ ಕೂಡ ಕುಡಿಯುವುದಕ್ಕೆ ಒಂದು ಬಿಂದಿಗೆನೀರು ಸಿಕ್ಕುವುದಿಲ್ಲ. ನಮಗೆ ಫೈರ್ ಫೋರ್ಸ್ ಬರಬೇಕಾದರೆ ಹಾಸನದಿಂದಲೋ ಮಂಡ್ಯದಿಂದಲೋ ಬರಬೇಕು. ನಾನಾದರೂ ಹೇಳುವುದೇನೆಂದರೆ, ಪ್ರತಿಯೊಂದು ತಾಲ್ಲೂಕಿಗೆ ಫೈರ್ ಸ್ಟೇಷನ್ ಮಾಡುವುದಕ್ಕಾಗದಿದ್ದರೂ ಕನಿಷ್ಠ 2-3 ತಾಲ್ಲೂಕುಗಳನ್ನು

ಸೇರಿಸಿ ಸಬ್ ಡಿವಿಜನ್‌ಗಾದರೂ ಒಂದೊಂದು ಮಾಡುವ ವ್ಯವಸ್ಥೆ ಬೇಡವೇ? ಅದನ್ನು ಮಾಡಬೇಕೆಂದು ನಾನು ಹೇಳುತ್ತೇನೆ.

ಶ್ರೀ ಕೆ.ಎಸ್. ನಾಗೇಗೌಡ : ಅದುತಪ್ಪು ಭಾವನೆ. ಪ್ರತಿ 40 ಕಿ.ಮೀ.ಗೆ ಒಂದರಂತೆ ಫೈರ್ ಸ್ಟೇಷನ್ ಮಾಡಬೇಕೆಂದು ನ್ಯಾಷನಲ್ ಪಾಲಿಸಿ ಮಾಡಿದ್ದಾರೆ. ಫೈರ್‌ಸ್ಟೇಷನ್ ಮಾಡುವುದು ಕೇವಲ ಬೆಂಕಿ ಹತ್ತಿಕೊಳ್ಳುವುದಕ್ಕೆ ಹುಲ್ಲುಮೆ ಇದ್ದಾವೆ. ನಾನು ನಮ್ಮ ಫೈರ್ ಸ್ಟೇಶನ್ ಮಿನಿಸ್ಟರ್ ಜೊತೆಗೆ ನಿನ್ನೆ ಮಾತನಾಡಿದೆ ಈ ಬಜೆಟ್‌ನಲ್ಲಿ 12-13 ಫೈರ್‌ಸ್ಟೇಷನ್‌ಗಳನ್ನು ಮಂಜೂರುಮಾಡಿದ್ದಾರೆ. 20 ಪೋಲೀಸ್ ಸ್ಟೇಶನ್‌ಗಳನ್ನು ಮಂಜೂರು ಮಾಡಿದ್ದಾರೆ. ಪ್ರತಿಯೊಂದು ತಾಲ್ಲೂಕಿಗೂ ಒಂದೊಂದು ಫೈರ್ ಸ್ಟೇಷನ್‌ನ ಅವಶ್ಯಕತೆ ಇದೆ ಎಂದು ಇದಕ್ಕೆ ನ್ಯಾಷನಲ್ ಪಾಲಿಸಿ ಮಾಡಬೇಕೆಂದು ಕೇಂದ್ರ ಸರ್ಕಾರದವರು ಯೋಚನೆ ಮಾಡಿ, 40 ಕಿ.ಮೀ.ಗೇ ಒಂದೊಂದು ಮಾಡಬೇಕೆಂದು ಯೋಚನೆ ಮಾಡಿದ್ದಾರೆ. ನಮ್ಮಲ್ಲಿ ಕಬ್ಬಿನ ಗದ್ದೆಗಳಿವೆ, ಅಷ್ಟೇ ಅಲ್ಲ ರಾಗಿ ಹುಲ್ಲಿನ ಮೆದೆಗಳು ಭತ್ತದ ಹುಲ್ಲಿನ ಮೆದೆಗಳು, ಗುಡಿಸಲು ಇವೆ. ಈ ಚುನಾವಣೆ ಆದಮೇಲೆ ಸುಮಾರು 2-3 ತಿಂಗಳವರೆಗೆ ಕೆಲವರು ಬೀದಿ ಹಚ್ಚಿಕೊಳ್ಳುವುದಕ್ಕೆ ಹೋಗಿಬೆಂಕಿ ಹಚ್ಚಿಬಿಡುತ್ತಾರೆ. ವಾಟಾಳರ ಸ್ನೇಹಿತರು ಕನ್ನಡ ಚಳುವಳಿಗಾರರು ಹಾಗೇ ಬೆಂಕಿ ಹಚ್ಚಿಬಿಡುತ್ತಾರೆ....

ಶ್ರೀ ವಾಟಾಳ್ ನಾಗರಾಜ್ : ಲಘುವಾಗಿ ಮಾತನಾಡುವುದು, ಹಾಸ್ಯವಾಗಿ ಮಾತನಾಡುವುದು ಒಂದು ವಿಧಾನ. ಇದು ಹರಿಕಥೆ ಅಲ್ಲ. ನಾನು ಇದನ್ನು ಒಪ್ಪುವುದಿಲ್ಲ.

ಶ್ರೀ ಕೆ.ಎಸ್.ನಾಗೇಗೌಡ : ಇದನ್ನು ಸೀರಿಯಸ್ ಆಗಿ ತೆಗೆದುಕೊಳ್ಳಬೇಡಿ.

ಶ್ರೀ ವಾಟಾಳ್ ನಾಗರಾಜ್ : ಮಾತನಾಡುವಾಗ ತಾವು ದಯವಿಟ್ಟು ತಾವು ಹೇಳಿದಂತೆ ನಾವು ಬೆಂಕಿ ಹಚ್ಚುವವರಲ್ಲ. ಬೆಂಕಿ ಹಚ್ಚುವವರೆಲ್ಲಾ ಜನತಾದಳದಲ್ಲಿ, ಕಾಂಗ್ರೆಸ್‌ನಲ್ಲಿ ಸೇರಿಕೊಂಡು ಬಿಟ್ಟಿದ್ದಾರೆ. ಅವರು ಊರಿಗೆಲ್ಲಾ, ದೇಶಕ್ಕೆಲ್ಲಾ ಬೆಂಕಿ ಹಚ್ಚುತ್ತಿದ್ದಾರೆ. ಬೆಂಕಿ ಹಚ್ಚುವವರಿಗೆಲ್ಲಾ ಇವರೇ ಮೊದಲನೇ ಗುರುಗಳು. ಈ ಮಾತನ್ನು ನೀವು ನಮ್ಮ ಮುಂದೆ ಹೇಳಬೇಡಿ. ಬೆಂಕಿ ಹಚ್ಚುವವರಲ್ಲಿ ಶಿವರಾಮೇ ಗೌಡರು ಮೊದಲನೇ ಗುರು.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಮಾನ್ಯ ಅಧ್ಯಕ್ಷರೇ, ಮಾನ್ಯ ಸಿಂಧ್ಯರವರ ಪರವಾಗಿ ಮಾನ್ಯ ನಾಗೇಗೌಡರು ಉತ್ತರವನ್ನು ಕೊಟ್ಟರು. ಅವರಿಗೆ ಯಾವಾಗ ಅಧಿಕಾರ ಕೊಟ್ಟರೋ ನನಗೆ ಗೊತ್ತಿಲ್ಲ.

ಶ್ರೀ ಎಲ್.ಆರ್. ಶಿವರಾಮೇಗೌಡ: ಇನ್ನು ಆರೋಗ್ಯ ಇಲಾಖೆಯ ಬಗ್ಗೆ ಒಂದೆರಡು ಮಾತನ್ನು ಹೇಳಬಯಸುತ್ತೇನೆ. ಇವತ್ತು ಗ್ರಾಮಾಂತರ ಪ್ರದೇಶದಲ್ಲಿರತಕ್ಕ ಆಸ್ಪತ್ರೆಗಳ ಪರಿಸ್ಥಿತಿ ಯಾವ ಮಟ್ಟದಲ್ಲಿದೆ ಎಂಬ ಬಗ್ಗೆ ಮಾನ್ಯ ಆರೋಗ್ಯ ಮಂತ್ರಿಗಳು ವಿಧಾನ ಪರಿಷತ್ತಿನಲ್ಲಿ ಎಂದು ಹೇಳಿಕೆಯನ್ನುಕೊಟ್ಟಿದ್ದಾರೆ. ಖಾಲಿ ಇರತಕ್ಕ ವೈದ್ಯರ ಹುದ್ದೆಗಳನ್ನು ಶೀಘ್ರವಾಗಿ ತುಂಬುತ್ತೇವೆಂದು ಹೇಳಿದ್ದಾರೆ. ಹಾಗೆ ತುಂಬುವ ಸಂದರ್ಭದಲ್ಲಿ ಗ್ರಾಮಾಂತರ ಪ್ರದೇಶದಲ್ಲೇ ಸೇವೆ ಮಾಡುತ್ತೇವೆ ಎನ್ನತಕ್ಕ ಧೋರಣೆ ಇರತಕ್ಕವರನ್ನು ತೆಗೆದುಕೊಳ್ಳಬೇಕೆಂಬುದು ಬಂದು ನನ್ನ ಒತ್ತಾಯ ಇವತ್ತು ಆಸ್ಪತ್ರೆಗಳಲ್ಲಿ

ನರ್ಸ್‌ಗಳಿಲ್ಲ. ಅದೇ ರೀತಿ ಅವಶ್ಯಕವಾಗಿ ಬೇಕಾದ ಸಿಬ್ಬಂದಿ ಕೂಡ ಇಲ್ಲದೇ ಇರುವುದನ್ನು ನಾವು ನೋಡಿದ್ದೇವೆ. ಅದರ ಬಗ್ಗೆ ಹೆಚ್ಚು ಒತ್ತು ಕೊಡಬೇಕು.

ಇತ್ತೀಚೆಗೆ ಬೆಂಗಳೂರಿನಲ್ಲಿ ಕಿಡ್ನಿ ಹಗರಣ ಬಹಳ ಜೋರಾಗಿ ನಡೆಯಿತು. ಇದು ಬಿ.ಬಿ.ಸಿ.ಯಿಂದ ಕೂಡ ಪ್ರಸಾರವಾಯಿತು. ಬೆಂಗಳೂರು ನಗರದಲ್ಲಿ ತಮಗೆ ಗೊತ್ತಿರುವಂತೆ ಕಳ್ಳತನಗಳು, ಧರೋಡೆಗಳು ನಡೆಯುತ್ತಿದ್ದುವು. ಆದರೆ ಈಗ ಮನುಷ್ಯನ ಅಂಗವನ್ನು ಆಪರೇಷನ್ ಮಾಡಿ ಕಳ್ಳತನವನ್ನು ಮಾಡುವಂಥ ಹೊಸ ದಾಖಲೆಯನ್ನು ಸೃಷ್ಟಿಮಾಡಿದ್ದಾರೆ. ನಾನಾದರೂ ಕೇಳುತ್ತೇನೆ. ಈ ಕಿಡ್ನಿ ಹಗರಣವನ್ನು ಯಾರು ತನಿಖೆ ಮಾಡುತ್ತಿದ್ದಾರೆ ಅವರು ಇವತ್ತು ಈ ಸರ್ಕಾರವನ್ನು ತಪ್ಪುದಾರಿಗೆಳೆಸುತ್ತಿದ್ದಾರೆ. ಇತ್ತೀಚೆಗೆ ಮಾನ್ಯ ಗೃಹಸಚಿವರು ಈ ಸದನದಲ್ಲಿ ಒಂದು ಹೇಳಿಕೆಯನ್ನು ಕೊಡುತ್ತಾ 3 ಜನ ಡಾಕ್ಟರ್‌ಗಳು ಹಾಗೂ ಅದಕ್ಕೆ ಸಂಬಂಧಪಟ್ಟಂತೆ ಇಬ್ಬರು ವ್ಯಕ್ತಿಗಳನ್ನು ನಾವು ಬಂಧಿಸಿದ್ದೇವೆ, ಅವರ ವಿರುದ್ಧ ಕ್ರಮ ತೆಗೆದುಕೊಂಡಿದ್ದೇವೆಂದು ಹೇಳಿದ್ದಾರೆ. ನನಗೆ ತಿಳಿದಮಟ್ಟಿಗೆ ಕಿಡ್ನಿಯಲ್ಲಿ ಎರಡು ವಿಧ. ಕಿಡ್ನಿಯನ್ನು ತೆಗೆಯುವವರು ಒಂದು ಗ್ರೂಪ್ ಆದರೆ, ಆ ಕಿಡ್ನಿಯನ್ನು ಜೋಡಿಸುವವರದ್ದು ಇನ್ನೊಂದು ಗ್ರೂಪ್. ನೀವು ಈ ಕಿಡ್ನಿಯನ್ನು ತೆಗೆಯುತ್ತಿದ್ದವರ ವಿರುದ್ಧ ಕ್ರಮ ತೆಗೆದುಕೊಂಡಿದ್ದೀರಿ. ಆದರೆ ಇಲ್ಲಿಂದ ಅದನ್ನು ತೆಗೆದುಕೊಂಡು ಹೋಗಿ ಹೊರಗಡೆ ಮಾರಾಟ ಮಾಡುತ್ತಿದ್ದವರ ಬಗ್ಗೆ ನೀವು ಒಂದೇ ಒಂದು ಚಕಾರವನ್ನೂ ಎತ್ತಿಲ್ಲ.

**5.50 ಪಿ.ಎಂ**

ಡಾ॥ ಯು.ಚಿತ್ತರಂಜನ್ : ಮಾನ್ಯ ಅಧ್ಯಕ್ಷರೆ, ಕಿಡ್ನಿ ಹಗರಣದ ಬಗ್ಗೆ ನನಗೆ ತಿಳಿದಮಟ್ಟಿಗೆ ಹೇಳಬಯಸುತ್ತೇನೆ. ನಾನು ಕಳೆದ 30 ವರ್ಷಗಳಿಂದ ಡಾಕ್ಟರ್ ಆಗಿದ್ದೇನೆ. ಇವತ್ತಿನ ದಿವಸ ಇದರ ಬಗ್ಗೆ ಪ್ರಚಾರ ತುಂಬ ಜಾಸ್ತಿ ಆಗಿದೆ. ಕಿಡ್ನಿ ಟ್ರಾನ್ಸ್‌ಫ್ಲಾಂಟ್‌ನಲ್ಲಿ ಮೂರು ವಿಧ. 1) ಲೈವ್ ರಿಲೇಟೆಡ್ ಟ್ರಾನ್ಸ್‌ಫ್ಲಾಂಟ್ 2) ಲೈವ್ ಅನ್‌ರಿಲೇಡೆಟ್ ಟ್ರಾನ್ಸ್‌ಫ್ಲಾಂಟ್ ಎಂದರೆ ಒಂದೇ ಸಾರಿ ಎರಡು ಆಪರೇಷನ್ ಥಿಯೇಟರುಗಳಲ್ಲಿ, ಅವನ ರಿಲೇಟೀವ್ ಮೇಲೆ ತಾಯಿ ಇರಬಹುದು, ತಮ್ಮ ಇರಬಹುದು,ತಂಗಿ ಇರಬಹುದು ಹೀಗೆ ಒಬ್ಬರ ಮೇಲೆ ತೆಗೆಯುವುದಕ್ಕೆ ಆಪರೇಷನ್ ಮಾಡುತ್ತಾರೆ, ಒಬ್ಬರ ಮೇಲೆ ಹಾಕಲಿಕ್ಕೆ ಆಪರೇಷನ್ ಮಾಡುತ್ತಾರೆ. ಇದು ಸೈಡ್ ಬೈ ಸೈಡ್ ಆಗಬೇಕಾಗುತ್ತದೆ. ಇದಕ್ಕೆ ಲೈವ್ ರಿಲೇಟೆಡ್ ಟ್ರಾನ್ಸ್‌ಪ್ಲಾಂಟ್ ಎಂದು ಹೆಸರು. 2) ಲೈವ್ ಅನ್‌ರಿಲೇಟೆಡ್ ಟ್ರಾನ್ಸ್‌ಪ್ಲಾಂಟ್ ಅಂದರೆ ಈಗ ಹಗರಣ ಇದಕ್ಕೆ ಸಂಬಂಧಪಟ್ಟದ್ದು. ಅನರಿಲೇಟೆಡ್ ಟ್ರಾನ್ಸ್‌ಪ್ಲಾಂಟ್ ಅಂದರೆ ಆ ವ್ಯಕ್ತಿಗೆ ಯಾರೂ ಸಂಬಂಧಿ ಇಲ್ಲ, ಅವನ ಕಿಡ್ನಿ ತೆಗೆದು ಯಾವುದು ಮ್ಯಾಚ್ ಆಗುತ್ತದೆ ಅಂದರೆ ಬ್ಲಡ್ ಗ್ರೂಪ್‌ಮ್ಯಾಚ್ ಆಗಬೇಕು. ಟಿಷ್ಯೂ ಮ್ಯಾಚ್ ಆಗಬೇಕು. ಇದಾದ ಮೇಲೆ ನಾವು ಟ್ರಾನ್ಸ್‌ಪ್ಲಾಂಟ್ ಮಾಡಬೇಕಾಗುತ್ತದೆ. ಇಲ್ಲಿ ಮಾನ್ಯ ಸದಸ್ಯರು ಒಂದು ವಿಚಾರ ತಿಳಿದುಕೊಳ್ಳಬೇಕು. ಕೆಲವು ನಿಮಿಷಗಳಿಗಿಂತ ಜಾಸ್ತಿ ಅದನ್ನು ಸ್ಟೋರ್ ಮಾಡುವುದಕ್ಕೆ ಆಗುವುದಿಲ್ಲ. ನಮ್ಮ ಭಾರತದಲ್ಲಿ ಆ ವ್ಯವಸ್ಥೆ ಇಲ್ಲ. ಕಾರ್ನಿಯೂ ಕಣ್ಣು ಇದನ್ನು ದಿವಸಗಟ್ಟಲೆ ಸ್ಟೋರ್ ಮಾಡುವ ವ್ಯವಸ್ಥೆ ಭಾರತದಲ್ಲಿ ಇದೆ.

ಆದರ ಕಿಡ್ನಿಯನ್ನು ಆ ರೀತಿ ಸ್ಟೋರ್ ಮಾಡುವುದಕ್ಕೆ ಆಗುವುದಿಲ್ಲ. ಮೂರನೆಯದು ಕೆಡವರ್ ಟ್ರಾನ್ಸ್‌ಪ್ಲಾಂಟ್. ಕೆಡವರ್ ಅಂದರೆ ಹೆಣ. ಹೆಣದಿಂದ ತೆಗೆದದ್ದು ಉಪಯೋಗಕ್ಕೆ ಬರುವುದಿಲ್ಲ. ಮೆಡಿಕಲ್ ಟರ್ಮ್‌ದಲ್ಲಿ ಹೆಣ ಎಂದರೆ ಬ್ರೈನ್ ಡೆತ್-ಇ.ಇ.ಜಿ. This should go at horizontal line ಅದು ನೇರವಾಗಿ ಲೈನ್ ತೋರಿಸಿದರ ಬ್ರೈನ್ ಡೆತ್ ಆಯಿತು ಎಂದು. ಮನುಷ್ಯ ಬದುಕುವುದಕ್ಕೆ ಖಂಡಿತ ಸಾಧ್ಯವಿಲ್ಲ. ಹೇಗೆ ಶ್ವಾಸಕೋಶ ಆಡುತ್ತದೆ, ಹೃದಯ ಆಡುತ್ತದೆ ಎಂದರೆ ವೆಂಟಲೇಟರ್ಸ್ ಇದ್ದಾಗ ಉಪಕರಣಗಳ ಮೇಲೆ ಹೃದಯ ಪುಪ್ಪಸ ಕಿಡ್ನಿ ಮಾಡುವುದಕ್ಕೆ ಆಗುತ್ತದೆ. ಇವತ್ತು ಅಮೇರಿಕ, ಜರ್ಮನ್, ಇಂಗ್ಲೇಡ್‌ಗಳಲ್ಲಿ ಆ ಒಂದು ವ್ಯವಸ್ಥೆ ಇದೆ. ಕೆಡವರ್ ಡೆತ್ ಎಂದರೆ ಬ್ರೈನ್ ಡೆತ್ ಆದ ಕೂಡಲೇ ತಕ್ಷಣ ಅದನ್ನು ತೆಗೆದು ಇನ್ನೊಬ್ಬರಿಗೆ ಟ್ರಾನ್ಸ್‌ಪ್ಲಾಂಟ್ ಮಾಡುವ ವ್ಯವಸ್ಥೆ ಇದೆ. ಈಗ ನಮ್ಮ ದೇಶದಲ್ಲಿ ಯಾರಾದರೂ ವೈದ್ಯರು ಕಿಡ್ನಿ ತೆಗೆದುಕೊಂಡು ಸ್ಟಾಕ್ ಮಾಡಿಟ್ಟುಕೊಂಡು ಇನ್ನೊಬ್ಬನಿಗೆ ಮಾರುತ್ತಾರೆ ಎಂಬ ಇಂಪ್ರೆಷನ್ ಇದ್ದರೆ ಅದು ತಪ್ಪು ಇತ್ತೀಚೆಗೆ ಇದು ಏತಕ್ಕೆ ಜಾಸ್ತಿ ಆಯಿತು ಅಂದರೆ ಡೆಲ್ಲಿಯಲ್ಲಿ ಕೇಂದ್ರಸರ್ಕಾರದಿಂದ ಟ್ರಾನ್ಸ್‌ಪ್ಲಾಂಟ್ ಬಗ್ಗೆ ಮಾಡಿದ ಆ್ಯಕ್ಟ್ ಏನಿದೆ, ಅದನ್ನು ನಾವು ಮೊನ್ನೆ ಅನುಮೋದಿಸಿದ್ದೇವೆ. ತಮಿಳುನಾಡು ಮಹಾರಾಷ್ಟ್ರ ಸರ್ಕಾರಗಳು ಮೊದಲೇ ಇದನ್ನು ಅನುಮೋದಿಸಿದ್ದವು. ಹಾಗಾಗಿ ತಮಿಳುನಾಡು ಮತ್ತು ಮಹಾರಾಷ್ಟ್ರದಲ್ಲಿ ಇದನ್ನು ಮಾರಾಟಮಾಡತಕ್ಕದ್ದು ನಿಂತುಹೋಗಿತ್ತು. ಈವತ್ತು ಬ್ಲಡ್ ಬ್ಯಾಂಕ್‌ಗೆ ಹೋಗಿ ಬ್ಲಡ್ ಕೊಡುತ್ತೇನೆಂದು ಹೇಳಿ ತಮ್ಮ ಹೆಸರು ರಿಜಿಸ್ಟರ್ ಮಾಡಿಸಿಕೊಂಡು ಬಂದಿರುತ್ತಾರೆ. ಅವರಿಂದ ಬ್ಲಡ್ ತೆಗೆದುಕೊಂಡು 50 ರೂಪಾಯಿ ಕೊಡುತ್ತಾರೆ, ಹಾಗೆಯೇ ತಮಿಳುನಾಡಿನಿಂದ ಜನ ಬಂದು ಕರ್ನಾಟಕದಲ್ಲಿ ಹೆಸರು ರಿಜಿಸ್ಟರ್ ಮಾಡಿಸುವ ಬಗ್ಗೆ ಪ್ರಾರಂಭ ಮಾಡಿದರು. ಇಲ್ಲಿ ಅವರ ರಷ್ ಜಾಸ್ತಿ ಆಯಿತು. ಕೊನೆಗೆ ಯಾರಿಗೂ ಸಿಗಲಿಲ್ಲ. ಅದುದು ಸುಳ್ಳು ಎಂದು ಹೇಳುತ್ತಿಲ್ಲ. ಆದರೆ ಈ ರೀತಿ ಎಕ್ಸಾಗರೇಷನ್ ಮಾಡುವುದು ಸರಿಯಲ್ಲ. ಈರೀತಿ ಅವರು ಆ ಪೇಷಂಟ್ ಹೆಸರು ಗುರುತು ಮಾಡಿಕೊಂಡು ಆ ಡೋನರ್ ಇರುವ ಸಮಯದ ಈ ಕಿಡ್ನಿ ಯಾರದ್ದು ಫೈಲ್ ಅಗಿ ಅವನನ್ನು ಇರಿಸಿಕೊಂಡಿದ್ದರು, ಅವನಿಗೆ ಇಲ್ಲಿಗೆ ಟ್ರಾನ್ಸ್‌ಪ್ಲಾಟ್ ಮಾಡುವುದಕ್ಕೆ ಆಗುತ್ತದೆಯೇ ಹೊರತು, ಸ್ಟಾಕ್ ಮಾಡಿ ಇಟ್ಟುಕೊಂಡು ಟ್ರಾನ್ಸ್ ಪ್ಲಾಂಟ್ ಮಾಡುವುದಕ್ಕೆ ಆಗುವುದಿಲ್ಲ. ಇಷ್ಟೆಲ್ಲಾ ಘಟನೆ ಆದಮೇಲೆ ಮೊನ್ನೆ ಸಚಿವರು ಕೇವಲ ಐದು ಕೇಸುಗಳನ್ನು ದಾಖಲು ಮಾಡಿದ್ದೇವೆ ಎಂದು ಉತ್ತರ ಕೊಟ್ಟರು ಇವತ್ತು ಬ್ಲಾಕ್‌ಮೈಲ್ ಮಾಡುವುದಕ್ಕೆ ಅನೇಕರು ಹೊರಟಿದ್ದಾರೆ. ವೈದ್ಯರು ಎಲ್ಲರೂ ಒಳ್ಳೆಯವರೆಂದು ಹೇಳುತ್ತಿಲ್ಲ. ಅವರಲ್ಲಿ ಸಾಕಷ್ಟು ಜನ ಕೆಟ್ಟವರಿದ್ದಾರೆ. ಇವತ್ತಿನ ದಿವಸ ನಮ್ಮ ಅನೇಕ ಹಳ್ಳಿಗಳಲ್ಲಿ ಅವಶ್ಯಕವಾಗಿ ಬೇಕಾದ ಅರ್ಡಿನರಿ ಗ್ಲೂಕೋಸ್ ಇಲ್ಲದೆ ಒಂದೊಂದು ಹಳ್ಳಿಯಲ್ಲಿ ಒಬ್ಬೊಬ್ಬರೂ ಸಾಯುತ್ತಿದ್ದಾರೆ. ಅದರ ಬಗ್ಗೆ ಸರ್ಕಾರ ವಿಶೇಷ ಲಕ್ಷ್ಯ ಹರಿಸಬೇಕು. ಅದರ ಬಗ್ಗೆ ಸರ್ಕಾರ ಲಕ್ಷ್ಯ ಹರಿಸಿ ಕೇಂದ್ರದ ಶಾಸನವನ್ನು ಅನುಮೋದಿಸಿದೆ. ಸರಿಯಾದ ಕ್ರಮವನ್ನು ಸರ್ಕಾರ ಮಾಡಿದೆ. ಹಾಗಾಗಿ

ಲೈನ್ ಅನರಿಲೇಟೆಡ್ ಟ್ರಾನ್ಸ್‌ಪ್ಲಾಂಟ್ ಏನು ಇದೆ ಅದರ ಮೇಲೆ ಚೆಕ್ ಮಾಡುವುದಕ್ಕೆ ಆಯಿತು. ಚೆಕ್ ಮಾಡುವುದು ಬಹಳ ಒಳ್ಳೆಯ ಕೆಲಸವಾಗಿದೆ, ಇದರ ಬಗ್ಗೆ ಸರ್ಕಾರಕ್ಕೆ ನಾನು ಒಂದು ಸಲಹೆ ಕೊಡುವುದಕ್ಕೆ ಇಷ್ಟಪಡುತ್ತೇನೆ. ನರ್ಸಿಂಗ್ ಹೋಂ ಕಾಯಿದೆಯನ್ನು ಸರ್ಕಾರ ಪುನರ್‌ಪರಿಶೀಲನೆ ಮಾಡುವುದಾಗಿ ರಾಜ್ಯ ಪಾಲರ ಭಾಷಣದಲ್ಲಿ ಹೇಳಿದ್ದಾರೆ. ಆ ಸಂದರ್ಭದಲ್ಲಿ ಇದರ ಬಗ್ಗೆ ವ್ಯಾಪಕವಾಗಿ ಚರ್ಚೆ ಆಗಬೇಕು ಅಡ್‌ಮಿನಿಸ್ಟ್ರೇಟರ್ ಮತ್ತು ಆ ಸಂದರ್ಭದಲ್ಲಿ ಇದರ ಬಗ್ಗೆ ನನಗೆ ಗೌರವ ಇದೆ. ಇದರ ಬಗ್ಗೆ ಸಾಕಷ್ಟು ನುರಿತ ತಜ್ಞರಿಂದ ಮಾಹಿತಿ ಪಡೆದು ಖಾಸಗಿ ಆಸ್ಪತ್ರೆಗಳಲ್ಲಿ ಪ್ರೈವೇಟ್ ಪೇಷೆಂಟುಗಳಿಗೆ ಪುಕ್ಕಟೆ ಔಷಧಿ ಕೊಡಬೇಕು. ವೈದ್ಯರ ಕೆಲಸ ಏನು? ವೈದ್ಯರು ಮನಸ್ಸು ಮಾಡದೆ ರೋಗಿಗೆ ಟ್ರೀಟ್‌ಮೆಂಟ್ ಮಾಡುವುದಕ್ಕೆ ಆಗುವುದಿಲ್ಲವೆಂದು ಹೇಳಿ ಈ ಸಂದರ್ಭದಲ್ಲಿ ನನಗೆ ಇಷ್ಟು ಹೇಳಲಿಕ್ಕೆ ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

ಶ್ರೀ ಜೆ.ಹೆಚ್.ಪಾಟೇಲ್ : ಅವರ ಸಲಹೆ ಬಹಳ ಉಪಯುಕ್ತವಾಗಿದೆ. ನಾನು ಡಾಕ್ಟರ್ ಅಲ್ಲದಿದ್ದರೂ ಕೆಲವು ವಿಷಯಗಳನ್ನು ಕೇಳಿ ತಿಳಿದುಕೊಂಡಿದ್ದೆ. ಹೀಗೆ ಕಿಡ್ನಿಯನ್ನು ಕಳ್ಳತನ ಮಾಡುವುದಕ್ಕೆ ಬರುವುದಿಲ್ಲ ಎಂದು. ಆ ಮೇಲೆ ಡಾಕ್ಟರುಗಳು ಹೇಳಿದರು. ಇದು ಎಲ್ಲಿ ಹುಟ್ಟಿದೆ ಎಂದರೆ ನಡುವೆ ಮಧ್ಯಸ್ಥಿಕೆದಾರರು ಯಾರದೋ ಕಿಡ್ನಿ, ಅವನ ಬ್ಲಡ್‌ಗ್ರೂಪ್ ತಿಳಿದುಕೊಳ್ಳುವುದು ಅವನು ತಮಿಳುನಾಡಿನವನು. ಇಲ್ಲಿಗೆ ಬಂದು ಅವನು ಯಾರಿಗೆ ಟ್ರಾನ್ಸ್‌ಪ್ಲಾಂಟ್ ಆಗಿದೆ ಎಂಬುದು ಗೊತ್ತಿಲ್ಲದೆ ಹಾಗೆಯೇ ಆಗಿರುತ್ತದೆ ಅದು ಈ ರೀತಿ ನರ್ಸಿಂಗ್ ಹೋಂಗಳಲ್ಲಿ ವ್ಯಾಪಾರ ಮಾಡಿಕೊಂಡು ಮಧ್ಯವರ್ತಿಗಳು ದುಡ್ಡು ಹೊಡೆದು ಕಿಡ್ನಿ ಹೋಗಿರುವುದು ನಿಜ. ಈ ಸಂದರ್ಭದಲ್ಲಿ ಮಾನ್ಯ ಸದಸ್ಯರು ಕೊಟ್ಟ ಸಲಹೆ ಬಹಳ ಉತ್ತಮವಾಗಿದೆ.

ಡಾ.ಮಹೇಶ್ ಚಂದ್ರ : ಸಾಮಾನ್ಯ ಜನರಲ್ಲಿ ಏನು ಭಾವನೆ ಇದೆ ಎಂದರೆ ಕಿಡ್ನಿಗಳ ಬಗ್ಗೆ ಅಂದರೆ ಕಿಡ್ನಿಗಳ ಟೆಸ್ಟೀಸ್ ಎಂದು ಭಾವಿಸಿ ಕೊಂಡಿರುತ್ತಾರೆ. ಅದನ್ನು ತೆಗೆದು ಬೇರೆ ಸೀಸೆಯಲ್ಲಿ ಹಾಕಿ ಬೇರೆ ದೇಶಕ್ಕೆ ರವಾನೆ ಮಾಡುತ್ತಾರೆ ಎಂಬ ಭಾವನೆ ಇದೆ. ಕಿಡ್ನಿ ಟ್ರಾನ್ಸ್‌ಪ್ಲಾಂಟ್ ಮಾಡುತ್ತಾರೆ ಎಂದರೆ ಇವತ್ತು ಮುಟ್ಟಿಕೊಂಡು ನೋಡತಕ್ಕ ಪರಿಸ್ಥಿತಿ ಇದೆ. ಮಾನ್ಯ ಸದಸ್ಯರಾದ ಡಾಕ್ಟರು ಏನು ಹೇಳಿದ್ದಾರೆ ಆ ರೀತಿ ತೆಗೆದುಕೊಳ್ಳುವವರು ಕೊಡುವವರು ಜೊತೆಗೆ ಇದ್ದಾಗ ಮಾತ್ರ ಟ್ರಾನ್ಸ್‌ಪ್ಲಾಂಟ್ ಮಾಡುವುದಕ್ಕೆ ಸಾಧ್ಯ. ಅದನ್ನು ಹಾಗೆ ಸ್ಟೋರ್ ಮಾಡಿಟ್ಟುಕೊಂಡು ಬೇರೆಯವರಿಗೆ ಕೊಡುವುದಕ್ಕೆ ಆಗುವುದಿಲ್ಲ. ಸಾಮಾನ್ಯ ಜನರಲ್ಲಿ ಇವತ್ತು ಕಿಡ್ನಿಯೆಂದರೆ ಟೆಸ್ಟೀಸ್ ಎಂಬ ಭಾವನೆ ಇದೆ. ಆದರೆ ಅದು ಅಲ್ಲವೆಂದು ಹೇಳುತ್ತೇನೆ.

ಶ್ರೀ ಜಿ.ಬಿ.ಶಿವಕುಮಾರ್ : ತಾವು ಅವಕಾಶ ಮಾಡಿಕೊಟ್ಟು ಕೆಲವಂ ಬಲ್ಲವರಿಂದ ಕಲಿತು ವಿಚಾರಗಳನ್ನು ತಿಳಿದುಕೊಳ್ಳುವುದಕ್ಕೆ ಅವಕಾಶವಾಯಿತು. ನಿಜವಾಗಿ ನಾನು ಅವರಿಗೆ ಗೌರವದಿಂದ ಅಭಿನಂದಿಸುತ್ತೇನೆ. ಪ್ರಾಯಶಃ ಈ ರೀತಿ ಚರ್ಚೆ ಬಂದು ತಪ್ಪು ಕಲ್ಪನೆ ದೂರವಾದರೆ ತಮ್ಮ ಜೀವನವನ್ನು ಮುಂದುವರಿಸಿಕೊಂಡು ಹೋಗುವವರಿಗೆ ದಾರಿ ಆಗುತ್ತದೆ. ಇವತ್ತು ಆ ದಿಸೆಯಲ್ಲಿ ಡಾಕ್ಟರ್‌ಗಳು ಬೆಳಕು ಚೆಲ್ಲಿದ್ದಾರೆ. ಅದಕ್ಕಾಗಿ ನಾನು ಅವರಿಗೆ ಮತ್ತೊಮ್ಮೆ ಅಭಿನಂದಿಸುತ್ತೇನೆ.

ಶ್ರೀ ಎಲ್.ಆರ್. ಶಿವರಾಮೇಗೌಡ : ಕಿಡ್ನಿ ತೆಗೆದುಕೊಂಡು ಮಾರಾಟ ಮಾಡಿದ್ದಾರೆ ಎಂಬುದು ನನ್ನ ವಾದ ಅಲ್ಲ. ಕಳೆದ ಒಂದೂವರೆ ವರ್ಷದ ಹಿಂದೆ ಶ್ರೀ ರಾಮಲಿಂಗಾರೆಡ್ಡಿಯವರು ಮತ್ತು ನಾನು ಅವರ ಛೇಂಬರಿನಲ್ಲಿ ಕುಳಿತಿದ್ದೆವು. ಆ ಸಂದರ್ಭದಲ್ಲಿ ನನ್ನ ಕ್ಷೇತ್ರದ ಒಬ್ಬ ಹೆಣ್ಣು ಮಗಳು ಬಂದು ನನ್ನ ಗಂಡನ ಹಾರ್ಟ್ ಆಪರೇಷನ್‌ಗೆ ದುಡ್ಡು ಇಲ್ಲದೆ ಇದ್ದಾಗ ನಮ್ಮ ಕಿಡ್ನಿ ತೆಗೆದುಕೊಂಡು ದುಡ್ಡು ಕೊಡುತ್ತಾರೆಂದು ಎಲ್ಲಮ್ಮ ದಾಸಪ್ಪ ಆಸ್ಪತ್ರೆಯಲ್ಲಿ ರೈಟಿಂಗ್‌ನಲ್ಲಿ ಬರಸಿಕೊಂಡು 30,000 ರೂಪಾಯಿ ಕೊಡುತ್ತೇವೆಂದು ಹೇಳಿ ಕೇವಲ 5000 ರೂಪಾಯಿ ಕೊಟ್ಟು ಓಡಿಸಿಬಿಟ್ಟಿದ್ದಾರೆ. ಆಕೆ ಆ ಮೇಲೆ ಹುಡುಕಿಕೊಂಡು ಬಂದು ಡಾಕ್ಟರ್ ನನಗೆ ಮೋಸ ಮಾಡಿದ್ದಾರೆಂದು ಹೇಳಿದ್ದಕ್ಕೆ ನಾನು ಮತ್ತು ರಾಮಲಿಂಗ ರೆಡ್ಡಿಯವರು ಸೇರಿಕೊಂಡು ಡಾಕ್ಟರನ್ನು ಕರೆಸಿ ಹೇಳುವ ಹೊತ್ತಿಗೆ 15000 ರೂಪಾಯಿ ತಂದು ಇದೇ ವಿಧಾನಸೌಧದಲ್ಲಿ ಕೊಡಿಸಿದ್ದೇನೆ. ನಾನು ಹೇಳುತ್ತಿರುವುದು, ಈ ಒಂದು ದಂಧೆ ಪ್ರಾರಂಭವಾದದ್ದು ಕಿಡ್ನಿಯನ್ನು ಒಬ್ಬರಿಂದ ತೆಗೆದು ಮತ್ತೊಬ್ಬರಿಗೆ ಜೋಡಿಸುವುದರಲ್ಲಿ ದಂಡ ಪ್ರಾರಂಭ ಮಾಡಿ ಬ್ಲಾಕ್‌ಮೈಲ್ ಮಾಡಿದ್ದಾರೆ, ಕೆಲವರಿಗೆ ಮೋಸ ಮಾಡಿದ್ದಾರೆ. ಈ ಮೋಸದ ಹಿಂದೆ ತೆಗೆದಿರುವವರನ್ನು ಹಿಡಿದಿದ್ದಾರೆಯೇ ಹೊರತು ಜೋಡಿಸುವುದಕ್ಕೆ ಪ್ರಯತ್ನ ಪಟ್ಟವರನ್ನು ಹಿಡಿದಿಲ್ಲ. ಇವತ್ತು ವೈದ್ಯರುಗಳಲ್ಲಿ ಸಂಶಯ ಬರುತ್ತದೆ. ಇವತ್ತು ಎಲ್ಲಾ ವೈದ್ಯರು ಮಾತನಾಡುತ್ತಾರೆ ಇವತ್ತು ನೀವು ಏನು - ಕ್ರಮ ತೆಗೆದುಕೊಂಡಿದ್ದೀರಿ ಅವರು ಇನ್ನೋಸೆಂಟ್ ಎಂದು ಎಲ್ಲರೂ ಹೇಳುತ್ತಾರೆ. ಆದರೆ ಯಾರು ಕ್ರಿಮಿನಲ್ ಇದ್ದಾನೆ ಅವನ ಮೇಲೆ ನೀವು ಕ್ರಮ ತೆಗೆದುಕೊಂಡಿಲ್ಲವೆಂದು ಜನರು ಮಾತನಾಡುತ್ತಾರೆ. ಇವತ್ತು ವೈದ್ಯರು ಮಾತನಾಡುತ್ತಾರೆ. ಯಾರು ಮಹಾರಾಷ್ಟ್ರದ ವ್ಯಕ್ತಿ ಬೆಂಗಳೂರಿನಲ್ಲಿ ಕುಳಿತು ಈ ದಂಧೆ ಶುರುಮಾಡುವ ಅವನನ್ನು ಮಹಾರಾಷ್ಟ್ರ ಮೆಡಿಕಲ್ ಕೌನ್ಸಿಲ್‌ನಲ್ಲಿ ಅವರ ಮೆಂಬರ್‌ಶಿಫ್‌ನ್ನು ರದ್ದು ಮಾಡುತ್ತಾರೆ. ಆದರೆ ಬೆಂಗಳೂರು ಮೆಡಿಕಲ್ ಕೌನ್ಸಿಲ್‌ನಲ್ಲಿ ನೀವು ಅವನ ಮೆಂಬರ್‌ಶಿಫ್‌ನ್ನು ರದ್ದು ಮಾಡತಕ್ಕ ಕೆಲಸ ಮಾಡಲಿಲ್ಲ. ಅವರ ಬಗ್ಗೆ ನಿಗಾವಹಿಸಿ ಇನ್ನೂ ಯಾರು ಯಾರು ಇದ್ದಾರೆ ಈ ಜಾಲದ ಹಿಂದೆ ಎಂಬುದನ್ನು ಸಂಪೂರ್ಣವಾಗಿ ತನಿಖೆ ಮಾಡಿ ಅವರನ್ನು ಶಿಕ್ಷೆಗೆ ಒಳಪಡಿಸಬೇಕೆಂಬುದು ಬಿಟ್ಟರೆ ಈ ಕಿಡ್ನಿ ತೆಗೆದುಕೊಂಡು ಎಲ್ಲೋ ಮಾರಾಟ ಮಾಡುತ್ತಾರೆ ಎಂಬುದು ನನಗೆ ಗೊತ್ತಿಲ್ಲ. ನನಗೆ ಗೊತ್ತಿರತಕ್ಕ ವಿಚಾರವನ್ನು ಸಂಕ್ಷಿಪ್ತವಾಗಿ ಹೇಳಿದ್ದೇನೆ. ಇವತ್ತು ಎಜ್ಯುಕೇಷನ್ ಬಗ್ಗೆ ಮಾನ್ಯ ನಂಜೇಗೌಡರು ಬಹಳ ಚೆನ್ನಾಗಿ ಹೇಳಿದರು. ನನ್ನ ತಾಲ್ಲೂಕಿನಲ್ಲಿ ಜೋಗಾಧಿ ಎಂಬ ಗ್ರಾಮ ಇದೆ. ಆ ಜೋಗಾಧಿಯಲ್ಲಿ ಇವತ್ತು ಒಂದು ಜೂನಿಯರ್ ಕಾಲೇಜು ಇದೆ. ಅಲ್ಲಿ ಕಳೆದ ನಾಲ್ಕು ವರ್ಷಗಳಿಂದ ಕೆಮಿಸ್ಟ್ರಿ ಲೆಕ್ಚರರ್ ಪೋಸ್ಟ್‌ಗೆ ಯಾರೊಬ್ಬರೂ ಕೂಡ ಹೋಗಲಿಲ್ಲ. ನಾಗಮಂಗಲ ತಾಲ್ಲೂಕು ತಮಗೆ ಗೊತ್ತಿದೆ. ಅದು ಬಹಳ ಬೆಂಗಾಡು. ಅಲ್ಲಿ ಒಬ್ಬ ಎಕನಾಮಿಕ್ಸ್ ಲೆಕ್ಚರರ್ ಮೂರು ವರ್ಷದಿಂದ ಇಲ್ಲ. ನಾನು ಎಷ್ಟು

ಕಾಗದ ಕೊಟ್ಟರೂ ಹಾಕುವುದಕ್ಕೆ ಆಗಲಿಲ್ಲ. ಬೆಳ್ಳೂರು ಜೂನಿಯರ್ ಕಾಲೇಜಿನಲ್ಲಿ ಒಬ್ಬ ಇಂಗ್ಲೀಷ್ ಲೆಕ್ಚರನ್ನು ಹಾಕಿಸುವುದಕ್ಕೆ ಆಗಲಿಲ್ಲ. ಇವತ್ತು ಬಹಳ ಕಷ್ಟದಿಂದ ಓದುತ್ತಿರತಕ್ಕ ಬಡ ಬೋರೇಗೌಡರ ಮಕ್ಕಳು ಬೆಂಗಳೂರಿನಲ್ಲಿ ಇರತಕ್ಕ ಬಿಷಪ್‌ಕಾಟನ್ ಆಗಲಿ ಬೆಂಗಳೂರಿನಲ್ಲಿರತಕ್ಕ ಸೋಫಿಯ ಆಗಲಿ ಬೆಂಗಳೂರಿನಲ್ಲಿ ಇರತಕ್ಕ ಪೂರ್ಣಪ್ರಜ್ಞ ಆಗಲಿ ಎಲ್ಲಾ ವ್ಯವಸ್ಥೆಯನ್ನೊಳಗೊಂಡಿರತಕ್ಕ ಈ ನಗರದ ಶಾಲೆಗಳಲ್ಲಿ ಓದಿದ ಮಕ್ಕಳ ಜೊತೆ ಪೈಪೋಟಿ ಮಾಡಬೇಕಾದರೆ ಬಹಳ ಕಷ್ಟ ಇದೆ. ಮಾನ್ಯ ನಂಜೇಗೌಡರು ಏನು ಹೇಳಿದರು ಅದಕ್ಕೆ ನಾನೂ ಸಹ ಅವರ ಮಾತನ್ನು ಬೆಂಗಲಿಸುತ್ತೇನೆ. ಮಾನ್ಯ ಸಭಾನಾಯಕರಾದ ಮುಖ್ಯಮಂತ್ರಿಗಳು ಸಹ ಒಂದು ಹೊಸ ಬಿಲ್ ತರುತ್ತೇವೆ ಎಂದು ಹೇಳಿರತಕ್ಕಂತಹ ಮಾತನ್ನು ನಾನು ಈ ಸಂದರ್ಭದಲ್ಲಿ ಸ್ವಾಗತಿಸಿ ಬಂದ ಬೋರೇಗೌಡರ ಮಕ್ಕಳು, ಗ್ರಾಮಾಂತರ ಪ್ರದೇಶದ ಮಕ್ಕಳು ಶ್ರೀಮಂತ ವರ್ಗದ ಮಕ್ಕಳ ಜೊತೆ ನಗರದಲ್ಲಿ ವಿದ್ಯಾಭ್ಯಾಸ ಮಾಡಿದ ಮಕ್ಕಳ ಜೊತೆಯಲ್ಲಿ ಪೈಪೋಟಿ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಹೇಳುತ್ತೇನೆ.ಇನ್ನು ಎರಡು ವಿಚಾರ ಇದೆ. ಎರಡೇ ವಿಚಾರ. ನನ್ನ ಸಮಯವೆಲ್ಲಾ ಅವರು ತೆಗೆದುಕೊಂಡು ಬಿಟ್ಟಿದ್ದಾರೆ.

ಅಧ್ಯಕ್ಷರು : ಮತ್ತೆ ಮುಂದಕ್ಕೆ ಎಷ್ಟು ಅವಕಾಶಗಳಿವೆ. ನೀವು ಮಾತನಾಡದೇ ಹೋದರೆ ಇನ್ನು ಯಾರು ಮಾತನಾಡುತ್ತಾರೆ.

ಶ್ರೀ ಎಲ್.ಆರ್.ಶಿವರಾಮೇಗೌಡ : ಮಾತನಾಡುವುದಕ್ಕೆ ತಾವು ಕರೆದಿರಿ. ಆದರೆ ನನಗೆ ಗಂಟಲು ಚೆನ್ನಾಗಿರಲಿಲ್ಲ.

ಅಧ್ಯಕ್ಷರು : ನನಗೇನೂ ಇಲ್ಲ. ನಿಮಗೆ ಮೊದಲೇ ಗಂಟಲು ತೊಂದರೆ ಯಾಗಿದೆ.

ಶ್ರೀ ಎಲ್.ಆರ್.ಶಿವರಾಮೇಗೌಡ : ಇಲ್ಲ, ಇಲ್ಲ. ಇನ್ನು 5 ನಿಮಿಷದಲ್ಲಿ ಮುಗಿಸುತ್ತೇನೆ.

ಅಧ್ಯಕ್ಷರು : ನಿಮ್ಮ ಆರೋಗ್ಯದ ದೃಷ್ಟಿಯಿಂದ ಹೇಳುತ್ತಿದ್ದೇನೆ.

ಶ್ರೀ ಎಲ್.ಆರ್.ಶಿವರಾಮೇಗೌಡ : ನನಗೆ ಆಗುತ್ತಿಲ್ಲ.

ಅಧ್ಯಕ್ಷರು : ಅದಕ್ಕೇ ಪ್ರಯಾಸ ಪಟ್ಟುಕೊಂಡು ಏತಕ್ಕೆ ಮಾತನಾಡುತ್ತೀರಿ?

ಶ್ರೀ ಎಲ್.ಆರ್.ಶಿವರಾಮೇಗೌಡ : ಎರಡು ವಿಚಾರದಲ್ಲಿ ಮಾತ್ರ ಮಾತನಾಡುತ್ತೇನೆ. ಮಾನ್ಯ ಅಬ್ಕಾರಿ ಸಚಿವರು ಇಲ್ಲೇ ಇದ್ದಾರೆ ಸ್ವಾಮಿ.

ಶ್ರೀ ವಾಟಾಳ್ ನಾಗರಾಜ್ : ಒಂದು ನಿಮಿಷ ದಯವಿಟ್ಟು. ಮಾನ್ಯ ಅಧ್ಯಕ್ಷರು ಎಷ್ಟು ಪ್ರೀತಿಯಿಂದ ನಿಮ್ಮ ಆರೋಗ್ಯದ ಬಗ್ಗೆ ಮಾತನಾಡಿದ್ದಾರೆ. ಆದ್ದರಿಂದ ಮುಂದಕ್ಕೆ ಮಾತನಾಡಬಾರದು.

ಶ್ರೀ ಎಲ್.ಆರ್.ಶಿವರಾಮೇಗೌಡ : ಸನ್ಮಾನ್ಯ ಸಭಾಧ್ಯಕ್ಷರೇ, ವೀರೇಂದ್ರಪಾಟೀಲರ ಸರ್ಕಾರದಲ್ಲಿ ರಾಜಶೇಖರ ಮೂರ್ತಿಯವರನ್ನು ಅಬ್ಕಾರಿ

ಸಚಿವರನ್ನಾಗಿ ಮಾಡಿದ್ದರು. ಬಂಗಾರಪ್ಪನವರ ಕಾಲದಲ್ಲಿ ಶಿವಮೂರ್ತಿ ಮತ್ತು ಧರ್ಮಸಿಂಗ್ ಅವರನ್ನು ಅಬ್ಕಾರಿ ಸಚಿವರನ್ನಾಗಿ ಮಾಡಿದ್ದರು. ಮೊಯಿಲಿಯವರ ಸರ್ಕಾರದಲ್ಲಿ ನಮ್ಮ ಪಕ್ಕದಲ್ಲೇ ಕುಳಿತುಕೊಳ್ಳತಕ್ಕ ರಮಾನಾಥ ರೈ ಅವರನ್ನು ಅಬ್ಕಾರಿ ಸಚಿವರನ್ನಾಗಿ ಮಾಡಿದ್ದರು. ನಮ್ಮ ದೇವೇಗೌಡರ ಕಾಲದಲ್ಲಿ ತಿಪ್ಪೇಸ್ವಾಮಿಯುವರನ್ನು ಅಬ್ಕಾರಿ ಸಚಿವರನ್ನಾಗಿ ಮಾಡಿದ್ದಾರೆ ಸ್ವಾಮಿ. ನಾನು ಮಾನ್ಯ ಮುಖ್ಯಮಂತ್ರಿಗಳಲ್ಲಿ ಒಂದು ವಿನಂತಿ ಮಾಡುತ್ತೇನೆ. ನಾನು ಬೇರೆ ಇಲಾಖೆ ಗೋಜಿಗೆ ಹೋಗುವುದಿಲ್ಲ. ಈ ಒಂದು ಇಲಾಖೆ ರಾಜ್ಯದಲ್ಲಿ ಎರಡನೇ ವರಮಾನ ಕೊಡತಕ್ಕ ಇಲಾಖೆ. ಸುಮಾರು 700 ಕೋಟಿ ರೂಪಾಯಿ ವರಮಾನ ಕೊಡತಕ್ಕ ಇಲಾಖೆ. ಈ ಇಲಾಖೆಗೆ ಕಾಯಕಲ್ಪ ಆಗಬೇಕು. ಅಷ್ಟೊಂದು ರೆವಿನ್ಯೂ ಕೊಡತಕ್ಕ ಇಲಾಖೆಗೆ ಸಹಕಾರವನ್ನು ಕೊಡತಕ್ಕ ವ್ಯವಸ್ಥೆ ಈ ಸರ್ಕಾರದಲ್ಲಿ ಆಗಬೇಕು. ನಾನು ಕೇಳುತ್ತೇನೆ ಸ್ವಾಮಿ ಎಲ್ಲಾ ಮುಖ್ಯಮಂತ್ರಿಗಳೂ ಸಹ ವಿಸ್ಕಿ ರುಚಿ ನೋಡದಿರುವಂಥವರನ್ನು ಮಂತ್ರಿಯನ್ನಾಗಿ ಮಾಡುತ್ತಾರೆ. ನಾನು ತಿಪ್ಪೇಸ್ವಾಮಿಯುವರನ್ನು ಕೇಳಿದೆ. ತಿಪ್ಪೇಸ್ವಾಮಿಯುವರೇ ನಿಮಗೇನಾದರೂ ವಿಸ್ಕಿರುಚಿ ಗೊತ್ತೇ ಎಂದು. ನನಗೆ ಗೊತ್ತಿಲ್ಲ ಎಂದು ಹೇಳಿದರು. ಹಾಗೇ ರಾಜಶೇಖರ ಮೂರ್ತಿಯುವರಿಗೂ ಗೊತ್ತಿಲ್ಲ. ಹಿಂದೆ ರಾಜಶೇಖರ ಮೂರ್ತಿಯುವರು ಮಂತ್ರಿಗಳಾಗಿದ್ದಾಗ ಉನ್ನತ ದರ್ಜೆ ಹೋಟೆಲ್‌ಗಳಿಗೆಲ್ಲಾ 50 ಪರ್ಸೆಂಟ್ ಟ್ಯಾಕ್ಸ್ ಹಾಕಿದರು. ಯಾರು ಹೋಗಿ ವಿಸ್ಕಿ ಕುಡಿದರೂ ಜೇಬಲ್ಲಿ ದುಡ್ಡು ನೋಡಿಕೊಂಡು ಕುಡಿಯುವಂಥ ಪರಿಸ್ಥಿತಿ ಬಂದು ಹೋಯಿತು. ಕುಡಿಯುವುದು ಕಲಿತಿದ್ದರೆ ಅದರ ಯೋಗ್ಯತೆ ಏನು ಎಂದು ಗೊತ್ತಿರುತ್ತದೆ. ಆದ್ದರಿಂದ ಕುಡಿಯುವುದನ್ನು ಕಲಿತುಕೊಳ್ಳಬೇಕು. ಕುಡಿಯುವುದಕ್ಕೆ ಪ್ರಾರಂಭ ಮಾಡಲಿ. ಇಲ್ಲದೇ ಹೋದರೆ ಈ ಒಂದು ಇಲಾಖೆಯನ್ನು ಕಾಯಕಲ್ಪ ಮಾಡುವುದು ಬಹಳ ಕಷ್ಟವಾಗುತ್ತದೆ ಸ್ವಾಮಿ. ನಾನು ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ಈ ಒಂದು ಇಲಾಖೆಯಲ್ಲಿ ರೂಲ್5ನ್ನು ತಂದಿದ್ದಾರೆ. ಈ ಒಂದು ಕರಾಳ ಶಾಸನ ಅಬ್ಕಾರಿ ಇಲಾಖೆಯಲ್ಲಿ ಸಾವಿರಾರು ಜನರನ್ನು ಬೀದಿಪಾಲು ಮಾಡಿದೆ ಸ್ವಾಮಿ. ಇವತ್ತು ಇಡೀ ರಾಜ್ಯದಲ್ಲಿ 10500 ಅರ್ರ್ಯಾಕ್ ಷಾಪ್‌ಗಳಿವೆ. ಸಿ.ಎಲ್.1 ಹೋಲ್‌ಸೇಲ್ 380 ಇವೆ. ಸಿಎಲ್ 2 ರೀಟೈಲ್ 3500 ಇವೆ ಸ್ವಾಮಿ. ಇಷ್ಟೆಲ್ಲಾ ಇದ್ದರೂ ಸಹ ಒಂದು ಪರ್ಸೆಂಟ್ ಕಂಪ್ಲೇಂಟ್ ಇರತಕ್ಕದ್ದು. ಕೇವಲ 1 ಪರ್ಸೆಂಟ್ ಕಂಪ್ಲೇಂಟ್ ಇಟ್ಟು ಕೊಂಡು ರೂಲ್ಸ್‌ನ್ನು...

ಶ್ರೀ ಸಿ.ಎಂ.ಉದಾಸಿ : ಸನ್ಮಾನ್ಯ ಅಬ್ಕಾರಿ ಸಚಿವರು ರುಚಿ ನೋಡಿ ಅದರ ಬಗ್ಗೆ ತೀರ್ಮಾನ ಮಾಡಬೇಕು ಎಂದು ಮಾನ್ಯ ಸದಸ್ಯರು ಹೇಳಿದರು. ಹಾಗಾದರೆ ಪಾನ ಸಂಯಮ ಮಂಡಲಿ ಅಧ್ಯಕ್ಷರನ್ನಾಗಿ ಮಾಡಬೇಕಾದರೆ ಸಂಪೂರ್ಣವಾಗಿ ದಿನ ಬೆಳಗಾದರೆ ಕುಡಿಯುವವರನ್ನು ಮಾಡಿದರೆ ಚೆನ್ನಾಗಿರುತ್ತದಲ್ಲವೆ? ಹಾಗೆ ಮಾಡಿದರೆ ಕುಡಿಯುವುದರ ಬಗ್ಗೆ ಹೇಳುವುದಕ್ಕೆ ಅನುಕೂಲವಾಗುತ್ತಯೇ ಏನೋ ಅದರ ಬಗ್ಗೆ ಆಲೋಚನೆ ಮಾಡಿ.

ಶ್ರೀ ಎಲ್.ಆರ್.ಶಿವರಾಮೇಗೌಡ : ತಮ್ಮ ಮಾತು ನಾನು ಒಪ್ಪುತ್ತೇನೆ ಪಾನ ವಿರೋಧ ಮಾಡುವುದಕ್ಕೆ ವಾಟಾಳ್ ನಾಗರಾಜ್‌ರವರು ರೆಡಿ ಇದ್ದಾರೆ, ಮಾಡೋಣ. ಆದರೆ ಈ ಇಲಾಖೆ ರೆವಿನ್ಯೂ ತರತಕ್ಕ ಇಲಾಖೆ. ಆದುದರಿಂದ ಚೆನ್ನಾಗಿರುಚಿ ನೋಡುವವರನ್ನೇ ಮಾಡಬೇಕು. ಸ್ವಾಮಿ, ಒಂದು ಪರ್ಸೆಂಟ್ ಕಂಪ್ಲೇಂಟ್ ಇರತಕ್ಕದ್ದು ಇಲಾಖೆಯಲ್ಲಿ. ನೀವು ಇವತ್ತು ರೂಲ್ 5 ಮಾಡಿ ಅಧಿಕಾರಿಗಳು ಇವತ್ತು ಕಸ್ಟಮರ್‌ಗಳನ್ನು ಅಂಗಡಿ ಮಾಲೀಕರುಗಳನ್ನು ಬ್ಲಾಕ್‌ಮೇಲ್ ಮಾಡುತ್ತಿದ್ದಾರೆ. ಬ್ಲಾಕ್‌ಮೇಲ್ ಮಾಡಿ ಸುಮಾರು ಒಂದೂವರೆ ಸಾವಿರ ಅಂಗಡಿಗಳನ್ನು ಇವತ್ತು ಮುಟ್ಟುಗೋಲು ಮಾಡಿದ್ದಾರೆ. ಅಂಗಡಿಗಳನ್ನು ಇಟ್ಟುಕೊಂಡಿರುವವರು ಶ್ರೀಮಂತರಲ್ಲ. ಒಂದೊಂದು ಅಂಗಡಿ ಇಟ್ಟುಕೊಂಡು ಜೀವನ ಮಾಡುತ್ತಾ ಇದ್ದಂಥವರು. ಇಂಥದ್ದನ್ನು ಮುಟ್ಟುಗೋಲು ಹಾಕಿದ್ದಾರೆ ಅಂಥವರಿಗೆಲ್ಲಾ ಕಡಿವಾಣ ಹಾಕಬೇಕಾಗಿದೆ. ದಯಮಾಡಿ ಸದನದಲ್ಲಿ ಹೇಳಬೇಕು ರೂಲ್ಸ್ 5ನ್ನು ತಿದ್ದುಪಡಿ ಮಾಡುವುದಿಲ್ಲ ಎಂದು ಇವತ್ತು ಉದಾಹರಣೆಗೆ ರೂಲ್ಸ್ 5ರಲ್ಲಿ ಮುಜರಾಯಿ ದೇವಸ್ಥಾನದ ಹತ್ತಿರ ಇರತಕ್ಕದ್ದು ಎಂದು ಹೇಳಿದ್ದೀರಿ. ಮುಂಜರಾಯಿ ದೇವಸ್ಥಾನಕ್ಕೆ 50 ಮೀಟರ್ ಹತ್ತಿರ ಇರತಕ್ಕದ್ದು ಎಂದು ಹೇಳಿದೆ. ತಾವು ಆನಂದರಾವ್ ಸರ್ಕಲ್ ಹತ್ತಿರ ಹೋಗಬೇಕು. ಅದೇ ರಸ್ತೆಯಲ್ಲಿ ಅಣ್ಣಮ್ಮದೇವಿ ದೇವಸ್ಥಾನ ಇದೆ. ಅದು ಮುಜರಾಯಿಗೆ ಸೇರಿಲ್ಲ. ಎಷ್ಟು ಸಾವಿರ ಜನ ಸಾಯಂಕಾಲ ಅಲ್ಲಿ ಹೋಗುತ್ತಾರೆ ನೋಡಿ. ಹಾಗಾದರೆ ಅಣ್ಣಮ್ಮದೇವಿ ದೇವಸ್ಥಾನದ ಪಕ್ಕ ಯಾರು ಬೇಕಾದರೂ ಮದ್ಯ ಕೊಡಬಹುದು ನಿಮ್ಮ ಕಾನೂನು ಪ್ರಕಾರ. ಆದ್ದರಿಂದ ರೂಲ್ಸ್ 5ನಲ್ಲಿ ಸಮಗ್ರವಾಗಿ ಎಲ್ಲಿ ಲೋಪದೋಷ ಇದೆ ಅದನ್ನು ಸರಿಪಡಿಸುತ್ತೇನೆ ಎನ್ನತಕ್ಕ ಮಾತನ್ನು ತಾವು ಹೇಳಬೇಕು. ನೀವು ಹೇಳುವುದಾದರೆ ಈಗಲೇ ಹೇಳಿ. ಹೇಳತಕ್ಕ ಎಲ್ಲ ಶಕ್ತಿ ಬರಬೇಕು ನಿಮಗೆ. ಇರತಕ್ಕ ಲೋಪದೋಷಗಳನ್ನು ತಿದ್ದತಕ್ಕ ಕೆಲಸ ಮಾಡಬೇಕು. ಇವತ್ತು ಹೋಲ್‌ಸೇಲ್‌ಗಳಿಗೆ ರೂಲ್ 5 ಆಡಾಪ್ಟ್ ಮಾಡುತ್ತೀರಿ. ಯಾವ ಕಾರಣಕ್ಕೋಸ್ಕರ ರೂಲ್ 5 ಅಡಾಪ್ಟ್ ಮಾಡುತ್ತೀರಿ ಎಂಬುದನ್ನು ಹೇಳಿ. ಇವತ್ತು ಹೋಲ್‌ಸೇಲ್‌ನಲ್ಲಿ ಕ್ಲೋಸ್ಡ್ ಡೋರ್‌ನಲ್ಲಿ ಬಿಸಿನೆಸ್ ಮಾಡತಕ್ಕದ್ದು. ಉದಾಹರಣೆಗೆ ಕೃಷ್ಣ ಹೋಲ್‌ಸೇಲ್ ಎಂದು ಬೆಂಗಳೂರಿನಲ್ಲಿ ಇದೆ. ಅಲ್ಲಿ ಕೆಲಸ ಮಾಡತಕ್ಕ ನೌಕರರು ನಾಗಮಂಗಲ ತಾಲ್ಲೂಕಿನವರು 25 ಜನ ಬೀದಿಪಾಲಾಗಿದ್ದಾರೆ. ಕೃಷ್ಣ ಹೋಲ್‌ಸೇಲ್ ಪ್ರಾರಂಭ ಆದಮೇಲೆ ಹೋಗಿ ಯಾರೋ ಒಬ್ಬ ಒಂದು ಸ್ಕೂಲ್ ಓಪನ್ ಮಾಡಿದ್ದಾನೆ ಅಲ್ಲಿ. ಇವತ್ತು ಇಂಥದ್ದಕ್ಕೆ ನಿಮ್ಮ ಅಧಿಕಾರಿಗಳು ಬ್ಲಾಕ್‌ಮೇಲ್ ಮಾಡಿ ಹೋಲ್‌ಸೇಲ್ ಷಾಪ್ ಮುಚ್ಚಿಕೊಂಡು ಬಂದಿದ್ದಾರೆ. ಕಳೆದ ಆರು ತಿಂಗಳಿಂದ ನಾಗಮಂಗಲ ತಾಲ್ಲೂಕಿನ 25ಜನ ಬೀದಿಪಾಲಾಗಿದ್ದಾರ ನೌಕರಿಗೆ ಜಾಗ ಇಲ್ಲದೆ. ಆದ್ದರಿಂದ ಇಂಥದ್ದನ್ನು ಸರಿಪಡಿಸಬೇಕು ಎಂಬ ಮಾತನ್ನು ಹೇಳಿ ಸನ್ಮಾನ್ಯ ಸಭಾಧ್ಯಕ್ಷರು ಈಗಾಗಲೇ ನನಗೆ ಸಮಯವನ್ನು ನಿಗದಿ ಮಾಡಿರುವುದರಿಂದ ಕೊನೆಯದಾಗಿ ಒಕ್ಕಲಿಗರ ಸಂಘದ ಬಗ್ಗೆ ಹೇಳುತ್ತೇನೆ. ರಿಜಿಸ್ಟ್ರೇಷನ್ ಆಫ್ ಸೊಸೈಟೀಸ್ ಆಕ್ಟ್ ಪ್ರಕಾರ ಒಕ್ಕಲಿಗರ ಸಂಘ ನೊಂದಾವಣೆಯನ್ನು ಪಡೆದು ಈ ರಾಜ್ಯದಲ್ಲಿ ಇವತ್ತು ಕೆಲಸವನ್ನು ಮಾಡುತ್ತಿದೆ ಸ್ವಾಮಿ, ಇವತ್ತು

ಪತ್ರಿಕೆಯಲ್ಲಿ ಒಕ್ಕಲಿಗರ ಸಂಘ ಕೆ.ಆರ್.ರಸ್ತೆ, ವಿ.ವಿ.ಪುರಂ, ಬೆಂಗಳೂರು ಎನ್ನತಕ್ಕ ಜಾಹಿರಾತು ನೋಡಿದೆ. 20-4-1995ರಿಂದ 24-4-1995ರವರೆಗೆ ಚುನಾವಣೆಗೆ ಸ್ಪರ್ಧೆ ಮಾಡುವುದಕ್ಕೆ ಅರ್ಜಿಯನ್ನು ಕೊಡುತ್ತೇವೆ ಎಂದು ಕೊಟ್ಟಿದ್ದಾರೆ ಸ್ವಾಮಿ. ಇವತ್ತು ಏನಾಗಿದೆಯೆಂದರೆ ಇಡೀ ಒಂದು ಕೋಟಿ ಇರತಕ್ಕ ಸಮುದಾಯ, ಜನ ಏನಿದೆ ಈ ಜನಕ್ಕೆ ಇವತ್ತು ಬ್ಲಾಕ್‌ಮೇಲ್ ಮಾಡುತ್ತಿದ್ದಾರೆ ಒಕ್ಕಲಿಗರ ಸಂಘದಲ್ಲಿರತಕ್ಕ ಕೆಲವು ಮುಖಂಡರುಗಳು. ಕಳೆದ ಅಧಿವೇಶನದಲ್ಲಿ ನಾನು ಮಾತನಾಡುವಾಗ ಸನ್ಮಾನ್ಯ ಉಪಮುಖ್ಯಮಂತ್ರಿಗಳು ಇದರ ಬಗ್ಗೆ ತನಿಖೆ ಮಾಡಿಸುತ್ತೇನೆ ಎಂಬ ಮಾತನ್ನು ಹೇಳಿದ್ದರು. ಆದರೆ ಅದು ಅಲ್ಲಿಗೇ ನಿಂತುಹೋಯಿತು, ತನಿಖೆ ಮಾಡಿಸಲಿಲ್ಲ. ಸುಮಾರು 1 ಲಕ್ಷ 95ಸಾವಿರ ಜನ ಇವತ್ತು ನಾವು ಅಲ್ಲಿ ಮೆಂಬರ್‌ಷಿಪ್ ತೆಗೆದುಕೊಳ್ಳಬೇಕೆಂದು ಮನವಿ ಸಲ್ಲಿಸಿದ್ದಾರೆ ಒಕ್ಕಲಿಗರ ಸಂಘಕ್ಕೆ. ಕೇವಲ 45 ಸಾವಿರ ಜನ ಮೆಂಬರ್‌ಷಿಪ್ ಇಟ್ಟುಕೊಂಡು ಅವರು ಮಾತ್ರ ಬಂದು ಓಟು ಮಾಡುತ್ತಾರೆಯೇ ವಿನಹ ಬೇರೆಯವರು ಬಂದು ಮಾಡುವುದಿಲ್ಲ. ಇದು ರೆವಿನ್ಯೂ ಮಿನಿಸ್ಟರ್ ಕೈಕೆಳಗೆ ಬರುತ್ತದೆ. ಸನ್ಮಾನ್ಯ ಕಂದಾಯ ಸಚಿವರು ಈ ಬಗ್ಗೆ ಗಮನ ಹರಿಸಬೇಕು. ತಾವು ಹೇಳಬೇಕು ಈಗ ಚುನಾವಣೆ ನಡೆಯುತ್ತಿದೆ. 1 ಲಕ್ಷ 95ಸಾವಿರ ಜನ ಅರ್ಜಿ ಹಾಕಿಕೊಂಡು ಇವತ್ತು ಮೆಂಬರ್‌ಷಿಪ್ ಕೇಳುತ್ತಿದ್ದಾರೆ. ನಮಗೆ ಓಟು ಮಾಡುವ ಹಕ್ಕು ಕೊಡಿ, ಇವತ್ತು ಸಮಾಜದಲ್ಲಿ ಈ ಸಂಘ ಬಹಳ ಚೆನ್ನಾಗಿ ಉಳಿಯಬೇಕು ಎಂದು ಕೇಳುತ್ತಿದ್ದಾರೆ. ಅಲ್ಲಿರತಕ್ಕ ಆಡಳಿತ ಮಂಡಳಿಯವರು ಹೊಸಬರಿಗೆ ಅವಕಾಶ ಕೊಟ್ಟರೆ ಈಗಿರುವ ಆಡಳಿತ ಮಂಡಳಿ ಮತ್ತೆ ಬರುವುದಿಲ್ಲ ಎಂದು ಅವಕಾಶ ಕೊಡದೇ ಇರುವುದನ್ನು ನಾವು ನೋಡುತ್ತಿದ್ದೇವೆ. ಸಭಾಧ್ಯಕ್ಷರೇ, ತಮ್ಮ ಮೂಲಕ ನಾನು ಒಂದು ಕೋಟಿ ಜನರ ಪರವಾಗಿ ಕೇಳುತ್ತೇನೆ ಆ ಒಂದು ಚುನಾವಣೆಯನ್ನು ರದ್ದು ಮಾಡಿ ಮೆಂಬರ್‌ಷಿಪ್ ಕೊಡಲಿಕ್ಕೆ ಅವಕಾಶ ಮಾಡಿಕೊಡುವುದಕ್ಕೆ ಸರ್ಕಾರ ಆದೇಶ ಕೊಡಬೇಕು. ಇದಕ್ಕೆ ಕಂದಾಯ ಸಚಿವರು ದಯವಿಟ್ಟು ಈ ಸಂದರ್ಭದಲ್ಲಿ ಉತ್ತರ ಹೇಳಬೇಕೆಂದು ಈ ಸಂದರ್ಭದಲ್ಲಿ ಹೇಳಿ ನನಗೆ ಮಾತನಾಡುವುದಕ್ಕೆ ಅವಕಾಶ ಕೊಟ್ಟಿರತಕ್ಕ ಸಭಾಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ಜೈಹಿಂದ್.

* Sri B.I. Patil( Uchagaon) :- Mr. Speaker Sir, I am grateful to you for giving me this opportunity to speak few words on the Governor's Address. I would like to take this opportunity to highlight some of the important problems and issues pertaining to our area.

Sir, there is acute shortage of power and drinking water in our area. Erratic power supply causing lot of inconvenience and hardship to the farmers in many areas. Therefore, there is necessity to establish a sub-station and replacement of transfarmers to improve electric supply position. In extension areas, electric power connection is

not being given to the residents/ houses coming within the jurisdiction of BUDA Authority . The BUDA authority is giving lot of harassment while issuing NOCs. I think the power of issuing NOCs shold be vested with the Panchayat for power connection to residents comes within the jurisdiction of Panchayats.

Then, there are more than 18% Marathi speaking people in Border dispute area of Belgaum. at present official Boards, bus routes are all written in Kannada. I demand that the Government should direct all concerenced to see that Official Boards, roads, bus routes should display boards in Marathi also. There is a circular issued by Government of India that in Border areas they should display both official language as well minority language. This may be followed by the Official concerned of that area.

Sir, though the Government says that the Law and Order situation is good in the State Idon't feel so because just a few days back the Cauvery Kannada Activists locked the rooms of MES Members in Legislators' Home. Though this incident appeared in the newspapers the Government has not taken steps against them. Police authorities have miserably failed in giving protection. The boundary dispute is being discussed for the last 39 years and the Government has not taken any initiative in soving the boundary dispute.

The Government of Karnataka should compel the central Government to solve this border problem emicably and to give justice to our people living there explained as ordered by the chair.

(Interruptions)

Mr. Speaker : I order not to record......

Sri B.I. Patil . I strongly oppose the thanks giving motion to the governor's Address moved by Sri K.N.Nage Gowda and conclude my speech.

ಶ್ರೀ ಎಂ.ನಾರಾಯಣಸ್ವಾಮಿ(ಬೇತಮಂಗಳ ಕ್ಷೇತ್ರ) : ಸನ್ಮಾನ್ಯ ಸಭಾಧ್ಯಕ್ಷರೆ,
ನಾನು ರಾಜ್ಯಪಾಲರ ಭಾಷಣದ ಮೇಲೆ ಮುಂಡಸಿರುವ ವಂದನಾ ನಿರ್ಣಯವನ್ನು
ಸ್ವಾಗತಿಸುತ್ತಾ ಎರಡು ಮಾತುಗಳನ್ನು ಆಡುವುದಕ್ಕೆ ಬಯಸುತ್ತಾ ಇದ್ದೇನೆ ನಮ್ಮ
ಸರ್ಕಾರ.

ಶ್ರೀ ಎಂ. ನಾರಾಯಣಸ್ವಾಮಿ : ನಮ್ಮ ಸರ್ಕಾರ ಮಣ್ಣಿನ ಮಗನ ಸರ್ಕಾರ.
ನಾವು ಜನತೆಗೆ ಏನು ಮಾತನ್ನು ಕೊಟ್ಟಿದ್ದೇವೇಯೋ, ಆ ಮಾತಿನ ಪ್ರಕಾರ ನಡೆಯುತಕ್ಕ
ಸರ್ಕಾರ ಕೂಡ ಇದಾಗಿದೆ. ಉದಾಹರಣೆಗೆ ನಾವು ಸರ್ಕಾರವನ್ನು ರಚನೆ ಮಾಡಿದ
ಮೇಲೆ, ನಾವು ಜನಗಳಿಗೆ ಸಾಮಾನ್ಯ ಜನರಿಗೆ ಏನೇನು ಭರವಸೆಗಳನ್ನು
ಕೊಟ್ಟಿದ್ದೇವೆಯೋ ಅದನ್ನು ಸಕ್ರಿಯವಾಗಿ ಕೊಡತಕ್ಕಂತಹ ವ್ಯವಸ್ಥೆಯನ್ನು ಮಾಡುವುದರ
ಮೂಲಕವಾಗಿ ಈಗಾಗಲೇ ಒಂದು ಹೆಜ್ಜೆ ಮುಂದಿಟ್ಟಿದ್ದೇವೆ. ಉದಾಹರಣೆಗೆ ನಾವು
ಬಂದ ತಕ್ಷಣ ನಾವು ಪಂಚಾಯಿತಿ ರಾಜ್ ವ್ಯವಸ್ಥೆಗೆ ಒಂದು ಚುನಾವಣಾ
ಭರವಸೆಯನ್ನು ಕೊಟ್ಟಿದ್ದೆವೋ, ಕಾಂಗ್ರೆಸ್ ಸರ್ಕಾರ ಪದೇ. ಪದೇ ತಾಲ್ಲೂಕು ಸಮಿತಿ
ಮತ್ತು ಜಿಲ್ಲಾ ಪಂಚಾಯ್ತಿ ಚುನಾವಣೆಗಳನ್ನು ಮುಂದಕ್ಕೆ ಹಾಕಿಕೊಂಡು
ಬಂದಿದ್ದವೋ, ಆ ಚುನಾವಣೆಗಳನ್ನು ಕೇವಲ ಮೂರು ತಿಂಗಳೊಳಗೆ ಮಾಡಿ, ಜನರಿಗೆ
ಕೊಟ್ಟಿರತಕ್ಕಂತಹ ಮಾತನ್ನು ನಡೆಸಿಕೊಟ್ಟಿದ್ದೇವೆ. ಅದೇ ರೀತಿ ರೈತರಿಗೆ ಬಡ್ಡಿ
ವ್ಯವಸ್ಥೆಯನ್ನು ಯಾರು ಈ ರಾಜ್ಯದ ರೈತ ಸಾಲ ಪಡೆದು ಬೆಳೆ ಮೇಲೆ ಹಾಕಿ,
ಬೆಳೆ ಬರದೆ, ಮಳೆ ಇಲ್ಲದೆ ಒಣಗಿ, ಬಡ್ಡಿ ಮತ್ತು ಅಸಲನ್ನು ಕಟ್ಟುವುದಕ್ಕೆ ಯೋಗ್ಯತೆ
ಇರಲಿಲ್ಲವೋ........

ಅಧ್ಯಕ್ಷರು: ಶ್ರೀ ನಾರಾಯಣಸ್ವಾಮಿಯವರೇ, ಎಲ್ಲರೂ ಬಡ್ಡಿಯನ್ನೇ
ಹಿಡಿದುಕೊಂಡಿದ್ದೀರಿ ಬೇರೆ ಏನಾದರೂ ಹೊಸದನ್ನು ಹೇಳಿ. ಅವರು ಕೊಟ್ಟಿದ್ದು
ಆಯಿತು ಇವರು ತೆಗೆದುಕೊಂಡದ್ದು ಆಗಿ ಹೋಯಿತು. ಎಲ್ಲರೂ ಬಡ್ಡಿಯನ್ನೇ
ಹಿಡಿದುಕೊಂಡಿದ್ದಾರೆ.

ಶ್ರೀ ಎಂ.ನಾರಾಯಣಸ್ವಾಮಿ: ಏತಕ್ಕೆ ಈ ಮಾತನ್ನು ಹೇಳುತ್ತಿದ್ದೇನೆಂದರೆ, ನಾವು
ಮಾರ್ಚಿ 31ಕ್ಕೆ ಮತ್ತು ಅಸಲನ್ನು ಕಟ್ಟುವುದಕ್ಕೆ ಏನು ಅವಕಾಶ ಕೊಟ್ಟಿದ್ದೇವೋ,
ಅದನ್ನು ಇನ್ನೂ 2 ತಿಂಗಳ ಕಾಲ ಹೆಚ್ಚಿಗೆ ಕೊಟ್ಟಿರತಕ್ಕಂತಹ ನಿರ್ಧಾರವನ್ನು ನಮ್ಮ
ಸರ್ಕಾರ ಮಾಡಿದೆ. ಅದಕ್ಕಾಗಿ ನಾವು ಹೇಳಿದ ರೀತಿಯಲ್ಲಿ ನಡೆದಿದ್ದೇವೆ ಎನ್ನುವ
ವಿಷಯವನ್ನು ತಮ್ಮ ಮೂಲಕ ಜನರ ಗಮನಕ್ಕೆ ತರಲಿಕ್ಕೆ ಬಯಸುತ್ತೇನೆ. ಅದೇ ರೀತಿ
ಇವತ್ತು ಮಾನ್ಯ ಮೊಯಿಲಿಯವರು ಇರಬಹುದು, ಶ್ರೀಮಾನ್ ಖರ್ಗೆಯವರು
ಇರಬಹುದು. ಅನೇಕ ಈ ರಾಜ್ಯದ ಬಜೆಟ್ ಮೇಲೆ, ನಾವು ಇಷ್ಟು ದುಡ್ಡು
ಇಟ್ಟಿದ್ದೇವೆ, ಇಷ್ಟು ನಾವು ದುಡ್ಡು ಖರ್ಚು ಮಾಡಿದ್ದೇವೆ, ಎನ್ನತಕ್ಕ ಮಾತನ್ನು
ಹೇಳಿದರು. ಆದರೆ ಬಜೆಟ್ ಪುಸ್ತಕದಲ್ಲಿದ್ದ ತಕ್ಷಣ ಅದು ಜನರಿಗೆ ತಲುಪದಿದ್ದರೆ,
ಬಜೆಟ್ ಪುಸ್ತಕದಲ್ಲಿ ಇಟ್ಟೂ ಏನು ಪ್ರಯೋಜನವಾಗುವುದಿಲ್ಲ. ಕಾರಣ ಅನೇಕ
ವಿಷಯಗಳಲ್ಲಿ ಬಜೆಟ್ ಅನ್ನು ಇಡುತ್ತೇವೆ. ಹೇಳಬೇಕಾಗಿ ಬಂದಾಗ ಅದರ ಅಂಕಿ
ಅಂಶಗಳನ್ನು ಇಡುತ್ತೇವೆಯೇ ಹೊರತು ಪುಸ್ತಕದಲ್ಲಿರುತ್ತದೆ. ಆದರೆ ಸಾಮಾನ್ಯ

ಜನರಿಗಾಗಲಿ, ಅಥವಾ ನಮ್ಮ ಪ್ರತಿಯೊಂದು ಗ್ರಾಮಮಟ್ಟಕ್ಕೆ ತಲುಪದೆ ಬಜೆಟ್‌ನಲ್ಲೇ ಒಂದು ಮನೆಯನ್ನು ಕಟ್ಟಿದ ಹಾಗೆ ಆಗುತ್ತದೆ. ಅಂಕಿ ಅಂಶಗಳನ್ನು ಪುಸ್ತಕದಲ್ಲಿಟ್ಟು,ಬಜೆಟನಲ್ಲಿಟ್ಟು ಖರ್ಚು ಮಾಡಿದ್ದೇವೆ ಎಂದು ಅಂಕಿ ಅಂಶಗಳನ್ನು ಕೊಟ್ಟರೆ ಆ ರೀತಿ ಆಗುತ್ತದೆ ಎನ್ನುವ ಮಾತನ್ನು ಗಮನಕ್ಕೆ ತರಲಿಕ್ಕೆ ಬಯಸುತ್ತೇನೆ. ಜೊತೆಗೆ ಪಿ.ಡಬ್ಲ್ಯು.ಡಿ ಇಲಾಖೆಯಲ್ಲಾಗಲಿ, ಇರಿಗೇಷನ್ ಇಲಾಖೆಯಲ್ಲಾಗಲಿ, ಹಣ ಇಟ್ಟಿದ್ದೇವೆಂದು ಹೇಳಿದ್ದಾರೆ. ಆದರೆ ಅಲ್ಲಿ ನಡೆಯತಕ್ಕ ವ್ಯವಸ್ಥೆ ಏನು ಅಂದರೆ, ಸುಮಾರು 500 ಕೋಟಿ ರೂಪಾಯಿಗಳ ಪೀಸ್ ವರ್ಕ ಎಂದು ಹೇಳಿ ಬಿಲ್ಲುಗಳನ್ನು ಮಾಡಿ ದುಡ್ಡನ್ನು ಹೊಡಿದಿದ್ದಾರೆ. ಅದರ ಮೇಲೆ ವಿಚಾರಣೆಯಾಗಬೇಕು ಎನ್ನತಕ್ಕ ಮಾತನ್ನು ಹೇಳುತ್ತೇನೆ. ಜೊತೆಗೆ ನೀರಾವರಿ ಇಲಾಖೆ ಬಗ್ಗೆ ಹೇಳುವುದಾದರೆ, ಕಾವೇರಿ, ಕೃಷ್ಣ ಯೋಜನೆಗೆ 1,000 ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತೇವೆಂದು ಸನ್ಮಾನ್ಯ ಮುಖ್ಯಮಂತ್ರಿಗಳು ಹೇಳಿದರು. ಅದನ್ನು ನಾನು ಒಪ್ಪುತ್ತೇನೆ. ಕೃಷ್ಣ-ಕಾವೇರಿ ಯೋಜನೆಗಳಿಗೆ 2000 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ. ಆದರೆ ಬರಡು ಜಿಲ್ಲೆಗಳಾಗಿರತಕ್ಕ ಕೋಲಾರ ಜಿಲ್ಲೆ ಆಗಬಹುದು. ಚಿತ್ರದುರ್ಗ ಜಿಲ್ಲೆ ಆಗಬಹುದು. ತುಮಕೂರು ಜಿಲ್ಲೆಯಾಗಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಾಗಬಹುದು. ಈ ಜಿಲ್ಲೆಗಳಿಗೆ ಎಷ್ಟು ಹಣವನ್ನು ಕೊಡುತ್ತೀರೆಂಬುದನ್ನು ಹೇಳಬೇಕು. ಮೇಜರ್ ಇರಿಗೇಷನ್‌ಗೆ ದುಡ್ಡನ್ನು ಕೊಡುವುದಾದರೆ, ಸಣ್ಣ ನೀರಾವರಿಗೆ ಏಕೆ ದುಡ್ಡು ಕೊಡುವುದಿಲ್ಲ? ಅದಕ್ಕೆ ಬರೀ 70 ಕೋಟಿ ಇಟ್ಟಿದ್ದೀರಿ. ಈ ರೀತಿಯ ತಾರತಮ್ಯ ಏಕೆ ಎಂಬುದಾಗಿ ಕೇಳಬಯಸುತ್ತೇನೆ. ಕೋಲಾರ ಜಿಲ್ಲೆಯನ್ನೇ ತೆಗೆದುಕೊಂಡು ಹೇಳುವುದಾದರೆ, ಸುಮಾರು ಸಾವಿರಾರು ಕೆರೆಗಳಿವೆ. ಆ ಕೆರೆಗಳಲ್ಲಿ ಇದ್ದಂತಹ ಸಾವಿರಾರು ಮರಗಳನ್ನು ನಾವು ನೋಡುತ್ತಿದ್ದೆವು. ಸಣ್ಣ ಸಣ್ಣ ಕೆರೆಗಳ ಹತ್ತಿರ ಹೋದರೆ ಅನೇಕ ಮರಗಳನ್ನು ನೋಡಬಹುದಾಗಿತ್ತು. ಗಿಡಗಳು ಇರುತ್ತಿದ್ದವು. ಹೊಂಗೆ ಗಿಡಗಳು ಇರುತ್ತಿದ್ದವು. ಬಹಳ ಸೊಪ್ಪುಸಿಗುತಿತ್ತು. ಒಳ್ಳೆಯ ಸೌದೆಸಿಗುತ್ತಾ ಇತ್ತು. ಆದರೆ ಇವತ್ತು ಯಾವ ರೀತಿ ಆಗಿದೆ.ಎಂದರೆ, ಸೌದೆಗೆ ಕಬ್ಬಿನ ಸೋಗೆಯನ್ನು ಉಪಯೋಗಿಸುತ್ತಿದ್ದಾರೆ. ಒಂದು ಮರ ಸಿಕ್ಕುವುದಿಲ್ಲ. ಒಂದು ಬಳ್ಳಿ ಸಿಕ್ಕುವುದಿಲ್ಲ. ಸೌದೆ ಸಿಕ್ಕುವುದಿಲ್ಲ. ನಮಗೆ ಪರಿಸ್ಥಿತಿ ಏನಾಗಿದೆ ಎಂದರೆ, ಸೌದೆ ಇಲ್ಲದೆ ಇರತಕ್ಕ ಪರಿಸ್ಥಿತಿಯಲ್ಲಿ ಕಬ್ಬಿನ ಸೋಗೆಯನ್ನು ಉರುವಲಾಗಿ ಉಪಯೋಗಿಸತಕ್ಕ ಪರಿಸ್ಥಿತಿ ಬಂದಿದೆ. ಸೀಮೆ ಎಣ್ಣೆ ಕೂಡ ಸರಿಯಾಗಿ ಸಿಕ್ಕುತ್ತಿಲ್ಲ. ನ್ಯಾಯ ಬೆಲೆ ಅಂಗಡಿಗಳಲ್ಲಿ ಸೀಮೆ ಎಣ್ಣೆಯನ್ನು ಮಾರತಕ್ಕ ವ್ಯವಸ್ಥೆಯಲ್ಲಿ ಏನಾಗಿದೆ ಎಂದರೆ, ಬಡವರಿಗೆ ಕೊಡದೆ ಇರತಕ್ಕ ಪರಿಸ್ಥಿತಿ ನಿರ್ಮಾಣವಾಗಿದೆ. ಇಷ್ಟೆಲ್ಲಾ ಆದರೂ ಹೋಗಲಿ ಆದರೆ ವಿದ್ಯುಚ್ಛಕ್ತಿಯೂ ಸರಿಯಾಗಿರುವುದಿಲ್ಲ. ಉದಾಹರಣೆಗೆ ಕೋಲಾರ ಜಿಲ್ಲೆ ಬಗ್ಗೆ ಹೇಳುವುದಾದರೆ, ಪಂಪುಸೆಟ್ಟುಗಳಿಗೆ ಕರೆಂಟ್ ಕೊಡಬೇಕು ಎನ್ನುವ ಮಾತು ಬಂದಾಗ, 400 ಅಡಿ ಕೊರೆದರೂ ಕೊಳವೆ ಬಾವಿ ನೀರು ಸಿಕ್ಕುತ್ತಿಲ್ಲ. ಕುಡಿಯುವ ನೀರಿನ ವ್ಯವಸ್ಥೆಯ

ಬಗ್ಗೆ ಹೇಳುವುದಾದರೆ, 5 ವರ್ಷಗಳಿಂದಲೂ ಈ ಮನೆಯ ಸದಸ್ಯನಾಗಿ ಕೆಲಸ ಮಾಡಿದ್ದೇನೆ. ಕುಡಿಯುವ ನೀರಿಗೆ ತೊಂದರೆ ಇಲ್ಲ. ಹಣವನ್ನು ಬಿಡುಗಡೆ ಮಾಡುತ್ತೇವೆ ಎಂಬ ಹೇಳಿಕೆ ಕೊಟ್ಟುಬಿಡುತ್ತಾರೆ. ಆದರೆ ಒಂದು ತಾಲ್ಲೂಕಿನಲ್ಲಿ 50 ಕೊಳವೆ ಬಾವಿಗಳು ಬೇಕಾಗಿದ್ದರೆ, 5-6 ಕೊಳವೆ ಬಾವಿಗಳನ್ನು ಕೊಡುತ್ತಾರೆ. ವೆಲ್ ಬೋರ್ ಡಿವಿಜನ್‌ನವರು ಬಾವಿಯನ್ನು ಡ್ರಿಲ್ ಮಾಡಿಸುತ್ತಾರೆ. ಅಲ್ಲಿರತಕ್ಕ ಜಿಯಾಲಜಿಸ್ಟ್‌ನ ಯಾರು ಇದ್ದಾರೆ. ಅವರು ಸರಿಯಾಗಿ ಸರ್ವೇ ಮಾಡುವುದಿಲ್ಲ. ಹೋಗಿ ಎಲ್ಲೋ ಒಂದು ಪಾಯಿಂಟ್ ತೋರಿಸುತ್ತಾನೆ. ಅದು ಫೇಲಾಗುತ್ತದೆ. ಈ ರೀತಿ ಒಂದೆರಡು ಕಡೆ ಡ್ರಿಲ್ ಮಾಡಿ ಕೈತೊಳೆದುಕೊಳ್ಳುತ್ತಾರೆ. ಮತ್ತೆ ತೋಡಿದ ಕೊಳವೆ ಬಾವಿಗಳಿಗೆ ಕೈ ಪಂಪನ್ನು ಜೋಡಿಸುವುದಿಲ್ಲ. ಇದರ ಬಗ್ಗೆ ಎಕ್ಸಿಕ್ಯೂಟಿವ್ ಇಂಜಿನೀಯರನ್ನು ಕೇಳಿದರೆ, ನಮಗೆ ಮೆಟೀರಿಯಲ್ಸ್ ಸಪ್ಲೈ ಸರಿಯಾಗಿಲ್ಲ ಎಂದು ಹೇಳುತ್ತಾರೆ. ಅಲ್ಲಿ ಪ್ಲಾಟ್ ಫಾರಂ ಕಟ್ಟಲು ಸಿಮೆಂಟ್ ಸಪ್ಲೈ ಇಲ್ಲ ಎಂದು ಹೇಳುತ್ತಾರೆ. ಉದಾಹರಣೆಗೆ ಹೇಳುವುದಾದರೆ, ಸುಮಾರು ಒಂದು ವರ್ಷದ ಹಿಂದೆ ಹಾಕಿದಂತಹ ಕೊಳವೆ ಬಾವಿಗಳಿಗೆ ಹ್ಯಾಂಡಿ ಪಂಪನ್ನು ಇದುವರವಿಗೂ ಹಾಕಿಲ್ಲ. ಸಿಮೆಂಟ್ ಸಪ್ಲೈ ಇಲ್ಲದೆ ಪ್ಲಾಟ್ ಫಾರಂ ಹಾಗೆಯೇ ಬಿಟ್ಟಿದ್ದಾರೆ. ಸರಬರಾಜು ಮಾಡತಕ್ಕಂತಹ ಪೈಪು ಕೂಡ ಸ್ಟಾಂಡರ್ಡ್ ಆಗಿರುವುದಿಲ್ಲ. ಪೈಪು ಕೊಡತಕ್ಕಂಥದ್ದು ಸಬ್ ಸ್ಟಾಂಡರ್ಡದ್ದು ಇರುತ್ತದೆ. ಮೂರು ಸಾರಿ ಕೈ ಪಂಪನ್ನು ಬದಲಾವಣೆ ಮಾಡಿದರೆ ಅದು ಹಾಳಾಗಿ ಹೋಗುತ್ತದೆ. ಹಿಂದೆ ಜನತಾ ದಳದ ಸರ್ಕಾರ ಇದ್ದಂತಹ ಸಂದರ್ಭದಲ್ಲಿ ಹಾಕಿರತಕ್ಕ ಕೊಳವೆ ಬಾವಿಗಳನ್ನು ರಿಪೇರಿ ಮಾಡದಿರುವುದನ್ನು ನಾವು ನೋಡುತ್ತಿದ್ದೇವೆ. ಆದ ಕಾರಣ ಸರ್ಕಾರ ಆ ಕಡೆ ಗಮನವನ್ನು ಹರಿಸಿ ಕೊಳವೆ ಬಾವಿಗಳನ್ನು ರಿಪೇರಿ ಮಾಡುವಂತಹ ಕೆಲಸವನ್ನು ಮಾಡಬೇಕು. ಕಾವೇರಿ ಮತ್ತು ಕೃಷ್ಣಾ ಯೋಜನೆಗಳನ್ನು 2000ನೇ ಇಸವಿಯೊಳಗೆ ಬಚಾವತ್ ಅವಾರ್ಡ್ ಪ್ರಕಾರ ನಮ್ಮ ಪಾಲಿನ ನೀರನ್ನು ಬಳಸಿಕೊಳ್ಳಬೇಕು. ಅದಕ್ಕಾಗಿ ಹೆಚ್ಚು ಹಣವನ್ನು ಖರ್ಚು ಮಾಡಿ. ಅದಕ್ಕೆ ನಮ್ಮ ತಕರಾರು ಇಲ್ಲ. ಇದೇ ರೀತಿ ಸಣ್ಣ ನೀರಾವರಿ ಬಗ್ಗೆ ಹೇಳುವುದಾದರೆ, ನಮ್ಮ ಜಿಲ್ಲೆಯನ್ನೇ ಉದಾಹರಣೆಯಾಗಿ ಹೇಳುವುದಾದರೆ, ಸಾವಿರಾರು ಸಣ್ಣ ಸಣ್ಣ ಕೆರೆಗಳು ಇವೆ. ಇವುಗಳು 3 ವರ್ಷಕ್ಕೋ - 4 ವರ್ಷಕ್ಕೋ ಒಂದು ಸಾರಿ ತುಂಬುತ್ತವೆ. ಈ ರೀತಿ ತುಂಬಿದಾಗ ಹೆಚ್ಚುವರಿ ನೀರು ಪಕ್ಕದ ರಾಜ್ಯವಾದ ಆಂಧ್ರ ಹಾಗೂ ತಮಿಳುನಾಡು ರಾಜ್ಯಗಳಿಗೆ ಹರಿದು ಹೋಗುತ್ತದೆ. ಈ ಬಗ್ಗೆ ಕಳೆದ 5 ವರ್ಷಗಳಲ್ಲಿ 5 ಸಾರಿ ಪ್ರಶ್ನೆಯನ್ನು ಕೇಳಿದ್ದರೂ ಅಂದು ಇದ್ದಂತಹ ಸರ್ಕಾರ ನನಗೆ ಉತ್ತರವನ್ನು ಒದಗಿಸಲಿಲ್ಲ. ಈ ಕೆರೆಗಳು ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕಿನಲ್ಲಿರಬಹುದು. ಶ್ರೀನಿವಾಸಪುರ ತಾಲ್ಲೂಕಿನಲ್ಲಿ ಇರಬಹುದು. ಮಾಲೂರು ತಾಲ್ಲೂಕಿನಲ್ಲಿ ಇರಬಹುದು. ಚಿಂತಾಮಣಿ ತಾಲ್ಲೂಕಿನಲ್ಲಿ ಇರಬಹುದು. ಹಾಗೂ ಬಾಗೇಪಲ್ಲಿ ತಾಲ್ಲೂಕಿನಲ್ಲಿರಬಹುದು. ಈ ತಾಲ್ಲೂಕುಗಳಲ್ಲಿರತಕ್ಕ ಕೆರೆಗಳು ಮಳೆ ನೀರಿನಿಂದ ತುಂಬುವಂತಹವು. 3-4

ವರ್ಷಗಳಿಗೊಮ್ಮೆ ತುಂಬಿದಾಗ ಅದರಿಂದ ಹೆಚ್ಚುವರಿ ನೀರು ಏನು ಹರಿದು ಹೋಗುತ್ತದೆ, ಅದು ಪಕ್ಕದ ರಾಜ್ಯಗಳಿಗೆ ಹರಿದು ಹೋಗುತ್ತದೆ. ಇದನ್ನು ತಡೆಗಟ್ಟುವ ಸಲುವಾಗಿ ಚಿಕ್ಕ ಚಿಕ್ಕ ಡ್ಯಾಮ್‌ಗಳನ್ನು ಹಾಕಿದಾಗ 50 ಎಕರೆ, 410 ಎಕರೆ, 30 ಎಕರೆ ನೀರಾವರಿ ಯಾಗಬಹುದು. ನನ್ನ ತಾಲ್ಲೂಕಿನಲ್ಲಿ 4 ದೊಡ್ಡ ಕೆರೆಗಳು ಇವೆ. ಅವುಗಳಿಗೆ ಹಣವನ್ನು ಬಿಡುಗಡೆ ಮಾಡಿದ್ದಾರೆಂದರೆ ಆದರಿಂದ ಬಹಳ ಪ್ರಯೋಜನವಾಗುತ್ತದೆ.

**6.20 ಪಿ.ಎಂ**

ರಾಮಸಾಗರ ಆಗಬಹುದು ಮಾರ್ಕಂಡೇಯು ಆಗಬಹುದು ಕಾಮಸಮುದ್ರವಾಗಬಹುದು ನಮ್ಮಲ್ಲಿ ಮೇಜರ್ ಟ್ಯಾಂಕುಗಳು ಇದ್ದರೂ ಅನೇಕ ಸಾರಿ ನೀರು ಹರಿದುಹೋಗುತ್ತದೆ. ನಾನು ಮುಖ್ಯ ಇಂಜಿನಿಯವರನ್ನು ಭೇಟಿ ಮಾಡಿದ್ದೇನೆ ಅವರು ಹೇಳುತ್ತಾರೆ, ಮದ್ರಾಸ್ ರಾಜ್ಯದ ಜೊತೆ ಅಗ್ರಿಮೆಂಟ್ ಮಾಡಿದ್ದೇವೆ, ನಮ್ಮದೇ ರಾಜ್ಯವಾದರೂ ಕೂಡ ನಾವು 19 ಕಿಲೋಮೀಟರ್ ಮಾಡುತ್ತೇವೆಂದು ಹೇಳಿದರು. ಅದಕ್ಕೆ ನಾನು ಗಲಾಟೆ ಮಾಡಿದೆ. ಅದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಸಣ್ಣ ನೀರಾವರಿಗೆ ಹೆಚ್ಚು ಅಧ್ಯತೆಯನ್ನು ಕೊಡಬೇಕು. ಕೃಷ್ಣಾ ಕಾವೇರಿ ಯೋಜನೆಗಳಿಗೆ 2 ಸಾವಿರ ಕೋಟಿ ರೂಪಾಯಿ ಖರ್ಚುಮಾಡಿ. ಆದರೆ ಬಯಲುಪ್ರದೇಶಗಳಿಗೆ ಕಣ್ಣೊರೆಸತಕ್ಕ ಕೆಲಸವಾಗಬಾರದೆಂದು ನಾನು ಹೇಳುತ್ತೇನೆ. ನಮ್ಮದು ಬಯಲು ಸೀಮೆ ಪ್ರದೇಶ ಇದೆ. ಬಯಲುಸೀಮೆಪ್ರದೇಶಗಳಿಗೆ ಹಿಂದಿನ ಸರ್ಕಾರದವರು ಏನು ಮಾಡಿದರು ಅದನ್ನು ಜಾರಿಗೆ ತರಬೇಕು. ಹಳ್ಳಿಗಾಡಿನಿಂದ ಬಂದಿರತಕ್ಕವರಿಗೆ ಮತ್ತು ಪಟ್ಟಣಗಳಲ್ಲಿರತಕ್ಕವರಿಗೆ ಉದ್ಯೋಗ ಮತ್ತು ವಿದ್ಯಾಭ್ಯಾಸದಲ್ಲಿ ಪರ್ಸೆಂಟೇಜ್ ಫಿಕ್ಸ್ ಮಾಡುತ್ತಾರೆ. ಪರ್ಸೆಂಟೇಜ್ ಪ್ರಕಾರ 80-90 ಪರ್ಸೆಂಟ್ ಇದ್ದರೆ ಅವರಿಗೆ ಉದ್ಯೋಗ ಕೊಡುತ್ತಾರೆ. ಗ್ರಾಮಾಂತರಪ್ರದೇಶದಲ್ಲಿ ಓದಿಕೊಂಡು ಬಂದಿರತಕ್ಕ ಮಕ್ಕಳು 50-40ಪರ್ಸೆಂಟ್ ತೆಗೆದುಕೊಂಡಿರುತ್ತಾರೆ ಆದರೆ ಅವರಿಗೆ ಕೆಲಸ ಸಿಗುವುದಿಲ್ಲ. ಯಾವುದೇ ಕಾಲೇಜಿನಲ್ಲಿ ಓದಬೇಕಾದರೆ ವಿದ್ಯಾಸಂಸ್ಥೆಗಳಲ್ಲಿ ಸೀಟು ಸಿಗುವುದಿಲ್ಲ. ಹಳ್ಳಿಯಲ್ಲಿ ಓದತಕ್ಕ ಮಕ್ಕಳಿಗೆ ಯಾವುದೇ ಸವಲತ್ತು ಇಲ್ಲದೆ ಅನೇಕ ಹರಿಜನ-ಗಿರಿಜನರ ಮಕ್ಕಳು ಮತ್ತು ಹಿಂದುಳಿದವರ ಅವರು ಯಾವುದೇ ಜನಾಂಗಕ್ಕೆ ಸೇರಿರಲಿ ಅವರು ಸೌಲಭ್ಯಗಳು ಇಲ್ಲದೆ ಓದುವುದಕ್ಕೆ ವಂಚಿತರಾಗಿ ಹಳ್ಳಿಯಿಂದ ಬಂದಿರತಕ್ಕ ಸಾಮಾನ್ಯ ಪ್ರಜೆಗಳ ಮಕ್ಕಳಿಗೆ ಅವರು ಯಾವುದೇ ಜನತೆ ಇರಲಿ ಅವರಿಗೆ ಎಲ್ಲೂ ಸೀಟು ಮತ್ತು ಉದ್ಯೋಗ ಸಿಗುವುದಿಲ್ಲ. ಬೆಂಗಳೂರುನಗರದಲ್ಲಿ ಕಾನ್ವೆಂಟ್ ಶಾಲೆಗಳಿಗೆ ಸೇರಿಕೊಂಡು 90 ಪರ್ಸೆಂಟ್ ಅಂಕಗಳನ್ನು ಪಡೆದಿರುತ್ತಾರೆ. ಅಂತಹವರ ಜೊತೆ ಹಳ್ಳಿಯಲ್ಲಿ ಓದಿದ ಮಕ್ಕಳು 35ಪರ್ಸೆಂಟ್ ತೆಗೆದುಕೊಂಡು ಅವರ ಜೊತೆಯಲ್ಲಿ ಕಾಂಪೀಟ್ ಮಾಡುವುದಕ್ಕಾಗುವುದಿಲ್ಲ. ಹೆಚ್ಚು ಅಂಕಗಳನ್ನು ಪಡೆದಿರತಕ್ಕವರಿಗೆ ಉದ್ಯೋಗ ದೊರೆಯುತ್ತದೆ. ಹಳ್ಳಿಯಿಂದ

ಓದಿಕೊಂಡು ಬಂದವರಿಗೆ ಉದ್ಯೋಗ ಸಿಗುವುದಿಲ್ಲ. ದಯಮಾಡಿ ಎರಡು ಭಾಗಗಳಾಗಿ ವಿಂಗಡಿಸತಕ್ಕ ಕೆಲಸವನ್ನು ಮಾಡಬೇಕು. ಗ್ರಾಮಾಂತರ ಪ್ರದೇಶಗಳಿಂದ ಬಂದಿರತಕ್ಕವರಿಗೆ ಇಂತಿಷ್ಟು ರಿಸರ್ವೇಷನ್ ಅನ್ನು ಕೊಡತಕ್ಕ ಪರಿಸ್ಥಿತಿಯನ್ನು ಉಂಟು ಮಾಡಬೇಕು.

ಮತ್ತೊಂದು ವಿಚಾರ ಬಜೆಟ್ ಮಂಡನೆ ಮಂಡಿದ್ದಾರೆ. ಮಾರ್ಚ್ 31ನೇ ತಾರೀಖು ಕೊನೆಗೊಳ್ಳುವ ಲೆಕ್ಕಚಾರದಲ್ಲಿ ಟ್ರಜರಿ ವಿಷಯದಲ್ಲಿ ಯಾರೂ ಗಮನವನ್ನು ಕೊಡುತ್ತಿಲ್ಲ.ಟ್ರಜರಿಯಲ್ಲಿ ಬಿಲ್‌ಗಳನ್ನು ಪಾಸ್ ಮಾಡಬೇಕಾದರೆ ಯಾರಿಗೂ ಬೆಲೆ ಕೊಡುವುದಿಲ್ಲ. ಟ್ರಜರಿಯಲ್ಲಿ ಏನು ಕೆಲಸ ನಡೆಯುತ್ತಿದೆ ಅಂದರೆ ಅಲ್ಲಿರತಕ್ಕ ಪ್ಯೂನ್ ಬಿಲ್ ಪಾಸ್ ಮಾಡುವ ಕೆಲಸವನ್ನು ಮ್ಯಾನೇಜ್ ಮಾಡುತ್ತಾನೆ. ಕೋಲಾರ ಜಿಲ್ಲೆಯಲ್ಲಿ ಡಿಪಿಎಪಿ ಕಾರ್ಯಕ್ರಮದಲ್ಲಿ ಎರಡು ವಿಭಾಗ ಮಾಡಿದ್ದಾರೆ. ಒಂದು ಚಿಕ್ಕಬಳ್ಳಾಪುರ ಸಬ್‌ಡಿವಿಜನ್ ಮತ್ತೊಂದು ಕೋಲಾರ ಸಬ್‌ಡಿವಿಜನ್. ಚಿಕ್ಕಬಳ್ಳಾಪುರ ಸಬ್ ಡಿವಿಜನ್‌ಗೆ 79ಲಕ್ಷ ರೂಪಾಯಿ ಹಣವನ್ನು ಜಿಲ್ಲಾಧಿಕಾರಿಗಳು ಬಿಡುಗಡೆ ಮಾಡಿ ಬಿಲ್ ಪಾಸ್ ಆಗಿ ಹಣವನ್ನು ತೆಗೆದುಕೊಂಡಿದ್ದಾರೆ. ಕೋಲಾರ ಸಭ್ ಡಿವಿಜನ್‌ನಲ್ಲಿ 90 ಲಕ್ಷ ರೂಪಾಯಿ ಬಿಲ್ ಇವತ್ತಿನವರೆಗೂ ಪಾಸ್ ಆಗಿಲ್ಲ. ಕಾರಣ ಏನೆಂದರೆ ಯಾರ‍್ಯಾರು ಹಣವನ್ನು ಕೊಡುತ್ತಾರೆ ಅವರ ಬಿಲ್‌ಗಳನ್ನು ಟ್ರಜರಿಯಲ್ಲಿ ಪಾಸ್ ಮಾಡುತ್ತಾರೆ. ಉಳಿದ ಬಿಲ್‌ಗಳು ಹಾಗೆಯೇ ಉಳಿದುಕೊಳ್ಳತಕ್ಕ ಕೆಲಸವಾಗಿದೆ. ಇದನ್ನು ಮೊದಲು ಸರಿಪಡಿಸಬೇಕು. ಕೋಲಾರ ಜಿಲ್ಲೆಯ ನನ್ನ ತಾಲ್ಲೂಕಿನಲ್ಲಿ ಕೆಜಿಎಫ್ ಸಿಲ್ಕ್, ಮಿಲ್ಕ್, ಗೋಲ್ಡ್‌ಗೆ ಹೆಸರುವಾಸಿ. ಗೋಲ್ಡ್‌ಮೈನಿಂಗನ್ನು ಮುಚ್ಚುತ್ತೇವೆ ಎಂದು ಹೇಳುತ್ತಿದ್ದಾರೆ. ಅದರ ಬಗ್ಗೆ ಸರ್ಕಾರದಿಂದ ಕೇಂದ್ರಸರ್ಕಾರದ ಮೇಲೆ ಒತ್ತಡ ತರತಕ್ಕ ಕೆಲಸವಾಗಲಿಲ್ಲ. ನಮ್ಮಲ್ಲಿ ಮಿಲ್ಕ್‌ಗೆ ಹೆಚ್ಚು ಪ್ರೋತ್ಸಾಹವಿಲ್ಲ. ಬೆಂಗಳೂರುನಗರದಲ್ಲಿ ಬಿಸ್ಲೇರಿವಾಟರ್ ಬಾಟಲ್‌ಗೆ 15ರೂಪಾಯಿ ಕೊಟ್ಟು ತೆಗೆದುಕೊಳ್ಳುತ್ತಾರೆ. ಒಂದು ಲೀಟರ್ ಹಾಲಿಗೆ 9 ರೂಪಾಯಿ ಕೊಡಿ ಅಂದರೆ ಅವರಿಗೆ ಕೊಡುವುದಕ್ಕಾಗುವುದಿಲ್ಲ. ಹಾಲು ಉತ್ಪಾದನೆ ಮಾಡತಕ್ಕ ರೈತನಿಗ ಇವತ್ತು ಹಸುಗಳಿಗೆ ಮೇವು ಕೊಡುವುದಕ್ಕೆ ಆಗುವುದಿಲ್ಲ. ಅವರಿಗೆ ಹಸಿರು ಮೇವು ಒದಗಿಸಲಿಕ್ಕೆ ಆಗುತ್ತಿಲ್ಲ. ಒಂದು ಲೀಟ್‌ರ ಹಾಲಿಗೆ 5 ರೂಪಾಯಿ ಚಿಲ್ಲರೆ ಕೊಟ್ಟರೆ ಅದು ಏನೇನೂ ಸಾಲದು. ಅವನ ಐಆರ್‌ಡಿಪಿ ಸಾಲಕ್ಕೆ ಬಡ್ಡಿ ಕಟ್ಟಲಿಕ್ಕೆ ಆಗದಿರತಕ್ಕ ಪರಿಸ್ಥಿತಿ ಇದೆ. ಅಂತಹ ಒಂದು ಪರಿಸ್ಥಿತಿಗೆ ಇವತ್ತು ರೈತ ಹೋಗಿದ್ದಾನೆ. ನಾನು ಈ ಮಾತನ್ನು ಏಕೆ ಹೇಳುತ್ತಿದ್ದೇನೆಂದರೆ ಹಾಲಿನ ದರವನ್ನು ಹೆಚ್ಚಿಗೆ ಮಾಡತಕ್ಕ ಕೆಲಸವಾಗಬೇಕು.

ಶ್ರೀ ಎನ್.ರಾಜಣ್ಣ : ಹಾಲು ಉತ್ಪಾದನೆ ಮಾಡತಕ್ಕ ರೈತರು ಬಿಂದಿಗೆಯಲ್ಲಿ ಹಾಲು ಇಟ್ಟುಕೊಂಡು ಹಾಲು ಸರ್‌ಪ್ಲಸ್ ಆದಾಗ ಯಾರೂ ಸಹಕಾರ ಕೊಡಲಿಲ್ಲ. ಗೋಧಿ ಪ್ರಾಡಕ್ಟ್‌ಗಳಿಗೆ 10-20 ರೂಪಾಯಿ ಬೆಲೆ ಜಾಸ್ತಿಯಾಗಿದೆ. ಆದರಿಂದ ಹಾಲು ಉತ್ಪಾದನೆಗೆ ಎಫೆಕ್ಟ್ ಆಗುತ್ತಿದೆ. ಹಸುಗಳನ್ನು ಇಟ್ಟುಕೊಂಡಿರುವವರು ಬೆಳಗ್ಗೆ ಎದ್ದು ಹಸುಗಳ ಸಗಣಿ ಎತ್ತಿ ಮೈತೊಳೆದು ನಾಲ್ಕು ಲೀಟರ್ ಹಾಲು ಕರೆಯುತ್ತಾರೆ. ಆದರಿಂದ

20 ರೂಪಾಯಿ ಅವನಿಗೆ ಸಿಗುತ್ತದೆ. 8 ರೂಪಾಯಿ ಒಂದು ಲೀಟರ್ ಹಾಲಿಗೆ ಮಾರಾಟ ಮಾಡುತ್ತಾರೆ. ಹಾಲು ಉತ್ಪಾದನೆ ಮಾಡುವವರಿಗೆ 6 ರೂಪಾಯಿ ಕೊಟ್ಟರೆ ಆದರಿಂದ ಏನೂ ಆಗುವುದಿಲ್ಲ. ಹೀಗೆ ಮಾಡಿದರೆ ಹಾಲು ಉತ್ಪಾದನೆ ಹೇಗಾಗುತ್ತದೆ.

ಶ್ರೀ ಎಂ.ನಾರಾಯಣಸ್ವಾಮಿ : ರೇಷ್ಮೆಯಿಂದ ಹಣ ಬರುತ್ತದೆ. ಮಿಲ್ಕ್‌ನಿಂದ ಹಣ ಬರುವುದಿಲ್ಲ. ರೇಷ್ಮೆ ದರವನ್ನು ನಿಗದಿಪಡಿಸುವುದು ಕೇಂದ್ರಸರ್ಕಾರ, ಕೇಂದ್ರಸರ್ಕಾರದ ನೀತಿಯನ್ನು ಪ್ರತಿಭಟಿಸಿ ಹೆಚ್ಚು ದರವನ್ನು ಕೊಡಲಿಕ್ಕೆ ಕೇಂದ್ರಸರ್ಕಾರದ ಮೇಲೆ ನಮ್ಮ ಸಭಾನಾಯಕರು ಒತ್ತಡ ತಂದು ರೇಷ್ಮೆಗೆ ಹೆಚ್ಚು ಬೆಲೆಯನ್ನು ನಿಗದಿ ಮಾಡತಕ್ಕ ಕೆಲಸ ಮಾಡಬೇಕಾಗುತ್ತದೆ. ನಮ್ಮ ಕೆಜಿಎಫ್‌ನಲ್ಲಿ ಚಿನ್ನದ ಅದಿರು ತೆಗೆಯುತ್ತಾರೆ. ಆದರಿಂದ ಇಡೀ ತಾಲ್ಲೂಕು ಹಾಳಾಗುತ್ತಿದೆ. ಚಿನ್ನದ ಅದಿರು ತೆಗೆದು ಚಿನ್ನವನ್ನು ತೆಗೆಯಲಿಕ್ಕೆ ಮಾಡತಕ್ಕ ಕೆಲಸದಿಂದ ಅಲ್ಲಿಂದ ಬರತಕ್ಕ ಗಾಳಿಯಿಂದ ಉಸಿರಾಟಕ್ಕೆ ತೊಂದರೆಯಾಗುತ್ತದೆ. ಅದನ್ನು ನಿಲ್ಲಿಸತಕ್ಕ ಕೆಲಸವನ್ನು ಮಾಡಬೇಕು. ನಮ್ಮಲ್ಲಿ ಬೋರ್‌ವೆಲ್ ತೆಗೆಯುತ್ತಿದ್ದಾರೆ. ನಮ್ಮ ಜಿಲ್ಲೆಯಲ್ಲಿ ಬೋರ್‌ವೆಲ್ ಮಾಡಲಿಕ್ಕೆ ಪಾಯಿಂಟ್ ನಿಗದಿ ಮಾಡತಕ್ಕ ಅಧಿಕಾರವನ್ನು ಜಿಯಾಲಜಿಸ್ಟ್‌ಗಳಿಗೆ ಕೊಟ್ಟಿದ್ದಾರೆ. ಯಾರೂ ಕೂಡ ಆ ಕೆಲಸವನ್ನು ಸರಿಯಾಗಿ ಮಾಡುತ್ತಿಲ್ಲ. ಅಂತರ್ಜಲವನ್ನು ಗುರುತಿಸುವ ರೀತಿಯಲ್ಲಿ ಜಿಯಾಲಜಿಸ್ಟ್‌ಗಳು ಸರಿಯಾಗಿ ಗುರುತು ಮಾಡುವಂತೆ ವ್ಯವಸ್ಥೆ ಮಾಡಬೇಕೆಂದು ತಮ್ಮ ಮೂಲಕ ಮನವಿ ಮಾಡುತ್ತೇನೆ. ನಮ್ಮ ಜಿಲ್ಲೆಗೆ 5 ಸಾವಿರ ಕೊಳವೆಬಾವಿಗಳನ್ನು ಹರಿಜನ-ಗಿರಿಜನ ಮತ್ತು ಹಿಂದುಳಿದ ವರ್ಗದವರು ವಾಸಿಸುವ ಕಡೆಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡುತ್ತೇವೆಂದು ಹೇಳಿದರು. ಅಲ್ಲಿ ಕುಡಿಯಲಿಕ್ಕೆ ಯೋಗ್ಯವಲ್ಲದ ನೀರು ಬರುತ್ತದೆಂದು ಹೇಳಿ ಆ ಏರಿಯಾಕ್ಕೆ ಕೊಡತಕ್ಕ ಸವಲತ್ತುಗಳನ್ನು ನಿಲ್ಲಿಸಿದ್ದಾರೆ. ಹರಿಜನ ಗಿರಿಜನರಿಗೆ ಕೊಟ್ಟ ಸೌಲಭ್ಯವನ್ನು ಉಪಯೋಗಿಸಿಕೊಳ್ಳಲು ಗ್ರೇಬ್ಲಾಕ್ ಏರಿಯಾ ಎಂದು ಇರುವ ರಿಸ್ಟ್ರಿಕ್ಷನ್ ಅನ್ನು ತೆಗೆದು, ಅದನ್ನು ರಿಲ್ಯಾಕ್ಸ್ ಮಾಡುವ ಕೆಲಸವನ್ನು ನೀವು ಮಾಡಬೇಕೆಂದು ತಮ್ಮ ಮೂಲಕ ಸರ್ಕಾರಕ್ಕೆ ಮನವಿ ಮಾಡುತ್ತೇನೆ. ನಮ್ಮ ಕೋಲಾರ ಜಿಲ್ಲೆಯಲ್ಲಿ ಹೂಳು ತೆಗೆಯತಕ್ಕ ಕೆಲಸವನ್ನು ಮಾಡಲು ಕೇಂದ್ರಸರ್ಕಾರ ಅಥವಾ ವರ್ಲ್ಡ್‌ಬ್ಯಾಂಕ್ ಯಾವುದೇ ವತಿಯಿಂದ ಹಣ ತೆಗೆದು ಹೂಳು ತೆಗೆಯತಕ್ಕ ಕೆಲಸವನ್ನು ಮಾಡಬೇಕೆಂದು ಹೇಳಿ, ನನಗೆ ಮಾತನಾಡಲು ತಾವು ಅವಕಾಶ ಕೊಟ್ಟಿದ್ದಕ್ಕಾಗಿ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ಜಗದೀಶ್ ತಿಮ್ಮನಗೌಡ ಪಾಟೀಲ್ :(ಬೀಳಗಿ) ಮಾನ್ಯ ಅಧ್ಯಕ್ಷರೆ, ಮಾನ್ಯರಾಜ್ಯಪಾಲರು ಏನು ತಮ್ಮ ಭಾಷಣವನ್ನು ದಯಪಾಲಿಸಿದ್ದಾರೆ ಅದನ್ನು ಕೂಲಂಕುಶವಾಗಿ ನೋಡುತ್ತಾ ಹೋದರೆ ಕೆಲವು ವಿಷಯವನ್ನು ಪ್ರಸ್ತಾಪ ಮಾಡಿದ್ದಾರೆ. ರೈತರಿಗೆ ಅವರ ಸಾಲದ ಮೇಲಿನ ಬಡ್ಡಿ ಮನ್ನಾ ಮತ್ತು ಗ್ರಾಮಾಭಿವೃದ್ಧಿಯ ಬಗ್ಗೆ ಹೇಳಿದ್ದಾರೆ. ಗ್ರಾಮೀಣಾ ಸಮಸ್ಯೆಗಳ ಬಗ್ಗೆ ಅದರ ಸಲುವಾಗಿ ಹೇಳಿದ್ದಾರೆ. ಗ್ರಾಮಾಭಿವೃದ್ಧಿಯ ಸಲುವಾಗಿ ರೈತರ ಸಲುವಾಗಿ ಸ್ಪಷ್ಟವಾದ ನಿರ್ದಿಷ್ಟವಾದ ಯಾವುದೇ

14-F-24

ದೀರ್ಘವಾದ ಯೋಜನೆಗಳಾಗಲೀ ಅಥವಾ ಅಲ್ಪಾವಧಿ ಯೋಜನೆಗಳಾಗಲೀ ಅವುಗಳ ಬಗ್ಗೆ ಹೇಳಲಿಲ್ಲ. ಆದ್ದರಿಂದ ಇವತ್ತು ರಾಜ್ಯದ ಜನತೆಯನ್ನು ಉದ್ದೇಶಿಸಿ ರಾಜ್ಯಪಾಲರು ಏನು ಭಾಷಣ ಮಾಡಿದ್ದಾರೆ. ಅದು ನಿರಾಶದಾಯಕವಾಗಿದೆಯೆಂದು ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಸರ್ಕಾರ ಕೇವಲ ರೈತರ ಸಾಲದ ಮೇಲಿನ ಬಡ್ಡಿಯನ್ನು ಮನ್ನಾ ಮಾಡಿದ್ದೇವೆಂದರೆ ಸಾಲದು. ರೈತರಿಗೆ ತಾತ್ಕಾಲಿಕವಾಗಿ ಏನು ಪರಿಹಾರವನ್ನು ಕೊಡಬೇಕೋ ಅದನ್ನು ಕೊಡಬೇಕು. ಎಲ್ಲಿಯವರೆಗೆ ರೈತ ತಾನು ಬೆಳೆದ ಮಾಲಿಗೆ ನಿರ್ದಿಷ್ಟವಾದ ಬೆಲೆಯನ್ನು ಸರ್ಕಾರ ಕೊಡಲಿಕ್ಕೆ ಸಾಧ್ಯವಿಲ್ಲವೋ ಅಲ್ಲಿಯವರೆಗೆ ರೈತಋಣಮುಕ್ತನಾಗುವುದಕ್ಕೆ ಅವನನ್ನು ಉದ್ಧಾರ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ.

ಸನ್ಮಾನ್ಯ ಅಧ್ಯಕ್ಷರೇ:- ಇವತ್ತು ಆಡಳಿತ ಮಾಡತಕ್ಕ ಸರ್ಕಾರ ಇರಲಿ ಅಥವಾ ಆಡಳಿತ ಮಾಡಿರುವಂಥ ಸರ್ಕಾರ ಇರಲಿ, ರೈತರಿಗೆ ಕೆಲವು ಆಸೆಗಳನ್ನು ತೋರಿಸುತ್ತಾರೆ. ಈ ಆಸೆಗಳು ಕೇವಲ ಕುರ್ಚಿಗಾಗಿ ಎಂಬ ಭಾವನೆ ಬರುತ್ತದೆ. ದಯಮಾಡಿ, ಆಡಳಿತ ಮಾಡುವಂಥ ಸರ್ಕಾರ ರೈತರನ್ನು ಬಿಕ್ಷುಕರನ್ನಾಗಿ ಪರಿವರ್ತನೆ ಮಾಡಬಾರದು. ಸ್ವಾವಲಂಭಿ ರೈತನನ್ನಾಗಿ ಮಾರ್ಪಾಡು ಮಾಡಬೇಕಾಗಿದೆ. ಎಲ್ಲಿಯವರೆಗೆ ರೈತ ಪರಾವಲಂಭಿಯಾಗಿರುತ್ತಾನೆ, ಅಲ್ಲಿಯವರೆಗೆ, ಈ ರಾಜ್ಯದ, ಈ ದೇಶದ ಅಭಿವೃದ್ಧಿಯಾಗುವುದಕ್ಕೆ ಸಾಧ್ಯವಿಲ್ಲ. ಕಾರಣ ರೈತ, ಕೆಲವು ಸಮಯದಲ್ಲಿ ವಂಚಿತನಾಗುತ್ತಾನೆ, ರೈತನ ಬೆಳೆ ಪೇಟೆಗೆ ಯಾವಾಗ ಬೇಡಿಕೆ ಬರುತ್ತದೆ, ಆಗ, ಬೆಲೆ ಕುಸಿದು, ಅದರಿಂದ ವಂಚಿತನಾಗುತ್ತಾನೆ. ಎರಡನೆಯದಾಗಿ, ರೈತ ಕೊಂಡುಕೊಳ್ಳುವಂಥ ಬೀಜ, ಕ್ರಿಮಿನಾಶಕ ವಸ್ತುಗಳು, ನೀರಾವರಿ ಬಗ್ಗೆ ಕಳಪೆ ದರ್ಜೆಯ ಸಾಮಗ್ರಿಗಳನ್ನು ಒದಗಿಸುವುದರಿಂದಲೂ ರೈತ ವಂಚಿತನಾಗುತ್ತಾನೆ. ಆದಕಾರಣ, ಇವತ್ತು ರೈತರ ಈ ಸಮಸ್ಯೆಗಳನ್ನು ನಿವಾರಣೆ ಮಾಡಬೇಕಾದರೆ, ಸ್ಪಷ್ಟವಾದ ಯೋಜನೆಗಳು ಸರ್ಕಾರದಲ್ಲಿ ಇರಬೇಕು. ರೈತರಿಗಾಗಿ ಸಂಸ್ಕರಣ ಘಟಕಗಳನ್ನು ಸ್ಥಾಪನೆ ಮಾಡಬೇಕು. ರೈತನಿಗೆ ಎಲ್ಲಿಯವರೆಗೆ ನಿರ್ದಿಷ್ಟವಾದ ಬೆಲೆ ಸಿಕ್ಕುವುದಿಲ್ಲ, ಅಲ್ಲಿಯವರೆಗೆ ರೈತ ತೊಂದರೆಗಳಿಂದ ಮುಕ್ತನಾಗುವುದಿಲ್ಲವೆಂದು ಸ್ಪಷ್ಟವಾದ ಮಾತುಗಳಲ್ಲಿ ಹೇಳುತ್ತೇನೆ. ಗ್ರಾಮಾಂತರ ಪ್ರದೇಶಗಳಲ್ಲಿ, ಕೃಷಿ ಆಧಾರಿತ ಸಂಸ್ಕರಣ ಘಟಕಗಳು ಬರಬೇಕಾಗಿದೆ. ನನ್ನ ಮತ ಕ್ಷೇತ್ರದ ಒಂದೇ ಒಂದು ಉದಾಹರಣೆಯನ್ನು ಹೇಳುವುದಾದರೆ, ದಿವಂಗತ ಕೆ.ಹೆಚ್.ಪಾಟೀಲರ ಆಶೀರ್ವಾದದಿಂದ ನಂದಿ ಸಕ್ಕರೆ ಕಾರ್ಖಾನೆ ಸ್ಥಾಪಿತವಾಯಿತು. ಆಗ 20 ಸಾವಿರ ರೂಪಾಯಿಗಳಿಗೆ ಒಂದು ಎಕರೆ ಜಮೀನು ಇದ್ದುದು, ಈಗ ಒಂದು -ಒಂದುವರೆ ಲಕ್ಷ ರೂಪಾಯಿಗಳಿಗೆ ಮಾರ್ಪಾಟಾಗಿದೆ. ಇವತ್ತು ರೈತನ ಆದಾಯ 7-8 ಪಟ್ಟು ಜಾಸ್ತಿಯಾಗಿದೆ, ಪ್ರತಿಯೊಬ್ಬರೂ ಕಬ್ಬು ಬೆಳೆಯುವುದಕ್ಕೆ ಪ್ರಾರಂಭ ಮಾಡಿದ್ದಾರೆ. ಈ ಕಾರ್ಖಾನೆಗೆ ಸರ್ಕಾರದ, ಬಂಡವಾಳ ಎಷ್ಟೆಂದರೆ, ಕೇವಲ 7ಕೋಟಿ ರೂಪಾಯಿಗಳು ಮಾತ್ರ ಈ ನಂದಿ ಕಾರ್ಖಾನೆಯಿಂದ, ಸರ್ಕಾರಕ್ಕೆ, ಒಂದು ವರ್ಷಕ್ಕೆ ಸುಮಾರು 5 ಕೋಟಿ ರೂಪಾಯಿಗಳಿಗಿಂತ ಹೆಚ್ಚು ತೆರಿಗೆ ಬರುತ್ತಿದೆ. ಇದಲ್ಲದೆ, ಸೇಲ್ಸ್‌ಟಾಕ್ಸ್ ಅವಲಂಬಿತ ವ್ಯಾಪಾರಸ್ಥರ ಮುಖಾಂತರವೂ ಟ್ಯಾಕ್ಸ್ ಬರುತ್ತದೆ.

ಆದ್ದರಿಂದ, ರೈತರ ಬಗ್ಗೆ ಸರ್ಕಾರಕ್ಕೆ ನಿಜವಾದ ಕಾಳಜಿ ಇದ್ದರೆ, ಪ್ರತಿಯೊಂದು ತಾಲ್ಲೂಕಿನಲ್ಲೂ, ಅಲ್ಲಿ ಏನೇನು ಬೆಳೆ ಬೆಳೆಯುತ್ತಾರೆ, ಅದಕ್ಕೆ ಸಂಬಂಧಿಸಿದ ಸಂಸ್ಕರಣ ಘಟಕಗಳನ್ನು ಸ್ಥಾಪನೆ ಮಾಡಬೇಕು. ಅವು ಸರ್ಕಾರದಿಂದ ಇರಬಹುದು ಅಥವಾ ಖಾಸಗಿ ರಂಗದಲ್ಲಿರಬಹುದು. ಇವುಗಳನ್ನು ಸ್ಥಾಪನೆ ಮಾಡಿದರೆ, ರೈತ ಉದ್ಧಾರವಾಗುತ್ತಾನೆ ಮತ್ತು ಬಡ ಕುಟುಂಬಗಳಿಗೆ ಉದ್ಯೋಗ ಅವಕಾಶಗಳೂ ಸಿಗುತ್ತವೆ. ಬಿಜಾಪುರ ಜಿಲ್ಲೆಯೊಂದರಲ್ಲೇ 10-12 ಸಂಸ್ಕರಣ ಘಟಕಗಳನ್ನು ಸ್ಥಾಪನೆ ಮಾಡುವುದಕ್ಕೆ ಸಾಧ್ಯವಿದೆ ಎಂದು ಹೇಳುತ್ತೇನೆ. ಕಳೆದ ಹಲವಾರು ವರ್ಷಗಳಿಂದ, ಅದು ಯಾವುದೇ ಸರ್ಕಾರವಿರಲಿ, ಕೇವಲ ಅನುಕಂಪದ ಮಾತುಗಳನ್ನು ಕೇಳುತ್ತಿದ್ದೇವೆಯೇ ಹೊರತು, ಗಂಭೀರವಾದ ಚಿಂತನೆ ಏನೂ ಇಲ್ಲ. ಈಗ ಮಾನ್ಯ ದೇವೇಗೌಡರು ಮುಖ್ಯಮಂತ್ರಿಯಾಗಿದ್ದಾರೆ. ಇವರು ರೈತರ ಬಗ್ಗೆ ಕಳಕಳಿ ಇರತಕ್ಕಂಥ ವ್ಯಕ್ತಿ. ಈಗಲಾದರೂ ಪ್ರತಿಯೊಂದು ತಾಲ್ಲೂಕಿಗೂ ಇಂತಹ ಘಟಕಗಳನ್ನು ಸ್ಥಾಪಿಸಿ, ರೈತರಿಗೆ ನಿರ್ದಿಷ್ಟವಾದ ಬೆಲೆ ಸಿಗುವಂತೆ ಮಾಡಬೇಕು. ಇನ್ನು ಬಿಜಾಪುರ ಜಿಲ್ಲೆಯ ಆಲಮಟ್ಟಿ ಯೋಜನೆಯಲ್ಲಿ, ಸಾವಿರಾರು ಕುಟುಂಬಗಳು ನೀರಿನಲ್ಲಿ ಮುಳಗಡೆಯಾಗಿವೆ. ಅವರಿಗೆ ಪುನರ್ ವಸತಿ ಕಲ್ಪಿಸಿಕೊಟಿಲ್ಲ. ಈ ಆಲಮಟ್ಟಿ ಯೋಜನೆಯನ್ನು ಮುಕ್ತಾಯ ಮಾಡಿ, ಕೆಳಗಡೆ ಜನರಿಗೆ ನೀರು ಕೊಟ್ಟರೆ, ಸರ್ಕಾರದ ಕೆಲಸ ಬಗೆಹರಿದಂತಾಗದು. ಅಲ್ಲಿ ಗಂಭೀರವಾದ ಪುನರ್ ವಸತಿ ಸಮಸ್ಯೆ ಇದೆ. ಇದರ ಬಗ್ಗೆ ಯಾವುದೇ ಚಿಂತನೆ ಇಲ್ಲ. ಆದುದರಿಂದ, ದಯಮಾಡಿ, ತಮ್ಮಲ್ಲಿ ವಿನಂತಿ ಮಾಡಿಕೊಳ್ಳುವುದೇನೆಂದರೆ, 8 ಜನರಿಗೆ ಅನ್ಯಾಯವಾಗಿದೆ, ಸರಿಯಾದ ಪರಿಹಾರ ಸಿಕ್ಕಿಲ್ಲ, ಪುನರ್ ವಸತಿ ಕೇಂದ್ರ ಇಲ್ಲ ಮತ್ತು ಸರ್ಕಾರದಲ್ಲಿ ಯಾವುದೇ ಸ್ಪಷ್ಟವಾದ ನೀತಿ ಇಲ್ಲ. ಆದ್ದರಿಂದ, ಸದನದ ಮುಖಾಂತರ ಕೇಳಿಕೊಳ್ಳುವುದೇನೆಂದರೆ, ಇದರ ಬಗ್ಗೆ ಒಂದು ಸದನದ ಸಮಿತಿ ಮಾಡಬೇಕು. ಯೋಗ್ಯವಾದ ಪರಿಹಾರ ನೀತಿ ಬೇಕಾಗಿದೆ, ಮತ್ತು ಪುನರ್ ವಸತಿ ಕೇಂದ್ರ ಆಗಬೇಕಾಗಿದೆ. ಇವತ್ತು ಅಲ್ಲಿಯ ಜನ ಮಾಳುಗಡೆಯಾಗಿದ್ದಾರೆ. ಅವರು ನಿರಾಶ್ರಿತರಲ್ಲ, ಅಥವಾ ಬಿಕ್ಷುಕರೂ ಅಲ್ಲ. ಒಂದು ಮಾತನ್ನು ತಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಇವತ್ತು ಇಲ್ಲಿ ಏನು ರೈತರಿಗೆ ಅನ್ಯಾಯವಾಗಿದೆ, ಮುಳುಗಡೆಯಾಗಿದೆ ಅದನ್ನು ಸರ್ಕಾರ ಸರಿಪಡಿಸಬೇಕಾಗಿದೆ. ಈ ದಿಸೆಯಲ್ಲಿ ಸರ್ಕಾರ ಕಾರ್ಯಕ್ರಮ ಹಾಕಿಕೊಂಡು ತ್ವರಿತಗತಿಯಲ್ಲಿ ಸಹಾಯಕ್ಕೆ ನಿಲ್ಲಬೇಕಾಗಿದೆ. ಅಲ್ಲಿರುವ ಜನರು ಸಂಕಷ್ಟದಲ್ಲಿದ್ದಾರೆ, ಯಾವುದೇ ಪರಿಹಾರ ಸಿಗದೇ ತೊಂದರೆಯಾಗಿದೆ. ಸರ್ಕಾರದ ಇದೇ ನೀತಿ ಮುಂದುವರೆದರೆ ಆಲಮಟ್ಟಿಯಲ್ಲಿ ಆಗುತ್ತಿರುವ ಕೆಲಸವನ್ನು ಸ್ಥಗಿತ ಮಾಡಬೇಕೆಂಬ ವಿಚಾರ ಜನರಿಗಿದೆ. ಇದನ್ನು ಸ್ಥಗಿತ ಮಾಡಬಾರದು, ರೈತರಿಗೆ ಯೋಗ್ಯವಾದ ಪರಿಹಾರ ಕೊಡಬೇಕು, ಸರಿಯಾದ ಪುನರ್ ವಸತಿ ಕೇಂದ್ರಗಳನ್ನು ಸ್ಥಾಪನೆ ಮಾಡಬೇಕೆಂದು ಕೇಳಿಕೊಂಡು, ಅವಕಾಶ ಕೊಟ್ಟ ತಮಗೆ ವಂದಿಸಿ ನನ್ನ ಎರಡು ಮಾತುಗಳನ್ನು ಮುಗಿಸುತೇನೆ.

ಶ್ರೀ ಎ.ರಾಮದಾಸ್(ಕೃಷ್ಣರಾಜು): ಸನ್ಮಾನ್ಯಾ ಸಭಾಧ್ಯಕ್ಷರೇ, ಜನತಾ ದಳ ಸರ್ಕಾರ ಬಂದಾಗ, ಕರ್ನಾಟಕದ ಎಲ್ಲಾ ಯುವಕರಲ್ಲಿಯೂ ಒಂದು ಆಶಾಭಾವನೆ ಮೂಡಿತ್ತು.

ಒಂದು ವರ್ಷದಲ್ಲಿ ಒಂದು ಲಕ್ಷ ಜನರನ್ನು ಉದ್ಯೋಗಸ್ಥರನ್ನಾಗಿ ಮಾಡುವ ಯೋಜನೆ ತರುತ್ತೇವೆಂದು ಹೇಳಿದ್ದರು ಆದರೆ ಇವರ ನೂರು ದಿವಸಗಳ ಆಡಳಿತವನ್ನು ನೋಡಿದರೆ, ಪಾರಂಭದಲ್ಲಿಯೇ ಎಲ್ಲರ ಮನಸ್ಸಿಗೆ ಅಘಾತವನ್ನುಂಟು ಮಾಡುವ ಪರಿಸ್ಥಿತಿ ಬಂದಿದೆ. ಇದರ ಆಡಳಿತ, ಇಡೀ ಕರ್ನಾಟಕದ ಯುವಜನರಲ್ಲಿ ನೋವುಂಟುಮಾಡಿದೆ. ಇವತ್ತು ರಾಜ್ಯದ ಭವಿಷ್ಯಕ್ಕೆ ನಾವು ಯುವ ಶಕ್ತಿಯನ್ನು ಅಭಿವೃದ್ಧಿ ಮಾಡುವಂಥ ದಿಸೆಯಲ್ಲಿ ಸರಿಯಾದ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ರೂಪಿಸಬೇಕು. ಈ ಯುವಜನರಿಗೆ ಸರ್ಕಾರ ಕೆಲಸವನ್ನು ಕೊಡಬೇಕು. ಮತ್ತು ಈ ಯುವಶಕ್ತಿಯು, ಸರ್ಕಾರದಲ್ಲಿರುವಂಥ ಆಡಳಿತ ವ್ಯವಸ್ಥೆ ಏನಿದೆ, ಅದರ ಸದುಪಯೋಗ ಮಾಡಿಕೊಳ್ಳಬೇಕಾಗಿದೆ. ಈ ದಿಸೆಯಲ್ಲಿ, ವಿದ್ಯಾವಂತ ಯುವಕರನ್ನು ವೃತ್ತಿಪರರನ್ನಾಗಿ ಮಾಡಿ, ಸ್ವಂತ ಉದ್ಯೋಗಕ್ಕೆ ಅವಕಾಶ ಮಾಡಿಕೊಡಬೇಕು. ಎರಡನೆಯದಾಗಿ, ಈ ರಾಜ್ಯಪಾಲರ ಭಾಷಣವನ್ನು ನೋಡಿದಾಗ, ಇದರಲ್ಲಿ ರಾಜ್ಯದ ಪ್ರಗತಿಯ ಕಡೆಗೆ ಯಾವ ಸೂಚನೆಯೂ ಕಾಣುತ್ತಿಲ್ಲ. ಸರ್ಕಾರ ಇಂತಹ ಯೋಜನೆಗಳನ್ನು ಮಾಡುತ್ತದೆ, ಅಥವಾ ಇಂಥಿಂಥ ಯೋಜನೆಗಳನ್ನು ಕಾರ್ಯರೂಪಕ್ಕೆ ತರುತ್ತದೆ ಎಂಬ ಯಾವನಿರ್ದಿಷ್ಟ ಅಂಶಗಳೂ ಇದರಲ್ಲಿ ಕಾಣುತ್ತಾ ಇಲ್ಲ. ಈ ಸರ್ಕಾರ ಬಂದನಂತರ, ಆಡಳಿತದ ಮೇಲೆ ಯಾವ ರೀತಿ ನಿಯಂತ್ರಣ ಕಡಿಮೆಯಾಗಿದೆ ಎನ್ನುವುದನ್ನು ಒಂದೆರಡು ವಿಚಾರಗಳನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಈಗಾಗಲೇ ಮಾನ್ಯ ಕಂದಾಯ ಸಚಿವರ ಗಮನಕ್ಕೂ ಈ ವಿಷಯವನ್ನು ತಂದಿರುತ್ತೇನೆ. ಮೈಸೂರು ಜಿಲ್ಲೆಯ ಒಬ್ಬ ತಹಶೀಲ್ದಾರ್‌ರವರು ಸುಳ್ಳು ಸರ್ಟಿಫಿಕೇಟ್ ಪಡೆದು, ಪ್ರಮೋಷನ್ ಪಡೆದಂಥ ದಾಖಲೆಯನ್ನು ಈಗಾಗಲೇ ಕೊಟ್ಟಿದ್ದೇನೆ. ಇದರ ಬಗ್ಗೆ ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ. ಎರಡನೆಯದು ಸರ್ಕಾರದ ಸುತ್ತೋಲೆಗಳಿಗೆ ಎಷ್ಟು ಬೆಲೆ ಇದೆಯೆಂಬ ಬಗ್ಗೆ .ಹೇಳುವುದಾದರೆ, ಸ್ಥಳೀಯ ಆಡಳಿತದಲ್ಲಿ ಕೆಲಸ ಮಾಡತಕ್ಕಂಥ, ಟೈಮ್ ಸ್ಕೇಲ್‌ನಲ್ಲಿ ಯಾರು ಗ್ರಾಜುಯೇಟ್ಸ್ ಕೆಲಸ ಮಾಡುತ್ತಿದ್ದಾರೆ ಅವರಿಗೆ ಪ್ರಮೋಷನ್ ಕೊಡಬಾರದೆಂದು ಸರ್ಕಾರದ ಸುತ್ತೋಲೆ ಇದೆ. ಈ ಸರ್ಕಾರದ ಸುತ್ತೋಲೆಗೆ ಎಷ್ಟು ಬೆಲೆ ಇದೆಯೆಂದು ಹೇಳಿದರೆ, ಈ ಜನತಾ ದಳ ಸರ್ಕಾರ ಬಂದನಂತರ, ಮೈಸೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ, ಈ ಕಾನೂನನ್ನು ಮೀರಿ, ಗುರುಪಾದಸ್ವಾಮಿ ಎಂಬುವವರನ್ನು ಇಂಜಿನಿಯರ್ ಆಗಿ ಖಾಯಂ ಮಾಡುವುದರ ಜೊತೆಗೆ, ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿ ಪ್ರಮೋಷನ್ ಕೊಟ್ಟಿದ್ದಾರೆ. ಇವರ ಮೇಲೆ, ಸರ್ಕಾರದ ನಿಯಂತ್ರಣ ಎಷ್ಟಿದೆ ಎಂಬುದನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಅಲ್ಲಿ ನಡೆಯತಕ್ಕ ಅವ್ಯವಹಾರಗಳನ್ನು ಈಗಾಗಲೇ ಪತ್ರಿಕೆಗಳ ಮುಖಾಂತರ ನೋಡುತ್ತಿದ್ದೇವೆ. ಮತ್ತು ಯಾವರೀತಿಯಲ್ಲಿ ಸರ್ಕಾರದ ಹಣ ಸೋರಿ ಹೋಗುತ್ತಿದೆ ಎಂಬುದನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ನಮ್ಮ ರಾಜ್ಯದಲ್ಲಿ ಎನ್.ಜಿ.ಇ.ಎಫ್.ನಲ್ಲಿ ಒಂದು ಟ್ರಾನ್ಸ್‌ಫಾರ್ಮರ್‌ರಿಗೆ ಕೇವಲ ಒಂದು ಲಕ್ಷ, ಹದಿನೆಂಟು ಸಾವಿರ ರೂಪಾಯಿ ಆಗುತ್ತದೆ. ಸೂಪರಿಂಟೆಂಡೆಂಟ್ ಇಂಜಿನಿಯವರು, ಕೇಲ್ಟ್ರಾನ್ ಸಂಸ್ಥೆಯಿಂದ ಟ್ರಾನ್ಸ್‌ಫಾರ್ಮರ್ ತೆಗೆದುಕೊಳ್ಳ ಬಾರದೆಂದು ಪತ್ರದ ಮುಖೇನ ತಿಳಿಸಿದ್ದರೂ ಕೂಡ ಆ ಸಂಸ್ಥೆಯಲ್ಲಿ

ಒಪ್ಪಂದ ಮಾಡಿಕೊಂಡು 64 ಟ್ರಾನ್ಸ್‌ಫಾರ್ಮರ್‌ಗಳನ್ನು ಪಡೆದು ಸುಮಾರು 18 ಲಕ್ಷಕ್ಕೂ ಹೆಚ್ಚು ಹಣವನ್ನು ಕೊಟ್ಟಿರತಕ್ಕಂಥಾದ್ದು ಎಷ್ಟು ಸಮಂಜಸ ಎಂಬುದನ್ನು ತಮಗೆ ನಿದರ್ಶನವಾಗಿ ಹೇಳುತ್ತಿದ್ದೇನೆ. ಅಂದರೆ ಇವರಿಗೆ ಎಷ್ಟರಮಟ್ಟಿನ ಕಾಳಜಿ ಇದೆ ಎಂಬುದನ್ನು ಯೋಚನೆ ಮಾಡಬೇಕಾಗಿದೆ. ಇನ್ನೊಂದು ಸರ್ಕಾರ ಯೋಚನೆ ಮಾಡಬೇಕಾದ ವಿಚಾರವೆಂದರೆ ಮೈಸೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಅಲ್ಲಿಯ ಕಾರ್ಮಿಕರು ಮತ್ತು ಅಲ್ಲಿರುವಂಥ ನೌಕರರ ಸುಮಾರು 62 ಸಾವಿರ ಅರ್ಜಿಗಳು ನಿವೇಶನಗಳಿಗಾಗಿ ಬಾಕಿ ಉಳಿದಿದೆ. ಇವುಗಳಲ್ಲಿ ಸುಮಾರು 16 ಸಾವಿರ ನಿವೇಶನಗಳ ವಿಚಾರ ನ್ಯಾಯಾಲಯದಲ್ಲಿದೆ. ಇವರಲ್ಲಿ ಸುಮಾರು 6 ಕೋಟಿ ರೂಪಾಯಿಗಳ ಭೂಮಿಯನ್ನು ಮನೆ ನಿವೇಶನಗಳನ್ನಾಗಿ ಹಂಚಿಕೊಡುವುದಕ್ಕೆ ನಿರ್ಧಾರ ಮಾಡಿದ್ದಾರೆ. ಉಳಿದ ಭೂಮಿಯನ್ನು ಅಲ್ಲಿರುವಂಥ ನೌಕರರು ಮತ್ತು ಕಾರ್ಮಿಕರು ನಿವೇಶನಗಳಿಗೆ ಹಂಚಿಕೊಳ್ಳುವಂಥ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಕಳೆದ ತಿಂಗಳು ಇದನ್ನು ಸರ್ಕಾರ ಮುಂದೆ ಇಟ್ಟಿರುತ್ತೇನೆ. ಇದನ್ನುನೋಡಿದರೆ, ಈ ಸರ್ಕಾರ ಆಡಳಿತದ ಬಗ್ಗೆ ಎಷ್ಟು ಮಟ್ಟಿನ ನಿಯಂತ್ರಣ ಹೊಂದಿದೆ ಎನ್ನುವ ವಿಚಾರವನ್ನು ಈ ಸದನದ ಮುಂದೆ ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಹೇಳಬೇಕಾಗಿದೆ. ಸನ್ಮಾನ್ಯ ಸಭಾನಾಯಕರು ಈ ಹಿಂದೆಯೇ ಒಂದು ವಿಚಾರವನ್ನು ಹೇಳಿದರು. ಈಗ ನಮ್ಮ ಸರ್ಕಾರ ಬಂದಿದೆ, ಮುಂದೆ ಸಾಮಾನ್ಯ ಬರುವ ವರ್ಗಾವಣೆಗೆ ಮುಂಚೆ ಯಾವುದೇ ವರ್ಗಾವಣೆಯನ್ನು ಮಾಡುವುದಿಲ್ಲ ಮಾಡಬಾರದು ಎಂದು ಹೇಳಿದ್ದಾರೆ. ಆದರೆ, ಸೋಜಿಗದ ವಿಚಾರವೆಂದರೆ, ಜನತಾ ದಳ ಸರ್ಕಾರ ಬಂದನಂತರ, ಮೈಸೂರಿನಲ್ಲಿ 85 ಜನ ಪ್ರಾಥಮಿಕ ಶಾಲಾ ಉಪಾಧ್ಯಾಯರನ್ನು ವರ್ಗಾವಣೆ ಮಾಡಿದ್ದಾರೆ. ಇವರನ್ನು ಯಾವ ಆದೇಶದ ಮೇಲೆ ಮಾಡಿದ್ದಾರೆ? ಮೈಸೂರು ನಗರದಲ್ಲಿರುವಂಥ ಶಿಕ್ಷಕರ ವಿಚಾರದಲ್ಲಿ, ಜಿಲ್ಲಾ ಅಬಿವೃದ್ಧಿ ಮಂಡಳಿ ಸಭೆಯಲ್ಲೂ ಚರ್ಚೆ ಮಾಡಿದ್ದೇವೆ. ಆದರೂ ಕೂಡ, ಮೈಸೂರು ನಗರದಿಂದ, ಗ್ರಾಮಾಂತರ ಪ್ರದೇಶಕ್ಕೆ 21 ಜನ ಶಿಕ್ಷಕರನ್ನು ವರ್ಗಾವಣೆ ಮಾಡಿದ್ದಾರೆ. ಇದನ್ನು ನೋಡಿದಾಗ, ಸರ್ಕಾರದಿಂದ ಬಂದ ಸುತ್ತೋಲೆ ಏನಿದೆ,

ಅಧಿಕಾರಿಗಳು ಯಾವರೀತಿ ಅದನ್ನು ಪಾಲಿಸಿದ್ದಾರೆಂಬ ಸತ್ಯ ಗೊತ್ತಾಗುತ್ತದೆ. ಈ ಸರ್ಕಾರಕ್ಕೆ, ಆಡಳಿತವರ್ಗದಲ್ಲಿರುವ ಸರ್ಕಾರಿ ಅಧಿಕಾರಿಗಳ ಮೇಲೆ ಇರುವಂಥ ನಿಯಂತ್ರಣ ಎಷ್ಟಿದೆ ಎನ್ನುವ ವಿಚಾರ ಗೊತ್ತಾಗುತ್ತದೆ. ಇನ್ನು ಸರ್ಕಾರಿ ವೈದ್ಯರ ವಿಚಾರದಲ್ಲಿ ಹೇಳುವುದಾದರೆ ಸರ್ಕಾರ, ಇವರಿಗೆ ಕೈತುಂಬ ಸಂಬಳ ಕೊಟ್ಟು, ನೇಮಕ ಮಾಡುತ್ತಾರೆ. ಇಂಥಹ ವೈದ್ಯರು ಸರ್ಕಾರಿ, ವೈದ್ಯರಾಗಿ ಕೆಲಸ ಮಾಡಬೇಕೇ ಹೊರತು, ಖಾಸಗಿ ಪ್ರಾಕ್ಟೀಸ್ ಮಾಡಬಾರದು. ದಯಮಾಡಿ, ಈ ಪ್ರೈವೇಟ್ ಪ್ರಾಕ್ಟೀಸ್ ಮಾಡುವುದನ್ನು ನಿಲ್ಲಿಸಲು ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳತಕ್ಕ ಅವಶ್ಯಕತೆ ಇದೆ. ಇನ್ನು ವಯಸ್ಕರ ಶಿಕ್ಷಣ ಸಂಸ್ಥೆಗಳನ್ನು ಯಾವುದಕ್ಕೋಸ್ಕರ ಇಟ್ಟುಕೊಂಡಿದ್ದೀರಿ.

ಇದೊಂದು ಬಿಳಿ ಆನೆ ಸಾಕತಕ್ಕ ವಿಚಾರವಾಗಿದೆ. ಇದರಿಂದ ಯಾವುದೇ ಉಪಯೋಗವಿಲ್ಲ. ಇದನ್ನು ಸರ್ಕಾರ ಮನದಟ್ಟು ಮಾಡಿಕೊಂಡು ಇದನ್ನು ರದ್ದು ಮಾಡುವುದು ಸೂಕ್ತವೆಂದು ಭಾವಿಸುತ್ತೇನೆ. ದಯಮಾಡಿ, ಇಂತಹ ವಿಚಾರಗಳಿಗೆ ಹಣ ಪೋಲು ಮಾಡುವುದನ್ನು ತಪ್ಪಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಕೊನೆಯದಾಗಿ ಒಂದು ವಿಚಾರವನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ನಮ್ಮ ಶಿಕ್ಷಣ ನೀತಿ ವಿಚಾರದಲ್ಲಿ ಹೇಳುವುದಾದರೆ, ಇನ್ನು ಮುಂದೆ, ಎಲ್ಲಾ ಅನುಧಾನಿತ ಶಿಕ್ಷಣ ಸಂಸ್ಥೆಗಳಿಗೆ, ಸರ್ಕಾರದಿಂದ ಕೊಡುವ ಅನುಧಾನವನ್ನು ರದ್ದು ಮಾಡಬೇಕೆಂಬ ವಿಚಾರ ಸರ್ಕಾರದ ಮನದಲ್ಲಿದೆ ಎಂಬುದು ತಿಳಿದು ಬಂದಿದೆ. ದಯಮಾಡಿ, ಈ ಶಾಲೆಗಳಿಗೆ ಅನುದಾನವನ್ನು ರದ್ದು ಮಾಡಬಾರದು ಮತ್ತೇ ರಾಜ್ಯಪಾಲರ ಭಾಷಣದಲ್ಲಿ, ಹೊಸ ಶಾಲೆಗಳನ್ನು ಪ್ರಾರಂಭ ಮಾಡುವ ಬಗ್ಗೆ ಎಲ್ಲಿಯೂ ಉಲ್ಲೇಖ ಕಾಣುತ್ತಿಲ್ಲ. ಇನ್ನು ಸಾರಿಗೆ ವಿಚಾರದಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಸುಮಾರು ದಶಕಗಳಿಂದ, ಸರ್ಕಾರದ ಸಾರಿಗೆ ವ್ಯವಸ್ಥೆಯಲ್ಲಿ ನಾವು ನಷ್ಟವನ್ನು ಕಾಣುತ್ತಿದ್ದೇವೆ. ಈ ನಷ್ಟವನ್ನು ಸರಿದೂಗಿಸಬೇಕಾದರೆ, ವಿದ್ಯಾವಂತ ಯುವಕರಿಗೆ ಖಾಸಗಿಯಾಗಿ ಸಾರಿಗೆ ವ್ಯವಸ್ಥೆಗೆ ಅವಕಾಶ ಮಾಡಿಕೊಡಬೇಕು. ಇದರಿಂದ ಒಂದು ಲಕ್ಷ ಜನರಿಗೆ ಉದ್ಯೋಗಾವಕಾಶವೂ ಸಿಕ್ಕಂತಾಗುತ್ತದೆ. ಮತ್ತು ವಿದ್ಯಾವಂತ ಯುವಕರನ್ನು ವೃತ್ತಿಪರರನ್ನಾಗಿಯೂ ಮಾಡಿದಂತಾಗುತ್ತದೆ. ಈ ರೀತಿ ವಿದ್ಯಾವಂತರಿಗೆ ಒಬ್ಬರಿಗೆ ಒಂದು ಪರ್ಮಿಟ್ ಕೊಡುವ ಮುಖಾಂತರ, ಅವರು ಜೀವನ ನಡೆಸುವುದಕ್ಕೆ ಅನುಕೂಲ ಮಾಡಿಕೊಡಬೇಕು. ಇನ್ನು ಕೈಗಾರಿಕೆ ವಿಚಾರದಲ್ಲಿ ಹೇಳುವುದಾದರ, ಇತ್ತೀಚೆಗೆ, ಅನೇಕ ಕೈಗಾರಿಕೆಗಳು ಸಿಕ್ ಇಂಡಸ್ಟ್ರೀಗಳಾಗುತ್ತಿವೆ. ಈ ದಿಸೆಯಲ್ಲಿ ಸರ್ಕಾರ ಚಿಂತನೆ ಮಾಡಿ, ಒಂದು ಹೊಸ ಯೋಜನೆಯನ್ನು ಮಾಡಬೇಕಾಗಿದೆ.

ಇದರ ಜೊತೆಗೆ ಒಂದು ಕಾರ್ಯಕ್ರಮುವನ್ನು ಹಾಕಿಕೊಳ್ಳುತಕ್ಕಂಥಾದ್ದು ಅತ್ಯಗತ್ಯವೆಂದು ನನಗನ್ನಿಸುತ್ತದೆ. ಇವತ್ತಿನ ಕಾನೂನಿನ ಅಡಿಯಲ್ಲಿ ಯಾವುದೇ ಒಬ್ಬ ಉದ್ಯೋಗಸ್ಥನನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳುವಂಥ ವ್ಯವಸ್ಥೆ ಇಲ್ಲ. ಹೊರರಾಜ್ಯದಿಂದ ಬಂದಿರತಕ್ಕವನು ಇಲ್ಲಿ ತನ್ನದೇ ಆದ ಒಂದು ಕೈಗಾರಿಕೆಯನ್ನು ಪ್ರಾರಂಭಮಾಡಿ, ಇಲ್ಲಿಯ ಎಲ್ಲಾ ಸವಲತ್ತುಗಳನ್ನೂ ಕೂಡ ಉಪಯೋಗಿಸಿಕೊಂಡು ಕೊನೆಗೊಂದು ದಿನ ಆತ ಬೀಗ ಹಾಕಿಕೊಂಡು ಹೋದಾಗ ಆತನನ್ನು ಏನೂ ಮಾಡಲಾಗದ ಪರಿಸ್ಥಿತಿ ಸರ್ಕಾರದಲ್ಲಿದೆ. ಆದ್ದರಿಂದ ಇಂತಹ ಸಂದರ್ಭದಲ್ಲಿ ಸೂಕ್ತವಾದ ಕಾನೂನನ್ನು ಇಟ್ಟುಕೊಂಡಾಗ ಮಾತ್ರ ಇಂತಹವರ ಮೇಲೆ ರಾಜ್ಯಸರ್ಕಾರದಿಂದ ನಿಯಂತ್ರಣವನ್ನು ಇಟ್ಟುಕೊಳ್ಳಬಹುದು ಎಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಕೊನೆಯದಾಗಿ ಆಹಾರ ಇಲಾಖೆಗೆ ಸಂಬಂಧಪಟ್ಟಂತೆ ಸಂರಕ್ಷಣೆ ಮತ್ತೇ ವಿತರಣೆಯಲ್ಲಿ ನಡೆಯತಕ್ಕಂಥ ವ್ಯವಹಾರಗಳನ್ನು ನೋಡಿದಾಗ ಕೆಎಸ್‌ಎಫ್‌ಸಿಃ ಟಿಎಪಿಸಿಎಂಎಸ್ ಈ ವ್ಯವಸ್ಥೆಗಳಿಂದ ಸರ್ಕಾರದ ಬೊಕ್ಕಸ ಹಾಳಾಗುತ್ತಿದೆ. ಈ ದಿಸೆಯಲ್ಲಿ ಇಂತಹ ಸಂಸ್ಥೆಗಳನ್ನು ಬಿಟ್ಟು, ಈ ರೇಷನ್ ಸಿಸ್ಟಮ್‌ನಿಂದ ಕೆಲಮಟ್ಟಿಗೆ ಒಳ್ಳೆಯದಾಗಿದೆ. ಆದರೆ ನಮ್ಮ ರಾಜ್ಯದಿಂದ ಭತ್ತವನ್ನು ಹೊರಗಡೆಗೆ ಸಾಗಿಸತಕ್ಕಂಥ ವಿಚಾರ ಏನಿದೆ, ಅದನ್ನು ನಿಲ್ಲಿಸಿ

ಆ ಭತ್ತವನ್ನು ನಮ್ಮಲ್ಲೇ ಇರುವಂಥ ಮಿಲ್‌ಗಳಲ್ಲಿ ಅಕ್ಕಿ ಮಾಡಿಸಲು ಹೆಚ್ಚು ಅವಕಾಶವನ್ನು ಮಾಡಿಕೊಟ್ಟಾಗ ಇದರಿಂದ ಬೆಲೆಯನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಬಹುದು ಇಷ್ಟುಮಾತ್ರವಲ್ಲದೆ ಇದರಿಂದಾಗಿ ಹೆಚ್ಚು ಜನರಿಗೆ ಉದ್ಯೋಗವನ್ನು ಕೊಡಬಹುದಾಗಿದೆ.

ಅಧ್ಯಕ್ಷರು : ಇನ್ನೆಷ್ಟು ಕೊನೆ? ಸಮಯ ಆಗುತ್ತಿದೆ ನಿಮ್ಮಲ್ಲೇ ಅನೇಕರಿಗೆ ಮಾತನಾಡುವುದಕ್ಕೆ ಅವಕಾಶಕೊಡುವುದಕ್ಕೆ ಆಗಿಲ್ಲ.

ಶ್ರೀ ಎ.ರಾಮದಾಸ್ : ಒಟ್ಟಿನಲ್ಲಿ ಇಡೀ ರಾಜ್ಯಪಾಲರ ಭಾಷಣದ ಸಾರಾಂಶವನ್ನು ಎಲ್ಲಾ ರೀತಿಯಿಂದ ಅಳೆದು ನೋಡಿದಾಗ ನನಗನ್ನಿಸುತ್ತದೆ, ಯಾವುದೇ ಒಂದು ಇಲಾಖೆಯಲ್ಲಿ ಅಭಿವೃದ್ಧಿಕಾರ್ಯ ನಡೆದಾಗ ಏಷಿಯಾ ಡೆವಲಪ್‌ಮೆಂಟ್ ಬ್ಯಾಂಕ್ ಇರಬಹುದು ಅಥವಾ ಬೇರೆ ಯಾವುದೇ ಸಂಸ್ಥೆಗಳ ಮೂಲಕ, ಹೊರದೇಶಗಳಿಂದ ಬರತಕ್ಕಂಥ ಹಣವನ್ನು ಇಟ್ಟುಕೊಂಡು ಯೋಜನೆಯನ್ನು ಏನು ಮಾಡುತ್ತೇವೆ, ಹೀಗೆ ಮಾಡಿಕೊಂಡು ಹೆಚ್ಚು ಪರಿಣಾಮ ಅಥವಾ ಲಾಭವನ್ನು ನಿರೀಕ್ಷೆ ಮಾಡಿದಾಗ ಅದು ಕನ್ನಡಿಯೊಳಗಿನ ಗಂಟು ಆಗುವ ಸಾಧ್ಯತೆ ಇಲ್ಲದಿಲ್ಲ. ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಯನ್ನು ಹೆಚ್ಚು ಗಮನದಲಿಟ್ಟುಕೊಂಡು ಯೋಜನೆಗಳನ್ನು ರೂಪಿಸಿದಲ್ಲಿ ಹೆಚ್ಚು ಪ್ರಯೋಜನವಾಗುತ್ತದೆ ಎಂದು ಹೇಳುತ್ತಾ ಇದು ನಾನು ಕೇವಲ ವಿರೋಧಪಕ್ಷದವರಾಗಿ ಹೇಳತಕ್ಕ ವಿಚಾರ ಅಲ್ಲ. ಜನ ಹೆಚ್ಚು ನಿರೀಕ್ಷಣೆ ಮಾಡತಕ್ಕಂಥ ವಿಚಾರದಲ್ಲಿ ಯುವಜನಾಂಗ ಏನು ಇವತ್ತು ನಿರೀಕ್ಷಣೆ ಮಾಡುತ್ತಿದೆ, ಆ ದಿಸೆಯಲ್ಲಿ ಹೆಚ್ಚು ಗಮನಕೊಡುವುದು ಅಗತ್ಯವೆಂದು ಹೇಳಿ ನನಗೆ ಇಷ್ಟು ಮಾತನಾಡಲು ಅವಕಾಶಕೊಟ್ಟಿದ್ದಕ್ಕಾಗಿ ತಮಗೆ ಧನ್ಯವಾದಗಳನ್ನು ಅರ್ಪಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಕೆ. ಶ್ರೀನಿವಾಸಗೌಡ(ಕೋಲಾರ): ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ರಾಜ್ಯಪಾಲರ ಭಾಷಣದ ಬಗ್ಗೆ ವಂದನಾನಿರ್ಣಯವನ್ನು ಸ್ವಾಗತಿಸುತ್ತಾ, ಮಾನ್ಯ ರಾಜ್ಯಪಾಲರು ಚಿಕ್ಕ, ಚೊಕ್ಕ ಮತ್ತು ಎಲ್ಲಾ ಇಲಾಖೆಗಳಿಗೂ ಒತ್ತುಕೊಟ್ಟು ತಮ್ಮ ಭಾಷಣವನ್ನು ಮಾಡಿದ್ದಾರೆ. ನಿಜವಾಗಿಯೂ ಕೂಡ ಅವರ ಭಾಷಣ ಪ್ರಶಂಸನೀಯವಾದುದು. ಇದನ್ನು ನಾವೆಲ್ಲರೂ ಕೂಡ ಸ್ವಾಗತಿಸಲೇಬೇಕಾದ ವಿಚಾರ. ಮೊದಲನೆಯದಾಗಿ ನಮ್ಮ ಸರ್ಕಾರ ಬಂದಮೇಲೆ ಕೇವಲ 47 ದಿನಗಳ ಒಳಗೆ ಹುಬ್ಬಳ್ಳಿಯಲ್ಲಿ ಏನೊಂದು ದೊಡ್ಡ ದುರಂತವಾಗುವುದನ್ನು ತಪ್ಪಿಸಿದರು. ಅಲ್ಲಿಯ ಈದ್ಗಾ ಮೈದಾನದ ವಿಷಯ ಸಣ್ಣ ವಿಷಯವೇನೂ ಅಲ್ಲ. ಇವತ್ತು ಕೆಲವು ಕಿಡಿಗೇಡಿಗಳು ಯಾವಾಗಲೂ ಇದಕ್ಕೆ ಹೆಚ್ಚು ಮಹತ್ವ ಕೊಟ್ಟು ಈ ವಿಷಯ ಯಾವಾಗಲೂ ಜೀವಂತವಾಗಿರಬೇಕೆಂದು ಪ್ರಯತ್ನ ಮಾಡಿದ್ದರು ಎಂದು ಹೇಳಿದರೆ ಅದು ತಪ್ಪಾಗಲಾರದು. ಆದರೆ ಬಹಳ ಸಮಯದಿಂದ ನೆನೆಗುದಿಗೆ ಬಿದ್ದಿದ್ದ ಈ ವಿಷಯವನ್ನು ಅಧಿಕಾರಕ್ಕೆ ಬಂದ ಕೇವಲ 47 ದಿವಸಗಳಲ್ಲಿ ನಮ್ಮ ಸರ್ಕಾರ, ಸಮಯ ಪ್ರಜ್ಞೆಯಿಂದ ಸುಧಾರಿಸಿದ್ದು, ಈ ಗೌರವ ಸರ್ಕಾರಕ್ಕೆ ಸಲ್ಲಬೇಕಾಗುತ್ತದೆ. ನಿನ್ನೆಯ ದಿವಸ ಮಾತನಾಡುತ್ತಿರುವಾಗ ಕೆಲವರು ಹೇಳಿದರು ಏನೆಂದರೆ, ನೀವು ಮುಸ್ಲೀಂ ಬಾಂಧವರ ಓಟನ್ನು ತೆಗೆದುಕೊಂಡಿದ್ದರಿಂದ ಇದು ಸಾಧ್ಯವಾಯಿತು ಎಂದು. ಅವರು 47 ವರ್ಷಗಳಿಂದಲೂ ಕಾಂಗ್ರೆಸ್ ಬಾಂಧವರಿಗೇ ಓಟನ್ನು ಹಾಕಿದ್ದರು......

ಶ್ರೀ ರಾಮಲಿಂಗಾರೆಡ್ಡಿ : ಯಾವ ಪಕ್ಷದವರು ಯಾರಿಗೆ ಓಟು ಹಾಕಿದ್ದಾರೆ ಎಂಬುದು ಹೇಗೆ ಗೊತ್ತಾಗುತ್ತದೆ?

ಶ್ರೀ ಕೆ. ಶ್ರೀನಿವಾಸಗೌಡ : ಇದರಬಗ್ಗೆ, ಈದ್ಗಾ ಮೈದಾನದ ವಿಷಯದಲ್ಲಿ ಹೋದವಾರ 'ಸಂಡೇ' ಪತ್ರಿಕೆಯಲ್ಲಿ ಪ್ರಕಟವಾಗಿರುವುದನ್ನು ನಾನು ಓದಿದೆ.

**6.50 ಪಿ.ಎಂ**

ಹೊಸದಾದ ಒಂದು ಆಯಾಮವನ್ನು ಸೃಷ್ಟಿ ಮಾಡಲಿಕ್ಕೆ ಹೊರಟಿದ್ದಾರೆ. ಈ ದೇಶದಲ್ಲಿ ಮಥುರಾ ದೇವಸ್ಥಾನವನ್ನು ತೆಗೆದುಕೊಂಡರು, ಈಗ ಕಾಶಿವಿಶ್ವನಾಥನನ್ನು ತೆಗೆದುಕೊಂಡು ಹೊರಟಿದ್ದಾರೆ. ಇದನ್ನು ಸರ್ಕಾರದವರು ಈಗಲೇ ಸದೆಬಡಿಯದಿದ್ದರೆ ಈ ದೇಶಕ್ಕೆ ಭವಿಷ್ಯ ಇಲ್ಲ. ನಮ್ಮ ರಾಜ್ಯ ಸರ್ಕಾರ ಕೂಡ ಇದರ ಬಗ್ಗೆ ಕಟ್ಟುನಿಟ್ಟಿನ ಕಠೋರವಾದ ಎಲ್ಲಾ ಪ್ರಯತ್ನಗಳನ್ನು ಮಾಡಿ ಈ ತರದ ಕಿಡಿಗೇಡಿಗಳು ವಿಧ್ವಂಸಕ ಕೃತ್ಯಗಳನ್ನು ಮಾಡದಂತೆ ನೋಡಿಕೊಳ್ಳಬೇಕು ಎನ್ನುವಂತಹ ಮಾತನ್ನು ನಾನು ಹೇಳಬಯಸುತೇನೆ.

ಶ್ರೀ ಎ.ರಾಮದಾಸ್ : ಮಾನ್ಯ ಅಧ್ಯಕ್ಷರೇ, ಕಾಶಿವಿಶ್ವನಾಥ ದೇಶದ್ರೋಹಿ ಎಂದು ಎಲ್ಲಿ ಹೇಳಿದೆ ಎನ್ನುವುದನ್ನು ಮಾನ್ಯ ಸದಸ್ಯರು ಹೇಳಬೇಕು.

ಶ್ರೀ ಕೆ. ಶ್ರೀನಿವಾಸಗೌಡ : ಮಾನ್ಯ ಅಧ್ಯಕ್ಷರೇ, ಸಂಡೇ ಎನ್ನುವ ಒಂದು ಮಾಸಪತ್ರಿಕೆಯಲ್ಲಿ ಕಾಶಿ ವಿಶ್ವನಾಥ ದೇವಸ್ಥಾನದ ಬಗ್ಗೆ ಮಸೀದಿ ಬಗ್ಗೆ ಏನು ಚರ್ಚೆ ಆಗಿದೆ, ಅದರ ಮೇಲೆ ನಾನು ಹೇಳಿದೆ. ಇವತ್ತು ಇವರು ಈ ಒಂದು ವಿಷಯವನ್ನು ಬಂಡವಾಳವಾಗಿಟ್ಟುಕೊಂಡು ಬಾಬರಿ ಮಸೀದಿ ರಾಮನ ಹೆಸರನ್ನು ಹೇಳಿಕೊಂಡು ಹೋದಂಥ ಪಕ್ಷ ಅದನ್ನೇ ಒಂದು ಬಂಡವಾಳವನ್ನಾಗಿ ಮಾಡಿಕೊಂಡು ಹೊರಟರು. ಈ ರೀತಿ ಆದರೆ ಈ ದೇಶಕ್ಕೆ ಭವಿಷ್ಯ ಇಲ್ಲ.

ಅಧ್ಯಕ್ಷರು : ಮಾನ್ಯ ಸದಸ್ಯರಾದ ಶ್ರೀನಿವಾಸಗೌಡರು ಲೋಕಸಭೆಗೆ ಹೋಗಬೇಕೆನ್ನುವ ಆಸೆಯಿಂದ ಇದ್ದಾರೆ. ಅದಕ್ಕೆ ಅವರು ತಯಾರಿ ನಡೆಸುತ್ತಿದ್ದಾರೆ.

ಶ್ರೀ ಕೆ.ಶ್ರೀನಿವಾಸಗೌಡ : ಮಾನ್ಯ ಅಧ್ಯಕ್ಷರೇ, ಇಂತಹ ಶಕ್ತಿಗಳು ಬೆಳೆಯುವುದಕ್ಕೆ ಸರ್ಕಾರ ಬಿಡಬಾರದು. ನಾನು ನೊಂದು ಒಂದು ಮಾತು ನುಡಿಯಬೇಕಾಗಿದೆ.ಕಾಂಗ್ರೆಸ್ ಈ ದೇಶದಲ್ಲಿ ಬಹಳ ಕೆಳಮಟ್ಟಕ್ಕೆ ಹೋಗುತ್ತಿದೆ. ನಾನು ಒಂದು ವಿಷಯವನ್ನು ಹೇಳಬಯಸುತ್ತೇನೆ. ನೇರವಾಗಿ ನಾವು ಇವತ್ತು ಈ ವಿಚಿತ್ರಧಕಾರಿ ಶಕ್ತಿಗಳನ್ನು ಸದೆ ಬಡಿಯಬೇಕಾದರೆ ಕಾಂಗ್ರೆಸ್ ಪಕ್ಷ ದೇಶದಲ್ಲಿ ಇರಬೇಕಾಗುತ್ತದೆ. ಇವತ್ತು ನಮ್ಮ ದೇಶದಲ್ಲಿ ಸೆಕ್ಯುಲರ್ ಥಿಂಕಿಂಗ್ ಇರುವಂತಹ ಪಕ್ಷಗಳು ಇದರ ಬಗ್ಗೆ ಯೋಚನೆ ಮಾಡಬೇಕಾಗುತ್ತದೆ. ಆ ದಿಕ್ಕಿನಲ್ಲಿ ನಾವು ಸ್ವಲ್ಪ ಮಟ್ಟಿಗೆ ಚಿಂತನೆ ಹರಿಸಬೇಕಾಗುತ್ತದೆ. ಆದರೆ ಒಂದು ದುರ್ದೈವದ ಸಂಗತಿ ಅಂದರೆ ಕಾಂಗ್ರೆಸ್ ಸರ್ಕಾರದ ಪರಿಸ್ಥಿತಿ ಕೇಂದ್ರಸರ್ಕಾರದಲ್ಲಿ ಏನಾಗಿದೆ ಅಂದರೆ ಡೆಲ್ಲಿಯಲ್ಲಿ ಒಬ್ಬ ಲಿಕ್ವಿಡೇಟರ್ ಅನ್ನು ಇಟ್ಟುಕೊಂಡು ಡೆಲ್ಲಿಯಲ್ಲಿ ಕುಳಿತಿದ್ದಾರೆ. ಲಿಕ್ವಿಡೇಟರ್ ಅಂದರೆ ಸಾಮಾನ್ಯವಾಗಿ ಬಹಳಷ್ಟು ಜನರಿಗೆ ಗೊತ್ತಾಗುವುದಿಲ್ಲ ಸಹಕಾರ ಸಂಘಗಳಲ್ಲಿ ಎಲ್ಲಾ ಮುಗಿದು ಕೊನೆಯಲ್ಲಿ ಲಿಕ್ವಿಡೇಟರ್ ಅನ್ನು ನೇಮಕ ಮಾಡುತ್ತಾರೆ. ಆ ಲಿಕ್ವಿಡೇಟರ್ ಅವನ ಕೆಲಸ ಏನೆಂದರೆ

ಕೊನೆಯಲ್ಲಿ ಉಳಿದಿರತಕ್ಕಂಥ ಬೆಂಚ್ ಮಾರುವುದು, ಚೇರ್ ಮಾರುವುದು ಬೀರು ಮಾರುವುದು ಅಂತಾದ್ದು ಇಂತಾದ್ದು ಏನಾದರೂ ಉಳಿದಿದ್ದರೆ ಅದನ್ನು ಮಾರುವುದಕ್ಕೆ ಇಟ್ಟುಕೊಂಡಿರುತ್ತಾರ. ಹಾಗೆಯೇ ಕಾಂಗ್ರೆಸ್‌ನವರು ಲಿಕ್ವಿಡೇಟರ್‌ನಂತಹ ಒಬ್ಬ ಅಧ್ಯಕ್ಷರನ್ನು ಇಟ್ಟುಕೊಂಡಿದ್ದಾರೆ. ಈ ಮಾತನ್ನು ನಾನು ಬಹಳ ನೊಂದು ನುಡಿಯಬೇಕಾಗುತ್ತದೆ. ಕಾಂಗ್ರೆಸ್‌ಪಕ್ಷ ಇವತ್ತು ಬಹಳ ಕೆಳಮಟ್ಟಕ್ಕೆ ಹೋಗುತ್ತಿದೆ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಮಾನ್ಯ ಅಧ್ಯಕ್ಷರೇ, ಇವರು ಎಲ್ಲಿದ್ದಾರೆ ಎಂದು ತಿಳಿದುಕೊಂಡು ಮಾತನಾಡಿದರೆ ಒಳ್ಳೆಯದು. ನಾವೇನು ಲಿಕ್ವಿಡೇಟರ್‌ನ್ನು ಇಟ್ಟುಕೊಂಡಿದ್ದೇವೆ ಸರಿ ಆದರೆ ಇವರದ್ದು ಕರ್ನಾಟಕ ಮತ್ತು ಬಿಹಾರ್‌ನಲ್ಲಿ ಬಿಟ್ಟರೆ ಬೇರೆ ಎಲ್ಲಿದ್ದಾರೆ? ಇವರು ಆಕಳು ಮತ್ತು ಕರ ಇದ್ದಂತೆ. ಅಲ್ಲೊಂದು ಇಲ್ಲೊಂದು ಇದೆ. ಬೇರೆಯವರನ್ನು ಲಿಕ್ವಿಡೇಟರ್ ಎಂದು ಕರೆಯುವುದು ಸರಿಯಲ್ಲ. ಸಂಬಂಧ ಇರತಕ್ಕಂಥಾದರ ಬಗ್ಗೆ ಮಾತನಾಡಲಿ.

ಶ್ರೀ ರಾಮಲಿಂಗಾರೆಡ್ಡಿ : ಮಾನ್ಯ ಅಧ್ಯಕ್ಷರೇ, ನಾವು ಈಗ 36 ಜನ ಇದ್ದೇವೆ. ಅವರು ಪಾಪ 22ಜನ ಇದ್ದರು ಆಗ ಅವರ ಪರಿಸ್ಥಿತಿ ಏನಿತ್ತು?

ಅಧ್ಯಕ್ಷರು : ನಿಮ್ಮದು ಶಕ್ತಿ ಕಡಿಮೆ ಆಗಿದೆ ಅವರದ್ದು ಶಕ್ತಿ ಕಡಿಮೆ ಆಗಿದೆ, ನೀವಿಬ್ಬರೂ ಕೂಡಿಹೋಗಿ.

ಶ್ರೀ ಕೆ.ಶ್ರೀನಿವಾಸಗೌಡ : ಮಾನ್ಯ ಅಧ್ಯಕ್ಷರೇ, ಅದಕ್ಕೇ ನಾನು ಮೊದಲು ನೊಂದು ನುಡಿಯುತ್ತಿದ್ದೇನೆ ಎಂದು ಹೇಳಿದ್ದು. ಅದನ್ನು ತಾವು ಸ್ವಲ್ಪ ಗಮನಿಸಿ. ಜನತಾದಳದ ಚುನಾವಣಾ ಪ್ರಣಾಳಿಕೆಯಲ್ಲಿ ಏನು ಹೇಳಿದ್ದೇವೋ ಅದನ್ನೆಲ್ಲಾ ನಾವು ಮಾಡುತ್ತೇವೆ. ಈಗಾಗಲೇ ಕೆಲವು ವಿಷಯಗಳನ್ನು ಅನುಷ್ಠಾನಕ್ಕೆ ತಂದಿದ್ದೇವೆ. ಇದರಲ್ಲಿ ಮುಖ್ಯವಾಗಿ ತಾಲ್ಲೂಕು ಪಂಚಾಯತಿ ಚುನಾವಣೆಗಳು ಜಿಲ್ಲಾ ಪಂಚಾಯತಿ ಚುನಾವಣೆಗಳನ್ನು ಮಾಡಿದ್ದೇವೆ. ಮಾನ್ಯ ನಾಗೇಗೌಡರು ಈಗ ನಮ್ಮ ಕಡೆ ಇದ್ದಾರೆ. ಮಾನ್ಯ .ವೀರಪ್ಪಮೊಯಿಲಿಯವರು ಮುಖ್ಯಮಂತ್ರಿಗಳಾಗಿದ್ದಾಗ ಈ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಚುನಾವಣೆಗಳನ್ನು ಮುಂದಕ್ಕೆ ಹಾಕಿ ಕೊಂಡೇ ಬಂದರು. ಕಡೆಗೆ ದೇವೇಗೌಡರು ಅಧಿಕಾರಕ್ಕೆ ಬಂದ ಮೇಲೆ ಈ ತಾಲ್ಲೂಕು ಪಂಚಾಯತಿ ಜಿಲ್ಲಾ ಪಂಚಾಯತಿ ಚುನಾವಣೆಗಳನ್ನು ಮಾಡಬೇಕಾಯಿತು. ಈ ಒಂದು ಆಶ್ವಾಸನೆಯನ್ನು ನಾವು ಜನತೆಗೆ ಕೊಟ್ಟಿದ್ದೆವು. ಆ ಆಶ್ವಾಸನೆಯನ್ನು ನಮ್ಮ ಸರ್ಕಾರ ಈಡೇರಿಸಿದೆ. ಇವತ್ತು ನಮ್ಮ ಹಳೆಯ ಮೈಸೂರು ಪ್ರಾಂತ್ಯದಲ್ಲಿ ಒಕ್ಕಲಿಗರು ಜಾಸ್ತಿ ಜನ ಇದ್ದಾರೆ. ಅದೇ ರೀತಿಯಾಗಿ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಬಾಂಬೇ ಕರ್ನಾಟಕ ಭಾಗದಲ್ಲಿ ಲಿಂಗಾಯತರು ಪ್ರಾಬಲ್ಯ ಜಾಸ್ತಿ ಇದೆ. ಆದರೂ ಇವತ್ತು ಈ ಕಡೆಗಳಲ್ಲಿ ಕೂಡ ಬಣಜಿಗರು, ಅಗಸರು, ಇತರೇ ಹಿಂದುಳಿದವರ್ಗದ ಅಭ್ಯರ್ಥಿಗಳು ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಚುನಾವಣೆಗಳಲ್ಲಿ ಗೆದ್ದು ಬಂದು ಅನೇಕ ಕಡೆಗಳಲ್ಲಿ ಅಧ್ಯಕ್ಷರಾಗಿದ್ದಾರೆ. ಆದರೆ ಈ ಹಿಂದೆ ಇದು ಸಾಧ್ಯವಾಗುತ್ತಿರಲಿಲ್ಲ. ಇವತ್ತು ನಮ್ಮ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಮೀಸಲಾತಿಯನ್ನು ಹಿಂದುಳಿದ ವರ್ಗದವರಿಗೆ ಕೊಟ್ಟಿದ್ದರ ದಿಸೆಯಿಂದ ಗಾಣಿಗರು, ಗೊಲ್ಲರು, ತಿಗಳರು ಎಲ್ಲಾ ವರ್ಗದ ಜನರು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಗೆದ್ದು ಬಂದಿದ್ದಾರೆ. ಹಿಂದೆ ಪಂಚಾಯತಿ

ಚುನಾವಣೆಗಳಲ್ಲಿ ಈ ವರ್ಗದ ಜನ ಗೆದ್ದಿದ್ದರು ಆದರೆ ಅಧ್ಯಕ್ಷರಾಗುತ್ತಿರಲಿಲ್ಲ. ಕಾರಣ ಇತರೇ ವರ್ಗದ ಪ್ರಾಬಲ್ಯ ಜಾಸ್ತಿ ಇತ್ತು. ಅವರು ಬಿಟ್ಟುಕೊಡುತ್ತಿರಲಿಲ್ಲ. ಇದನ್ನು ತಾವು ಅರ್ಥಮಾಡಿಕೊಳ್ಳಬೇಕು. ದಿವಂಗತ ದೇವರಾಜ ಅರಸುರವರು ಹಿಂದುಳಿದ ವರ್ಗದವರಿಗೆ ಮೀಸಲಾತಿ ಸೌಲಭ್ಯವನ್ನು ಕೊಟ್ಟರು, ಈ ಮಾತನ್ನು ನಾನು ಒತ್ತಿ ಒತ್ತಿ ಹೇಳಬೇಕಾಗಿದೆ. ನಾನು ಆಗ ವಿದ್ಯಾರ್ಥಿಯಾಗಿದ್ದೆ. ಮತ್ತು ಸಿ ಪಿ ಪಕ್ಷದಲ್ಲಿ ಇದ್ದೆ. ಆಗ ಶ್ರೀಮಾನ್ ದೇವರಾಜ ಅರಸರು ಒಂದು ಭೂ ಸುಧಾರಣಾ ಕಾಯ್ದೆಯನ್ನು ತಂದರು, ಈ ಕಾಯ್ದೆಯನ್ನು ತಂದು ಉಳುವವನಿಗೆ ಭೂಮಿಯನ್ನು ಕೊಡುತ್ತಾರೆ ಎಂದು ಮಾತನಾಡಿಕೊಳ್ಳುತ್ತಿದ್ದರು. ಶ್ರೀ ದೇವರಾಜ ಅರಸರು ಮುಖ್ಯಮಂತ್ರಿಗಳಾಗಿದ್ದಾಗ ಕೆಲವರು ಮಾತನಾಡಿಕೊಂಡರು ನಮ್ಮಲ್ಲಿ ಒಬ್ಬ ಜೋಡಿದಾರು ಇದ್ದರು. ಅವರು ಹೇಳಿದರು ಲ್ಯಾಂಡ್ ಸೀಲಿಂಗ್ ಆಕ್ಟ್‌ನ್ನು ಏನಾದರೂ ದೇವರಾಜ ಅರಸರು ಜಾರಿಗೆ ತಂದರೆ ಅವರು ಅಧಿಕಾರದಲ್ಲಿ ಉಳಿಯುವುದಿಲ್ಲ ಎಂದು, ಆದರೆ ಅದರಿಂದ ಅನೇಕ ಜನರಿಗೆ ಅನುಕೂಲ ಆಯಿತು. ಇಂತಹ ಒಳ್ಳೆಯ ಕೆಲಸ ಮಾಡಿದಾಗ ಯಾವ ಪಕ್ಷದವರೇ ಇರಬಹುದು ನಾವು ಅದನ್ನು ಸ್ವಾಗತ ಮಾಡಬೇಕಾಗುತ್ತದೆ. ಅದೇ ಒಂದು ದಿಕ್ಕಿನಲ್ಲಿ ಇವತ್ತು ಮಾನ್ಯ ದೇವೇಗೌಡರು ಒಳ್ಳೆಯ ಕೆಲಸ ಕಾರ್ಯಗಳನ್ನು ಮಾಡಲು ಹೊರಟಿದ್ದಾರೆ. 1983ರಿಂದ 85ರವರೆಗೂ ರಾಮಕೃಷ್ಣ ಹೆಗಡೆಯವರು ಒಳ್ಳೆಯ ಸರ್ಕಾರವನ್ನು ಕೊಟ್ಟರು. ಶ್ರೀಮಾನ್ ವೀರೇಂದ್ರಪಾಟೀಲರು ಸುಮಾರು 11 ತಿಂಗಳು ಒಳ್ಳೆಯ ಸರ್ಕಾರವನ್ನು ರಾಜ್ಯದ ಜನತೆಗೆ ಕೊಟ್ಟರು. ಒಳ್ಳೆಯ ಕೆಲಸ ಮಾಡಿದಾಗ ಪಕ್ಷಾತೀತವಾಗಿ ಎಲ್ಲರೂ ಶ್ಲಾಘನೆ ಮಾಡಬೇಕಾಗುತ್ತದೆ. ಆ ಒಂದು ದಿಸೆಯಲ್ಲಿ ನಮ್ಮ ಸರ್ಕಾರ ಕೂಡ ನಡೆಯುತ್ತಿದೆ. ನಮ್ಮ ಸರ್ಕಾರಕ್ಕೆ ನಾನು ಒಂದು ಕಿವಿ ಮಾತು ಹೇಳುವುದೇನೆಂದರೆ ನಮ್ಮ ನಮ್ಮಲ್ಲಿ ಏನೇ ವ್ಯತ್ಯಾಸಗಳು ಇರಬಹುದು ಆದರೆ ಒಳ್ಳೆಯ ಕೆಲಸ ಮಾಡಿದಾಗ ಸ್ವಾಗತ ಮಾಡಬೇಕು. ಕಾರಣ ಚರಿತ್ರೆ ಪುನರಾವರ್ತನೆಯಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ನಾವು ಕೆಲಸ ಮಾಡಬೇಕಾಗುತ್ತದೆ. ಇನ್ನು ಕೈಗಾರಿಕಾ ನೀತಿಯ ಬಗ್ಗೆ ನಾನು ಮಾತನಾಡುವುದಾದರೆ ಈ ಕೈಗಾರಿಕಾ ನೀತಿ ಹೇಗಿದೆ ಅಂದರೆ ಇಮಾಮ್ ಸಾಬಿಗೂ ಗೋಕುಲಾಷ್ಟಮಿಗೂ ಏನು ಸಂಬಂಧ ಎಂಬ ಹಾಗೆ ಇದೆ. ಇವತ್ತು ನಮ್ಮ ಜಿಲ್ಲೆಯಲ್ಲಿ ಪಂಪ್‌ಸೆಟ್‌ಗಳಿಗೆ ಸರಿಯಾಗಿ ವಿದ್ಯುತ್ ಸೌಲಭ್ಯ ಇಲ್ಲ. ಮೊದಲು ನಮ್ಮ ರಾಜ್ಯದಲ್ಲಿ ವಿದ್ಯುತ್ ಉತ್ಪಾದನೆಯನ್ನು ಹೆಚ್ಚು ಮಾಡಬೇಕಾಗುತ್ತದೆ. ಅದರ ಬಗ್ಗೆ ನಮ್ಮ ಸರ್ಕಾರ ಗಮನಹರಿಸಬೇಕಾಗುತ್ತದೆ. ನಾನು ಚೈನಾ ದೇಶಕ್ಕೆ ಒಮ್ಮೆ ಭೇಟಿ ಕೊಟ್ಟಿದ್ದೆ. ಅಲ್ಲಿ ಕಮ್ಯುನಿಸ್ಟ್ ಸರ್ಕಾರ ಇರುವುದು. 1980ನೇ ಇಸವಿಯಲ್ಲಿ ಅಲ್ಲಿಸುಮಾರು 12-13 ವರ್ಷಗಳಿಂದ ಕಮ್ಯುನಿಸ್ಟ್ ಸರ್ಕಾರ ನಡೆಸಿಕೊಂಡು ಬರುತ್ತಿದ್ದಾರೆ. ನನ್ನ ಜೊತೆಯಲ್ಲಿ ಎಂ.ಚಂದ್ರಶೇಖರ್‌ರವರು ಕೂಡ ಬಂದಿದ್ದರು. ನಾವು ಅಲ್ಲಿನ ಪರಿಸ್ಥಿತಿಯನ್ನು ನೋಡಿದಾಗ ನಮ್ಮಂತಹ ಪ್ರಜಾಪ್ರಭುತ್ವ ದೇಶಗಳು ಅಷ್ಟು ಮುಂದುವರೆದಿಲ್ಲ ಆದರೆ ಕಮ್ಯುನಿಸ್ಟ್ ರಾಷ್ಟ್ರಗಳು ಇಷ್ಟು ಮುಂದುವರಿದಿದೆಯಲ್ಲಾ ಎಂದು ಅನ್ನಿಸಿತು. ಆದ್ದರಿಂದ ನಾನು ಸರ್ಕಾರಕ್ಕೆ ಹೇಳುವುದೇನೆಂದರೆ ನಮ್ಮ ರಾಜ್ಯದಲ್ಲಿ ಮೊದಲು ವಿದ್ಯುತ್‌ಶ್ಚಕ್ತಿಯನ್ನು ಹೆಚ್ಚು ಹೆಚ್ಚು ಉತ್ಪಾದನೆ ಮಾಡಿ ಕೈಗಾರಿಕೆಗಳನ್ನು ಬೆಂಗಳೂರಿನಲ್ಲಿ ಸ್ಥಾಪನೆ ಮಾಡಲು ಬಿಡದೇ ಬೇರೆ ಬೇರೆ ಜಿಲ್ಲೆಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪನೆ ಮಾಡಲು ಅನುಮತಿ

ಕೊಡಬೇಕೆಂದು ನಾನು ಹೇಳುತ್ತೇನೆ. ಈ ದಿಕ್ಕಿನಲ್ಲಿ ಸರ್ಕಾರ ಚಿಂತನೆ ಮಾಡಬೇಕು. ನಾಳೆ ದಿವಸ ನನ್ನ ಭಾಷಣವನ್ನು ಮುಂದುವರಿಸಲಿಕ್ಕೆ ತಾವು ಅವಕಾಶ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಅಧ್ಯಕ್ಷರು : ಈ ಹಿಂದೆ ಮಾನ್ಯ ಬೈರೇಗೌಡರು ಮಾತನಾಡುತ್ತಿದ್ದ ಹಾಗೆ ತಾವೂ ಮಾತನಾಡಲು ಈಗ ಸಮಯಾವಕಾಶವಿಲ್ಲ. ಈ ದಿವಸ 7.30 ಗಂಟೆಗೆ ಮುಖ್ಯ ಮಂತ್ರಿಗಳ ಒಂದು ಔತಣ ಕೂಟ ಇದೆ. ಔತಣ ಕೂಟಕ್ಕೆ ಹೋಗುವ ಮೊದಲು ಮಧ್ಯಪಾನ ನಿಷೇದದ ಬಗ್ಗೆ ತಂದಿರುವ ಖಾಸಗಿ ನಿರ್ಣಯದ ಮೇಲೆ ಚರ್ಚೆ ಕೂಡ ಇದೆ, ಇದರ ಜೊತೆಗೆ ಬಿಲ್‌ಗಳನ್ನೂ ಪಾಸ್ ಮಾಡಬೇಕಾಗಿದೆ. ಆದುದರಿಂದ ಈಗ ತಮ್ಮ ಭಾಷಣವನ್ನು ಬೇಗ ಮುಗಿಸಿ.

ಶ್ರೀ ಕೆ.ಶ್ರೀನಿವಾಸಗೌಡ : ಇನ್ನು ಕೆಲವು ವಿಷಯಗಳ ಮೇಲೆ ನಾನು ಮಾತನಾಡಬೇಕಾಗಿತ್ತು. ನಾಳೆ ದಿವಸ ತಾವು ಅವಕಾಶ ಕೊಟ್ಟರೆ ಒಳ್ಳೆಯದು. ಈಗ ನಾನು ಕೃಷಿ ಇಲಾಖೆ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ರೈತರುಗಳು ದೇಶದ ಬೆನ್ನೆಲೆಬು ಎಂದು ನಾವುಗಳೆಲ್ಲರೂ ಹೇಳುತ್ತೇವೆ. ಆದರೆ, ರೈತರುಗಳಿಗೆ ಬೆನ್ನು ಮೂಳೆಯೇ ಇಲ್ಲದಂಥ ಪರಿಸ್ಥಿತಿ ಇವತ್ತಿನ ದಿವಸಗಳಲ್ಲಿ ಆಗಿದೆ. ಇವತ್ತಿನ ದಿವಸ ಕೃಷಿ ಇಲಾಖೆಯು ಒಂದು ಬಿಳಿ ಆನೆ ಇದ್ದ ಹಾಗೆ. ಮಲ್ಟಿ ನ್ಯಾಷನಲ್ ಕಂಪನಿಗಳು ಬೀಜೋತ್ಪಾದನೆಯ ವ್ಯಾಪಾರದಲ್ಲಿ ನಮ್ಮ ದೇಶದಲ್ಲಿ ತೊಡಗಿರುವುದರಿಂದ ನಮ್ಮ ರೈತರುಗಳಿಗೆ ಅಪಾರ ಹಾನಿಯಾಗುತ್ತಿದೆ. ವ್ಯವಸಾಯ ಇಲಾಖೆ ಏಕಾದರೂ ಇದೆಯೋ ಎನ್ನುವ ಹಾಗಾಗಿದೆ. ಹಾಗೂ ಇದ್ದರೂ ಅದು ಎಲ್ಲಿ ಇದೆ ಎನ್ನುವುದನ್ನು ಈ ಸಮಯದಲ್ಲಿ ನಾವು ಕೇಳಬೇಕಾಗುತ್ತದೆ. ನಮ್ಮ ಸರ್ಕಾರ ಬಂದ ಮೇಲೆ ಕೃಷಿ ಅಭಿವೃದ್ಧಿಗಾಗಿ ಕೆಲವು ಕ್ರಮಗಳನ್ನು ಹಾಕಿಕೊಳ್ಳಲಾಗುತ್ತದೆ. ವ್ಯವಸಾಯಗಾರರನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಶಿವಮೊಗ್ಗ ಜಿಲ್ಲೆಯಲ್ಲಿ ಕೃಷಿ ಪಂಡಿತರೆನಿಸಿಕೊಂಡಿರುವ ಡಿ.ಆರ್.ಪ್ರಫುಲ್‌ಚಂದ್ರ ಅವರಿಗೆ ನಮ್ಮ ರಾಜ್ಯ ಸರ್ಕಾರ ಗೌರವ ಡಾಕ್ಟರೇಟನ್ನು ದಯಪಾಲಿಸುವ ಕ್ರಮವನ್ನು ಹಾಕಿಕೊಂಡಿರುವುದು ನಿಜಕ್ಕೂ ಶ್ಲಾಘನಿಯವಾದ ವಿಚಾರವಾಗಿದೆ. ನಾನು ಒಂದು ವಿಷಯವನ್ನು ಸದನದ ಗಮನಕ್ಕೆ ತರಬಯಸುತ್ತೇನೆ. ಹೋದ ಸಾರಿ ವಿಧಾನ ಸಭೆಯ ಸದಸ್ಯರಾಗಿದ್ದ ಲಕ್ಷ್ಮಣಯ್ಯನವರ ಮನೆಗೆ ನಾನು ಒಂದು ಸಾರಿ ಹೋಗಿದ್ದೆ. ಅವರು ಮನೆಯ ಸುತ್ತ ಹಾಗೂ ಮನೆಯ ಮೇಲಗಡೆ ಇಟ್ಟಿದ್ದ ಕುಂಡಗಳಲ್ಲಿ ರಾಗಿಯನ್ನು ಬಿತ್ತನೆ ಮಾಡಿ ಬೆಳೆದಿದ್ದನ್ನು ನಾನು ನೋಡಿದೆ. ಏನು ರಾಗಿಯನ್ನು ಕುಂಡಗಳಲ್ಲಿ ಬೆಳೆದಿದ್ದೀರಲ್ಲಾ ಎಂದು ಕೇಳಿದ್ದಕ್ಕೆ, ನಾನು ಹಳ್ಳಿಗಾಡು ಪ್ರದೇಶದಿಂದ ಬಂದಿರತಕ್ಕವನು, ನಮ್ಮ ತಂದೆ ತಾಯಿಯರು ಹೊಲದಲ್ಲಿ ರಾಗಿಯನ್ನು ಬಿತ್ತನೆ ಮಾಡಿ ಬೆಳೆಯುತ್ತಿದ್ದರು. ನಾನು ಇಲ್ಲಿ ಇದ್ದರೂ ಕೂಡ ಏನಾದರೂ ಹೊಸದಾಗಿ ಮಾಡಬೇಕೆನ್ನುವ ಬಯಕೆಯಿಂದ ರಾಗಿಯನ್ನು ಕುಂಡಗಳಲ್ಲಿ ಬಿತ್ತನೆ ಮಾಡಿ ಬೆಳೆಯುತ್ತಿದ್ದೇನೆಂದು ಹೇಳಿದರು. ಅದನ್ನು ಕೇಳಿ ನನಗೆ ನಿಜಕ್ಕೂ ಬಹಳ ಸಂತೋಷವಾಯಿತು. ಇವರು ಮಾಡುತ್ತಿರುವ ಕೆಲಸದ ಬಗ್ಗೆ ಸರ್ಕಾರದವರು ಒಳ್ಳೆಯ ಪ್ರಚಾರವನ್ನು ಕೊಟ್ಟು ಕೃಷಿಯಲ್ಲಿ ಅವರ ಮಾರ್ಗದರ್ಶನ ಎಲ್ಲರಿಗೂ ಸಿಗುವ ಹಾಗೆ ಮಾಡಬೇಕು. ಇನ್ನು ರೇಷ್ಮೆ ಕೃಷಿ ಬಗ್ಗೆ ಹೇಳುವುದಾದರೆ, ನಾನು ಕೋಲಾರ ಜಿಲ್ಲೆಯಿಂದ

ಬಂದಿರತಕ್ಕವನು, ಇವತ್ತು ನಾನು ಬೆಳ್ಳಗ್ಗೆ ಬಟ್ಟೆ ಹಾಕಿರಬೇಕಾದರೆ ರೇಷ್ಮೆ ಕೃಷಿಯನ್ನು ಮಾಡುತ್ತಿದ್ದರಿಂದ ಮಾತ್ರ ಸಾಧ್ಯವಾಯಿತು. ಬೇರೆ ದೇಶಗಳಲ್ಲಿ ಬೆಳೆಯತಕ್ಕಂಥ ರೇಷ್ಮೆ ಗೂಡಿನಿಂದ 1400 ಮೀಟರ್‌ಗಳ ವರೆಗೆ ರೇಷ್ಮೆ ಎಳೆಯನ್ನು ತೆಗೆಯುವ ಮಟ್ಟದಲ್ಲಿ ಸುಧಾರಿತ ರೀತಿಯಲ್ಲಿ ರೇಷ್ಮೆ ಬೆಳೆಯನ್ನು ಬೆಳೆಯುತ್ತಿದ್ದಾರೆ. ಅದೇ ನಮ್ಮ ಕಡೆ ಬೆಳೆಯತಕ್ಕಂಥ ರೇಷ್ಮೆ ಗೂಡಿನಿಂದ 700 ರಿಂದ 800 ಮೀಟರ್‌ವರೆಗೆ ಮಾತ್ರ ಎಳೆಗಳು ಸಿಗುತ್ತದೆ. ನಮ್ಮ ಕಡೆ ಉತ್ತಮವಾದ ಗೂಡುಗಳು ಬರದೆ ಇರುವುದಕ್ಕೆ ಕಾರಣಗಳೇನು? ರೇಷ್ಮೆ ಕೃಷಿ ಬಗ್ಗೆ ನಮ್ಮ ಸರ್ಕಾರದವರು ಹೆಚ್ಚಿನ ಗಮನ ಕೊಟ್ಟು ಯಾವ ರೀತಿ ಉತ್ತಮ ಮೊಟ್ಟೆಗಳನ್ನು ತಯಾರು ಮಾಡುವುದು ಹಾಗೂ ಬೆಳೆಯನ್ನು ತೆಗೆಯಬಹುದೆಂಬ ಬಗ್ಗೆ ರಿಸರ್ಚ್ ಮಾಡಿಸಿ ರೈತರುಗಳಿಗೆ ಉತ್ತಮ ಮೊಟ್ಟೆಗಳನ್ನು ಸರಬರಾಜು ಮಾಡುವಹಾಗೆ ಮಾಡಬೇಕು. ಇನ್ನು ಹಾಲಿನ ಉತ್ಪಾದನೆ ಬಗ್ಗೆ ಹೇಳಬೇಕಾದರೆ, ನಮ್ಮ ಕೋಲಾರ ಜಿಲ್ಲೆಯಲ್ಲಿ ಹಾಲಿನ ಉತ್ಪಾದನೆ ಜಾಸ್ತಿ. ಆದರೆ ಹಾಲಿಗೆ ಕೊಡತಕ್ಕಂಥ ಬೆಲೆ ಬಹಳ ಕಡಿಮೆ ಇದೆ. ಇವತ್ತಿನ ದಿವಸ ದನಗಳಿಗೆ ಹಾಕುವಂಥ ಫೀಡ್ ಬೆಲೆ ಗಗನಕೇರಿದೆ ಹುಲ್ಲಿನ ಬೆಲೆ ಜಾಸ್ತಿಯಾಗಿದೆ. ರೈತರುಗಳು ಎಲ್ಲವನ್ನೂ ಕೊಂಡು ಹಾಲನ್ನು ಡೇರಿಗಳಿಗೆ ಹಾಕಿದರೆ ಒಂದು ಲೀಟರ್ ಹಾಲಿಗೆ 4.80 ರೂಪಾಯಿನಿಂದ 6 ರೂಪಾಯಿಯವರೆಗೆ ಮಾತ್ರ ಕೊಡಲಾಗುತ್ತಿದೆ. ಇದರಿಂದಾಗಿ ಇವತ್ತಿನ ದಿವಸ ಹೈನುಗಾರಿಕೆಯನ್ನು ಮಾಡತಕ್ಕಂಥ ರೈತರುಗಳಿಗೆ ಒಂದು ಪೈಸೆ ಕೂಡಾ ಲಾಭ ಸಿಗುತ್ತಿಲ್ಲ. ಆದುದರಿಂದ, ಈಗಲಾದರೂ ರೈತರುಗಳಿಗೆ ಹಾಲಿನ ದರವನ್ನು ಏರಿಸಿ ಸಹಾಯ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಆಮೇಲೆ ಅಂತರ್ಜಲದ ಬಗ್ಗೆ ಹೇಳುವುದಾದರೆ, ರಾಜ್ಯದ ಎಲ್ಲಾ ಕಡೆ ಸಾವಿರಾರು ಬೋರ್ ವೆಲ್‌ಗಳನ್ನು ಹಾಕಿ ನೀರನ್ನು ಮೇಲಕ್ಕೆ ಎತ್ತಲಾಗುತ್ತಿದೆ. ಇವತ್ತಿನ ದಿವಸಗಳಲ್ಲಿ ಕಾಡುಗಳು ಇಲ್ಲದಂತಾಗಿ ಮಳೆ ಕೂಡಿ ಬಹಳ ಕಡಿಮೆ ಬರುತ್ತಿದೆ. ನಮ್ಮ ಜಿಲ್ಲೆಯಲ್ಲಂತೂ ಮಳೆ ಅಪರೂಪವಾಗುತ್ತಿದೆ. ಕೆರೆ ಕುಂಟೆಗಳು ಮತ್ತು ತೆರೆದ ಬಾವಿಗಳಲ್ಲಿ ನೀರಿಲ್ಲದಂತಾಗಿದೆ. ಇದೇರೀತಿ ಮುಂದುವರದರೆ ಇನ್ನು ಕೆಲವೇ ವರ್ಷಗಳಲ್ಲಿ ಕುಡಿಯುವುದಕ್ಕೆ ನೀರು ಸಿಗದೇ ಇರುವಂಥ ಪರಿಸ್ಥಿತಿ ಖಂಡಿತವಾಗಿಯೂ ಬರುತ್ತದೆ. ಅದಕ್ಕಾಗಿ ನಾವು ಭೂಮಿಯಲ್ಲಿನ ಅಂತರ್ಜಲ ಮಟ್ಟವನ್ನು ಏರಿಸಲೇಬೇಕು. ಅಂತರ್ಜಲದ ಮಟ್ಟವನ್ನು ಏರಿಸುವ ದೃಷ್ಟಿಯಿಂದ ಆಂಧ್ರಪ್ರದೇಶದಲ್ಲಿ ಕೆರೆಗಳಲ್ಲಿ ತುಂಬಿಕೊಂಡಿರುವ ಹೂಳನ್ನು ಎತ್ತಿಸಿ ಜೊತೆಗೆ ನೀರು ಹೊರ ಹೋಗದಂಥ ತೂಬುಗಳನ್ನು ಬಂದ್ ಮಾಡಿ ನೀರನ್ನು ಕೆರೆಗಳಲ್ಲಿ ಸದಾ ಕಾಲ ಸಂಗ್ರಹ ಮಾಡುವ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದಾರೆ. ಅವರು ಹಾಗೆ ಮಾಡಿರುವುದರಿಂದ ಆ ಭಾಗಗಳಲ್ಲಿ ಅಂತರ್ಜಲದ ಮಟ್ಟ ಸುಧಾರಣೆಯಾಗಿರುವುದು ಕಂಡು ಬಂದಿದೆ. ಅದೇ ರೀತಿ ನಮ್ಮ ರಾಜ್ಯ ಸರ್ಕಾರವೂ ಅಂತರ್ಜಲ ಮಟ್ಟವನ್ನು ಹೆಚ್ಚಿಸುವ ಸಲುವಾಗಿ ಕೆರೆಗಳಲ್ಲಿ ತುಂಬಿರುವ ಹೂಳನ್ನು ಎತ್ತಿಸಿ, ನೀರು ಹೊರ ಹೋಗದಂತೆ ತೂಬುಗಳನ್ನು ಬಂದ್ ಮಾಡುವ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕೆಂದು ನಾನು ಒತ್ತಾಯ ಮಾಡುತ್ತೇನೆ.

ಅಧ್ಯಕ್ಷರು : 7.30 ಗಂಟೆಗೆ ಮುಖ್ಯ ಮಂತ್ರಿಗಳು ಕರೆದಿರುವ ಔತಣ ಕೂಟಕ್ಕೆ ಹೋಗಬೇಕಾಗಿರುವುದರಿಂದ ತಾವು ದಯವಿಟ್ಟು ಮುಗಿಸಿ.

ಶ್ರೀ ಕೆ.ಶ್ರೀನಿವಾಸ ಗೌಡ : ಮಂಡ್ಯ, ಮೈಸೂರು ಮತ್ತು ಹಾಸನ ಜಿಲ್ಲೆಗೆ ನೀರಿನ ಸಮಸ್ಯೆ ಇಲ್ಲ ಆದರೆ, ನಮ್ಮ ಜಿಲ್ಲೆಗೆ ಕುಡಿಯಲು ನೀರು ಸಿಗಬೇಕಾದರೂ ಬಹಳ ಕಷ್ಟವಾಗಿದೆ.

ಶ್ರೀ ಎಸ್. ಆರ್. ಲಕ್ಷ್ಮಣಯ್ಯ : ಅದು ನಿಮ್ಮ ಹಣೆಬರಹ ಅದಕ್ಕೆ ಏನು ಮಾಡುವುದಕ್ಕಾಗುತ್ತದೆ?

ಶ್ರೀ ಕೆ. ಶ್ರೀನಿವಾಸಗೌಡ : ಹಣೆ ಬರಹ ಎಂದು ಏನೂ ಮಾಡದೇ ಇದ್ದರೆ ನಮ್ಮ ಜಿಲ್ಲೆಯ ಜನರ ಗತಿ ಏನು? ನೀರನ್ನು ಸದುಪಯೋಗ ಪಡಿಸುವ ದೃಷ್ಟಿಯಿಂದ ನಮ್ಮ ಜಿಲ್ಲೆಯಲ್ಲಿ ತೋಟಗಾರಿಕೆ ಮತ್ತು ಇತರೆ ಬೆಳೆಗಳಿಗೆ ಡ್ರಿಫ್ ಇರಿಗೇಷನ್ ಹಾಗೂ ತುಂತುರು ಇರಿಗೇಷನ್‌ಗೆ ಸರ್ಕಾರದವರು ಹೆಚ್ಚಿನ ರೀತಿಯಲ್ಲಿ ಸಬ್ಸಿಡಿ ಕೊಡಬೇಕು. ನಮ್ಮ ಜಿಲ್ಲೆಯಲ್ಲಿ ಮಾವು ವಿಪರೀತ ಬೆಳೆಯಾಲಾಗುತ್ತಿದೆ. ಅದೂ ಅಧ್ಯಕ್ಷರ ತಾಲ್ಲೂಕಾದ ಶ್ರೀನಿವಾಸಪುರದಲ್ಲಿ ಅತಿ ಹೆಚ್ಚಿನ ಹಣ್ಣನ್ನು ಬೆಳೆಯಲಾಗುತ್ತಿದೆ. ಬೈಗಾನ್‌ಪಲ್ಲಿ ಬಾದಾಮಿ, ಮಲಗೋವ ಮುಂತಾದ ಸ್ವಾದಭರಿತವಾಗ ಹಣ್ಣನ್ನು ಬೆಳೆದರೂ ಅವುಗಳನ್ನು ಶೇಖರಣೆ ಮಾಡಲು ಸೂಕ್ತವಾದ ಶೈತ್ಯಾಗಾರದ ಅನುಕೂಲವಿಲ್ಲದೆ ರೈತರುಗಳು ಬಹಳ ನಷ್ಟವನ್ನು ಅನುಭವಿಸುತ್ತಿದ್ದಾರೆ. ಆದ್ದರಿಂದ ಅವಶ್ಯಕತೆ ಇರುವ ಕಡೆಗಳಲ್ಲಿ ಶೈತ್ಯಾಗಾರಗಳನ್ನು ಒದಗಿಸಿ ರೈತರುಗಳಿಗೆ ಅನುಕೂಲ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಪ್ರತಿ ತಾಲ್ಲೂಕುಗಳಲ್ಲೂ ಒಂದೊಂದು ಮಿನಿ ವಿಧಾನಸೌಧವನ್ನು ಕಟ್ಟಿಸಿದರೆ ತಾಲ್ಲೂಕುಗಳು ಮುಂದುವರಿಯುವುದಿಲ್ಲವಾದ್ದರಿಂದ ಪ್ರೊಡಕ್ಟಿವಿಟಿ ಬಗ್ಗೆ ಹೆಚ್ಚಿನ ಗಮನಹರಿಸಬೇಕು. ಇನ್ನು ಕೆ.ಎಸ್.ಆರ್.ಟಿ.ಸಿ ಬಗ್ಗೆ ಹೇಳುವುದಾದರೆ, ಬಸ್ಸುಗಳ ಟಾಪ್ ಮೇಲೆ ಜನರು ಕುಳಿತುಕೊಂಡು ಪ್ರಯಾಣ ಮಾಡುತ್ತಿದ್ದರೂ ಆ ಸಂಸ್ಥೆಗೆ ಲಾಸ್ ಆಗುತ್ತಿದೆ. ಅದೇ ತಮಿಳುನಾಡು ರೋಡ್ ಟ್ರಾನ್ಸ್‌ಪೋರ್ಟ್ ಸರ್ವೀಸ್‌ನವರು ಒಳ್ಳೆಯ ಲಾಭದಾಯಕವಾಗಿ ನಡೆಸುತ್ತಿದ್ದಾರೆ. ಅದೇ ರೀತಿ ನಮ್ಮ ಟ್ರಾನ್ಸ್‌ಪೋರ್ಟ್ ಸಂಸ್ಥೆಯೂ ಲಾಭ ಗಳಿಸುವ ಹಾಗೆ ಮಾರ್ಪಾಡುಗಳನ್ನು ಮಾಡುವ ಕಡೆ ಸರ್ಕಾರವು ಗಮನ ಹರಿಸಬೇಕು. ಬಸ್‌ನ ಒಳಗಡೆಯಲ್ಲಿ ಕಿಕ್ಕಿರಿದು ಜನರು ತುಂಬಿದ್ದು ಬಸ್‌ನ ಮೇಲೆಯೂ ಸಾಕಷ್ಟು ಜನರು ಕುಳಿತುಕೊಂಡು ಪ್ರಯಾಣ ಮಾಡುವ ಪರಿಸ್ಥಿತಿಯನ್ನು ನಾವು ನೋಡುತ್ತಿದ್ದೇವೆ. ಅಂಥ ಕಡೆಗಳಲ್ಲಿ ಸಾಕಷ್ಟು ಬಸ್‌ಗಳನ್ನು ಹಾಕಿ, ಅನಾಹುತುಗಳನ್ನು ತಪ್ಪಿಸ ಬೇಕೆಂದು ಕೇಳಿಕೊಳ್ಳುತ್ತೇನೆ. ಅಂತೆಯೇ ಆಶ್ರಯ ಮುಂತಾದ ಯೋಜನೆಗಳಡಿಯಲ್ಲಿ ನಿರ್ವಸತಿಗರಿಗೆ, ಬಡವರಿಗೆ ಮನೆಗಳನ್ನು ನೀಡಿದ್ದಾರೆ. ಹಾಗೆಯೇ ಸರಕಾರದವರು ಇನ್ನು ಮುಂದೆ ನೀಡಲಿರುವ ಮನೆಗಳಿಗೆ ಮಾನ್ಯ ದೇವರಾಜ್ ಅರಸ್‌ರವರ ಹೆಸರನ್ನು ಇಡಬೇಕೆಂದು ಕೇಳಿಕೊಳ್ಳುತ್ತೇನೆ. ಇನ್ನೂ ಹೇಳಬೇಕಾದ ವಿಚಾರಗಳು ಬಹಳಷ್ಟು ಇದ್ದರೂ ಕೂಡ ಸಮಯಾವಕಾಶದ ಅಭಾವದಿಂದ ನನ್ನ ಮಾತುಗಳನ್ನು ಮುಗಿಸುವ ಮೊದಲು ಸನ್ಮಾನ್ಯ ಅಧ್ಯಕ್ಷರಿಗೆ ನನಗೆ ಕಾಲಾವಕಾಶವನ್ನು ಮಾಡಿಕೊಟ್ಟಿದ್ದಕ್ಕಾಗಿ ಕೃತಜ್ಞತೆಗಳನ್ನು ಸಲ್ಲಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

* ಶ್ರೀಮತಿ ಎನ್.ಜ್ಯೋತಿರೆಡ್ಡಿ (ಗೌರಿಬಿದನೂರು) : ಸನ್ಮಾನ್ಯ ಅಧ್ಯಕ್ಷರೇ, ಸನ್ಮಾನ್ಯ ರಾಜ್ಯಪಾಲರು ದಯಪಾಲಿಸಿದ ಭಾಷಣವನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತಾ ಕರ್ನಾಟಕ ರಾಜ್ಯದ ಜನತೆ ನಮ್ಮ ಪಕ್ಷಕ್ಕೆ ತಮ್ಮ ಪೂರ್ಣ ಬೆಂಬಲವನ್ನು

ಇತ್ತು ಆಶೀರ್ವದಿಸಿ ರಾಜ್ಯದಲ್ಲಿ ಜನತಾದಳದ ಸರಕಾರವನ್ನು ರಚನೆ ಮಾಡಲು ಅನುಕೂಲ ಮಾಡಿಕೊಟ್ಟಿದ್ದಕ್ಕಾಗಿ ಜನತಾಜನಾರ್ಧನರಿಗೆಲ್ಲಾ ನನ್ನ ಕೃತಜ್ಞತೆಗಳನ್ನು ಮೊದಲಿಗೆ ಸಲ್ಲಿಸುತ್ತೇನೆ. ಜನತೆಯು ನಮಗೆ ವಿಶ್ವಾಸದಿಂದ ಕೊಟ್ಟ ಈ ಅಧಿಕಾರವನ್ನು ಜನತೆಯ ಪರವಾಗಿ ಮಾಡಿ ಅವರಿಂದ ಮೆಚ್ಚುಗೆಯನ್ನು ಪಡೆಯುವಲ್ಲಿ ನಮ್ಮ ಸರಕಾರವು ಶ್ರಮಿಸುತ್ತದೆ ಎಂಬ ಭರವಸೆ ನಮ್ಮದು. ಜನತೆಯ ಅಣತಿಯ ಸದ್ವಿನಿಯೋಗವನ್ನು ಮಾಡಿಕೊಂಡು ಜನತೆಗಾಗಿ ತನ್ನೆಲ್ಲಾ ಶ್ರಮವನ್ನು ವಹಿಸಿ ಒಳ್ಳೆಯ ದಾರಿಯಲ್ಲಿ ನಮ್ಮ ಸರಕಾರ ಮುನ್ನಡೆಯುತ್ತದೆ ಎಂಬುದು ನನ್ನ ನಂಬಿಕೆ. ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ಮುಖ್ಯತ: ಹುಬ್ಬಳ್ಳಿಯ ಈದ್ಗಾ ಮೈದಾನದ ವಿವಾದಾತ್ಮಕ ವಿಷಯವನ್ನು ಬಹಳ ಸೂಕ್ತ ರೀತಿಯಲ್ಲಿ ಬಗೆಹರಿಸಿರುವುದನ್ನು ಉಲ್ಲೇಖಿಸಿದ್ದಾರೆ...

(ಸದನದ ವಿದ್ಯುತ್‌ಚ್ಛಕ್ತಿ ಸಂಪರ್ಕ ನಿಂತು ಹೋಯಿತು)

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ಸದನದಲ್ಲಿ ಹಿಂದೆಂದೂ ಈ ರೀತಿಯಲ್ಲಿ ವಿದ್ಯುಚ್ಛಕ್ತಿಯ ಪೂರೈಕೆಯು ನಿಂತು ಹೋಗಿಲ್ಲ. ಬಹುಶಃ ಇದೇ ಮೊದಲ ಉದಾಹರಣೆ ಇರಬಹುದು. ಸಂಪೂರ್ಣವಾಗಿ ಸದನದಲ್ಲಿ ಕತ್ತಲು ಆವರಿಸಿದೆ. ವಿದ್ಯುಚ್ಛಕ್ತಿಯ ವಿಚಾರದಲ್ಲಿ ನಮ್ಮ ಮಹಾನ್ ಸದನದ ಕಥೆಯೇ ಹೀಗಾದರೆ ರಾಜ್ಯದಲ್ಲಿ ಇತರರ ಪರಿಸ್ಥಿತಿಯ ಬಗ್ಗೆ ಗಂಭೀರವಾಗಿ ಯೋಚಿಸಬೇಕು. ಮಾನ್ಯ ಪಟೇಲ್‌ರವರು ಇದು ಹೀಗೆ ಏಕೆ ಎಂದು ಕೇಳಿದರೆ ಕಥೆಹೇಳಲು ಪ್ರಾರಂಭ ಮಾಡುತ್ತಾರೆ...

ಶ್ರೀ ಜೆ.ಹೆಚ್. ಪಟೇಲ್ : ಇದು ಹೀಗೆ ಏಕೆ ಆಯಿತು ಎಂದು ತಾವು ತಾಳ್ಮೆಯಿಂದ ಕೇಳುವುದಾದರೆ ತಾಂತ್ರಿಕ ಲೋಪದೋಷಗಳ ಬಗ್ಗೆ ನಾನು ಹೇಳಬಹುದು.

ಅಧ್ಯಕ್ಷರು : ಶ್ರೀಮತಿ ಜ್ಯೋತಿ ರೆಡ್ಡಿಯವರು ತಮ್ಮ ಭಾಷಣವನ್ನು ಮುಂದುವರಿಸಿ...

ಶ್ರೀ ವಾಟಾಳ್ ನಾಗರಾಜ್‌ರವರು : ಶ್ರೀಮತಿ ಜ್ಯೋತಿ ರೆಡ್ಡಿಯವರು ಭಾಷಣ ಪ್ರಾರಂಭ ಮಾಡುವಾಗಲೇ ಈ ರೀತಿಯಲ್ಲಿ ಕರೆಂಟ್ ಹೋಗಬೇಕೇ? ಪಾಪ, ಅವರಿಗೆ ಮಾನ್ಯ ಅಧ್ಯಕ್ಷರು ಅವಕಾಶ ಮಾಡಿಕೊಡಬೇಕು.

ಶ್ರೀಮತಿ ಎನ್. ಜ್ಯೋತಿರೆಡ್ಡಿ : ಮಾನ್ಯ ಅಧ್ಯಕ್ಷರೇ, ಅಕಸ್ಮಾತ್ತಾಗಿ ಕರೆಂಟ್ ಲೋಪದಿಂದ ನನ್ನ ಮಾತಿಗೆ ಅಡಚಣೆಯಾಯಿತು. ನನಗೆ ತಾವು ಅವಕಾಶ ಕೊಟ್ಟಿದ್ದೀರಿ. ಅದನ್ನು ಪಡೆದು ನಾನು ನನ್ನ ಮಾತುಗಳನ್ನು ಹೇಳ ಬಯಸುತ್ತೇನೆ. Don't give us chance saying 'paapa'. We don't want any sympathy. We are having a right to speak here. I don't want any sympathy from anybody. ನಮ್ಮ ಸರಕಾರದವರು ಬಹಳ ಶಾಂತಿಯುತವಾಗಿ 1992ರ ಜನವರಿಯಿಂದಲೂ ಹುಬ್ಬಳ್ಳಿಯಲ್ಲಿನ ಈದ್ಗಾ ಮೈದಾನ ವಿವಾದ ಏನಿತ್ತು, ಅದನ್ನು ಯಾರಿಗೂ ಮನನೋಯದಂತೆ ಸೌಹಾರ್ದಯುತವಾಗಿ ಬಗೆಹರಿಸಿ ಜನತೆಯ ಮೆಚ್ಚುಗೆಯನ್ನು ಪಡೆದಿದ್ದಾರೆ. ತಾಲ್ಲೂಕು, ಜಿಲ್ಲಾ ಮತ್ತು ಪಂಚಾಯತ್ ಮಟ್ಟದಲ್ಲಿ ಅಧಿಕಾರ ವಿಕೇಂದ್ರೀಕರಣವನ್ನು ಬಹಳ ಅರ್ಥಪೂರ್ಣವಾದ ರೀತಿಯಲ್ಲಿ ಜಾರಿಗೆ ತರುವಲ್ಲಿ ಸೂಕ್ತ ಮತ್ತು ಸಕಾಲಿಕ ಕ್ರಮವನ್ನು ತೆಗೆದುಕೊಂಡಿದೆ. ಸಮಾಜದ ಎಲ್ಲಾ ವರ್ಗದವರಿಗೂ ಅದರಲ್ಲಿಯೂ ಹಿಂದುಳಿದವರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಟ್ಟು

ಅವರೂ ಆಡಳಿತದಲ್ಲಿ ಪಾಲ್ಗೊಳ್ಳಲು ಮೀಸಲಾತಿಯನ್ನು ಜಾರಿಗೆ ತಂದು ಆದರಂತೆ ಚುನಾವಣೆಯನ್ನು ನಡೆಸಿ ಜನತೆಯಿಂದ ಮೆಚ್ಚುಗೆಯನ್ನು ನಮ್ಮ ಸರಕಾರವು ಪಡೆದುಕೊಂಡಿದೆ. ಪಡಿತರ ವ್ಯವಸ್ಥೆಯ ಮುಖೇನ ಜನಸಾಮಾನ್ಯರಿಗೆ 3-20ರೂಗಳಿಗೆ ಒಂದು ಕೇಜಿ ಅಕ್ಕಿಯನ್ನು ವಿತರಣೆ ಮಾಡಿ ಬಡಜನತೆಗೆ ಆಶಾದಾಯಕ ಬದುಕನ್ನು ಕೊಟ್ಟಿದ್ದಾರೆ. ಹಾಗೆಯೇ ರೈತರುಗಳ ಸಾಲದ ಮೇಲಿನ ಸುಸ್ತಿಬಡ್ಡಿಯನ್ನು ಕೂಡ ಮನ್ನಾ ಮಾಡಿದ್ದಾರೆ. ಇಂಥ ಒಂದು ಜನತೆಯ ನೋವು ನಲಿವಿಗೆ ಸ್ಪಸ್ಪಂಧಿಸುವಂಥ ಸರಕಾರವನ್ನು ಜನತೆಯ ಅಣತಿಯನ್ನು ಪಡೆದು ನಾವು ಮುನ್ನಡಿಸಿಕೊಂಡು ಹೋಗುತ್ತಿದ್ದೇವೆ. ಇನ್ನು ನೀರಾವರಿ ಯೋಜನೆಗಳ ಬಗ್ಗೆ ಹೇಳುವುದಾದರೆ ನಮ್ಮ ರಾಜ್ಯದ ಕೆಲವು ಭಾಗಗಳಲ್ಲಿ ಮಾತ್ರ ನೀರಾವರಿಯ ಸೌಲಭ್ಯವಿದ್ದು, ಕೋಲಾರ ಚಿತ್ರದುರ್ಗ ಮುಂತಾದ ಕೆಲವು ಜಿಲ್ಲೆಗಳಿಗೆ ಅಂಥ ಸೌಲಭ್ಯವಿಲ್ಲದೆ ಜನತೆಯು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ನಮ್ಮಲ್ಲಿ ಹಿಂದಿನಿಂದಲೂ ಕನ್‌ವೆನ್‌ಶನಲ್ ಕ್ರಾಫ್‌ಗಳನ್ನು ಮಾಡಿಕೊಂಡು ಬಂದಿದ್ದಾರೆ. ಈ ಆಧುನಿಕ ಯುಗದಲ್ಲಿ ನಾವು ಕೃಷಿ ಕ್ಷೇತ್ರವನ್ನು ಅಭಿವೃದ್ಧಿ ಪಡಿಸಲೇಬೇಕಾಗಿದೆ. ಫ್ಲೋರಿಕಲ್ಚರ್ ಹಾರ್ಟಿಕಲ್ಚರ್ ಮುಂತಾದ ಕ್ಷೇತ್ರಗಳಿಗೆ ಗಣನೀಯ ಸೌಲಭ್ಯ ಇತ್ಯಾದಿಗಳನ್ನು ಕೊಟ್ಟು ಕೃಷಿಕರಿಗೆ ನೆರವಾಗಬೇಕಾಗಿದೆ. ಆ ದಿಶೆಯಲ್ಲಿ ಸರಕಾರದವರು ನೀರಾವರಿ ಕ್ಷೇತ್ರದಲ್ಲಿ ಸಾಕಷ್ಟು ಬಂಡವಾಳ ಹೂಡಿದ್ದರೂ ಅದಕ್ಕೆ ಪ್ರತಿಫಲವಾಗಿ ಸಾಕಷ್ಟು ಕೃಷಿ ಉತ್ಪಾದನೆಯಾಗಿಲ್ಲ ಎಂಬುದನ್ನು ಮನಗಂಡಿದ್ದಾರೆ ಸರ್ಕಾರವು ನೀರಾವರಿ ಮತ್ತು ಒಣ ಭೂಮಿಗಳಿಗೆ ಸಂಬಂಧಪಟ್ಟ ಹಾಗೆ ವ್ಯಾಪಕವಾದ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ದಿಶೆಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿರುವುದು ಸ್ವಾಗತಾರ್ಹ. ನೀರಾವರಿ ವಿಚಾರದಲ್ಲಿ ನಮ್ಮ ಕೋಲಾರ ಜಿಲ್ಲೆಯು ತೀರಾ ವಂಚಿತಪ್ರದೇಶ ಎಂದು ಹೇಳಲೇಬೇಕಾಗುತ್ತದೆ. ನಮ್ಮಲ್ಲಿ ಯಾವುದೇ ನೀರಾವರಿ ಯೋಜನೆಗಳು ಇಲ್ಲ. ಯಾವುದಾದರೂ ಒಂದು ಯೋಜನೆಯನ್ನು ನಮ್ಮಲ್ಲಿ ತಂದು ಕೃಷಿಕರಿಗೆ ನೀರಾವರಿಯ ಅನುಕೂಲತೆಯ ವ್ಯವಸ್ಥೆಯನ್ನು ಮಾಡಿಕೊಡಬೇಕಾಗಿ ಸರಕಾರದವರಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಲಿಫ್ಟ್ ಇರಿಗೇಷನ್ ಮುಂತಾದ ಸ್ಕೀಮ್‌ಗಳನ್ನು ನಮ್ಮಲ್ಲಿ ತಂದು ನೀರಾವರಿಯ ಅನುಕೂಲವನ್ನು ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ನಮ್ಮ ಗೌರಿಬಿದನೂರು ತಾಲ್ಲೂಕು ತುಂಬಾ ಹಿಂದುಳಿದ ಪ್ರದೇಶ. ಇಲ್ಲಿ ನೀರಾವರಿಯ ವಿಚಾರದಲ್ಲಾಗಲೀ, ವಿದ್ಯಾಭ್ಯಾಸದ ವಿಚಾರದಲ್ಲಿಯೇ ಆಗಲಿ ಸೂಕ್ತ ಸೌಲಭ್ಯಗಳೇ ಇಲ್ಲ. ನಮ್ಮಲ್ಲಿನ ರೈತರು ಒಂದು ಬೋರ್‌ವೆಲ್‌ನ್ನು ತೆಗೆಯಬೇಕೆಂದುಕೊಂಡರೂ ಕೂಡ ಅವರಿಗೆ ಬ್ಯಾಂಕ್‌ಗಳಲ್ಲಿ ಸಾಲಸೌಲಭ್ಯಗಳ ವ್ಯವಸ್ಥೆ ಇಲ್ಲ. ಸೆಂಟ್ರಲ್ ಜಿಯಾಲಾಜಿಕಲ್ ಸರ್ವೆಯವರು ನಮ್ಮ ಪ್ರದೇಶವನ್ನು ಟಾರ್ಗೆಟ್ ಏರಿಯಾ ಎಂದು ಮಾಡಿದ್ದಾರೆ. ಈ ಬಗ್ಗೆ ಸರಕಾರದವರು ಸೂಕ್ತ ಕ್ರಮವನ್ನು ಜರುಗಿಸಿ ನಮ್ಮ ರೈತರುಗಳಿಗೆ ಬ್ಯಾಂಕ್ ಸಾಲ ಸೌಲಭ್ಯ ದೊರೆಯುವಂತೆ ಮಾಡಬೇಕು. 1965-70ರ ಅವಧಿಯಲ್ಲಿ ಒಂದು ಸರ್ವೆ ಮಾಡಿ ನಮ್ಮ ತಾಲ್ಲೂಕಿನಲ್ಲಿ 35 ಪರ್‌ಸೆಂಟ್‌ನಷ್ಟು ಮತ್ತು ಅದಕ್ಕಿಂತಲೂ ಜಾಸ್ತಿ ಭಾಗವು ಇರಿಗೇಷನ್ ಲ್ಯಾಂಡ್ ಇದೆ ಎಂದು ಹೇಳಿದ್ದಾರೆ. ನಮ್ಮ ತಾಲ್ಲೂಕ್‌ನ್ನು ಎನ್‌ಡಿಪಿಎಪಿ ತಾಲ್ಲೂಕು ಎಂದು ಡಿಕ್ಲೇರ್ ಮಾಡಿದ ಮೇಲೆ ನಮಗೆ ಎಂಪ್ಲಾಯ್‌ಮೆಂಟ್ ಎಫ್‌ರ್‌ಮೇಷನ್ ಸ್ಕೀಮ್‌ಗಳ ಮೂಲಕ ಆರ್ಥಿಕ ಸೌಲಭ್ಯಗಳು ಸಿಗುತ್ತಾ ಇಲ್ಲ.

ಆದ್ದರಿಂದ ನಮ್ಮ ತಾಲ್ಲೂಕನ್ನು ಡಿಪಿಎಪಿ ತಾಲ್ಲೂಕು ಎಂದು ಪರಿಗಣಿಸಬೇಕಾಗಿ ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಇನ್ನು ನಮ್ಮ ಭಾಗದಲ್ಲಿ ಕುಡಿಯುವ ನೀರಿನ ವಿಚಾರದಲ್ಲಿ ತುಂಬಾ ಸಮಸ್ಯೆಯು ಉದ್ಭವವಾಗಿದೆ. ಸರಕಾರದವರು ಈ ಬಗ್ಗೆ ಸಾಕಷ್ಟು ಹಣ ಬಿಡುಗಡೆ ಮಾಡಿರುವುದು ಸತ್ಯಾರ್ಹವಾದರೂ ಸಮರ್ಪಕವಾಗಿ ವ್ಯವಸ್ಥೆಯು ಆಗುತ್ತಿಲ್ಲ. ಪ್ರತಿಯೊಂದು ಹೆಡ್‌ಕ್ವಾರ್ಟರ್ಸ್‌ನಲ್ಲಿಯೂ, ಸಬ್‌ಡಿವಿಜನ್‌ಗಳಲ್ಲಿಯೂ ಕೆಲವು ಪಂಪ್‌ಸೆಂಟ್‌ಗಳನ್ನು ಹೆಚ್ಚು ಇಟ್ಟುಕೊಳ್ಳಬೇಕು. ಬೋರ್‌ವೆಲ್‌ಗಳು ನಿಷ್ಪ್ರಯೋಜಕವಾದಲ್ಲಿ ಕೂಡಲೇ ಬೇರೆಕಡೆಗಳಲ್ಲಿ ಹಾಕಿ ಜನರಿಗೆ ಅನುಕೂಲ ಮಾಡಿಕೊಡಬೇಕು. ಪ್ರತಿಯೊಂದು ಸಬ್‌ಡಿವಿಜನ್‌ನಲ್ಲಿಯೂ 5-10ಹೆಚ್ಚು ಪಂಪ್‌ಸೆಟ್‌ಗಳನ್ನು ಇಟ್ಟುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಕೆಲವು ವ್ಯಕ್ತಿಗಳು ಟ್ಯಾಂಕ್‌ಗಳ ಪಕ್ಕದ ಜಮೀನನ್ನು ಒತ್ತುವರಿ ಮಾಡಿಕೊಂಡು ಅದು ತಮ್ಮದೇ ಎಂದು ಹೇಳಿಕೊಂಡು ಬೋಗಸ್ ಖಾತಾ ಇತ್ಯಾದಿಗಳನ್ನು ಮಾಡಿಕೊಂಡು ಅಕ್ರಮವೆಸಗಿದ್ದಾರೆ. ನಮ್ಮ ಭಾಗದ ಕರಚನಲಹಳ್ಳಿಯಲ್ಲಿನ ಹಿಂದೆ ಇದ್ದ ಒಂದು ಇರಿಗೇಷನ್ ಟ್ಯಾಂಕ್‌ನ್ನು ಅಕ್ಕಪಕ್ಕದವರು ಒತ್ತುವರಿ ಮಾಡಿಕೊಂಡಿದ್ದು ಅದರಿಂದ ಸಮಸ್ಯೆಯುಂಟಾದ ಬಗ್ಗೆ ಸರಕಾರದ ಗಮನಕ್ಕೆ ತಂದಿದ್ದೆವು. ಆದರೆ ಅದರ ಬಗ್ಗೆ ಸೂಕ್ತ ಕ್ರಮವನ್ನು ಸರಕಾರದವರು ಇನ್ನೂ ತೆಗೆದುಕೊಂಡಿಲ್ಲ. ಆ ಬಗ್ಗೆ ನ್ಯಾಯಾಲಯದ ಮೊರೆ ಹೋಗ-ಬೇಕಾಗಿಬಂತು. ಇದರ ಬಗ್ಗೆ ಸರಕಾರದವರು ಗಮನಹರಿಸಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ. ಇನ್ನು ವಿದ್ಯುಚ್ಛಕ್ತಿಯ ಕುರಿತು ನಾನೇನೂ ಹೇಳಬೇಕಾಗಿಲ್ಲ. ಈ ಸದನದಲ್ಲಿಯೇ ಕರೆಂಟ್‌ನಿಂತು ಹೋದ ಉದಾಹರಣೆಯನ್ನು ಜ್ಞಾಪಿಸಿಕೊಳ್ಳಬಹುದು. ಇಲ್ಲಿಯೇ ಹೀಗೆ ಇದೆ ಎಂದ ಮೇಲೆ ಹಳ್ಳಿಗಾಡುಗಳಲ್ಲಿನ ಪರಿಸ್ಥಿತಿಯನ್ನು ಬೇರೆ ಹೇಳಬೇಕಾಗಿಲ್ಲ. ಹಳ್ಳಿಗಳಲ್ಲಿ ವ್ಯವಸ್ಥೆಗೊಳಿಸಿದ ಟ್ರಾನ್ಸ್‌ಫಾರ್ಮರ್‌ಗಳು ಸರಿಯಾಗಿಲ್ಲ, ಮತ್ತು ಸೂಕ್ತ ಪ್ರಮಾಣದಲ್ಲಿ ಇಲ್ಲ. ಇಲ್ಲಿ ಕೆಲವು ಕೆಟ್ಟುಹೋದ ಟ್ರಾನ್ಸ್‌ಫಾರ್ಮರ್‌ಗಳನ್ನು ಹೊಸದಾಗಿ ಅಳವಡಿಸಲಾಗಿಲ್ಲ. ದಯಮಾಡಿ ಆ ಬಗ್ಗೆ ಸೂಕ್ತ ಕ್ರಮವನ್ನು ತೆಗೆದುಕೊಂಡು ಜನರಿಗೆ ಅನುಕೂಲ ಮಾಡಿಕೊಡಬೇಕಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

**7.20 ಪಿ.ಎಂ**

ಗ್ರಾಮ ನೈರ್ಮಲ್ಯದ ಬಗ್ಗೆ ಹೇಳಬೇಕಾದರೆ ಇದರಿಂದ ತುಂಬಾ ಕಷ್ಟಪಡುತ್ತಿರುವವರು ಹಳ್ಳಿಗಾಡಿನ ಹೆಣ್ಣುಮಕ್ಕಳು ಎಂದು ತಮಗೆಲ್ಲಾ ಗೊತ್ತಿದೆ. because of lack of public lavatories or personal ones. ಇದರ ಬಗ್ಗೆ ಈಗಾಗಲೇ ಕೆಲವು ಸ್ಕೀಮ್ಸನ್ನು ಹಿಂದಿನ ವರ್ಷ ಸ್ಟಾರ್ಟ್ ಮಾಡಿದ್ದಾರೆ. ಇವರು ತಲಾ ಲ್ಯಾವೆಟರಿ ಕಟ್ಟಲು 3500 ರೂ ವ್ಯವಸ್ಥೆ ಮಾಡಿದ್ದಾರೆ. ದಯವಿಟ್ಟು ನೀವು ಯೋಚನೆ ಮಾಡಬೇಕಾಗಿದೆ, 3500 ರೂನಲ್ಲಿ ಎಂತಹ ಲ್ಯಾಟ್ರಿನ್ ಕಟ್ಟಲು ಅವಕಾಶ ಇರುತ್ತದೆ ಅನ್ನುವುದನ್ನು. ಅದೂ ಅಲ್ಲದೆ ಕೆಲಸವನ್ನು ಕೆಲವು ಸ್ವಯಂಸೇವಾ ಸಂಸ್ಥೆಗೆ ಕೊಟ್ಟಿದ್ದಾರೆ. ಇದರಲ್ಲಿ 700 ರೂ ಫಲಾನುಭವಿಯಿಂದ ಪಡೆಯಬೇಕೆಂದು ಜಿ.ಓ ಬಂದಿದೆಯಂತೆ ಹಾಗಾಗಿ ಅವರು 700 ರೂ ತೆಗೆದುಕೊಳ್ಳುತ್ತಿದ್ದಾರೆ. ಇನ್ನು ಉಳಿದಿರುವ 2800 ರೂ ಅವರು ಸ್ಪೆಂಡ್ ಮಾಡಿರುವ ವ್ಯವಸ್ಥೆ ಅಲ್ಲಿ ಕಾಣುತ್ತಿಲ್ಲ. ನಾನು ಹೋಗಿ

ಆ ಲೆಟ್ರಿನ್‌ಗಳನ್ನು ನೋಡಿದ್ದೇನೆ. ತುಂಬಾ ಕಳಪೆ ಲೆಟ್ರಿನ್ ಕಟ್ಟಿಸಿಕೊಟ್ಟಿದ್ದಾರೆ. ಇಂಥವು ಬೇಕಾಗಿಲ್ಲ, ಕೊಡುವಹಾಗಿದ್ದರೆ ಒಳ್ಳೆಯ ಲೆಟ್ರಿನ್‌ಗಳನ್ನು ಕೊಡಿ. ಇಲ್ಲದಿದ್ದರೆ ಬಿಟ್ಟುಬಿಡಿ. ಆ ಹೆಣ್ಣುಮಕ್ಕಳು ಆಚೇನೆ ಹೋಗುವಂತಹ ವ್ಯವಸ್ಥೆಯನ್ನು ಮಾಡಿಕೊಳ್ಳಲಿ. ಇನ್ನು ಹೌಸಿಂಗ್ ಪ್ರಾಬ್ಲಮ್ ಬಂದಾಗ ಲಾಸ್ಟ್ 91ರಲ್ಲಿ ಫ್ಲಡ್ ಡ್ಯಾಮೇಜ್ಡ್ ಹೌಸಸ್ ಎಂದು 6000 ಮನೆಗಳನ್ನು ನಮ್ಮ ತಾಲೂಕಿನಲ್ಲಿ ಕಟ್ಟಿಸಿಕೊಡುತ್ತೇವೆಂದು ತಿಳಿಸಿದ್ದರು. ಇವತ್ತಿನವರೆಗೂ ಅದರ ಬಗ್ಗೆ ಏನೂ ವ್ಯವಸ್ಥೆ ಮಾಡಿಲ್ಲ. ನಾವು ಅದರ ಬಗ್ಗೆ ಸ್ವಲ್ಪ ಹೋರಾಟ ಮಾಡಿದಾಗ ಅದರ ಬಗ್ಗೆ ಏನೋ ಸಿಓಡಿ ತನಿಖೆ ಮಾಡಿದ್ದೇವೆ, ಬೆಂಗಳೂರಿನ ಹೌಸಿಂಗ್‌ಬೋರ್ಡಿಗೆ ವಹಿಸಿದ್ದೆವು ಅದು ಸರಿಯಾಗಿ ನಡೆಯಲಿಲ್ಲ ಎಂದರು ಇದರ ಬಗ್ಗೆ ತಾವು ಗಮನಹರಿಸಿ ಈ ಫ್ಲಡ್ ಡ್ಯಾಮೇಜ್ 6000 ಹೌಸೆಸ್ ಏನಿವೆ ಅದಕ್ಕೆ ಬೇರೆ ಒಂದು ಅವಕಾಶ ಮಾಡಿಕೊಡಬೇಕೆಂದು ತಮ್ಮನ್ನು ಕೇಳಿಕೊಳ್ಳುತ್ತಾ ಈ ಸೈಟ್‌ಲೆಸ್ ಪೀಪಲ್‌ಗೆ ಹಕ್ಕುಪತ್ರ ಕೊಡುವಾಗ ಅದನ್ನು ಹಸ್ಬೆಂಡ್-ವೈಫ್ ಹೆಸರಲ್ಲಿ ಜಾಯಿಂಟಾಗಿ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಟ್ರಾನ್ಸ್‌ಪೋರ್ಟ್ ವಿಷಯಕ್ಕೆ ಬಂದಾಗ ಯಾವುದೇ ಸರ್ಕಾರ ಇದನ್ನು ಸರಿಮಾಡಲು ಅವಕಾಶ ಇಲ್ಲ. Because of high population we can't supply buses to each and every village. ತಮಗೆಲ್ಲರಿಗೂ ಗೊತ್ತಿದೆ. ಆದರೂ ಬೆಂಗಳೂರಿನಲ್ಲಿ ಸಿಟಿ ಬಸಸ್ ಎಂದು ರನ್ ಮಾಡುತ್ತಿರುವಂತೆ ಪ್ರತಿತಾಲೂಕಿನಲ್ಲೂ ನಾಲ್ಕೈದು ಬಸ್‌ಗಳನ್ನು ಇಡೀ ತಾಲ್ಲೂಕು, ಹಳ್ಳಿಗಳಿಗೆ ಹೋಗಿಬರುವಂತಹ ವ್ಯವಸ್ಥೆ ಮಾಡಿಕೊಡಬೇಕೆಂದು ತಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ. ಪ್ರೈಮರಿ ಹೆಲ್ತ್‌ಸೆಂಟರ್‌ಗಳಲ್ಲಿ ತುಂಬಾ ವೇಕ್‌ನ್ಸೀಸ್ ಇದೆ. ಅದನ್ನೆಲ್ಲಾ ಫಿಲಪ್ ಮಾಡಿ ಹಳ್ಳಿಗಾಡಿನಲ್ಲಿ ಕೆಲಸ ಮಾಡುವ ವೈದ್ಯಾಧಿಕಾರಿಗಳನ್ನು ಹಾಕಿಕೊಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಶಿಕ್ಷಣದ ವಿಚಾರದಲ್ಲಿ ಇನ್ನೂ ಹಳ್ಳಿಗಾಡಿನಲ್ಲಿ ಸರಿಯಾದ ಸೌಲಭ್ಯ ಇಲ್ಲವೆಂದು ನಾನು ಭಾವಿಸುತ್ತಿದ್ದೇನೆ. ವಿಶೇಷವಾಗಿ ಗರ್ಲ್ ಶಿಕ್ಷಣ ನಮ್ಮ ಸಮಾಜದಲ್ಲಿ ಅಷ್ಟಾಗಿ ಅಭಿವೃದ್ಧಿಯಾಗಿಲ್ಲ ಈ ಪ್ರೈಮರಿ ಬುಕ್ಸ್‌ಗಳಿಂದಲೇ ಮಾನಸಿಕವಾಗಿ ಹೆಣ್ಣುಮಕ್ಕಳಿಗೆ ಆಸಕ್ತಿ ಇಲ್ಲದಂತೆ ಮಾಡುತ್ತಿದ್ದೇವೆ, ಇದನ್ನು ತಮ್ಮ ಗಮನಕ್ಕೆ ಏಕೆ ತರುತ್ತಿದ್ದೇವೆ. ಎಂದರೆ ಪ್ರೀಸ್ಕೂಲಿಂಗ್ ಬುಕ್ಸ್ ಯಾವುದರಲ್ಲಾಗಲಿ ಭಾವಚಿತ್ರ ಹಾಕುತ್ತಾರೆ, ಅದರಲ್ಲಿ ಅಡಿಗೆ ಮನೆ ಕೆಲಸಮಾಡುವಾಗ ಹೆಣ್ಣುಮಕ್ಕಳ ಚಿತ್ರ ಹಾಕುತ್ತಾರೆ. It shows that from the beginning when the girl child go to the school there it self we are psychologically creating a feeling that her only duty is cooking in the house. ಎಂಬ ಮಾನಸಿಕ ಭಾವನೆ ಬೆಳೆಸುತ್ತಿದ್ದೇವೆ. ಹಾಗಾಗಿ ಇದರ ಬಗ್ಗೆ ಬೇಕಾದರೆ ತಜ್ಞರನ್ನು ವಿಚಾರಿಸಿ why can't you show a Doctor as a girl? ಎಂಬುದು ನನ್ನ ಅನಿಸಿಕೆ. ಒಬ್ಬ ಡಾಕ್ಟರ ಚಿತ್ರ ತೋರಿಸುವಾಗ ಪುರುಷರನ್ನು ತೋರಿಸುತ್ತಾರೆ, ಅದನ್ನೇ ಹೆಣ್ಣು ಮಕ್ಕಳನ್ನು ಏಕೆ ತೋರಿಸಬಾರದೆಂದು ನಾನು ಹೇಳುತ್ತಿದ್ದೇನೆ, ಅಡಿಗೆ ಮಾಡುವುದು ತಪ್ಪು ಎಂದು ಅಲ್ಲ. ಅದಕ್ಕೋಸ್ಕರವೇ ನಾವಿದ್ದೇವೆ ಎಂಬ ಭಾವನೆ ಹೆಣ್ಣುಮಕ್ಕಳಲ್ಲಿ ತರಬಾರದೆಂಬ ಉದ್ದೇಶದಿಂದ ನಾನು ಹೇಳುತ್ತಿದ್ದೇನೆ.who is woman? Woman is a deprived and

exploited class in the society. I am requesting the Government to give us some developmental schemes rather than welfare schemes. ಇದನ್ನು ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮಾಡಿದರ ಒಳ್ಳೆಯದೆಂದು ನನಗೆ ಅನ್ನಿಸಿಕೆ. ಈ ವಿಷಯದ ಬಗ್ಗೆ ಒಂದು ಚಿಕ್ಕ ವಿನಂತಿ ಮಾಡುತ್ತೇನೆ. ಮಹಿಳಾ ಮಂಡಲಗಳನ್ನು ಸ್ಥಾಪನೆ ಮಾಡಬೇಕೆಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ನಮಗೆಲ್ಲಾ ಬಂದಿತ್ತು. ಆದರೆ ಹಾಗೆ ಮಹಿಳಾಮಂಡಲ ಸ್ಥಾಪನೆ ಮಾಡಬೇಕೆಂದು ಹೋದಾಗ ರಿಜಿಸ್ಟ್ರೈಷನ್ ಫೀ 100 ಇದ್ದರೆ ಸಾವಿರ ರೂ ಬ್ರೈಬ್ ಕೊಡದೇ ಇದ್ದರೆ ಅವರು ರಿಜಿಸ್ಟ್ರೇಷನ್ ಮಾಡಿಕೊಡುತ್ತಿಲ್ಲ. ಇಂತಹ ವ್ಯವಸ್ಥೆ ಇದೆ. ಹಳ್ಳಿಗಾಡಿನಹೆಣ್ಣುಮಕ್ಕಳು ಸಾವಿರ ಲಂಚ್ ಕೊಟ್ಟು ರಿಜಿಸ್ಟರ್ ಮಾಡಿಸಿಕೊಳ್ಳುವಂತಹ ಶಕ್ತಿ ಹೊಂದಿಲ್ಲ, ಇದನ್ನು ತಾವು ದಯವಿಟ್ಟು ಸೀರಿಯಸ್ಸಾಗಿ ಗಮನಕ್ಕೆ ತೆಗೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಆಮೇಲೆ ಮಹಿಳಾಮಂಡಲಗಳ ರಿನ್ಯೂವಲ್ಸ್ ಚಾರ್ಜ್ ಇಷ್ಟು ದಿವಸ 2ರೂ ಇತ್ತು, ಒಂದು ವರ್ಷದ ಹಿಂದೆ 100 ರೂ ಮಾಡಿದ್ದಾರೆ, ಹಿಂದೆ ರಿನ್ಯೂವಲ್ಸ್‌ನ್ನು ಕಡ್ಡಾಯವಾಗಿ ಮಾಡಬೇಕೆಂದಿರಲಿಲ್ಲ. ಹಾಗಾಗಿ ತುಂಬಾ ಮಹಿಳಾಮಂಡಲಗಳು 10-15 ವರ್ಷಗಳಿಂದ ರಿನ್ಯೂವಲ್ ಮಾಡಿರಲಿಲ್ಲ. ಈಗ ಕಡ್ಡಾಯ ಬಂದಾಗ ನಾವು ಮಾಡಬೇಕೆಂದು ಹೋದಾಗ ಒಬ್ಬೊಬ್ಬರು 1000, 1500 ರೂಗಳನ್ನು ಕಟ್ಟಬೇಕಾಗಿ ಬಂದಿದೆ. ಹಾಗಾಗಿ ದಯವಿಟ್ಟು ತಾವು ರಿನ್ಯೂವಲ್ ಫೀಜನ್ನು 10, ಅಥವಾ 15 ರೂ ಗೆ ಇಳಿಸಬೇಕೆಂದು ತಮ್ಮಲ್ಲಿ ವಿನಂತಿಸುತ್ತಾ, ಈ ಕಷ್ಟಕಾಲದಲ್ಲಿ ನಾವು ಅಧಿಕಾರಕ್ಕೆ ಬಂದರೂ ಒಳ್ಳೆಯ ಹಂತದಲ್ಲಿ ನಾವು ಹೋಗುತ್ತಿದ್ದೇವೆ, ಅದಕ್ಕೆ ಸ್ವಾಗತಿಸಿ ಈ ಅವಕಾಶ ಮಾಡಿಕೊಟ್ಟಿದ್ದಕ್ಕೆ ತಮಗೆ ವಂದಿಸಿ ನಾನು ಮುಕ್ತಾಯ ಮಾಡುವ ಮೊದಲು ಒಂದು ಸಣ್ಣ ವಿಷಯ, ಬರೆದು ಕೊಂಡಿದ್ದೆ ಆದರೆ ಮರೆತುಬಿಟ್ಟಿದ್ದೇನೆ, Actually women are suffering with drunkard husbands ತಮಗೆ ಗೊತ್ತಿದೆ. complete Prohibition Act ನಮ್ಮ ಸರ್ಕಾರದವರು ತಂದರೆ ಒಳ್ಳೆಯದೆಂದು ನಾನು ಭಾವಿಸುತ್ತಿದ್ದೇನೆ.

## ಖಾಸಗಿ ನಿರ್ಣಯದ ಮೇಲೆ ಚರ್ಚೆ

ಅಧ್ಯಕ್ಷರು : ಈಗ ಖಾಸಗಿ ನಿರ್ಣಯದ ಮೇಲಿನ ಚರ್ಚೆ. ಶ್ರೀ ವಾಟಾಳ್‌ನಾಗರಾಜ್‌ರವರು ದಿನಾಂಕ 31-3-95ರಂದು ಮಂಡಿಸಿದ ಕೆಳಕಂಡ ನಿರ್ಣಯದ ಮೇಲಿನ ಚರ್ಚೆ ಮುಂದುವರಿಸುವುದು. ಈ ರಾಜ್ಯದಲ್ಲಿ ಸಂಪೂರ್ಣ ಪಾನನಿರೋಧ ಜಾರಿಗೆ ತರಬೇಕೆಂದು ಈ ಸಭೆ ಒತ್ತಾಯಿಸುವುದು.

ಶ್ರೀ ವಾಟಾಳ್ ನಾಗರಾಜ್ (ಚಾಮರಾಜನಗರ): ಅಧ್ಯಕ್ಷರೇ, ಸ್ಫೂರ್ತಿನೇ ಬರುತ್ತಿಲ್ಲ, ಇಷ್ಟು ತಡವಾಗಿ ಬರಬೇಕಾದರೆ ಯಾರದೋ ಪಿತೂರಿ ಇರಬೇಕೆನಿಸುತ್ತದೆ. ಏಕೆಂದರೆ ಇದು ಬಹಳ ಮುಖ್ಯವಾದದ್ದು ಇಲ್ಲಿ ಬಹುತೇಕ ಜನ ಈ ನಿರ್ಣಯದ ಪರ ಇಲ್ಲ. ಏನೋ ಬಹುಮತ ಬರುವ ಸೂಚನೆ ಇದೆ.

ಅಧ್ಯಕ್ಷರು : ಇವರೆಲ್ಲಾ ಸೇರಿ ಈ ನಿರ್ಣಯಕ್ಕೆ ಇಲ್ಲಿ ಬಹುಮತ ಕೊಟ್ಟರೆ ಅದನ್ನು ತೆಗೆದುಕೊಂಡು ನೀವು ಗವರ್ನರ್ ಹತ್ತಿರ ಹೋದರೆ ;

ಶ್ರೀ ವಾಟಾಳ್ ನಾಗರಾಜ್ : ಈಗ 7.30 ಗಂಟೆ ಆಯಿತು. ಮಾನ್ಯ ಪಟೇಲರೇ, ನಮಗೆ ಸ್ಪಿರಿಟ್ ಬರುತ್ತಿಲ್ಲ. ನೀವು ಕುಳಿತಿರುವುದರಿಂದ ನಮಗೆ ಸ್ವಲ್ಪ ಧೈರ್ಯ ಬಂದಿದೆ.

ಶ್ರೀ ಜೆ.ಹೆಚ್.ಪಟೇಲ್(ಉಪಮುಖ್ಯಮಂತ್ರಿಗಳು) : ಮಾನ್ಯ ಅಧ್ಯಕ್ಷರೇ, ಇದು ಚರ್ಚೆಗೆ ಬಹಳ ಮುಖಗಳಿದ್ದಾವೆ. So many dimensions. ಅರ್ಧ ಗಂಟೆ ಎಂದು ಇದಕ್ಕೆ ನಿಗಧಿ ಮಾಡುವುದು ಎಂದರೆ ಸಾಧ್ಯವಾಗುವುದಿಲ್ಲ. ಇನ್ನೊಂದು ದಿನ ಇದೆ. ಆವತ್ತು ಮಧ್ಯಾಹ್ನದಿಂದಲೇ ಪ್ರಾರಂಭ ಮಾಡಿ ಬಗೆಹರಿಸುವುದು ಒಳ್ಳೆಯದು. ಪಾನ ನಿಷೇಧವನ್ನು ಮಾಡಬಾರದು ಎಂದು ಸರ್ಕಾರ ಎಲ್ಲೂ ಹೇಳಿಲ್ಲ ಆದರೆ ಪಾನ ನಿಷೇಧದ ಪರಿಣಾಮಗಳು, ಆರ್ಥಿಕ ಸಾಮಾಜಿಕ ಮತ್ತು ಇವತ್ತು ಹಳ್ಳಿಗಾಡಿನ ಮೇಲೆ ಆಗುವ ದುಷ್ಪರಿಣಾಮವನ್ನು ಕಂಡು ನಮ್ಮ ವಾಟಾಳ್ ನಾಗರಾಜ್‌ರವರ ಅಭಿಪ್ರಾಯಕ್ಕೆ ಬಹುತೇಕ ಮನ್ನಣೆ ಇದೆ. ನಮ್ಮಲ್ಲಿ ಆಗಲೀ, ಈ ಕಡೆಯಲ್ಲಿಯೇ ಆಗಲೀ ಎಲ್ಲಾ ಕಡೆ ಮನ್ನಣೆ ಇದೆ. ಗುಜರಾತ್‌ನಲ್ಲಿ ಪಾನನಿಷೇಧವನ್ನು ಜಾರಿಗೆ ತಂದಿದೆ. ಆದರೆ ಅಲ್ಲಿಯೂ ಕೂಡ ಸಕ್ಸಸ್‌ಫುಲ್ ಆಗಿಲ್ಲ. ಪಕ್ಕದ ಆಂದ್ರದಲ್ಲಿ ಪಾನನಿಷೇಧವನ್ನು ತೆಗೆದುಕೊಂಡು ಬಂದರು. ಆ ಐಡಿಯವನ್ನು ಒಪ್ಪುತ್ತೇನೆ. ಇದನ್ನು ಹೇಗೆ ಮಾಡಬೇಕು, ಎಷ್ಟು ಮಾಡಬೇಕು ಎನ್ನುವುದರ ಬಗ್ಗೆ ಮೊದಲು ಚರ್ಚೆ ಮಾಡೋಣ. ಎಷ್ಟೆಷ್ಟು ಮಟ್ಟಿಗೆ ಅದನ್ನು ಜಾರಿಗೆ ತರುವುದಕ್ಕೆ ಪ್ರಯತ್ನ ಮಾಡಬೇಕೋ ಅದನ್ನು ಮಾಡಬೇಕಾಗುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಪಾನ ನಿಷೇಧದ ಬಗ್ಗೆ ಸಮಗ್ರ ಚರ್ಚೆ ಆಗಬೇಕು. ಇದು ರಾಷ್ಟ್ರೀಯ ಚರ್ಚೆ ಆಗಬೇಕು. ಮತ್ತು ಇವರಿಂದ ಬರುವ ಉತ್ಪನ್ನು ಏನು ಇದೆ, ಇದರಿಂದ ಬರುವ ಆದಾಯದಿಂದ ಸರ್ಕಾರ ರಚನೆ ಮಾಡುತ್ತೇವೆ ಎನ್ನುವ ಉದ್ದೇಶ ಏನು ಇದೆಯಲ್ಲಾ ಅದು ನಿಜವಾಗಿಯೂ ಹೋಗಬೇಕು. ಇದರಿಂದ ಬರುವ ಹಣದಿಂದ ನಮ್ಮ ಸರ್ಕಾರದ ಅಭಿವೃದ್ಧಿ ಕಾರ್ಯಗಳು ಆಗುತ್ತದೆ. ಅದಕ್ಕೋಸ್ಕರ ನಾವು ಅದನ್ನು ಜಾರಿಗೆ ತರಬಾರದು ಎನ್ನುವ ನೀತಿ ಇದೆಯಲ್ಲಾ, ಅದು ಇರಬಾರದು ಎಂಬುದು ನನ್ನ ಒತ್ತಾಯ. ನೀವು ಹೇಳುವುದು ನನಗೆ ಅರ್ಥವಾಗುತ್ತದೆ. ನಿಜ. ಇದರಲ್ಲಿ ಬರತಕ್ಕ ಈ ಉತ್ಪನ್ನದಿಂದಲೇ ಸರ್ಕಾರವನ್ನು ನಡೆಸುತ್ತೇವೆ ಎಂದರೆ ಏನು ಅರ್ಥ? ಈ ಉತ್ಪನ್ನಕ್ಕೋಸ್ಕರವಾಗಿಯೇ ಅದು ಇರಬೇಕೇ?

ಶ್ರೀ ಜೆ.ಹೆಚ್.ಪಟೇಲ್ : ಆ ಉತ್ಪನ್ನಕ್ಕೋಸ್ಕರ ಪಾನನಿಷೇಧವನ್ನು ವಿರೋಧ ಮಾಡುತ್ತೇವೆ ಎಂದು ಅಲ್ಲ. ಈ ಉತ್ಪನ್ನಗಳನ್ನು ನಾವು ಬೇರೆ ಮಾರ್ಗಗಳಿಂದಲೂ ಮಾಡಿಕೊಳ್ಳಬಹುದು. ಪಾನನಿಷೇದವನ್ನು ಜಾರಿಗೊಳಿಸಲಾರದಂಥ ಒಂದು ನೀತಿ ಯಾಗಬಾರದು. ಪ್ರಪಂಚದ ಯಾವ ದೇಶದಲ್ಲಿಯೂ ಇದು ಯಶಸ್ವಿಯಾಗಲಿಲ್ಲ. ಎಲ್ಲಾ ರಾಷ್ಟ್ರಗಳಲ್ಲೂ ಮಾಡಿದೆವು. ಚೈನಾದಂಥ ರಾಷ್ಟ್ರದಲ್ಲಿ ಕೂಡ ಇದು ಯಶಸ್ವಿಯಾಗಲಿಲ್ಲ. ಆದರೆ ನಾವು ಇದರಿಂದ ಉತ್ಪನ್ನ ಬರುತ್ತದೆ ಎಂದು ಮಾತ್ರ ನಿಷೇಧ ಮಾಡಿಲ್ಲ. ಹಲವಾರು ಬೇರೆ ಸಾಮಾಜಿಕ ಹಾಗೂ ಶೈಕ್ಷಣಿಕ ಕಾರಣಗಳೂ ಇದ್ದಾವೆ.

ಶ್ರೀ ಜಿ.ವಿ.ಶ್ರೀರಾಮರೆಡ್ಡಿ: ನಿಷೇಧ ಮಾಡಬೇಕು ಎನ್ನುವ ಪ್ರಶ್ನೆ, ನಾವು ಅದನ್ನು ಒಂದೊಂದು ಸಾಮಾಜಿಕ ಚೌಕಟ್ಟಿನಲ್ಲಿ ಅದನ್ನು ಆಲೋಚನೆ ಮಾಡಬೇಕಾಗುತ್ತದೆ. ಎಲ್ಲದಕ್ಕೂ ಒಂದೇ ರೀತಿಯಾದಂಥ ಪ್ಯಾರಾಮೀಟರ್ ಹಾಕಿ ನೋಡುವುದು ಸರಿಯಲ್ಲ. ಎರಡನೆಯದು ಈ ಪಾನನಿಷೇಧವನ್ನು ಮಾಡುವುದು ನಮ್ಮ ರಾಜ್ಯದ ಮಟ್ಟಿಗೆ, ನಮ್ಮ ದೇಶದ ಮಟ್ಟಿಗೆ ಅದರಿಂದ ಸಮಾಜದ ಮೇಲೆ ಆಗುವ ಪರಿಣಾಮಗಳೇನು ಎಂದು ನೋಡಬೇಕಾಗುತ್ತದೆ. ಮಾನ್ಯ ಮುಖ್ಯಮಂತ್ರಿಗಳು ಹೇಳಿದರು, ಯಾವ ದೇಶದಲ್ಲಿ ಪಾನನಿಷೇದವನ್ನು ಜಾರಿಗೆ ತಂದಿಲ್ಲ ಎಂದು ನಿಜ. ಆದರೆ ನಾವು ನೋಡಬೇಕಾದ್ದು ಏನೆಂದರೆ ಬೇರೆ ಎಲ್ಲಾ ದೇಶಗಳ ಪರಿಸ್ಥಿತಿಗೂ ಮತ್ತು ನಮ್ಮ ದೇಶದ ಪರಿಸ್ಥಿತಿಗೂ ಬಹಳ ವ್ಯತ್ಯಾಸ ಇದೆ. ನಮ್ಮ ದೇಶದಲ್ಲಿ ಮಧ್ಯಪಾನದಿಂದ ಸಾಮಾಜಿಕ ವ್ಯವಸ್ಥೆಯ ಮೇಲೆ ಆಗುವ ಪರಿಣಾಮಗಳೇನು ಎನ್ನುವುದನ್ನು ನಾವು ಅಭ್ಯಾಸ ಮಾಡಬೇಕು. ಮಾನ್ಯ ಉಪಮುಖ್ಯಮಂತ್ರಿಗಳು ಹೇಳಿದಂತೆ ಸಾಮಾಜಿಕ ಸಮಸ್ಯೆಗಳು ಇವೆ. ಆದರೆ ಸಾಮಾಜಿಕ ಸಮಸ್ಯೆಗಳು ನಿಷೇಧದಿಂದ ಉದ್ಭವವಾಗುವ ಸಾಮಾಜಿಕ ಸಮಸ್ಯೆಗಳೇನು? ನಿಷೇದವಿಲ್ಲದೆ ಇರುವ ಉದ್ಭವವಾಗುವ ಸಾಮಾಜಿಕ ಸಮಸ್ಯೆಗಳೇನು? ಇವುಗಳನ್ನೆಲ್ಲಾ ನೋಡಬೇಕಾಗುತ್ತದೆ.

ಅಧ್ಯಕ್ಷರು : ಉಪಮುಖ್ಯಮಂತ್ರಿಗಳ ಮಾತಿನ ಅರ್ಥ ಶಾಸನಬದ್ಧವಾಗಿ ನಾವು ಅಧಿಕಾರಿದೋರಣೆಯಿಂದ ನಿಷೇಧ ಮಾಡುವ ಪರಿಣಾಮ, ಸಮಾಜವನ್ನು ಸುಧಾರಿಸಿ ಮನಒಲಿಕೆಯಿಂದ ಮಾಡತಕ್ಕ ಪರಿಣಾಮ, ಅದಕ್ಕೆ ಮಾನಸಿಕ ಸಿದ್ಧತೆ ಇಲ್ಲಿ ನಡದಿದೆಯೇ ಎನ್ನುವ ವಿಚಾರ, ಅದು ಅವರ ಅಭಿಪ್ರಾಯ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಸಾಮಾಜಿಕ ಹಾಗೂ ಶೈಕ್ಷಣಿಕ ಸಮಸ್ಯೆಗಳನ್ನೆಲ್ಲಾ ಅವರು ಹೇಳಿದರು. ಸಾಮಾಜಿಕ ಸಮಸ್ಯೆಗಳು ಹೇಗೆ ಉದ್ಭವವಾಗುತ್ತದೆ? ಅವುಗಳನ್ನು ಕೂಡ ನಾವು ನೋಡಬೇಕಾಗುತ್ತದೆ.

ಶ್ರೀ ಜೆ.ಹೆಚ್.ಪಟೇಲ್ : ತಕ್ಷಣ ನಾನು ಹೇಳಿದ್ದೇ ಸರಿ ಇದೆ ಎಂದಲ್ಲ, ಚರ್ಚೆ ಬೇಕು. ಸಾಕಷ್ಟು ವಿಷಯಗಳನ್ನು ಪ್ರಸ್ತಾಪ ಮಾಡುವುದಕ್ಕೆ ತಯಾರಿದ್ದೇವೆ. ಆದರೆ ಇದು ಕಡಿಮೆ ಸಮಯದಲ್ಲಿ ಮಾಡುವ ಚರ್ಚೆಯಲ್ಲ. ಕಡಿಮೆ ಸಮಯದಲ್ಲಿ ಚರ್ಚೆ ಮಾಡುವುದಕ್ಕಾಗುವುದಿಲ್ಲ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ನಾನು ಅದನ್ನು ಒಪ್ಪುತ್ತೇನೆ.

ಶ್ರೀ ಬಿ.ಸೋಮಶೇಖರ್ : 10-15 ನಿಮಿಷದಲ್ಲಿ ಇದು ಕಿಕ್ಕೂ ಬರುವುದಿಲ್ಲ. ಆದ್ದರಿಂದ ಸ್ವಲ್ಪ ನಿಧಾನವಾಗಿ ತೆಗೆದುಕೊಂಡರೆ ಒಳ್ಳೆಯದು.

ಅಧ್ಯಕ್ಷರು : ನಿಮಗೆ ಆ ಐಡಿಯಾ ಇಲ್ಲ ಎಂದುಕೊಂಡಿದ್ದೆ. ಈ ವಿಚಾರ ನಿಮಗೂ ಗೊತ್ತಿದೆ.

ಡಾ. ಎಂ.ಪಿ.ಕರ್ಕಿ : ನಮ್ಮ ಜಿಲ್ಲೆಯಲ್ಲಿ ಅತಿ ಹಿಂದುಳಿದಿರುವ ಹಾಲಕ್ಕಿ ಮಹಿಳೆಯರು ಈ ಪಾನನಿಷೇಧದ ಬಗ್ಗೆ ಚಳುವಳಿ ಮಾಡಿದ್ದಾರೆ. ನಾನು ಇದರ ಬಗ್ಗೆ ಪ್ರಶ್ನೆಯನ್ನು ಕೂಡ ಕೇಳಿದ್ದೆ. ಅದಕ್ಕೆ ಸರ್ಕಾರದಿಂದ ಉತ್ತರವಾಗಿ ಲೈಸನ್ಸ್ ಇಲ್ಲದೆ ಇರುವ ಅಂಗಡಿಗಳು ಎಂಟು-ಹತ್ತು ಎಂದು ಹೇಳಿದರು, ಕೆಲವು ಪ್ರಶ್ನೆಗಳಿಗೆ "ಇಲ್ಲ" ಎಂದು ಮತ್ತೆ ಕೆಲವಕ್ಕೆ ಉದ್ಭವವಾಗುವುದಿಲ್ಲ ಎಂದು ಉತ್ತರ ಸರ್ಕಾರದಿಂದ ಬಂತು.

ಗೂಡಂಗಡಿಗಳಲ್ಲೂ ಕೂಡ ಮಧ್ಯ ಮಾರಾಟ ಮಾಡುತ್ತಿದ್ದಾರೆ. ನಾನು ಬಂಕಿಕೋಡ್ ಎನ್ನುವ ಗ್ರಾಮದಲ್ಲಿ ಭಾಷಣ ಮಾಡಲು ಹೋದಾಗ ಒಬ್ಬ ಹುಡುಗ ಸೈಕಲ್ ಮೇಲೆ ಚೀಲದಲ್ಲಿ ಇಟ್ಟುಕೊಂಡು ಹೋಗಿ ತರಕಾರಿ ಮಾರಾಟ ಮಾಡುವ ರೀತಿಯಲ್ಲಿ ಮಾರಾಟ ಮಾಡುತ್ತಿದ್ದ. ಇದನ್ನು ಸರ್ಕಾರದ ಗಮನಕ್ಕೂ ತಂದರೂ ಕೂಡ ಅಂಥದ್ದು ಯಾವುದೂ ಇಲ್ಲ. ಎನ್ನುತ್ತಾರೆ. ಸಿಬ್ಬಂದಿಯವರು ಇದನ್ನು ಕಂಡುಹಿಡಿಯುವುದಕ್ಕೆ ಅವರಿಗೆ ನ್ಯಾಯವಾಗಿ ವಾಹನ ಸೌಲಭ್ಯ ಇಲ್ಲ, ಇದೆಲ್ಲಾ ಸಮಸ್ಯೆ ಇದೆ.

ಅಧ್ಯಕ್ಷರು: ಎಲ್ಲವನ್ನೂ ಚರ್ಚೆ ಮಾಡಬಹುದು. ಈ ನಿರ್ಣಯ ಸದನದ ವಸ್ತುವಾಗಿದೆ. ಚರ್ಚೆ ಹಂತದಲ್ಲಿ ಎಲ್ಲರೂ ತಮ್ಮ ತಮ್ಮ ಅಭಿಪ್ರಾಯವನ್ನು ವ್ಯಕ್ತ ಮಾಡಬಹುದು. ಅದಕ್ಕೆ ಅವಕಾಶ ಇರುತ್ತದೆ. ಅದಕ್ಕೆ ಮಾನ್ಯ ಉಪಮುಖ್ಯಮಂತ್ರಿಗಳು ಏನು ಹೇಳಿದ್ದಾರೆಂದರೆ ನಾನಾ ಮುಖಗಳಿದ್ದಾವೆಂದು. ಚರ್ಚೆ ಮಾಡಬಹುದು. ಅದಕ್ಕೆ ಅಭ್ಯಂತರವೇನೂ ಇಲ್ಲ. ಇದನ್ನು ಹಂತ ಹಂತವಾಗಿ ಮಾಡಬೇಕು. ಆಲ್ಕೋಹಾಲ್ ಇದೆಯಲ್ಲಾ, ಒಂದೇ ಸಲ ಮಾಡಬಾರದು ಸ್ಟೇಜ್ ಬೈ ಸ್ಟೇಜ್ ತಾನೇ ಇದು ?

ಡಾ.ಎಂ.ಪಿ. ಕರ್ಕಿ: ಸ್ಟೇಜ್ ಬೈ ಸ್ಟೇಜ್ ನಾನು ಹೇಳುವುದು ಲೈಸನ್ಸ್ ಷಾಪ್ ಇರಲಿ, ಸೆಕೆಂಡ್ ಸ್ಟೇಜ್‌ನಲ್ಲಿ ಲೈಸನ್ಸ್ ಕಮ್ಮಿ ಮಾಡುವಂಥ ಹಂತಕ್ಕೆ ಬರಬಹುದು. ಆದರೆ ಅನ್ ಲೈಸೆನ್ಸ್ಡ್ ಷಾಪ್‌ಗಳು, ಗೂಡಂಗಡಿಗಳಲ್ಲಿ ಮಾರಾಟ ಮಾಡತಕ್ಕದ್ದು, ತರಕಾರಿ ಮಾರಾಟ ಮಾಡುವ ಚೀಲದಲ್ಲಿ ತೆಗೆದುಕೊಂಡು ಹೋಗಿ ಜನರಿಗೆ ಹಂಚತಕ್ಕಂಥದ್ದು ಇದು ನಿಲ್ಲಬೇಕು.

ಅಧ್ಯಕ್ಷರು : ಕೊಳ್ಳುವವನು ಇರುವಾಗ ಮಾರುವವನು ಇದ್ದೇ ಇರುತ್ತಾನೆ. ಒಳ್ಳೆ ಕಥೆಯಾಯಿತಲ್ಲಾ.

ಶ್ರೀ ಆಯ್ಯನೂರು ಮಂಜುನಾಥ್ : ಪಾನನಿರೋಧವನ್ನು ಪ್ರಾರಂಭ ಮಾಡುವುದಕ್ಕೆ ಮೊದಲೇ ಪರ್ಸೆಂಟೇಜ್ ಎಷ್ಟಿತ್ತು ಮತ್ತೆ ಅದನ್ನು ಚಾಲ್ತಿಗೆ ಕೊಟ್ಟಾಗ ಇಲ್ಲಿಯವರೆಗೆ ಏನು ಪರ್ಸೆಂಟೇಜ್ ಇದೆ ಎಂಬುದನ್ನು ನೋಡಿದಾಗ ನಮಗೆ ಅನ್ನಿಸುತ್ತದೆ, ಸುಲಭವಾಗಿ ಸಿಕ್ಕಿದಾಗ ಅದು ಹೆಚ್ಚುತ್ತಾ ಹೋಗುತ್ತದೆ. ಆದಷ್ಟು ಅದನ್ನು ಕಡಿಮೆ ಮಾಡಲು ಹೋಗಬೇಕು. ಹಿಂದೆ ಉಡುಪಿ ಬ್ರಾಹ್ಮಣರ ಹೋಟೆಲ್, ವೀರಶೈವರ ಹೋಟೆಲ್, ಹಿಂದೂ ಮಿಲಿಟ್ರಿ ಹೋಟೆಲ್ ಎಂದೆಲ್ಲಾ ಇತ್ತು. ಈಗ ಸರ್ಕಾರ ಏನಾದರೂ ಸ್ವಲ್ಪ ಲೈಸೆನ್ಸ್ ಫ್ರೀ ಮಾಡಿದರೆ ಪ್ರತಿಯೊಂದು ಬೀದಿಯಲ್ಲಿರುತ್ತದೆ ಒಂದೊಂದು ಅಂಗಡಿಗಳು. ಈಗ ಎಲ್ಲರೂ ಸಾಮಾನ್ಯವಾಗಿ ಜೂಜಾಡುತ್ತಾರೆ. ಸರ್ಕಾರ ಫ್ರೀ ಬಿಟ್ಟರೆ ಎಲ್ಲಾ ಕಡೆಯಲ್ಲಿಯೂ ಆಡುತ್ತಾರೆ. ಅಂಗಡಿಗಳ ಸಂಖ್ಯೆಯೇ ಜಾಸ್ತಿ ಇದ್ದರೆ ಒಳ್ಳೆಯದು. ಸರ್ಕಾರ ಹಾತ ಹಂತವಾಗಿ ಇದನ್ನೆಲ್ಲಾ ನೋಡಬೇಕಾಗುತ್ತದೆ.

(ಗೊಂದಲ)

ಅಧ್ಯಕ್ಷರು : ವಾಟಾಳ್ ಅವರೇ ಮಂಜುನಾಥ್ ಅವರು ಮಾತನಾಡಿದ್ದು ತಮಗೆ ಅರ್ಥ ಆಯಿತಾ? ಈ ವಿಚಾರವೇ ಹೀಗೆ ನಿಷೆ ಬಂದಾಗ ನಿಜ ಮಾತನಾಡುತ್ತಾರೆ,

ಶ್ರೀ ವಾಟಾಳ್ ನಾಗರಾಜ್ : ಅವರು ಪರಮಾತ್ಮನ ಬಗ್ಗೆ ಹೇಳಿದರು. ನನಗೆ ಕೆಲವರು ಬೇಗ ಮುಗಿಸಿ ಎಂದು ಎಚ್ಚರಿಕೆ ಕೊಡುತ್ತಿದ್ದಾರೆ. ಮಾನ್ಯ ಉಪ ಮುಖ್ಯಮಂತ್ರಿಯುವರು ಹೇಳಿದ ಹಾಗೆ ಇದಕ್ಕೆ ಸಾಕಷ್ಟು ಕಾಲಾವಕಾಶ ಕೊಡೋಣ.

ಶ್ರೀ ಅಯ್ಯನೂರು ಮಂಜುನಾಥ್ : ನಾನು ಹೇಳಿದ್ದು ಕುಡುಕನ ಬಗ್ಗೆ. ನುಡಿದ ಹಾಗೆ ನಡೆಯುವವನು ಅವನೊಬ್ಬನೇ ಈ ಸಮಾಜದಲ್ಲಿ ಒಬ್ಬ ಕುಡುಕ ಹೀಗೆ ತೊದಲು ಹೆಜ್ಜೆ ಹಾಕುತ್ತಾನೆ ಹಾಗೆ ಮಾಡುತ್ತಾನೆ. ಅಂತಹ ವ್ಯಕ್ತಿಯನ್ನು ಕಳೆದುಕೊಳ್ಳುವುದಕ್ಕೆ ಮುಂಚೆ ಎಲ್ಲಾ ರೀತಿಯ ಚರ್ಚೆ ಮಾಡಲಿ ಅವಕಾಶ ಆಗಲಿ.

ಅಧ್ಯಕ್ಷರು : ಇವರು ಸತ್ಯವಂತರ ಮಾತು ಆಡುತ್ತಿದ್ದಾರೆ. ನಿಷೇಧ ಮಾಡಿದಾಗ ಸಮಾಜಕ್ಕೆ ಅಪಾಯ ಆಗುತ್ತದೆ ಎಂದು ಹೇಳುತ್ತಿದ್ದಾರೆ.

ಶ್ರೀ ಜಿ.ವಿ.ಶ್ರೀರಾಮರೆಡ್ಡಿ : ಕುಡಿಯುವರರೆಲ್ಲಾ ಸತ್ಯವಂತರು ಅಲ್ಲ. ಅದು ಒಪ್ಪತಕ್ಕದ್ದು ಅಲ್ಲ.

ಶ್ರೀ ಅಯ್ಯನೂರು ಮಂಜುನಾಥ್ : ಕುಡಿದವನು ಹೇಗೆ ತೊದಲುತ್ತಾನೆ ಹಾಗೆಯೇ ನಡೆಯುತ್ತಾನೆ. ಎರಡೂ ತರಹ ಇದೆ : ನೀವು ಪೂರ್ತಿ ಮಾತು ಕೇಳಿಸಿಕೊಳ್ಳುವುದಕ್ಕೆ ಮುಂಚೆಯೇ ಮಾತನಾಡಿದರೆ ಹೇಗೆ? ಮಾನ್ಯ ಉಪಮುಖ್ಯಮಂತ್ರಿಗಳು ಹೇಳಿದ ಹಾಗೆ ನಾನಾ ರೀತಿಯ ಮುಖಗಳು ಇದ್ದಾವೆ. ಬಡವರ ಜೀವನ ಅಲ್ಲಿರತಕ್ಕ ಪರಿಸ್ಥಿತಿ ಬಗ್ಗೆ ಸುದೀರ್ಘವಾಗಿ ಚರ್ಚೆ ಆಗಲಿ. ಬಹಳಷ್ಟು ಕಡೆ ಕೂಲಿಕಾರರ ಪರಿಸ್ಥಿತಿ ಕೂಡ ಅಧ್ಯಯನ ಆಗಲಿ. ಆ ಮೂಲಕ ಅಲ್ಲಿರತಕ್ಕ ಸಂಗತಿಗಳೂ ಕೂಡ ಬೆಳಕಿಗೆ ಬರುತ್ತವೆ. ಮದ್ಯಪಾನಕ್ಕೆ ಮೊರೆ ಹೋಗಲಿಕ್ಕೆ ಇರತಕ್ಕಂಥ ಕಾನೂನು ಕೂಡ ಈ ಸದನದಲ್ಲಿ ಚರ್ಚೆ ಆಗಲಿ ಎಂದು ನನ್ನ ಉದ್ದೇಶ. ಆ ದೃಷ್ಟಿಯಿಂದ ಹೇಳಿದೆ. ಇದರ ಬಗ್ಗೆ ಯೋಚನೆ ಮಾಡಿ.

ಶ್ರೀ ಕೆ.ಎನ್.ನಾಗೇಗೌಡ : ಒಂದೇ ಒಂದು ವಿಚಾರ ಹೇಳುತ್ತೇನೆ. ನಮ್ಮಂಥ ದೇಶಕ್ಕೆ ನಮ್ಮಂಥ ವ್ಯವಸ್ಥೆಗೆ ನಮ್ಮಂತಹ ದೊಡ್ಡ ಪ್ರಜಾಪ್ರಭುತ್ವಕ್ಕೆ ಈ ನಿಷೇದ ಎನ್ನತಕ್ಕ ಪದನೇ ಪಾಪದ ಪದ. ಎಲ್ಲಿ ಕಂಟ್ರೋಲ್ ಎನ್ನುವಂತಹ ಪದ ಬರುತ್ತದೆ. ಆಗ ಏನಾಗುತ್ತದೆ? ಹನುಮಂತಯ್ಯನವರ ಕಾಲದಿಂದ ನಾವು ನೋಡಿಕೊಂಡು ಬಂದಿರತಕ್ಕದ್ದು. ನಮ್ಮ ತಂದೆಯವರು ಹಿಂದೆ ಭತ್ತ ಹಂಚತಕ್ಕ ಕೆಲಸ ಮಾಡುತ್ತಿದ್ದರು. ಆ ಕಂಟ್ರೋಲ್ ಎನ್ನುವ ಪದದಿಂದಲೇ ಅನಾಹುತಗಳು ಜಾಸ್ತಿ ನಿಷೇಧ ಎನ್ನತಕ್ಕದ್ದು ಇಂಗ್ಲೀಷ್ ಪದ. ಆ ನಿಷೇಧ ಮಾಡದೇನೇ ನಮ್ಮ ದೇಶ ಮಿಕ್ಸಡ್ ಏಕಾನಮಿ ಇರತಕ್ಕ ದೇಶದಲ್ಲಿ ಅನೇಕ ಜಾತಿ ಇರತಕ್ಕ ದೇಶದಲ್ಲಿ, ಅನೇಕ ಧರ್ಮ ಇರತಕ್ಕ ದೇಶದಲ್ಲಿ ಬಡತನ ಇರತಕ್ಕ ದೇಶದಲ್ಲಿ, ಬೀಲೋ 50 ಪರ್ಸೆಂಟ್ ಎಜುಕೇಷನ್ ಇರತಕ್ಕ ದೇಶದಲ್ಲಿ ನಾವು ವಿಶಾಲವಾಗಿ ಆ ನಿಷೇಧ ಎನ್ನುವ ಪದ ತೆಗೆದು ಬೇರೆ ಪದ ಕೊಡಬೇಕು. ನೀವು ಕಂಟ್ರೋಲ್ ಮಾಡಿ ನಾನು ಬೇಡವೆಂದು ಹೇಳುವುದಿಲ್ಲ. ನಮ್ಮ ಜಯದೇವಣ್ಣನವರು ಚೆನ್ನಾಗಿ ಹೇಳಿದರು. ನಾವು ಸಪೋರ್ಟ್ ಮಾಡೋಣ ಈ ನಿಷೇಧಕ್ಕೆ ಆಂಧ್ರದಲ್ಲಿ ನಿಷೇಧ ಮಾಡಿದ್ದಾರೆ. ಏನಾಗಿದೆ ಈಗ? ಕಳ್ಳಭಟ್ಟಿಗಳು ಸಾರಾಯಿಗಳು ಎಷ್ಟು ಇವೆ? ಇದರಿಂದ ಜಾಸ್ತಿ ಅಪಘಾತ ವಿನಹ ಬೇರೇನೂ ಇಲ್ಲ. ನಾನು ಒಂದು ಉದಾಹರಣೆ ಹೇಳುತ್ತೇನೆ. ಅಕ್ಕಿ ವಿಚಾರ ಡಿಸ್ಟ್ರಿಕ್ ಮೂವ್‌ಮೆಂಟ್ ಅಕ್ಕಿಯ ಬಗ್ಗೆ ಕಂಟ್ರೋಲ್ ಮಾಡಿದ್ದರು. ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ಅಂತರ್‌ಜಿಲ್ಲಾ ಅಕ್ಕಿ ನಿರ್ಬಂಧ ಮಾಡಿದೆವು. ಬೆಲೆ ಜಾಸ್ತಿ ಆಯಿತು. ಯಾವುದೇ ಪದಾರ್ಥವನ್ನು ನೀವು ತೆಗೆದುಕೊಳ್ಳಿ. ನಿಷೇಧ ಎನ್ನುವ ಪದ ಇಂಗ್ಲೀಷ್ ಪದ,

ಕಂಟ್ರೋಲ್ ಎನ್ನುವ ಪದ ಇಂಗ್ಲೀಷ್ ಪದ. ದಯವಿಟ್ಟು ಮಾನ್ಯ ವಾಟಾಳ್ ನಾಗರಾಜ್ ಅವರು ಕನ್ನಡ ಅಗ್ರಗಣ್ಯನಾಯಕರು ಆ ಪದ ವಾಪಸ್ ತೆಗೆದುಕೊಂಡರೆ ಒಳ್ಳೆಯದು.

ಶ್ರೀ ಚಂದ್ರಕಾಂತ ಜಿ ಬೆಲ್ಲದ್ : ಮಾನ್ಯ ಅಧ್ಯಕ್ಷರೇ, ಮಾನ್ಯ ಉಪಮುಖ್ಯ ಮಂತ್ರಿಗಳು ಈ ವಿಷಯ ಕೂಲಂಕಷವಾಗಿ ಚರ್ಚೆ ಆಗಬೇಕು ಎಂದು ಹೇಳಿದ್ದಾರೆ. ನೀವು ಈ ಸದನದ ಎಲ್ಲಾ ಸದಸ್ಯರ ಅಭಿಪ್ರಾಯವನ್ನು ಪಡೆದಿದ್ದೀರಿ. ಕೂಲಂಕಶವಾಗಿ ಚರ್ಚೆ ಆಗುವುದು ಅಗತ್ಯ ಇದೆ. ನಾನಾ ಮುಖದಿಂದ ಸಮಾಜದ ಮೇಲೆ, ಉಳಿದೆಲ್ಲಾ ದೃಷ್ಟಿಯಿಂದ ಏನು ಪರಿಣಾಮ ಆಗುತ್ತಿದೆ, ನಮ್ಮಲ್ಲಿ ಯಾವ್ಯಾವ ಭಾವನೆಗಳು ಇವೆ. ಯಾವ್ಯಾವ ಪರಿಸ್ಥಿತಿಯಲ್ಲಿ ಜನ ಹಾನಿ ಅನುಭವಿಸುತ್ತಿದ್ದಾರೆ. ಎನ್ನುವುದನ್ನು ಚರ್ಚೆ ಮಾಡಬೇಕಾಗಿದೆ. ಆರ್ಥಿಕವಾಗಿ ಸರ್ಕಾರಕ್ಕೆ ಬರುವಂತಹ ಬೊಕ್ಕಸಕ್ಕೆ ಹಾನಿ ಆಗುವುದಿಲ್ಲ. ಇವತ್ತು ಅನೇಕ ದೃಷ್ಟಿಯಿಂದ ನಾವು ನಿಷೇಧ ಮಾಡುವುದರಿಂದ, ಕಳಪೆ ಶೆರೆ ಕುಡಿಯುವುದಕ್ಕೆ ಶುರು ಮಾಡುತ್ತಾರೆ ಎನ್ನುವುದೂ ಸಹ ತಪ್ಪಾಗುತ್ತದೆ. ಏಕೆಂದರೆ ನಮಲ್ಲಿ ನಿಯಂತ್ರಣ ಇಲ್ಲ. ನಮ್ಮ ಅಧಿಕಾರಿಗಳು ಏನು ಮಾಡುತ್ತಿದ್ದಾರೆ ಎನ್ನುವುದನ್ನು ನಾವೆಲ್ಲಾ ವಿಚಾರ ಮಾಡಬೇಕಾಗಿದೆ. ಈ ಕಳಪೆಯನ್ನೂ ಅವರೇ ವ್ಯವಸ್ಥೆ ಮಾಡುತ್ತಾರೆ, ಈ ಅನ್ ಅಥರೈಸ್ಡ್ ಸೇಲ್ ಮಾಡುವುದಕ್ಕೂ ಅವರೇ ವ್ಯವಸ್ಥೆ ಮಾಡುತ್ತಾರೆ. ಈ ಎಲ್ಲಾ ವ್ಯವಸ್ಥೆಯನ್ನು ನಾವು ಬಹಳ ಬೆಳೆಸಿದ್ದೇವೆ. ಕಂಟ್ರೋಲ್ ಮಾಡುವುದು ಅಗತ್ಯ ಇದೆ, ಇವತ್ತಿನ ದಿವಸ ಸಮಾಜದ ಬೆಳವಣಿಗೆಯ ದೃಷ್ಟಿಯಿಂದ ಕಂಟ್ರೋಲ್ ಮಾಡುವ ಅವಶ್ಯಕತೆ ಇದೆ. ಬೇರೆ ಆದಾಯ ಮಾಡುವುದಕ್ಕೆ ಅವಕಾಶ ಇದೆ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಮಾನ್ಯ ಅಧ್ಯಕ್ಷರೆ, ಭಾರತದಂತಹ ದೇಶದಲ್ಲಿ ನಿಷೇಧ ಸರಿಯಿಲ್ಲ ಎಂದು ಮಾನ್ಯ ನಾಗೇಗೌಡರು ಹೇಳತಕ್ಕದ್ದು ಸರಿಯಲ್ಲ. ಈ ಮಧ್ಯಪಾನ ಎನ್ನತಕ್ಕದ್ದು ನಾವು ಚರಿತ್ರೆಯಲ್ಲಿ ನೋಡಿದಾಗ ಯೂರೋಪ್ ರಾಷ್ಟ್ರಗಳಲ್ಲಿ, ಅತ್ಯಂತ ಚಳಿ ಇರುವ ರಾಷ್ಟ್ರದಲ್ಲಿ ಅವಶ್ಯಕತೆ ಇದೆ. ಭಾರತ ದೇಶದಲ್ಲಿ ಅದು ಅನಿವಾರ್ಯ ಎನ್ನುವ ಪ್ರಶ್ನೆ ನಾನು ಒಪ್ಪುವುದಿಲ್ಲ. ಅದು ಸರಿಯಲ್ಲ ಭಾರತದಂತಹ ದೇಶಕ್ಕೆ ಅನಿವಾರ್ಯವಲ್ಲ. ಆದರೆ ನಮ್ಮ ದೇಶದಲ್ಲಿ ಹಲವಾರು ಧರ್ಮ ಇದೆ. ಧರ್ಮ ದೇಶದಲ್ಲಿ ಸುರಾಪಾನ ನಡೆಯುತ್ತಿತ್ತು. ಎನ್ನುವಂತಹ ಕಥೆ ನಾನು ಅದನ್ನು ನಂಬುತ್ತೇನೋ ಬಿಡುತ್ತೇನೋ ಅದು ಬೇರೆ ಪ್ರಶ್ನೆ ಆದರೆ ಆ ದೇವರುಗಳು ಕೂಡ ಇದ್ದಂಥ ಪ್ರದೇಶಗಳು ಕೂಡ ಯಾವುದು ಎಂಬುದನ್ನು ಗುರುತಿಸಿದ್ದೇವೋ ಇಲ್ಲವೋ ಗೊತ್ತಿಲ್ಲ. ಈಜಿಪ್ಟ್ ದೇಶ ಅಥವಾ ನಮ್ಮ ಭಾರತದೇಶದ ಹಿಮಾಚಲ ಪರ್ವತದ ಸುತ್ತಲೂ ಇರಬಹುದು. ಆದರೆ ಅದು ಅನಿವಾರ್ಯ ಆಗತಕ್ಕ ದೃಷ್ಟಿ, ಅಲ್ಲ. ಅವಶ್ಯಕ ಎನ್ನತಕ್ಕ ದೃಷ್ಟಿಯಿಂದ ಚರ್ಚೆ ಮಾಡಬಹುದು ಆದರೆ ಅದು ಅನಿವಾರ್ಯ ಪ್ರಶ್ನೆ ಅಲ್ಲ ಎಂದು ಹೇಳುತ್ತೇನೆ.

ಶ್ರೀ ಕೆ.ಎಸ್.ಪುಟ್ಟಣ್ಣಯ್ಯ : ಚುನಾವಣೆಯಲ್ಲಿ ಗೆದ್ದ ಮೇಲೆ ನಾನು ಭಾಷಣ ಮಾಡುತ್ತಿದ್ದೆ. ನಾನು ಭಾಷಣ ಮಾಡುತ್ತಿದ್ದಾಗ ಒಬ್ಬ ಎಣ್ಣೆ ಹಾಕಿದ್ದ. ನಮ್ಮ ಹಳ್ಳಿ ಭಾಷೆಯಲ್ಲಿ ಹೇಳುವುದಾದರೆ. ನೀವು ಒಬ್ಬ ಮಧ್ಯಪಾನದ ಬಗ್ಗೆ ಏನು ಮಾಡುವುದಕ್ಕೆ ಸಾಧ್ಯ ಇದೆ. ನಮ್ಮ ಕಡೆ ಬಹಳ ಜನ ಇಲ್ಲಿ ಇದ್ದಾರೆ, ಏನು ಮಾಡಿದರೂ ಅದನ್ನು ನಿಲ್ಲಿಸುವುದಕ್ಕೆ ಅವರು ಬಿಡುವುದಿಲ್ಲ ಎಂದು ಹೇಳಿದ. ಅವರ ಪಾರ್ಟಿಯಿಂದ ಅದನ್ನು

ಜಾರಿಗೆ ತಂದೇ ತರುತ್ತೇವೆ. ನೀನು ರೈತರ ಸಂಘದವನು ಇರುವುದು ಒಬ್ಬನೇ ಏನು ಮಾಡುವುದಕ್ಕೆ ಸಾಧ್ಯ ಎಂದು ಅವನು ಹೇಳಿದ ನಾನು ಏನು ಹೇಳುವುದು ಎಂದರೆ ನಾವು ಸದನದೊಳಗೆ ಎಷ್ಟು ಬೇಕಾದರೂ ಚರ್ಚೆ ಮಾಡೋಣ. ಇಡೀ ಕರ್ನಾಟಕದಲ್ಲಿ ಓದಿದ ಜನರು ಮಹಿಳೆಯರು, ಒಂದು ಕಡೆಯಿಂದ ಮಧ್ಯಪಾನ ಬೇಕೋ ಬೇಡವಾ ಎಂದು ಸಹಿ ಮಾಡಿಸಿ ಬಿಡಿ. ರಾಜ್ಯದಲ್ಲಿರತಕ್ಕ ಜನಾಭಿಪ್ರಾಯದ ಮೇಲೆ ನಾವು ತೀರ್ಮಾನ ಮಾಡುವುದು ಸುಲಭ. ಮೊನ್ನೆಯ ದಿವಸ ನಮ್ಮಲ್ಲಿ ಒಂದು ಇನ್ಸಿಡೆಂಟ್ ಆಯಿತು. ವಿ.ಸಿ. ನಾಲೆಗೆ ಆರು ಜನ ಬಿದ್ದರು. ಮೂರು ಜನ ಹೆಣ್ಣು ಮಕ್ಕಳು ಮೂರು ಜನ ಗಂಡು ಮಕ್ಕಳು. ಯಾವುದೋ ಒಂದು ಕಾರಣಕ್ಕೆ. ನಾವು ಎಷ್ಟು ದುಡಿದು ಬಂದರೂ ಒಬ್ಬನೇ ಒಬ್ಬ ಗಂಡಸು ಕುಡಿದು ಬಂದು ಹಾಳು ಮಾಡುತ್ತಾನೆ, ನಾವು ಇನ್ನೂ ಏಕೆ ಬದುಕಬೇಕು ಎಂದು ಹೇಳಿ ಆರು ಜನ ನಾಲೆಗೆ ಬಿದ್ದರು. ಇಬ್ಬರು ಎಸ್ಕೇಪ್ ಆದರು ನಾಲ್ಕು ಜನ ಸತ್ತರು. ಆದ್ದರಿಂದ ಇಡೀ ಜನತೆಯ ಅಭಿಪ್ರಾಯವನ್ನು ಕ್ರೋಢೀಕರಿಸಬೇಕು. ಪಾನ ನಿರೋಧದ ಬಗ್ಗೆ ಒಂದು ಅಂತಿಮ ತೀರ್ಮಾನಕ್ಕೆ ಬರಬೇಕು. ನನ್ನ ಅಭಿಪ್ರಾಯದಲ್ಲಿ ಇವತ್ತಿನ ದಿವಸ ಅದು ಯಾವುದೇ ಪಕ್ಷ ಆಗಬಹುದು, ರೈತ ಸಂಘ ಆಗಬಹುದು, ಕಾಂಗ್ರೆಸ್ ಆಗಬಹುದು ದಳ ಆಗಬಹುದು ಇಲ್ಲ ಬಿಜೆಪಿ ಆಗಬಹುದು. ಇವತ್ತು ಇಡೀ ಗ್ರಾಮೀಣ ಪ್ರದೇಶದಲ್ಲಿ ಏನು ಇಷ್ಟು ಹೆಂಡ ಸಾರಾಯಿ ಬೆಳವಣಿಗೆ ಆಗಿದ್ದು ಈ 15-20 ವರ್ಷದಿಂದ ಅದಕ್ಕೆ ಚುನಾವಣೆಯೇ ಮುಖ್ಯ ಕಾರಣ.

Sri Qumarul islam : For your information, Bangalore is having more pubs than Bombay.

ಶ್ರೀ ಕೆ.ಎಸ್.ಪುಟ್ಟಣ್ಣಯ್ಯ : ಜನರ ಅಭಿಪ್ರಾಯವನ್ನು ಕ್ರೋಢೀಕರಿಸುವುದರಿಂದ ಬದಲಾವಣೆ ಆಗುವುದಕ್ಕೆ ಸಾಧ್ಯ ಎಂಬುದು ನನ್ನ ಅಭಿಪ್ರಾಯ.

ಶ್ರೀ ವಾಟಾಳ್ ನಾಗರಾಜ್ : ಈ ನಿಷೇಧ ಎನ್ನುವ ಪದ ತೆಗೆಯಬೇಕು ಒಳ್ಳೆಯದಲ್ಲ ಎಂದು ಮಾನ್ಯ ನಾಗೇಗೌಡರು ಹೇಳಿದರು. ದೆವ್ವದಪುರಾಣವನ್ನು ಕೇಳಿದ ಹಾಗೆ ಆಯಿತು. ಈ ತರಹ ಸಲಹೆ ಕೊಟ್ಟರೆ ಅದು ಒಳ್ಳೆಯ ಸಲಹೆ ಏನಲ್ಲ. ತಾವು ಕೇಳಿಸಿಕೊಳ್ಳಬೇಕು. ಇದು ದೆವ್ವದ ಹತ್ತಿರ ಭಗವದ್ಗೀತೆ ಕೇಳಿದ ಹಾಗೆ ಆಯಿತು. ನಾಗೇಗೌಡರು ನಿಷೇಧ ತೆಗೆಯಿರಿ ಎಂದು ಹೇಳಿದರು. ಆ ಪದ ತೆಗೆಯಿರಿ ಎಂದು ಹೇಳಿದರು. ಆದರೆ ನಮ್ಮಲ್ಲಿ ಒಂದು ಆತ್ಮಸ್ಥೈರ್ಯ ಬೇಕು.

ಶ್ರೀಮತಿ ಬಿ.ಟಿ.ಲಲಿತಾನಾಯಕ್ : ಭೂತದ ಕೈಯಲ್ಲಿ ಭಗವದ್ಗೀತೆ ಎಂದು.

ಶ್ರೀ ವಾಟಾಳ್ ನಾಗರಾಜ್ : ಅದು ನಿಮ್ಮ ಕವಿತೆ, ಇದು ನಮ್ಮ ಕವಿತೆ, ಇದನ್ನು ನಮ್ಮ ಮಾನ್ಯ ಪಾಟೀಲ್ ಅವರು ವ್ಯಾಖ್ಯಾನ ಮಾಡಬೇಕು. ಅವರು ಹಿರಿಯರು. ಇವರು ಹೇಳಿದ ಪ್ರಕಾರ ವ್ಯಾಖ್ಯಾನ ಮಾಡಿಕೊಂಡು ಹೋದರೆ ಇನ್ನೂ 20-25 ವರ್ಷ ಕಳೆಯುತ್ತದೆ. ಇವರು ಹೇಳಿದ ಒಂದೊಂದು ಅಂಗವನ್ನು ವ್ಯಾಖ್ಯಾನ ಮಾಡಿಕೊಂಡು ಹೋದರೆ ಕಾಲ ಕಳೆಯುತ್ತದೆ. ನಮ್ಮಲ್ಲಿ ಒಂದು ಆತ್ಮಸ್ಥೈರ್ಯ ಬೇಕು. ಮಹಾತ್ಮಾ ಗಾಂಧಿಯವರ ನೀತಿಯ ಬಗ್ಗೆ ನೀವು ಒಪ್ಪುತ್ತೀರೋ ಇಲ್ಲವೋ?

**7.50 ಪಿಎಂ**

ಅವರ ತತ್ತ್ವವನ್ನು ನೀವು ಒಪ್ಪುತ್ತೀರೋ? ಇಲ್ಲವೋ? ಅವರು ಹೇಳಿರುವುದನ್ನು ಒಪ್ಪುವುದಿಲ್ಲವೆಂದರೆ ಹೇಗೆ ಅದರ ಅರ್ಥ?

ಶ್ರೀ ಜೆ.ಹೆಚ್.ಪಟೇಲ್ ಪ್ರಪಂಚದಲ್ಲಿ ಬಹಳ ಪ್ರಖ್ಯಾತರಾದ, ಶಕ್ತಿವಂತರಾದ ಇಬ್ಬರು ವ್ಯಕ್ತಿಗಳು ಒಂದೇ ಶತಮಾನದಲ್ಲಿ ಹುಟ್ಟಿದರು. ಒಬ್ಬರು ಮಹಾತ್ಮ ಗಾಂಧೀಜಿ ಇನ್ನೊಬ್ಬರು ಅಡಾಲ್ಫ್‌ಹಿಟ್ಲರ್. ಹಿಟ್ಲರ್ ಒಂದು ಹನಿಯಷ್ಟು ಅಲ್ಕೋಹಾಲ್ ತೆಗೆದುಕೊಳ್ಳದೆ ಜಗತ್ತಿನ ಬಹಳಷ್ಟು ಜನರನ್ನು ಕೊಲ್ಲಿಸುವಷ್ಟು ಕ್ರೂರಿಯಾದ ಎನ್ನುವುದನ್ನು ಯೋಚನೆ ಮಾಡಬೇಕು. ಮತ್ತು ಜಗತ್ತನ್ನು ಉಳಿಸುವುದಕ್ಕೆ ಪ್ರಯತ್ನ ಮಾಡಿದ ಮಹಾತ್ಮ ಗಾಂಧೀಜಿಯವರು ಎಂದೂ ಆಲ್ಕೋಹಾಲ್ ತೆಗೆದುಕೊಂಡವರಲ್ಲ. ಆದುದರಿಂದ ಆಲ್ಕೋಹಾಲ್ ತೆಗೆದುಕೊಂಡರೆ, ಬಿಟ್ಟರೆ ಏನಾಗುತ್ತದೆಂದು....

ಶ್ರೀ ವಾಟಾಳ್ ನಾಗರಾಜ್ : ಇದು ವಿತ್ತಂಡ ವಾದ.

ಶ್ರೀ ಜೆ.ಎಚ್.ಪಾಟೀಲ್ : ಬರ್ಟೆಂಡ್ ರಸೆಲ್ ಬರೆದಿರುವ pleasures ಎಂಬ ಒಂದು ದೊಡ್ಡ ಪುಸ್ತಕವಿದೆ. ಅದರೊಳಗೆ alcoholism and liberalism in and pains human development ಎನ್ನುವ ಒಂದು ಪ್ಯಾರಾ ಇದೆ. ಇದರ ಬಗ್ಗೆ ಉದಾಹರಣೆ ಕೊಡುವುದಾದರೆ, ಒಬ್ಬ ಸ್ವಾಮೀಜಿ ತಮ್ಮ ಶಿಷ್ಯನೊಡಗೂಡಿ ಒಂದು ಹೊಳೆ ಧಾಟುವುದರಲ್ಲಿದ್ದರು. ಹೊಳೆಯಲ್ಲಿ ನೀರಿನ ಪ್ರವಾಹ ಜೋರಾಗಿತ್ತು. ಆಗ ಅಲ್ಲಿಗೆ ಒಬ್ಬ ಸುಂದರ ಮಹಿಳೆಯೊಬ್ಬಳು ಬಂದು ನನ್ನನ್ನೇನಾದರೂ 'ಮಾಡಿ ಆ ಕಡೆ ದಂಡೆಗೆ ದಾಟಿಸುತ್ತೀರಾ ಎಂದಳು. ಆಗ ಸ್ವಾಮೀಜಿ, ನಾನು ನಿನ್ನನ್ನು ಮುಟ್ಟುವುದಕ್ಕಾಗುವುದಿಲ್ಲವೆಂದರು. ಆಗ ಶಿಷ್ಯ ಆ ಮಹಿಳೆಯನ್ನು ತನ್ನ ಹೆಗಲ ಮೇಲೆ ಕೂರಿಸಿಕೊಂಡು ಮತ್ತೊಂದು ದಡಕ್ಕೆ ತಲುಪಿಸಿ ಆ ಮಹಿಳೆಯನ್ನು ಕಳುಹಿಸಿಕೊಟ್ಟು ಇವರಿಬ್ಬರೂ ಇತ್ತ ತಮ್ಮ ಮಾರ್ಗ ಹಿಡಿದು ಹೊರಟ ಸ್ವಲ್ಪ ಹೊತ್ತಾದ ಕೂಡಲೇ ಗುರು ಶಿಷ್ಯನನ್ನು ಉದ್ದೇಶಿಸಿ ನೀನು ಆ ಮಹಿಳೆಯನ್ನು ಮುಟ್ಟುಬಿಟ್ಟೆಯಲ್ಲಾ ಎಂದರು. ಶಿಷ್ಯ ಏನೂ ಮಾತನಾಡಲಿಲ್ಲ. ಇನ್ನು ಸ್ವಲ್ಪ ಸಮಯ ಕಳೆದ ನಂತರ ಮತ್ತೆ ಗುರು ಶಿಷ್ಯನನ್ನು ನೀನು ಆ ಮಹಿಳೆಯನ್ನು ಹೊತ್ತು ಕೊಂಡಿದ್ದಾಗ ನಿನಗೆ ಏನನ್ನಿಸಿತು? ಎಂದಾಗ ಶಿಷ್ಯ ಸ್ವಾಮಿ, ನಾನು ಆ ಮಹಿಳೆಯನ್ನು ನನ್ನ ಹೆಗಲ ಮೇಲೆ ಐದು ನಿಮಿಷಗಳ ಮಾತ್ರ ಹೊತ್ತುಕೊಂಡು ಇಳಿಸಿಬಿಟ್ಟೆ, ನಿಮ್ಮ ಮನಸ್ಸಿನಲ್ಲಿ ಇಲ್ಲಿಯವರೆಗೆ ಸುಮಾರು ಆರು ಗಂಟೆಗಳ ಕಾಲ ಆದರೂ ಇನ್ನೂ ಇಳೀಲೇ ಇಲ್ಲವಲ್ಲಾ. ಎಂದನು. ಹಾಗೆ ಕುಡಿದವರ ಅಮಲು ಸ್ವಲ್ಪ ಹೊತ್ತು ಇದ್ದು ಅನಂತರ ಇಳಿದುಹೋಗುತ್ತದೆ. ಆದರೆ ಕುಡಿಯದೇ ಇದ್ದವರ ಅಮಲು ಬೇಗ ಇಳಿಯುವುದಿಲ್ಲ.

ಶ್ರೀ ಜಿ.ವಿ.ಶ್ರೀರಾಮರೆಡ್ಡಿ : ಬರ್ಟೆಂಡ್ ರಸೆಲ್‌ರವರು ಇನ್ನೊಂದು ವಿಷಯವನ್ನು ಅವರ ಪುಸ್ತಕದಲ್ಲಿ ಹೇಳಿದ್ದಾರೆ ಏನೆಂದರೆ the intoxicated mind cannot think of the welfare of the human being. ಅದನ್ನು ಕೂಡ ತಾವು ಹೇಳಬೇಕು.

Mr. Speaker : Intoxication need not come only through liquor alone. There are several ways of geting intoxicated; it can come through lust of power...

Sri G.V. Srirama Reddy : Intoxication need not come from only one source. but, the intoxicated mind cannot think of human welfare at all. Bertrand Russel says that also.

ಅಧ್ಯಕ್ಷರು : ಇದು ಸ್ಪಷ್ಟತೆಯ ಪ್ರಶ್ನೆಯಾಗಿರುವುದರಿಂದ, ಒಬ್ಬ ಮನುಷ್ಯನ ಮೆದುಳಿಗೆ ಅಮಲು ಬರಬೇಕಾಗಿದ್ದರೆ ಅದು ಬರೀ ಮದ್ಯದಿಂದ ಬರಬೇಕೆಂದೇನೂ ಅಲ್ಲ. ಜಾತಿಯಿಂದ ಬರಬಹುದು, ಧರ್ಮದಿಂದ ಬರಬಹುದು, ಮತ ಭಾವನೆಯಿಂದ ಬರಬಹುದು, ಮದದಿಂದ ಬರಬಹುದು ಅಧಿಕಾರ ಲಾಲಸೆಯಿಂದ ಬರಬಹುದು, ಹೆಣ್ಣಿನ ವ್ಯಾಮೋಹದಿಂದ ಬರಬಹುದು. ಇನ್ನೂ ಅನೇಕ ಕಾರಣಗಳಿಂದ ಬರಬಹುದು. ಮನುಷ್ಯನ ಮನಸ್ಸು ವಿಕೃತಗೊಳ್ಳುವುದಕ್ಕೆ, ಹತೋಟಿ ತಪ್ಪುವುದಕ್ಕೆ ಅಮಲು ಏರಿದೆಯೆಂದರೇನು? ವ್ಯಕ್ತಿ ದೇಹದ ಸಮತೋಲನ ಕಳೆದುಕೊಳ್ಳುತ್ತಾನೆ. ಯಾವ ಕಾರಣದಿಂದಲೂ ಅದು ಆಗಬಹುದು. ಅದು ಬರೀ ಕುಡಿತದಿಂದಲೇ ಆಗಬೇಕೆಂದು ಏನೂ ಇಲ್ಲ.

Sri. J.H. Patel : To get intoxicated is not bad; intoxication can come from anything. But you should be intoxicated with new and fresh ideas.

sri. G.V. Srirama Reddy : Intoxication means, not necessarily from liquor, I too agree with you sir. But the point is, which intoxication is more dangerous to the human brain that is more important. The power intoxicated man will do less harm than the one intoxicated by liquor. ಅಧಿಕಾರ ಮದದಿಂದಿರುವ ಮನುಷ್ಯನಿಂದಾಗುವ ಅಪಾಯವೆಷ್ಟು? ಜಾತಿ ಭಾವನೆಯ ಮದದಿಂದಿರುವ ಮನುಷ್ಯನಿಂದಾಗುವ ಅಪಾಯವೆಷ್ಟು? ಮದ್ಯ ಸೇವನೆಯಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ನಾವು ವೈಜ್ಞಾನಿಕವಾಗಿ ಯೋಚಿಸುವುದಾದರೆ ಮದ್ಯ ಸೇವನೆ ಮಾಡಿದ ವ್ಯಕ್ತಿಯ ಮಿದುಳಿನ ಮೇಲೆ ಪರಿಣಾಮವುಂಟಾಗಿ ಅದರಿಂದ ಆತ ತನ್ನ ಆಲೋಚನಾ ಶಕ್ತಿ ಕಳೆದುಕೊಳ್ಳುತ್ತಾನೆ.

ಶ್ರೀ ಪಾಟೀಲ್ ನಾಗರಾಜ್ : ಇವರ ಬಗ್ಗೆ ಇನ್ನು ಹೆಚ್ಚು ಹೊತ್ತು ಮುಂದುವರೆಸಿದರೆ ಇವರೆಲ್ಲರೂ ನನ್ನ ಮೇಲೆ ಧಾಳಿ ನಡೆಸಲು ತಯಾರಿದ್ದಾರೆ. ಏಕೆಂದರೆ ಸಮಯವಾಗಿದೆ ಎಂದು ಹೇಳುತ್ತಿದ್ದಾರೆ. ಸಮಯವಾಯಿತೆಂದರೆ, ತಮಗೆ ಗೊತ್ತಿಲ್ಲ, ಇವರ ಬಗ್ಗೆ ಪ್ರೀತಿ ಪ್ರೇಮ ಇಟ್ಟುಕೊಂಡಿರುವವರಲ್ಲ. ಜೆ.ಹೆಚ್.ಪಟೇಲರು ಈಗ ಸ್ವಾಮೀಜಿಯವರ ಕಥೆಯನ್ನು ಬಹಳ ಚೆನ್ನಾಗಿ ಹೇಳಿದರು. ಆದರೆ, ಪಟೇಲರಿಗೆ ಗೊತ್ತಿರುವಂತೆ ನನಗೆ ಅವರ ಬಗ್ಗೆ ಬಹಳ ಗೌರವ, ಸ್ನೇಹ, ವಿಶ್ವಾಸ ಎಲ್ಲವೂ ಇದೆ. ಅಂತಹ ಸ್ವಾಮಿಗಳು ಯಾರೆಂದು ನನಗೆ ಗೊತ್ತಾಗಲಿಲ್ಲ. ಸ್ವಾಮಿಗಳು ಎಂದರೆ ಅದು ಅತ್ಯಂತ ಅಪಾಯಕಾರಿಯಾದಂಥ ಮಾತು. ನಾವು ಸ್ವಾಮಿಗಳ ತರಹ ಇಲ್ಲ.

ಅಧ್ಯಕ್ಷರು : ಅವರು ಶಿಷ್ಯರೆದು ಒಪ್ಪಿಕೊಳ್ಳಲು ತಯಾರಿರುವಾಗ ನೀವು ಆ ಸ್ವಾಮಿಗಳೆಂದು ಒಪ್ಪಿಕೊಳ್ಳಲು ಏನು ಲುಕ್ಸಾನು? ಅವರ ಶಿಷ್ಯರಾಗುವುದಕ್ಕೆ ತಯಾರಾಗಿದಿದ್ದರೆ ಅವರು ಹೇಳದಿರುವುದನ್ನೆಲ್ಲಾ ನೀವೇಕೆ ಕಲ್ಪಿಸಿಕೊಳ್ಳುತ್ತೀದ್ದೀರಿ?

ಶ್ರೀ ವಾಟಾಳ್ ನಾಗರಾಜ್ : ಅವರು ಬೇರೆ ಯಾರೋ ಸ್ವಾಮಿಗಳ ವಿಚಾರ ಹೇಳುತ್ತಿದ್ದಾರೆಂದು ಕಾಣುತ್ತದೆ.

ಶ್ರೀ ಜೆ.ಹೆಚ್.ಪಟೇಲ್ : ಮಾನ್ಯ ಸದಸ್ಯರ ಮನಸ್ಸಿಗೆ ಗೊತ್ತಿದೆ. ಯಾವ ಸ್ವಾಮಿಗಳು ಅವರ ಮನಸ್ಸಿನಲ್ಲಿದ್ದಾರೋ, ನನ್ನ ಮನಸ್ಸಿನಲ್ಲೂ ಅದೇ ಸ್ವಾಮಿಗಳಿದ್ದಾರೆ.

ಶ್ರೀ ವಾಟಾಳ್ ನಾಗರಾಜ್ : ಇದು ಬಹಳ ಸತ್ಯಕ್ಕೆ ದೂರವಾದುದು. ನಾವು ಅವರು 10-6 ವರ್ಷಗಳಿಂದ ಜೊತೆಯಲ್ಲಿದ್ದೇವೆ.

ಅಧ್ಯಕ್ಷರು : ಒಂದು ವಿಷಯ ನಿಮ್ಮಿಬ್ಬರಿಗೂ ಗೊತ್ತಿದ್ದು, ಅದನ್ನು ಬಚ್ಚಿಟ್ಟು ಮಾತನಾಡಿದಾಗ ಹಕ್ಕುಚ್ಯುತಿಗೆ ಬರುತ್ತದೆ. ಮತ್ತು ಬೇರೆ ಸದಸ್ಯರೂ ಸಹ ನಮಗೂ ಆ ಮಾಹಿತಿ ಬೇಕೆಂದು ಕೇಳುತ್ತಾರೆ.

ಶ್ರೀ ವಾಟಾಳ್ ನಾಗರಾಜ್ : ಒಂದುವೇಳೆ ಅದನ್ನು ಹಕ್ಕುಚ್ಯುತಿ ನಿರ್ಣಯವಾಗಿ ಮಂಡಿಸಿದರೆ ಅದಕ್ಕೆ ಉತ್ತರ ಕೊಡುವವರು ಪಟೇಲರೇ ವಿನಾ ನಾವಲ್ಲ. ಈಗ ಸಮಯವಾಗಿರುವುದರಿಂದ ನನ್ನ ನಿರ್ಣಯದಿಂದ ಬಹಳ ಜನರಿಗೆ ತೊಂದರೆ ಕೊಡಲು ನಾನು ತಯಾರಿಲ್ಲ. ಏಕೆಂದರೆ, ಬಹಳ ಜನರು ಕಾದಿದ್ದಾರೆ.

ಶ್ರೀ ಜಿ.ಬಿ. ಶಿವಕುಮಾರ್ : ಅಧ್ಯಕ್ಷರೆ, ಚರ್ಚೆಯ ಪ್ರಾರಂಭದಲ್ಲೇ ಯೋಚನೆ ಮಾಡಿಕೊಂಡು ಈಗಲೇ ವಿಷಯಗಳು ಹೊರಗೆ ಬರುತ್ತಿರುವಾಗ ಇನ್ನು ಚರ್ಚೆ ಮುಂದುವರೆಸಿದರೆ ಬಹಳ ಜನರ ಸಂಗತಿಗಳು ಹೊರಗೆ ಬರುತ್ತದೆ. ತಾವು ಬೇಗ ಮುಗಿಸಿ.

ಶ್ರೀ ಎಂ.ಮಲ್ಲಿಕಾರ್ಜುನ ಖರ್ಗೆ : ಅವರಿಗೆ ಮಾತನಾಡಲು ಹದಿನೈದು ನಿಮಿಷಗಳನ್ನು ಮಾತ್ರ ಕೊಡಲಾಗಿತ್ತು, ಈಗ 35 ನಿಮಿಷಗಳಾಯಿತು. ಅವರು ಇನ್ನೂ ಅಮಲಿನಲ್ಲಿಯೇ ಇದ್ದಾರೆ. ಚರ್ಚೆಯನ್ನು ನಾಳೆ ಮುಂದುವರೆಸಿ.

ಅಧ್ಯಕ್ಷರು : ಚರ್ಚೆಯನ್ನು ನಾಳೆಗೆ ಮುಂದುವರೆಸೋಣವೇ?

ಶ್ರೀ ವಾಟಾಳ್ ನಾಗರಾಜ್ : ನನಗೆ ಚರ್ಚೆ ಮಾಡಲು ಸ್ಫೂರ್ತಿ ಬರಲೇ ಇಲ್ಲ. ಇವರು ಇಷ್ಟೊಂದು ಜನರು ಕೂಗಾಡಿದರೆ ಎಲ್ಲಿಂದ ಸ್ಫೂರ್ತಿ ಬರಲು ಸಾಧ್ಯ?

ಅಧ್ಯಕ್ಷರು : ಈಗ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು 1995ರ ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕವನ್ನು ಪರ್ಯಾಲೋಚಿಸಲು ಸಭೆ ಮುಂದೆ ಮಂಡಿಸುವುದು.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೆ, ಸದರಿ ವಿಧೇಯಕದ ಬಗ್ಗೆ ಸ್ವಲ್ಪ ಚರ್ಚೆಯಾಗಬೇಕು. ಅದು ನಮ್ಮ ನಿರ್ಣಯಕ್ಕೆ ಬಿಟ್ಟ ವಿಚಾರ ತಮ್ಮಲ್ಲಿ ನನ್ನ ಮತ್ತೊಂದು ವಿನಂತಿಯೇನೆಂದರೆ ನಿನ್ನೆ ದಿವಸ ನಡೆಯಬೇಕಾಗಿದ್ದ ಕಾರ್ಯಕಲಾಪಗಳು ನಡೆಯದೆ ಮುಂದಕ್ಕೆ ಹೋಯಿತು. ತಮಗೆ ಗೊತ್ತಿರುವಂತೆ ಈ ಅಧಿವೇಶನ ಹತ್ತನೇ ತಾರೀಖಿನವರೆಗೆ ನಡೆಯುವುದೆಂದು ತೀರ್ಮಾನ ಮಾಡಿದ್ದೀರಿ. ನಿನ್ನೆ ನಡೆಯಬೇಕಾದ ಕಾರ್ಯಕಲಾಪ ನಡೆಯದಿದ್ದುದರಿಂದ ಅಧಿವೇಶನದ ಅವಧಿಯನ್ನು ಇನ್ನು ಒಂದು ದಿವಸ ಹೆಚ್ಚಿಗೆ ಮುಂದುವರೆಸಬೇಕಾಗುತ್ತದೆ. ತಾವು ದಯಮಾಡಿ ಆ ತೀರ್ಮಾನಕ್ಕೆ ಬರಬೇಕು. ನಿನ್ನೆಯ ಕಾರ್ಯಕಲಾಪದಲ್ಲಿ ಅನೇಕ ಸದಸ್ಯರು ಭಾಗವಹಿಸಬೇಕಾಗಿತ್ತು, ಕಲಾಪ ನಡೆಯದಿದ್ದರಿಂದ ನಾಳೆ ದಿವಸ ನಡೆಯುವ ಕಲಾಪದ ಚರ್ಚೆಯಲ್ಲಿ ಅವರುಗಳು ಭಾಗವಹಿಸಬೇಕಾಗಿದೆ. ಇದು ತಮಗೆ ತಿಳಿದಿರುವ ವಿಚಾರವೇ ಆಗಿದೆ.

ಅಧ್ಯಕ್ಷರು : ನಾನು ಏಕಪಕ್ಷೀಯವಾಗಿ ತೀರ್ಮಾನ ತೆಗೆದುಕೊಳ್ಳಲು ಆಗುವುದಿಲ್ಲ. ನಾಳೆ ಬೆಳಗ್ಗೆ 9.00 ಗಂಟೆಗೆ ನನ್ನ ಕಛೇರಿ ಕಾರ್ಯಲಯಕ್ಕೆ ವಿರೋಧ ಪಕ್ಷದ ನಾಯಕರು, ಉಪ ನಾಯಕರು, ಸಭಾ ನಾಯಕರು, ಎಲ್ಲರೂ ಬರುತ್ತಿದ್ದು, ತಾವೂ ಬಂದರೆ 10 ನಿಮಿಷ ಮಾತನಾಡಿ ನಿರ್ಧಾರ ತೆಗೆದುಕೊಳ್ಳೋಣ.

## ಶಾಸನ ರಚನೆ

### ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು
### ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕ, 1995
### ಪರ್ಯಾಲೋಚನಾ ಪ್ರಸ್ತಾವ

ಶ್ರೀಮತಿ ಬಿ.ಟಿ.ಲಲಿತಾನಾಯಕ್ (ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು) : ಮಾನ್ಯ ಅಧ್ಯಕ್ಷರೆ 1995ರ ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಕೋರುತ್ತೇನೆ.

(ಪ್ರಸ್ತಾವ ಮಂಡಿಸಲ್ಪಟ್ಟಿತು)

## ಪ್ರಕಟಣೆಗಳು

ಅಧ್ಯಕ್ಷರು : ಈಗ ಪ್ರಕಟಣೆಗಳು ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಯವರಿಂದ ಈ ಕೆಳಕಂಡ ಸಂದೇಶ ಬಂದಿರುತ್ತದೆ.

(i) ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯ ವಿಧಾನ ಹಾಗೂ ನಡವಳಿಕೆಯ ನಿಯಮ 115ರ ಮೇರೆಗೆ ವಿಧಾನಸಭೆಯಿಂದ ಅಂಗೀಕೃತವಾದ 1995ನೇ ಸಾಲಿನ ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ (ಪಕ್ಷಾಂತರ ನಿಷೇಧ (ತಿದ್ದುಪಡಿ) ವಿಧೇಯಕವನ್ನು ಕರ್ನಾಟಕ ವಿಧಾನ ಪರಿಷತ್ತಿನಲ್ಲಿ ಏಳನೇ ಏಪ್ರಿಲ್ 1995ರಂದು ತಿರಸ್ಕೃತವಾಯಿತೆಂದು ತಿಳಿಸುತ್ತೇನೆ.

(ii) ಮೇಲ್ಮನೆಯ ಸಭಾಪತಿಯವರಿಂದ ಈ ಕೆಳಕಂಡ ಸಂದೇಶವೊಂದು ಬಂದಿರುತ್ತದೆ. ಕರ್ನಾಟಕ ವಿಧಾನಪರಿಷತ್‌ನ ಕಾರ್ಯವಿಧಾನ ಮತ್ತು ನಡವಳಿಕೆಗಳ 114ರ ಮೇರೆಗೆ ವಿಧಾನ ಸಭೆಯಲ್ಲಿ ಅಂಗೀಕೃತವಾದ ಕೆಳಕಂಡ ವಿಧೇಯಕಗಳನ್ನು ಕರ್ನಾಟಕ ವಿಧಾನ ಪರಿಷತ್‌ನಲ್ಲಿ ದಿನಾಂಕ 7-4-1995ರಂದು ಅನುಮೋದಿಸಲಾಯಿತೆಂದು ತಿಳಿಸುತ್ತೇನೆ.

1) ಸಿವಿಲ್ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ,1995

2) ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕ 1995

3) ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಬೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕ, 1995.

ಸಭೆಯು ಈಗ ಮುಕ್ತಾಯಗೊಂಡು ಪುನಃ ನಾಳೆ ಬೆಳಿಗ್ಗೆ 9.30 ಕ್ಕೆ ಸಮಾವೇಶಗೊಳ್ಳುವುದು.

(ಸದನವು ರಾತ್ರಿ 8-15ಕ್ಕೆ ಮುಕ್ತಾಯಗೊಂಡು ಮತ್ತೆ 8.4.95ರಂದು ಬೆಳಗ್ಗೆ 9.30ಕ್ಕೆ ಸಮಾವೇಶಗೊಳ್ಳಲು ತೀರ್ಮಾನಿಸಿತು)

(* ಈ ಚಿಹ್ನೆ ಮಾನ್ಯ ಸದಸ್ಯರ ಟಿಪ್ಪಣಿ ಅಥವಾ ಭಾಷಣವನ್ನು ಪರಿಷ್ಕರಿಸಿಲ್ಲವೆಂದು ಸೂಚಿಸುತ್ತಿದೆ).

**KARNATAKA LEGISLATIVE ASSEMLY**

Tenth Assembly

(Second Session)

THE KARNATAKA LEGISLATURE SALARIES, PENSIONS AND ALLOWANCES (AMENDMENT) BILL, 1995

(L.A. Bill No.13 of 1995)

A Bill further to amend the Karnataka Legislature Salaries, Pensions and Allowances Act, 1956 ;

Whereas it is expedient further to amend the Karnataka Legislature Salaries, Pensions and Allowances Act, 1956 (Karnataka act 2 of 1957) for the purposes hercinafter appearing;

Be it enacted by the Karnataka State Legislature in the Forty Sixth Year of the Republic of India as follows ;-

**1. Short title and commencement** :- (1) This Act may by called the Karnataka Legislature Salaries, Pensions and Allowances (Amendment) act 1995.

(2) It shall come into force once.

**2. Amendment of Section 12**:- In section 12 of the Karnataka Legislature Salaries, Pensions and Allowances Act, 1956 (Karnataka Act 2 of 1957) in clause(cc), for the words "in any part of the State of Karnataka", the words "within or outside the State of Karnataka" shall be substituted.

## STATEMENT OF OBJECTS AND REASONS

Clause (ccc) of section 12 of the Karnataka Legislature Salaries Pensions and Allowances Act, 1956, provides that every member and his companion shall be provided with one free non transferable pass to travel by the Karnataka Road Transport Corporation Transport Services in any part of the State of Karnataka. It is considered necessary to provide that members may travel in the Transport Services of the Karnataka State Road Transport Corporation Services outside the State of Karnataka also.

Hence the Bill.

**M.C. NANAIAH**
Minister for Law & Parly.. Affairs
and Information & Publicity

## FINANCIAL MEMORANDUM

It is not possible to quantify the expenditure by the proposed amendment at present. However there may be some expenditure.

**M.C. NANAIAH**
Minister for Law & Parly.. Affairs
Information & Publicity

**N.H. MUTTALAGERI**
Secretary

## ANNNEXURE

(Extract from the Karnataka Legislature Salaries. Pensions and Allowances Act, 1956) (Karnataka Act 2 of 1957)

*** *** ***

**12. Travelling and Daily Allowances of and Medical and other facilities to Members of the Legislative Assembly and the Legislative Council.-** Subject to such conditions as may be determined by Rules made under this Act,-

*** *** ***

" (cc) every member and his companion shall be provided with one free non-transferable pass each which shall entitle them at any time to travel by road transport services of the Karnataka State Road Transport Corporation in any part of the State of Karnataka in which those services operate in such class of accommodation therein as may be prescribed.

